ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

# ಅನ್ನ

ರಂ. ಶ್ರೀ. ಮುಗಳಿ





ವಿಶ್ವ ಕನ್ನಡ ಸಮ್ಮೇಳನ

೧೪-೩ ಎ, ನೃಪತುಂಗ ರಸ್ತೆ

ಬೆಂಗಳೂರು-೫೬೦ ೦೦೨

ANNA—Kannada Social Novel by R. S. Mugali.

Published by K. Jayacharya, K.A.S., Additional Director, Directorate of Kannada and Culture (Viswa Kannada Sammelana) 14/3 A, Nrupathunga Road, Bangalore-560 002

Pages 380 + viii, 1983 - 5000 Copies





THIRD EDITION



ಬೆಲೆ ರೂ. 3



ಮುದ್ರಕರು :

ನವನೀತ ಮುದ್ರಣಾಲಯ
ಡಾ॥ ಅನಕೃ ರಸ್ತೆ, ವಿಶ್ವೇಶ್ವರಪುರ
ಬೆಂಗಳೂರು-೫೬೦ ೦೦೪.

ಆರ್. ಗುಂಡೂರಾವ್
ಮುಖ್ಯ ಮಂತ್ರಿ




ವಿಧಾನ ಸೌಧ
ಬೆಂಗಳೂರು

ದಿನಾಂಕ ೧೮-೯-೧೯೮೨

## ಸಂಕಲ್ಪ............ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯುಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕ

ವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದು ನೂರಾಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲೀಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್
ಮುಖ್ಯ ಮಂತ್ರಿಗಳು

# ನೆನಕೆಯ ಮುಡಿಪು

ದೇಶಸೇವೆಯಲ್ಲಿ ದೇಹವನು ತೆಯ್ದು
ಸೋತು ಸೊರಗಿದರೂ ಮನ ಸೋಲದೆ
ಬಡಜನದ ಅನ್ನಸಮಸ್ಯೆಯನ್ನಿದಿರಿಸಿ ಗೆದ್ದರೂ
ತಾವು ಮರಣಕ್ಕೆ ಅನ್ನವಾಗಿ ಕನ್ನಡಕ್ಕೆ ಕೀರ್ತಿತಂದ
ದಿವಂಗತ ಕೌಜಲಗಿ ಹನುಮಂತರಾಯರಿಗೆ—

—ರಂ. ಶ್ರೀ. ಮುಗಳಿ

# ಅನ್ನ

ನೀರಜಜಾತವಿಸ್ತರಿಸಿದಂಡಮುಮಂ ಮಣಿಮಾಲೆಯಾಗಿ ವಿ- ।
ಸ್ತಾರಿಸಿ ಹಸ್ತದಿಂ ಹಿಡಿದು ತನ್ನಯ ಶರಣ್ಬುಗುವರ್ಗೆ ಲೇಸಮುಂ ।
ಪ್ರೇರಿಸಲೋಸುಗ ಜಪಿಸುತಿರ್ಪಳ್ ಪಗಲಿರುಳಾವಳೊರ್ವಳಾ ।
ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ ॥

—ಶಾಸನ ಪದ್ಯ

# ಪರಿವಿಡಿ

# ಅನ್ನ

## ೧. ಪ್ರೇರಣ

'ನಾಡಿಗೆ ನಾಡೇ ಉರಿಯುತ್ತಿರುವಾಗ ಎಲ್ಲಿಯ ಹಾಡುಗಾರಿಕೆ? ಬನ್ನವೇ ಅನ್ನವಾದಾಗ ಎಲ್ಲಿಯ ಬಾಜನೆ ?'

ಭಾರತದೇಶದಲ್ಲೆಲ್ಲ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಗಾಳಿಯಲೆಗಳ ಮೇಲೆ ಈ ಮಾತು ಸಂಚರಿಸುತ್ತಿತ್ತು. ಯಾರದೋ ಈ ಮಾತು ಯಾರಿಗೆ ಗೊತ್ತು? ಅನೇಕರು ಇದನ್ನು ಕೇಳಿಲ್ಲ. ಕೇಳಿದ ಕೆಲವರು ನಿತ್ಯವೂ ಕೇಳುತ್ತಿಲ್ಲ. ಕೇಳಿದಾಗ ನೆನವು, ಮತ್ತೆ ಮರವು. ಅದೇ, ಮಾನಸ ಸರೋವರದ ನೆರೆಹೊರೆಯಲ್ಲಿ ಈ ಮಾತೇ ಮೈಗೊಂಡಂತೆ ತೋರುವ ಜ್ಯೋತಿರ್ದೇಹವೊಂದು ಸುಳಿಯುತ್ತಿರುವುದು. ಅವಳಾರು ? ಭಾರತದ ಭಾರತಿ !

ಹಿಮಾಲಯವು ಈ ನಾಡಿಗೆಂದು ನಾಡತಾಯಿ ಎತ್ತರವಾಗಿ ಎತ್ತಿ ಹಿಡಿದ ಅಭಯಹಸ್ತವಾಗಿದೆ. ಅದರ ಅಚ್ಚ ಬಿಳಿದಾದ ಹಿಮವು ತಂಪಿನ ತವರಾಗಿ ಹೊರನಾಡಿಗರ ಮೈಯನ್ನು ನಡುಗಿಸುತ್ತದೆ, ನಮಗೆ ನಿತ್ಯವೂ ತೇಜೋರಾಶಿಯಂತಾಗಿ ಹುರಿಹುಂಬಿಸುತ್ತದೆ. ಅದಾವುದೋ ಅದ್ಭುತವಾದ ನೆಲದ ಅದರುವಿಕೆಯಿಂದ ಮೇಲೆದ್ದ ಪರ್ವತರಾಜಿಯೆಂದು ಇಂದಿನ ಬಲ್ಲವರು ಹೇಳುತ್ತಾರೆ. ಇನ್ನೊಂದು ದೃಷ್ಟಿಗೆ ಮಾತ್ರ, ಕೋಟಿ ಕೈಗಳ ತಾಯಿ ಕಣ್ಣೆವೆಯ ಮಿಳುಕಿನಲ್ಲಿ ಈ ನಾಡನ್ನು ಕಾಯುವುದಕ್ಕಾಗಿ ಕಟ್ಟಿದ ಅಭೇದ್ಯವಾದ ಕೋಟೆಯೆಂಬಂತೆ ಅದು ತೋರುವುದು. ಅದರ ಉತ್ತರಭಾಗದಲ್ಲಿ ಪಶ್ಚಿಮ ತಿಬೇಟ್ ದೇಶವಿದೆ. ಈ ಪ್ರದೇಶ ಎತ್ತರದಲ್ಲಿ ಎಷ್ಟುಮೇಲಾಪ್ಪೋ ಹವೆಯಲ್ಲಿ ಅಷ್ಟು ಕೀಳಾದುದು. ಪ್ರಾಣಿಯೊಂದನ್ನೂ ಉಳಿಯಗೊಡಲಾರೆನೆಂದು ಆಣೆಮಾಡಿದಂತಿದ್ದ ಅಸಾಧ್ಯವಾದ ಛಳಿ ಅಲ್ಲಿ. ನಿಜವಾಗಿಯೂ ಗಿಡಗಂಟೆ ಮತ್ತು ಪ್ರಾಣಿವರ್ಗ ಅಲ್ಲಿ ಕಣ್ಣಿಗೆ ಬೀಳುವುದು ತೀರ ಸ್ವಲ್ಪ. ಗಾಳಿ ಯಾವಾಗಲೂ ಬೆಟ್ಟವನ್ನಲುಗಿಸಬಲ್ಲ ಬಿರುಗಾಳಿಯೇ. ಅಲ್ಲದೆ ಅದು ತಂಪಿನ ಬೀಡು. ಹವೆಯಲ್ಲಿ ದ್ರವವಿಲ್ಲ, ಹಿಮ ಬೀಳದ ಎಡೆಯಿಲ್ಲ. ಹಿಮಾಲಯ ಪರ್ವತವು ತೆಂಕಣದಲ್ಲಿ ದ್ವಾರಪಾಲಕನಂತೆ ನಿಂತ ಕಾರಣ ಮಳೆ ಮೋಡ

ಗಳಿಗೆ ಪ್ರವೇಶ ಸುಲಭವಾಗಿಲ್ಲ. ಇಂಥಲ್ಲಿಯೂ ಯಾತ್ರಿಕರ ಶ್ರದ್ಧೆಯನ್ನೂ ಪ್ರವಾಸಿಗರ ಸಾಹಸವನ್ನೂ ಕೆಣಕುವ ಎರಡು ಲೋಕಪ್ರಸಿದ್ಧ ಸ್ಥಳಗಳೆಂದರೆ ಒಂದು ಕೈಲಾಸಪರ್ವತ, ಇನ್ನೊಂದು ಮಾನಸಸರೋವರ. ಈ ಎಡೆಯಲ್ಲಿ ಯಾತ್ರಿಕಳೂ ಅಲ್ಲ, ಪ್ರವಾಸಿಕಳೂ ಅಲ್ಲ, ಲೋಕತಪಸ್ವಿಯೂ ಮೂಕವದನೆಯೂ ಆದ ಭಾರತಿ ಕಾಣದಂತೆ ಅಲೆಯುತ್ತಿದ್ದಾಳೆ.

ಭಾರತಿಯ ಕೈಗಳಲ್ಲಿ ವೀಣೆಯಿಲ್ಲ, ಪುಸ್ತಕವಿಲ್ಲ; ಜಪಮಾಲೆಯೊಂದಿದೆ. ಅದು ಅಂಥಿಂಥ ಬೀಜದ ಇಲ್ಲವೆ ಮಣಿಯ ಮಾಲೆಯಲ್ಲ. ನಮ್ಮ ಶಾಸನಕವಿ ಭವ್ಯವಾಗಿ ಅರ್ಥಪೂರ್ಣವಾಗಿ ಬಣ್ಣಿಸಿದಂತೆ, ಬ್ರಹ್ಮಾಂಡವನ್ನೇ 'ಮಣಿಮಾಲೆಯಾಗಿ ವಿಸ್ತಾರಿಸಿ' ಕೈಯಲ್ಲಿ ಹಿಡಿದ ಜಪಮಾಲೆಯದು. ವಿಶ್ವದಲ್ಲಿಯ ಅಸಂಖ್ಯವಾದ ತೇಜೋಗೋಲಗಳೆಲ್ಲ ಹೊಳೆಹೊಳೆವ ಮಣಿಗಳಾಗಿವೆ ಅದರಲ್ಲಿ. ಅವುಗಳ ಅಪರಂಪಾರವಾದ ಶಕ್ತಿಸಂಚಯವನ್ನು ಪ್ರತಿನಿಧಿಸುವವೂ ಅವಳು ಆವಾಹನಿಸುತ್ತಿದ್ದಾಳೆ. ಏನೆಂದು ಅವಳು ಜಪಿಸುತ್ತಿರಬಹುದು ? ಜಪಿಸುವ ಅಗತ್ಯವೇನು ಅವಳಿಗೆ? ಜಪತಪವು ದುರ್ಬಲ ಮನುಷ್ಯನ ಸೊತ್ತೆಂದು ವಾಡಿಕೆಯ ತಿಳಿವಳಿಕೆ. ತನ್ನ ತಾಪತ್ರಯಶಮನಕ್ಕಾಗಿ ಚಿತ್ತಸಮಾಧಾನಕ್ಕಾಗಿ ಸಾಮಾನ್ಯಮನುಷ್ಯನು ಜಪಿಸುತ್ತಾನೆ. ಸಾಧಕನು ತನ್ನ ಉದ್ಧಾರಕ್ಕಾಗಿ ಏಕಾಗ್ರಚಿಂತನಕ್ಕಾಗಿ ಜಪಿಸುತ್ತಾನೆ. ಸಿದ್ಧನು ಲೋಕದ ಉದ್ಧಾರಕ್ಕಾಗಿ ಜಪಿಸುತ್ತಾನೆ, ಶ್ರಮಿಸುತ್ತಾನೆ. ದೇವತೆಗಳು ಇಡಿಯ ವಿಶ್ವದ ಕಲ್ಯಾಣಕ್ಕಾಗಿ ಎಡೆಬಿಡದೆ ಜಪಿಸುತ್ತಿರಬಹುದಲ್ಲವೆ? ಹೀಗೆ ಜಪತಪವು ಸಾಮಾನ್ಯ ಮಾನವನಿಂದ ದೇವದೇವನವರೆಗೆ ನಡೆದೇ ಇದೆ. ಸ್ವಸ್ತಿ ಎಂಬುದೇ ಅವರ ಮಂತ್ರ. ಆಗಳೆ ಉಲ್ಲೇಖಿಸಿದ ಶಾಸನಕವಿತೆಯಲ್ಲಿ ತನ್ನಯ ಶರಣ್ಬುಗುವರ್ಗೆ ಲೇಸುಮಂ ಪ್ರೇರಿಸಲೋಸುಗ ಜಪಿಸುತಿರ್ಪಳ್ ಪಗಲಿರುಳ್ ಆವಳೊರ್ವಳ್ ಆ ಭಾರತಿ' ಎಂದು ಹೇಳಿದೆ. ತನ್ನ ಏಕಾಂತ ಭಕ್ತರಾದ ರಸೋಪಾಸಕರಿಗೆ ಲೇಸನ್ನು ಪ್ರೇರಿಸುವುದಕ್ಕಾಗಿ ಹಗಲಿರುಳು ಜಪಿಸುತ್ತಿದ್ದಾಳೆ ಆ ಭಾರತಿ. ಅವಳ ಒಂದಂಶವೇ ಆದ ಈ ನಮ್ಮ ಭಾರತಿಯೂ ಹಗಲಿರುಳು ಜಪಿಸುತ್ತಿರುವಳು. ಆದರೆ ಏನನ್ನು ? ಒಂದೇ ಮಾತಿನಲ್ಲಿ ಹೇಳುವುದಾದರೆ ಭಾರತದ ಸ್ವಸ್ತಿಯನ್ನು, ಭಾರತರಾಷ್ಟ್ರದ ಅಖಂಡ ಕಲ್ಯಾಣವನ್ನು.

ಭಾರತಿಯ ಮುಖಮುದ್ರೆ ಗಂಭೀರ, ಧ್ಯಾನಶೀಲ. ತನ್ನ ಜಪಕ್ಕೆ ಫಲಸಿದ್ಧಿ ತಪ್ಪದೆಂಬ ಅಂತಿಮಶ್ರದ್ಧೆ ಅವಳ ಕಣ್ಣೋಟದಲ್ಲಿದೆ, ಮುಂದಣ ಸಿದ್ಧಿಯನ್ನು ನೆನೆದು ನಲಿವಂತಿದ್ದ ದಿವ್ಯ ಮೃದುಸ್ಮಿತವೊಂದು ತುಟಿ ಬಿಚ್ಚದ ಬಾಯಿಯಲ್ಲಿದೆ.

ಆದರೆ ಹಿಂದಿನ ಹಾಗೂ ಇಂದಿನ ಚರಿತ್ರೆ ಎಂದಿಗೂ ಅಳಿಸಲಾರದಂತೆ ಮೂಡಿಸಿದ ಚಿತ್ರಗಳಿಂದ ಚಿತ್ರವು ತ್ವೇಷದಿಂದ, ಶೋಕದಿಂದ ಉರಿಉರಿಯುತ್ತಿದೆ. ಅಶಾಂತಿ ಹೃದಯವನ್ನಾಳುತ್ತಿದೆ ಈಗ. ಅದರಿಂದ ನೆಲೆಯಿಂದ ನೆಲೆಗೆ ಅವಳು ಮಿಂಚು ವೇಗದಿಂದ ಅಲೆಯುತ್ತಿರುವಳು. ಹಾಡಿನ ಹೊಳೆಗಳನ್ನು ಹರಿಸಿ ಅಮೃತಜಲಧಿ ಯನ್ನು ನಿರ್ಮಿಸಬಲ್ಲ ಅವಳ ವಾಣಿ ಈಗ ಮೂಕವಾಗಿದೆ, ವೀಣೆ ಮೂಲೆಗುಂಪಾ ಗಿದೆ. ಸಾವಿರಾರು ವರ್ಷಗಳಿಂದ ಹಾಡುತ್ತಬಂದ ತನ್ನ ಹಾಡಿನಿಂದ ಕನಸು ನನಸಾಗಿಲ್ಲವೆಂಬ ಕೊರಗು ಕೊರೆಯುತ್ತಿದೆ. ಆದರೂ ಅವಳ ಕೊರಗು ನೈರಾಶ್ಯ ವನ್ನುಂಟುಮಾಡಿಲ್ಲ. ಅವಳ ಅಶಾಂತಿ ಸಾಮ್ಯವನ್ನು ಕದಡಿಲ್ಲ.

ಒಂದು ಅಚ್ಚ ಬೆಳುದಿಂಗಳ ರಾತ್ರಿ. ಯಾವಾಗಲೂ ನಿರ್ಜನ—ನೀರವ ವಾದ ಮಾನಸಸರೋವರದ ಸುತ್ತಣ ನೆಲೆ ಇನ್ನಷ್ಟು ಸ್ತಬ್ಧವಾಗಿದೆ, ಸೃಷ್ಟಿಯಲ್ಲಿ ಚಲನವಿದೆಯೆಂಬುದನ್ನು ಚಂದ್ರನ ಏರುವಿಕೆಯಿಂದ, ಚಳಿಗಾಳಿಯ ಬೀಸುವಿಕೆ ಯಿಂದ ಮಾತ್ರ ತಿಳಿಯಬೇಕು. ಮರಬಳ್ಳಿಗಳ ತೂಗಾಟವಿಲ್ಲ. ಇರುಳು ಹಕ್ಕಿಗಳ ಕೂಗಾಟವಿಲ್ಲ. ಸರೋವರದಲ್ಲಿ ತೆರೆಗಳು ಮಡಿಕೆ ಮಡಿಕೆಯಾಗಿ ತೆರಳುತ್ತವೆ, ಚಂದ್ರಬಿಂಬವನ್ನು ಒಡೆದೊಡೆದು ತೋರುತ್ತವೆ. ಕಲ್ಪನಾತೀತವಾದ ಶೀತ ವ್ಯಾಪಿಸಿಬಿಟ್ಟಿದೆ. ಮನುಷ್ಯಪ್ರಾಣಿಯೊಂದೂ ಅಲ್ಲಿ ಕಾಲಿಕ್ಕಕೂಡದೆಂದು ಮಾಟ ಮಾಡಿದ ಮಾಂತ್ರಿಕನಂತೆ ಅದರ ಆಧ್ಯತೆ. ರಾತ್ರಿ ಏರುತ್ತಲಿತ್ತು, ಸ್ತಬ್ಧತೆ ಹೆಚ್ಚು ತ್ತಲಿತ್ತು. ಆಗ ಒಮ್ಮೆಲೆ ಉತ್ತರದ ಕೈಲಾಸಪರ್ವತದ ಕಡೆಯಿಂದ ಬಿರುಗಾಳಿ ಗುಂಟ ಬೀಸುತ್ತ ಬಂದು ಭಾರತಿ ನೆಲಕ್ಕಿಳಿದಳು. ತನಗೆ ಚಿರಪರಿಚಿತವಾದ ಮಾನಸಸರೋವರದ ತೀರದಲ್ಲಿ ಸುತ್ತಾಡಿದಳು. ತೀರದ ಬೆನಕಗಳ ಹಾಸಿಗೆಯ ಮೇಲೆ ಮೈಚಾಚಿ ಒರಗಿದಳು. ಕೆಲವು ನಿಮಿಷಗಳಾದ ಮೇಲೆ ಚಟ್ಟನೆ ಎದ್ದು ಸರೋವರದಲ್ಲಿ ಇಳಿದು ಹಲವಾರು ಮುಳುಗುಹಾಕಿ ಮಿಂದಳು. ಆಮೇಲೆ ಸರೋ ವರದ ಸುತ್ತು ನಿಂತ ಪರ್ವತಗಳಲ್ಲಿ ನಡೆದಾಡಿ ಮಾನಸ ಮತ್ತು ರಕ್ಷಸ್ಥಳ ಇವುಗಳ ನಡುವಿನ ದಿನ್ನೆಯೊಂದರಲ್ಲಿ ತನಗಾಗಿ ಮಾಡಿಕೊಂಡ ಕಲ್ಲುಹಾಸುಗೆಯ ಮೇಲೆ ಪದ್ಮಾಸನದಲ್ಲಿ ಕುಳಿತುಕೊಂಡು ತೇಜಸ್ವಿನಿಯಾದ ತಪಸ್ವಿನಿಯಂತೆ ಮೆರೆದಳು. ಜಪಮಾಲೆಯನ್ನು ಬೆರಳುಗಳು ಬಿಟ್ಟುಬಿಡದೆ ಮೀಟುತ್ತಿದ್ದವು. ಧ್ಯಾನವು ತಡೆ ಯದೆ ಸಾಗಿತ್ತು. ಆಗಾಗ ಆಕಾಶದಲ್ಲಿಯ ಚಂದ್ರಮನನ್ನು ನೋಡಿ ಉಕ್ಕಿ ಬರುವ ಹಾಡನ್ನು ಧ್ಯಾನವಾಹಿನಿಯಲ್ಲಿ ಮುಳುಗಿಸುತ್ತಿದ್ದಳು. ನಡುವೊಮ್ಮೆ ದಕ್ಷಿಣಕ್ಕೆ ಅಭಿಮುಖವಾಗಿ ಕುಳಿತು ಭಾರತದ ವಿರಾಟ್ ಚಿತ್ರವನ್ನು ಕಣ್ಣ

ಮುಂದೆ ಸುಳಿಯಿಸಿ ಏನೇನನ್ನೋ ನೆನೆದು ಸಿಟ್ಟುಸಿರುಬಿಟ್ಟಳು. ಕಾದ ಬಂಗಾರ ದಂತೆ ಉರಿದು ಹೊಳೆದಳು.

ಪ್ರತಿದಿನದ ವಾಡಿಕೆಯಂತೆ ಅವಳ ಪ್ರೀತಿಯ ಸೇವಕನೂ ಅನುಚರನೂ ಆದ ಸಾಕ್ಷಿಪುರುಷನು ಅವಳಿದ್ದಲ್ಲಿಗೆ ತಲೆದೋರಿದನು. ಅವಳ ಕೃಪೆಯಿಂದ ಅವನು ಭಾರತವನ್ನೆಲ್ಲ ವಾಯುವೇಗದಿಂದ ಸುತ್ತಿಕೊಂಡು ಬಂದಿದ್ದನು. ಅದು ಅವನ ನಿತ್ಯ ರೂಢಿ. ಭಾರತಿ ಬಯಸಿದರೆ ಭೂಮಿಯ ಸುತ್ತೆಲ್ಲ ಖೇಚರರಂತೆ ತಿರುಗುವ ಶಕ್ತಿಯೂ ಅವನಲ್ಲಿತ್ತು. ಅವನು ಬಂದು ತಲೆಬಾಗಿ ಶಿಲಾಸನದ ಕೆಳಗಿನ ಮೆಟ್ಟುಗಲ್ಲಿನ ಮೇಲೆ ನಮ್ರವಾಗಿ ಕುಳಿತನು. ಭಾರತಿ ತನ್ನ ಧ್ಯಾನದಲ್ಲಿ ತಲ್ಲೀನ ಳಾಗಿದ್ದಳು. ಕೆಲವು ನಿಮಿಷಗಳು ಮೌನದಲ್ಲಿ ಕಳೆದುವು. ತಾನು ಬಂದಿರುವು ದನ್ನು ತಿಳಿಸಲು 'ತಾಯೀ' ಎಂದು ಸಾಕ್ಷಿ ಮೆಲ್ಲಗೆ ನುಡಿದನು.

ಭಾರತಿ ಕಣ್ದೆರೆದು ನೋಡಿದಳು, ಅವನ ಬರವನ್ನು ಅರಿತಂತೆ ಗೋಣು ಹಾಕಿದಳು.

ಮತ್ತೆ ಕಾಲ ಮುಂದುವರಿಯಿತು. ಸಾಕ್ಷಿ ಭಾರತಿಯನ್ನು ನೋಡುತ್ತ ಧ್ಯಾನಲಯದಲ್ಲಿ ತಾನೂ ಒಂದಾದನು. ನಡುನಡುವೆ ತಾನು ಕಂಡುಂಡ ನೂರಾರು ಮಾತುಗಳನ್ನು ತಾಯಿಗೆ ಬಣ್ಣಿಸಿ ಹೇಳಬೇಕೆಂಬ ಆತುರವು ಉಕ್ಕಿ ಬರುತ್ತಿತ್ತು. 'ಧ್ಯಾನವನ್ನು ಹೇಗೆ ತಡೆಯಲಿ, ಏನೆಂದು ಮೊದಲು ಮಾಡಲಿ?' ಎಂಬ ಯೋಚನೆ ಕೈಹಿಡಿಯುತ್ತಿತ್ತು. ಕೊನೆಗೊಮ್ಮೆ ಮನಸ್ಸು ಗಟ್ಟಿಮಾಡಿ 'ತಾಯಿ, ಹೋಗಿ ಬಂದೆ' ಎಂದನು.

ಅದೇ ನಿಮಿಷಕ್ಕೆ ಧ್ಯಾನದ ಮೇಲಟ್ಟದಿಂದ ಕೆಳಗಿಳಿದು ಸಾಕ್ಷಿಯನ್ನು ಮಾತಾಡಿಸಬೇಕೆಂಬ ಅಪೇಕ್ಷೆ ಭಾರತಿಯಲ್ಲಿಯೂ ಮೂಡಿತು. ಜಪಮಾಲೆ ಯನ್ನು ತಿರುವುತ್ತಲೇ 'ಎಲ್ಲಿಗೆ?' ಎಂದು ಕೇಳಿದಳು.

'ಭಾರತದ ಹಳ್ಳಿಗಳಿಗೆ, ನಗರಗಳಿಗೆ' ಎಂದು ಉತ್ತರ ಬಂದಿತು.

'ಸರಿ, ಏನು ಕಂಡೆ ?'

'ಕಂಡದ್ದೆಲ್ಲವನ್ನೂ ತುಂಡು ಮಾತಿನಲ್ಲಿ ಹೇಗೆ ಹೇಳಬಲ್ಲೆ ತಾಯಿ?'

'ಕೆಂಡದ ರಾಶಿಯಿದ್ದರೂ ಅಡಿಯಿಲ್ಲ ಉಗುಳು, ಕಂಡುದನ್ನು ಉಸುರು.'

ಸಾಕ್ಷಿ ತನ್ನ ಕಣ್ಣುಗಳನ್ನು ಕ್ಷಣ ಮುಚ್ಚಿ ನೆನಪನ್ನು ಎಚ್ಚರಿಸಿ ಹೇಳಿದನು: 'ದೇವಿ, ಜನಸಾಮಾನ್ಯರ ಜೀವನವು ಜರ್ಜರಿತವಾಗಿದೆ. ಅದು ಜೀವನವಲ್ಲ, ಜೀವಂತ ಮರಣ. ಹೊಟ್ಟೆಗೆ ಸಾಲದು, ಬಟ್ಟೆಗೆ ಸಾಲದು. ಅನ್ನ, ಅನ್ನ

ವೆಂದು ಹಪಾಹಿಸುತ್ತಿವೆ ಜನ. ಅದಕ್ಕಾಗಿ ಬೇಕಾದ್ದು ಮಾಡಲು ಸಿದ್ಧವಾಗಿದೆ. ಪ್ರತಿಯೊಂದು ಮುಖವೂ ನನಗೆಒಳಗೊಳಗೆ ಕುದಿಯುವ ಸುಪ್ತಜ್ವಾಲಾಮುಖಿಯಂತೆ ತೋರಿತು. ಇನ್ನೊಂದು ಕ್ಷಣಕ್ಕೆ ಏನಾದೀತು ಯಾರು ಹೇಳಬಲ್ಲರು ?'

'ತಿಳಿಯಿತು. ಸಾಕ್ಷಿ, ಇದರ ಪರಿಣಾಮವನ್ನು ನಾ ಬಲ್ಲೆ, ಆದರೇನು ಪ್ರಯೋಜನ?'

'ತಾಯೀ, ಅನ್ನದ ಹಸಿವು ಹೆಚ್ಚಿದಂತೆ ಅಂತಃಕರಣದ ಒಡಕೂ ಹೆಚ್ಚಿದೆ. ಒಬ್ಬರೊಬ್ಬರಲ್ಲಿ ತಾಳವಿಲ್ಲ, ಮೇಳವಿಲ್ಲ. ಮನೆಗೆ ಹತ್ತಿದ ಬೆಂಕಿಯನ್ನು ಆರಿಸುವ ಬದಲು ನಮಗೇನು ಸಂಬಂಧವೆಂಬಂತೆ ಹಣಕೊಬ್ಬಿದ ಹಲವರು ಹಾಡುತ್ತಾರೆ, ಕುಣಿಯುತ್ತಾರೆ. ಉರಿಯೇ ಹತ್ತಿಲ್ಲವೆಂದು ಕೆಲವು ಬುದ್ಧಿವಂತರು ವಾದಿಸುತ್ತಾರೆ. ಉರಿಗೊಂಡ ಮನೆಯಲ್ಲಿ ಕೈಗೆ ಬಂದದ್ದನ್ನು ಕೆಲವರು ದೋಚಿಕೊಳ್ಳುತ್ತಾರೆ. ಅಂಥದೇನು ದೊಡ್ಡ ಆಪತ್ತಿಯಲ್ಲ, ನಾವೆಲ್ಲಾ ನೋಡಿಕೊಳ್ಳುತ್ತೇವೆ ಎಂದು ಆಳುವ ದೊರೆಗಳು ಜಬರ್ಸಿನಿಂದ ಹೇಳುತ್ತಾರೆ. ಹಳ್ಳಿಯೇನು ಪಟ್ಟಣವೇನು, ಎಲ್ಲ ಕಡೆಗೆ ಇದ್ದೊಂದಗದ ನೋಟ ಕಂಡೆ. ಒಂದು ಕಡೆ ಸುಖದಲ್ಲಿ ಲೋಲಾಡುವ, ಮಿಷ್ಟಾನ್ನದಲ್ಲಿ ಮುಳುಗಿ ಏಳುವ ಜನವಿದ್ದರೆ ಇನ್ನೊಂದು ಕಡೆ ಹಸಿದು ಕಂಗೆಡುವ ಕೊಳಚಿಯಲ್ಲಿ ಮೂಡಿ ಮುಳ್ಗಾಡುವ ಜನ. ಎರಡನೆಯ ತರದ ಜನವೇ ಲೆಕ್ಕವಿಲ್ಲಾರಿದೆ.'

'ಸಾಕು ಸಾಕ್ಷಿ, ಗೊತ್ತಾಯಿತು. ನಾನಿನ್ನು ಕೇಳಲಾರೆ. ನನ್ನ ನಾಡಿನ ಬದುಕನ್ನು ನೆನೆನೆನೆದು ಈಗ ಸಾಕಷ್ಟು ಎದೆ ಬೇಯುತ್ತಿದೆ. ಹೆಚ್ಚು ಬೇಯಿಸಬೇಡ.' ಎಂದು ಭಾರತಿ ವೇಗವೇಗದಿಂದ ಜಪಮಾಲೆಯನ್ನು ಹೊರಳಿಸುತ್ತ ಮೂಗುವಟ್ಟಳು. ಅವಳ ಮುಖವು ಉದಯಕಾಲದ ಪೂರ್ಣಚಂದ್ರನಂತೆ ಕೆಂಪೇರಿತು. ಕಂಬನಿ ಕಣ್ಣ ತುದಿಯವರೆಗೆ ಬಂದು ತಾಪದುರಿಯಲ್ಲಿ ಸುಟ್ಟು ಹೋಯಿತು. ಹಣೆ ಮಧ್ಯದಲ್ಲಿ ಎರಡು ಎಳೆಮುಡಿಕೆಗಳನ್ನು ತೋರಿತು. ಹಣೆಗಣ್ಣನ್ನು ತೆರೆಯುವಳೊ ಎಂಬಂತೆ ಭಾಸವಾಯಿತು.

ಸಾಕ್ಷಿ ಭಯದಿಂದ ಕೆಲಹೊತ್ತು ಸುಮ್ಮನೆ ಕುಳಿತನು. ಆಮೇಲೆ ಸಂನಿವೇಶದ ಗಂಭೀರತೆಯನ್ನು ತಗ್ಗಿಸಲೆಂದು ಏನನ್ನೋ ನೆನೆದು ನಕ್ಕುಬಿಟ್ಟನು.

'ಅದೇನು ? ನಕ್ಕದ್ದೇಕೆ ಸಾಕ್ಷಿ ?' ಭಾರತಿ ಕೇಳಿದಳು.

'ಏನು ಹೇಳಲಿ ? ನನ್ನ ವಿಹಂಗಮಸಂಚಾರದಲ್ಲಿ ಒಬ್ಬ ದೊಡ್ಡ ಸಿರಿವಂತನ ಮನೆಯಲ್ಲಿಯ ಮದುವೆಯನ್ನು ನೋಡಿದೆ. ನೂರಾರು ಜನರು ಉಂಡು

ಚೆಲ್ಲಿದ ನಿಷ್ಪ್ರಾಣ್ಣನ್ನದ ರಾಶಿ ಎಲೆಗಳಲ್ಲಿ ನೊಣಗಳ ಪಾಲಾಗಿ ಕುಳಿತಿವೆ. ಮನೆಯ ಹೊರಗಡೆ ಅನ್ನ ಅನ್ನವೆಂದು ಕೂಗುವ ತಿರುಕರನ್ನು ಆಳುಗಳು ಬಡಿದು ಪಬ್ಬುತ್ತಿದ್ದಾರೆ.'

'ಹೀಗೋ ? ನಿನ್ನ ನಗೆಯ ನಿಮಿತ್ತ ನನಗೆ ಪಂಜಿನುರಿಯಾಗಿದೆ.'

ಮತ್ತೆ ತುಸು ಮೌನ. ಆಮೇಲೆ ಸಾಕ್ಷಿ ಕೇಳಿದನು 'ಒಂದು ಮಾತನ್ನು ಬಹಳ ದಿನದಿಂದ ಕೇಳಬೇಕೆನ್ನುತ್ತಿರುವೆ. ತಾಯಿ, ಯಾವಾಗಲೂ ಈ ದಾರುಣ ದೃಶ್ಯವನ್ನು ನೋಡಲು ನನ್ನನ್ನೇ ಕಳಿಸುತ್ತಿರುವಿ. ನೀನೇಕೆ ನೋಡಲು ಹೋಗುವುದಿಲ್ಲ ?'

'ಮಗೂ, ನೀ ನೋಡಿದರೆ ನಾ ನೋಡಿದಂತೆಯೇ ಅಲ್ಲವೇ ? ನಿನ್ನ ಕಣ್ಣಿಂದ ನಾ ನೋಡಿದ್ದೇನೆ. ಅಲ್ಲದೆ, ಬರೀ ನೋಡಿ ಏನು ಪ್ರಯೋಜನ?'

'ಹಾಗಾದರೆ ಕೇಳುವುದನ್ನು ಮನ್ನಿಸಬೇಕು. ತಾಯಿ, ಇಲ್ಲಿದ್ದು ಆದರೂ ಏನು ಪ್ರಯೋಜನ ? ನೀನು ಮೆಚ್ಚುವ ಈ ನಾಡಿನ ಜನದೊಡನೆ ಒಂದಾಗಿ ಅವರಿದ್ದಲ್ಲಿ ಇರದೆ, ಈ ನಿರ್ಜನವಾದ ತಂಪಿನ ಸೀಮೆಯಲ್ಲಿ ಯಾಕೆ ಇರುವುದು ? ಅದೆಷ್ಟೋ ಸಲ ಇದನ್ನು ಕೇಳಬೇಕೆಂದು ಮಾಡಿ ಹಿಂಜರಿಯುತ್ತಿದ್ದೆ. ಇಂದು ಕೇಳಬಹುದೇ ?'

'ಕೇಳು ಸಾಕ್ಷಿ. ಕೇಳಿದರೆ ತಪ್ಪೇನು ? ನಿನ್ನ ಕೇಳಿಕೆಯಲ್ಲಿ ಸಮಂಜಸಿಕೆಯಿದೆ. ಆದರೆ ಏನು ಹೇಳಲಿ? ನನ್ನ ನಾಡಿನ ಜನದೊಡನೆ ಇದ್ದು ಪ್ರಯೋಜನವಿಲ್ಲ; ಇರುವ ವೇದನೆಯನ್ನು ತಾಳಲಾಗದು ಎಂದು ಇಲ್ಲಿ ಇದ್ದೇನೆ. ಅದಕ್ಕಾಗಿಯೆ ಈ ನಿರ್ಜನವಾದ ತಂಪಿನ ತವರುಮನೆಯನ್ನು ನನ್ನ ನಿವಾಸಕ್ಕೆ ಆರಿಸಿದ್ದೇನೆ. ನನ್ನ ಹೃದಯದುರಿಯನ್ನು ಈ ತಂಪಿನ ಪರಮಾವಧಿ ತಣ್ಣಗೆಮಾಡೀತು ಎಂದು ಬಂದು ಇಲ್ಲಿಯ ನೀರಿನಲ್ಲಿ ಮೀಯುತ್ತಿದ್ದೇನೆ. ಹಿಮದ ನೆಲೆಗಳಲ್ಲಿ ಒರಗುತ್ತಿದ್ದೇನೆ. ಆದರೆ, ಸಾಕ್ಷಿ, ಎಂಥವರನ್ನೂ ತನ್ನ ಶೀತದ ಆಘಾತದಿಂದ ಮುಟಿಗೆಮಾಡುವ ಈ ಸೀಮೆಯೂ ನನ್ನ ದಾಹವನ್ನು ಆರಿಸಲಾರದಾಗಿದೆ. ಇಂದು ನೋಡು, ಎಂದಿನಂತೆ ಕೈಲಾಸಪರ್ವತದ ಪ್ರದಕ್ಷಿಣೆ ಹಾಕುತ್ತ, ನಾಡಿಗೆ ಶಿವವನ್ನು ನೀಡೆಂದು ಕೈಲಾಸನಾಥನಾದ ಶಿವನನ್ನು ಪ್ರಾರ್ಥಿಸುತ್ತ ಗಾಳಿಗುಂಟ ತೇಲುತ್ತಿರುವಾಗ,ಹಿಮದಿಂದ ಮುಚ್ಚಿಹೋದ ಕೈಲಾಸಶಿಖರವು ಜ್ಯೋತಿರ್ಲಿಂಗದಂತೆ, ಬೆಳಕಿನ ಗುಡಿಯ ಗೋಪುರದಂತೆ ರಮ್ಯವಾಗಿ ತೋರಿ ಮನಸ್ಸನ್ನಾಕರ್ಷಿಸಿತು. ಅದನ್ನಪ್ಪಿಕೊಂಡಲ್ಲಿ ನನ್ನ ಬೇಗೆ ಆರುವುದೆಂದು ನಂಬಿ, ಅದರ

ಸುತ್ತ ತೋಳುಗಳನ್ನು ಚಾಚಿ ಮೈಯೊಡ್ಡಿದೆನು. ಒಂದು ಕ್ಷಣ ತಂಪಿನ ಸಮಾಧಿಯಲ್ಲಿ ಮೈಮರೆತೆ; ಆದರೆ ಒಂದು ಕ್ಷಣ ಮಾತ್ರ. ಮರುಚಣವೆ ಕೈಲಾಸ ಶಿಖರವೆಲ್ಲ ಉರಿಗೊಂಡ ಗಿರಿಯಾಗಿ ನನ್ನನ್ನು ಈಚೆಗೆ ನೂಕಲು ಇಲ್ಲಿ ಮಾನಸ ಸರೋವರಕ್ಕೆ ಬಂದು ಮಿಂದೆದ್ದು ತುಸು ತಣ್ಣಗಾದೆನು.'

'ಅದೇಕೆ ಹೀಗಾಯಿತು ತಾಯಿ ?'

'ನೋಡು, ಆ ಶಿಖರವನ್ನು ನಾನು ಅಪ್ಪಿದೊಡನೆ 'ನನ್ನಂತೆ ಅತ್ಯಂತ ಉನ್ನತವಾಗಿ ಮೆರೆದ ನಿನ್ನ ನಾಡಿನ ಸಂಸ್ಕೃತಿ ಈಗ ನನ್ನಂತೆ ಹಿಮತೊಡೆದು ಹೆಪ್ಪುಗಟ್ಟಿದಂತಾಗಿದೆ' ಎಂದಾರೋ ನನ್ನ ಕಿವಿಗಳಲ್ಲಿ ಕೂಗಿದಂತಾಯಿತು. ಅದನ್ನು ಕೇಳಿದೊಡನೆ ನನ್ನ ಹೃದಯಜ್ವಾಲೆ ಹಬ್ಬಿತು. ಆ ಶಿಖರವೂ ಅದರಿಂದ ಕಾವುಗೊಂಡಿತು.'

'ತಾಯಿ, ಅದು ನಿಜ. ಆದರೆ ನಾ ಕಂಡದ್ದನ್ನು ಹೇಳಲೆ ? ನೀನೀಗ ಜನದ ಬಳಿ ಹೋಗಿ ಹೇಳಿದರೆ ಹಾಡಿದರೆ ಆ ಸಂಸ್ಕೃತಿ ಮತ್ತೆ ತಲೆಯೆತ್ತ ಬಹುದು.'

'ಸಾಕ್ಷಿ, ನಿನಗೆ ಗೊತ್ತಿಲ್ಲವೇ ? ವೇದಕಾಲದಿಂದಲೂ ಋಷಿಗಳ ದರ್ಶನವಾಗಿ ತಾತ್ವಿಕರ ಮತಿಯಾಗಿ ಬುದ್ಧಮಹಾವೀರರ ಪ್ರಜ್ಞೆಯಾಗಿ ಕವಿಗಳ ಕನಸಾಗಿ ಭಕ್ತರ ಭಾವನೆಯಾಗಿ ಮಾತು-ಚಿಕ್ಕೆಗಳಲ್ಲಿ ಆ ಸಂಗತಿಯನ್ನು ಮೂಡಿಸಿದ್ದೇನೆ. ಹಿಂದಿನ ಕವಿಗಳು ಜಗವೆಲ್ಲ ಒಂದು ಗೂಡೆಂದೂ ಒಂದೇ ಸತ್ಯ ಬಹುವಿಧವಾಗಿ ಕರೆಯಲ್ಪಡುವುದೆಂದೂ ಹೇಳಿದರು. ಇಂದಿನ ರವೀಂದ್ರರು ಅದನ್ನೇ ಹೊಸ ವೈಖರಿಯಲ್ಲಿ ಸಾರಿದರು. ಇದರಿಂದ ಈ ಜನ ಅರಿಯಿತೇ ? ನಾಡು ಒಂದಾಯಿತೇ ? ದಾಸ್ಯದ ಶೃಂಖಲೆಯಿಂದ ಬಿಡುಗಡೆ ಹೊಂದಿತೇ ? ಅಂತಃಕಲಹದಿಂದ ಆ ಶೃಂಖಲೆಯನ್ನು ಇನ್ನಷ್ಟು ಬಿಗಿಮಾಡುತ್ತಿದೆ, ಲೋಕದ ಅಪಹಾಸ್ಯಕ್ಕೆ ಗುರಿಯಾಗುತ್ತಿದೆ.'

'ಅದು ನಿಜ ತಾಯಿ. ಆದರೂ ಎಂದಿಗಿಂತ ಜನವಿಂದು ಎಚ್ಚತ್ತಿದೆ; ಒಂದಾಗುವ ದಾರಿಯಲ್ಲಿ ಹೆಜ್ಜೆಯಿಕ್ಕಿದೆ. ನೀ ನಿನ್ನ ಅಮರವಾಣಿಯಲ್ಲಿ ಇಂದಿನ ಗೋಳಿನ ಸತ್ಯವನ್ನು ಸಾರಿದರೆ ಅದನ್ನರಿತು ಜನ ಚೇತರಿಸಿಕೊಂಡು ಎದ್ದೀತು; ಗುರಿಯತ್ತ ನುಗ್ಗೀತು.'

'ಸತ್ಯ? ಸಾಕ್ಷಿ, ಸತ್ಯವನ್ನು ಸಾರಬೇಕೇ ? ಸತ್ಯವನ್ನಾರು ಕೇಳುವರು ? ಪರಕೀಯರ ನೆರಳಿನಲ್ಲಿ ಬಾಳಿ ಸಲುವಳಿಯಾದ ಈ ನಿಸ್ಸತ್ವಜನತೆ ಅಸತ್ಯವನ್ನಪ್ಪಿ

ಕೊಂಡು ಅದನ್ನೇ ಸತ್ಯವೆಂದು ತಿಳಿದಿದೆ. ಅಸತ್ಯದಲ್ಲಿ ಈಗ ಸ್ವಾರ್ಥವಿದೆ, ಸುಖ ವಿದೆ. ಸತ್ಯಕ್ಕೆ ಬೇಕು ತ್ಯಾಗ, ಕಷ್ಟಸಹನೆ.'

'ತಾಯಿ, ಇದನ್ನೊಪ್ಪಿದೆ. ಆದರೆ ಮಹಾನಾಯಕರ ನೇತೃತ್ವದಲ್ಲಿ ಇಂದು ಸತ್ಯದ ದೃಷ್ಟಿ ಬಂದಿದೆಯೆಂದು ನಾ ನೋಡಿದ್ದೇನೆ. ಜನತೆಯ ಪ್ರೈಮನವನ್ನೆಲ್ಲ ಅಲ್ಲಾಡಿಸಿ ಅವರ ಸಂಕಲ್ಪಶಕ್ತಿಯನ್ನು ಬಡಿದೆಬ್ಬಿಸಲು ನಿನ್ನ ಉಜ್ವಲವಾಣಿ ಮಾತ್ರ ಬೇಕು. ಅಸತ್ಯವು ಸತ್ಯವನ್ನು ಎಷ್ಟು ಮರೆಮಾಡಿದ್ದರೂ ಸತ್ಯಕ್ಕೆ ಸಾವಿಲ್ಲವಷ್ಟೆ ?'

'ಹೌದು, ಸಾಕ್ಷಿ. ಸತ್ಯಕ್ಕೆ ಸಾವಿಲ್ಲ ನಿಜ. ಆದರೆ ಸತ್ಯಕ್ಕೆ ಬಾಯಿಯೂ ಇಲ್ಲ. ಬಾಯಿ ತೆಗೆದರೆ ಅದಕ್ಕೆ ಬದುಕಿಲ್ಲ. ಕಾಲಮಾನದ ಈ ಸತ್ಯ ನಿನಗೆ ಗೊತ್ತಿರುವುದೇ ? ನಾ ಬಣ್ಣಿಸುವ ಸತ್ಯವನ್ನು ಜನ ಕೇಳಬಹುದೆಂದು ಭಾವಿಸಿ ದರೂ ಸತ್ಯವನ್ನು ಬಣ್ಣಿಸಲು ಅವಕಾಶವುಂಟೇ ? ಹಿಂಸೆಗೆ ಹೆದರಿ ಹೇಳಿದ ಮಾತಲ್ಲ ಇದು. ಸತ್ಯದ ಆವಿಷ್ಕರಣದ ಸಾಧ್ಯತೆಯನ್ನು ನೆನೆದು ಹೇಳಿದ್ದು. ನೀ ಕಂಡ ನಾಡಬಾಳಿನ ಸಮಗ್ರ ಸತ್ಯವನ್ನು ನಾನಿಂದು ಸಾರುವಂತಿದೆಯೆ? ಯಾವ ವರ್ಚಸ್ಸಿನ ಅಂಕೆಯಿಂದ ಈ ನಾಡು ಮುಕ್ತವಾಗಿ ಏಕರಾಷ್ಟ್ರವಾಗಿ ಮೆರೆಯಲಿ, ತನ್ನೆಲ್ಲ ಸಂಪತ್ತಿಯನ್ನು ಪಡೆಯಲಿ ಎಂದು ಕಲಾಪ್ರಜ್ಞೆ ಇಂದು ಹಂಬಲಿಸು ವುದೋ ಆ ವರ್ಚಸ್ಸೇ ಇಂದು ಸತ್ಯದ ಸಾರುವಿಕೆಗೆ ಕಾಲ್ತೊಡಕಾಗಿದೆ.'

ಭಾರತಿ ಅತ್ಯಂತ ಆವೇಶದಿಂದ ಈ ಮಾತುಗಳನ್ನಾಡಿ ಜಪಸಿರಳಾಗಿ ಮೌನವಾಂತಳು.

ಸಾಕ್ಷಿಗೆ ಅವಳ ಮಾತಿನ ಮರ್ಮವು ಹೊಳೆಯಿತು.ಆದರೆ ಅವನಿಗೆ ಸಮಾ ಧಾನವಾಗಲಿಲ್ಲ. ಅವಳ ಆವೇಶಯುಕ್ತ ವಚನಗಳಿಗೆ ಪ್ರತಿಹೇಳದೆ ಮೂಕನಂತಾ ದನು. ಕಾಲ ಸಾಗಿತು. ಅದೇಕೊ ತಾನೇ ಭಾರತಿ ಮಾತನ್ನು ಮುಂದುವರಿಸಿ ದಳು : 'ಸಾಕ್ಷಿ, ಇಂದಿಲ್ಲ ನಾಳೆ ಈ ನಾಡಿನ ಸಂಕೋಲೆಗಳೆಲ್ಲ ಕಳಚಿ ಹೋಗಿ ಇದರ ಸಂಸ್ಕೃತಿ ಬೆಳಗುವುದೆಂಬ ಶ್ರದ್ಧೆ ನನ್ನಲ್ಲಿದೆ. ಆದರೆ ಅದು ಕೇವಲ ದೈವಾನು ಗ್ರಹದ ಪವಾಡದಿಂದಲ್ಲ. ಈ ಜನದ ಸುಬುದ್ಧಿ—ಸಾಹಸ—ತ್ಯಾಗಗಳಿಂದ ಅದು ಫಲಿಸುವುದು. ಇಂದೆಷ್ಟು ಜಾಗೃತಿಯಾಗಿದ್ದರೂ ಆ ಗುಣಗಳು ವಿಕಾಸ ಗೊಂಡು ತೋರಿಲ್ಲ. ಅಂತೇ ಇಂದಿನ ಸಮಸ್ಯೆಗಳು ನಾಡನ್ನು ಕಾಡುತ್ತಿರುವುವು. ಇಂದಿನ ವಿಷಯವ್ಯೂಹದಿಂದ ಹೇಗೆ ಭಾರತವು ಹೊರಬಿದ್ದೀತು ಎಂಬುದೇ ನನ್ನ ತಲ್ಲಣ. ಇಂದು ಕಣ್ದೆರೆಯದಿದ್ದರೆ ರೌರವನರಕವನ್ನು ಭೂಮಿಯ ಮೇಲೆ ಕಂಡು

ಆಮೇಲೆ ಈ ಜನತೆ ಅದೆಷ್ಟೋ ಕಾಲದ ಮೇಲೆ ಬುದ್ಧಿಗಲಿಯುವುದು, ಅಷ್ಟೆ. ಲೋಕವನ್ನೆಲ್ಲ ಸುತ್ತಾಡಿ ಯುದ್ಧರಾಕ್ಷಸನ ಹಾವಳಿಯನ್ನು ನೀನು ಕಂಡಿಲ್ಲವೇ? ಸುಟ್ಟನಗರಗಳನ್ನು ಗೆದ್ದು ಹೆಣಗಳನ್ನು ತುಳಿದು ವಿಜಯ ಗೀತವನ್ನು ಹಾಡುವ ವೀರರು ಏನನ್ನು ಪಡೆಯುತ್ತಿರುವರು? ಹೊಸ ಬಾಳನ್ನು ಸುಟ್ಟ ಬಾಳಿನ ಮೇಲೆ ಕಟ್ಟುವುದಕ್ಕೆ ಕಾಲವೆಷ್ಟು ಬೇಕೋ ಅಷ್ಟೇ ತಿಳಿವು-ತಾಳ್ಮೆ ಬೇಕು. ಕಣ್ಣಮುಂದೆ ನಡೆದ ಲೋಕದ ರುದ್ರನಾಟಕವನ್ನು ನೋಡಿಯೂ ಭಾರತೀಯರು ಮುಂದಾಗಿ ಪಾಠ ಕಲಿಯುವಂತಿಲ್ಲವೇ? ಹೆಬ್ಬಾವಿನಂತೆ ಸುತ್ತಿದ ಪರದಾಸ್ಯವನ್ನು ನೀಗುವುದ ಕ್ಕೆಂದು ಮೊದಲು ಐಕ್ಯದ, ತ್ಯಾಗದ ಎಲ್ಲ ಶಕ್ತಿಗಳನ್ನು ಕೇಂದ್ರೀಕರಿಸಬಾರದೇ?'

'ತಾಯಿ, ಈ ಸತ್ಯವನ್ನು ನೀನು ಸುಂದರವಾಗಿ ಅಚ್ಚೊತ್ತಿದಂತೆ ಹೇಳಿ ದರೆ ಭಾರತವು ಎದ್ದೇಳುವುದು, ಅರಿತು ನಡೆಯುವುದು.' ತಾನು ಹೇಳಬೇಕೆಂದ ಮಾತಿಗೆ ಇದು ತಕ್ಕ ಸಮಯವೆಂದರಿತು ಸಾಕ್ಷಿ ನುಡಿದನು.

'ಅದು ಹೇಗೊ ನಾನರಿಯೆ' ಇಷ್ಟು ಮಾತ್ರ ಹೇಳಿ ಭಾರತಿ ಸುಮ್ಮ ನಾದಳು.

ಕೆಲಕಾಲ ಸಂದಿತು. ಅದೇಕೊ ಬಿರುಸಾದ ಗಾಳಿ ಒಮ್ಮೆಲೆ ನಿಂತಿತು. ಎಲ್ಲ ಕಡೆ ನಿಶ್ಶಬ್ದವಾಯಿತು. ಒಂದಾನೊಂದು ಜಿನುಗು ಸಪ್ಪಳವೂ ಕೇಳುತ್ತಿರ ಲಿಲ್ಲ. ಭಾರತಿ ಧ್ಯಾನಲೀನಳಾಗಿದ್ದಾಳೆ; ಸಾಕ್ಷಿ ಮುಳುಗುತ್ತಿರುವ ಚಂದ್ರನನ್ನು ನಿರುಕಿಸುತ್ತ ಕೂತಿದ್ದಾನೆ. ಆಗ ಒಮ್ಮಿಂದೊಮ್ಮೆಲೆ ದಶದಿಕ್ಕುಗಳಿಂದ ಸಂಕಟದ ಆಕ್ರೋಶಗಳು, ಕರುಣದ ಕೂಗುಗಳು ಕಿವಿದೆರೆಗೆ ಅಪ್ಪಳಿಸುವಂತೆ ಗಾಳಿಯಲ್ಲಿ ಹರಿದು ಬಂದವು. 'ಅಯ್ಯೋ! ಹಾಹಾ!' ಮುಂತಾಗಿ ನಾನಾವಿಧವಾದ ಕರುಳಿರಿಯುವ ಆರ್ತಧ್ವನಿಗಳು ತಡೆಯಿಲ್ಲದೆ ಕಣಿದುವು. ಮೌನದ ಕಡಲು ಬೆಟ್ಟ ದೆರೆಗಳಿಂದ ಪ್ರಕ್ಷುಬ್ಧವಾಯಿತು. ಸಾಕ್ಷಿ ಗಾಬರಿಗಣ್ಣಿನಿಂದ ಎಲ್ಲ ಕಡೆ ನೋಡಿ ದನು. 'ತಾಯಿ, ಏನಿರಬಹುದು ?' ಎಂದು ಕೂಗಿದನು.

ಭಾರತಿ ಧ್ಯಾನದಿಂದ ಗಡಗಡನೆ ಕೆಳಗಿಳಿದು ಜಪವನ್ನು ಕೂಡ ಮರೆತು 'ಸಾಕ್ಷಿ, ಏನಿದದ್ಭುತ?' ಎಂದು ಬೆರಗುವಟ್ಟು ಸುತ್ತೆಲ್ಲ ನಿಟ್ಟಿಸಿದಳು. ಕೂಗು ಹಾಗೇ ಕೇಳಿಬರುತ್ತಿದ್ದವು. ಕೆಲಹೊತ್ತು ಕೇಳಿ ಭಾರತಿ ತನ್ನ ಆಸನದಿಂದ ಎದ್ದು ನಿಂತು ಸಾಕ್ಷಿಗೆ ಹೇಳಿದಳು; 'ಸಾಕ್ಷಿ, ತಿಳಿಯಿತು, ನನ್ನ ನಾಡಿನ ಕಳವಳದ ಕೂಗು ನಾನಿದ್ದಲ್ಲಿ ಹುಡುಕುತ್ತ ಕೆಣಕುತ್ತ ಬಂದಿದೆ. ಮೌನಕ್ಕೆ ಮಿತಿಯುಂಟು, ತಾಳ್ಮೆಗೆ ಎಲ್ಲೆಯುಂಟು. ಹೋಗು, ಈಗಳೆ ಹೋಗು. ಭಾರತದ ಮೂಲೆಮೂಲೆ

ಗಳಲ್ಲಿ ಮತ್ತೆ ಸುತ್ತಾಡಿದು ಕಣ್ಣಿಟ್ಟು ನೋಡಿ ಬಾ. ಈ ಕೂಗಿನ ಕೊರೆಗಳ ಮೂಲವನ್ನು ಕಂಡು ಬಾ. ಕಾಲವೆಷ್ಟು ಹಿಡಿದರೂ ಚಿಂತೆಯಿಲ್ಲ. ಎಲ್ಲವನ್ನು ಎಲ್ಲ ನೋಟದಿಂದ ನೋಡು. ನೀ ಕಂಡ ಸತ್ಯವನ್ನು ಕಲ್ಲು ಕರಗುವಂತೆ ಎದೆ ಬಿರಿಯುವಂತೆ ನಾನು ಬಣ್ಣಿಸುವೆನು. ಸಾರತಕ್ಕ ಸತ್ಯವನ್ನು ಈ ನಾಡಿಗೆ ಸಾರು ವೆನು. ನಡೆ, ಬೇಗ ಹೊರಡು.'

'ನಿನ್ನಪ್ಪಣೆಯಂತೆ ನಡೆಯುವೆ ತಾಯಿ' ಭಾರತೀಯ ನಿರ್ಧಾರದಿಂದ ಸಂತುಷ್ಟನಾದ ಸಾಕ್ಷಿ ಕೂಡಲೆ ಒಪ್ಪಿಕೊಂಡು ನಡೆದನು. ಗಾಳಿಯಲ್ಲಿ ಮೈಯನ್ನು ತೂರಿದನು. ಭಾರತಿ ಮಾನಸಸರದಲ್ಲಿ ಇಳಿದಳು. ಚಂದ್ರ ಮುಳುಗಿ ದನು. ಬರುಬರುತ್ತ ದಟ್ಟವಾದ ಕತ್ತಲೆ ನೆಲವನ್ನೆಲ್ಲ ತಬ್ಬಿಕೊಂಡಿತು.

## ೨. ನೆರೆ-ಬರವು

ಥಣಣಣ ಥಣ್ ಎಂದು ಸರಸರನೆ ಮುಂಬಯಿಯ ಗ್ರ್ಯಾಂಟ್ ಮೆಡಿಕಲ್ ಕಾಲೇಜಿನ ಘಂಟೆ ಹೊಡೆಯಿತು. ಅಂದಿನ ಕೊನೆಯ ತಾಸು ಮುಗಿಯಿತು ಎಂದು ಡಂಗುರ ಸಾರಿತು. ಥಣ್ ಎಂಬುದಾಗಿ ಗುಣಿಕೆಯ ಜೋರಾದ ಕಡೆಯ ಏಟು ಬಿದ್ದು ಕಾಲೇಜಿಗೂ ಘಂಟೆಗೂ ಇನ್ನು ಹತ್ತು ದಿನ ಬಿಡುವೆಂದು ಕೂಗಿ ಹೇಳಿದಂತಾಯಿತು. ವಿದ್ಯಾರ್ಥಿಗಳೆಲ್ಲ ಉತ್ಸಾಹದಿಂದ ಹೊರಬಿದ್ದರು. ಪ್ರೊಫೆಸರು ಏಳುವ ಮೊದಲೇ ಒಂದು ಕಾಲು ಹೊರಗಿಟ್ಟ ಕೆಲವರು ಗುಂಪುಗುಂಪಾಗಿ ಹೊರಬಿದ್ದು ಹಾರಾಡಿದರು, ಕೇಕೆ ಹಾಕಿದರು. ಬಯಲಲ್ಲಿ ಬಂದು ಪುಸ್ತಕ ಗಳನ್ನೂ ವಹಿಗಳನ್ನೂ ತೂರಾಡಿದರು. 'ಪರೀಕ್ಷೆಯ ಟರ್ಮಿದು, ಮನ ಗೊಟ್ಟು ಅಭ್ಯಾಸ ಮಾಡಬೇಕು, ತಮಗೂ ಕಾಲೇಜಿಗೂ ಕೀರ್ತಿ ತರಬೇಕು' ಎಂದು ಮುಂತಾಗಿ ಪ್ರೊಫೆಸರರು ಮಾಡಿದ ಕಳಕಳಿಯ ಉಪದೇಶ ಗಾಳಿಯಲ್ಲಿ ಕರಗಿಹೋಯಿತು. ವೈದ್ಯಕೀಯ ವಿದ್ಯಾಲಯಗಳಲ್ಲಿ ಅಭ್ಯಾಸದ ಹೊರೆಯೆಂದರೆ ಹೇಳಕೂಡದಷ್ಟು. ವಿವಿಧ ವಿಷಯಗಳ ಓದು-ಲೆಕ್ಚರು, ಮೇಲೆ ಸತ್ತ ಹೆಣದ ಪೃಥಕ್ಕರಣವೋ ಜೀವಂತ ಹೆಣಗಳ ಔಷಧೋಪಚಾರವೋ ಈ ಕೆಲಸ ಬೇರೆ. ಈ ದುಡಿತದಲ್ಲಿ ಸುಗ್ಗಾದ ಹುಡುಗರಿಗೆ ಹತ್ತು ದಿನದ ನಾತಾಳಿ ಸೂಟಿಯೂ ಹಿಗ್ಗಿನ ಹುತ್ತವಾಯಿತು.

ವಿದ್ಯಾರ್ಥಿಗಳು ತಮ್ಮ ವಸತಿಗೃಹದತ್ತ ನಡೆದರು. ಎಲ್ಲರ ಬಾಯಲ್ಲಿ

ಊರಿಗೆ ಹೊರಡುವ ಮಾತುಗಳೇ. 'ನೀ ಯಾವಾಗ ? ಯಾವ ಊರಿಗೆ?' ಎಂಬ ಪ್ರಶ್ನೆಗಳ ಸುರಿಮಳೆಯನ್ನು ಒಬ್ಬರನ್ನೊಬ್ಬರು ಮಾಡಿದರು. ಅಭ್ಯಾಸಕ್ಕಾಗಿ ಎಲ್ಲಿಯೂ ಹೋಗದೆ ಇಲ್ಲಿಯೇ ಇರುವೆವೆಂದು ಹಲವರು ಹೇಳಿದ್ದಕ್ಕೆ ಒಬ್ಬ ಕಿಡಿಗೇಡಿ 'ಆಯ್ತು. ಇಲ್ಲಿಯೇ ಸಾಯಿರಿ' ಎಂದು ನಗುನಗುತ್ತಲೇ ಶಪಿಸಿದನು.

'ಊರಿಗೆ ಹೊರಟು ಸಾಯುವುದಕ್ಕಿಂತ ಇದು ನೆಟ್ಟಗಲ್ಲವೇ ?' ಎಂದು ಹೋಗಲೊಲ್ಲದ ನೆರವಿಯಿಂದ ಉತ್ತರ ಬಂದಿತು.

'ಓಹೊ ! ಇವನೊಬ್ಬ ಮಹಾ ಪುಕ್ಕ' ಎಂದು ಹೋಗಲು ಸಿದ್ಧವಾದ ಗುಂಪಿನಿಂದ ಪ್ರಶಸ್ತಿ ದೊರೆಯಿತು. ಆಗ ರೇಲ್ವೆ-ಹಳಿಗಳ ಕಿತ್ತಾಟದ ಕಾಲವಾಗಿತ್ತು. ಪ್ರವಾಸಿಕರು ತಮ್ಮ ಜೀವನವನ್ನು ಕೈಯಲ್ಲಿ ಹಿಡಿದುಕೊಂಡು ತಿರುಗುತ್ತಿದ್ದರು. ಆದರೆ ಕಾಲೇಜಿನ ಯಾಂತ್ರಿಕ ದಿನಚರಿಗೆ ಬೇಸತ್ತು ಊರ ದೋರೆಯನ್ನು ನೋಡಬೇಕೆಂದು ಹಾತೊರೆಯುವ ಹುಡುಗರಿಗೆ ಈ ಹೆದರಿಕೆ ತಾಕಲಿಲ್ಲ.

ಎಲ್ಲರೂ ತಂತಮ್ಮ ಕೋಣೆಗಳನ್ನು ತೆರೆದು ಪುಸ್ತಕವನ್ನೆಸೆದು ವೇಷ ಬದಲಿಸಿದರು. ಅಲ್ಲಲ್ಲಿ ವಸತಿಗೃಹದ ಮುಂದೆ ಸಂಜೆಯ ತಂಪುಗಾಳಿಯಲ್ಲಿ ಹರಟೆಯ ಕೂಟಗಳು ಸೇರಿದವು. ಹರಟೆಯಲ್ಲಿ ಬಾರದ ವಿಷಯವಿಲ್ಲ, ಬಯ್ಯದ ವ್ಯಕ್ತಿಯಿಲ್ಲ. ಪ್ರೊಫೆಸರರ ವಿಮರ್ಶೆಯಿಂದ ಮೊದಲಾದ ವ್ಯಕ್ತಿವಿಮರ್ಶೆ ಗಾಂಧಿ, ನೆಹರು, ಚರ್ಚಿಲ್ಲ ರೂಜವೆಲ್ಟರವರೆಗೆ ಹೋಯಿತು. ಒಂದು ತುಸು ದೊಡ್ಡದಾದ ಗುಂಪಿನಲ್ಲಿ ವಾದಸಭೆಯ ಗಂಭೀರಸ್ವರೂಪ ಬಂದಿತ್ತು. ನಡುನಡುವೆ ಉದ್ದುದ್ದಾದ ಭಾಷಣಗಳೂ ಆಗುತ್ತಿದ್ದವು. ಇವರ ಧೋರಣೆ ತಪ್ಪು, ಅವರದೇ ಯೋಗ್ಯ— ಈ ಮುಂತಾದ ರಾಜಕೀಯ ಚರ್ಚೆ ಸಾಗಿತ್ತು. ಈ ಗುಂಪಿನ ಮಧ್ಯದಲ್ಲಿ ಎಲ್ಲರಿಗೆ ಪರಿಚಿತನಾದ ಒಬ್ಬ ವಿದ್ಯಾರ್ಥಿ ರಾಷ್ಟ್ರೀಯ ವಿಚಾರಗಳನ್ನು ಮನಗಾಣುವಂತೆ ಮಂಡಿಸುತ್ತಿದ್ದನು. ಅವನು ಬರೀ ಮಾತಿನ ಮಲ್ಲನಲ್ಲವೆಂದೂ ಸಾಹಸಿಯೆಂದೂ ಎಲ್ಲರಿಗೆ ಗೊತ್ತಿತ್ತು. ಅವನ ಮಾತನ್ನೆಲ್ಲರೂ ಕಿವಿಗೊಟ್ಟು ಕೇಳುತ್ತಿದ್ದರು. ಅಷ್ಟರಲ್ಲಿ ಒಬ್ಬ ಕುಚೋದ್ಯಗಾರನು ನಡುವೆ ಬಾಯಿ ಹಾಕಿ 'ಸರಿ, ಅಮೃತ್, ಮಾತಾಡಲಿಕ್ಕೆ ಎಲ್ಲ ಸರಿ. ದೇಶದ ಸಲುವಾಗಿ ಬೇಕಾದ ತ್ಯಾಗ ಮಾಡಲಿಕ್ಕೆ ನೀ ಸಿದ್ಧನಿರುವೆಯೇನು?' ಎಂದು ಸವಾಲು .ಹಾಕಿದನು.

ಅಮೃತನು ಏನು ಉತ್ತರ ಕೊಡುವನೆಂದು ತಿಳಿಯಲು ಎಲ್ಲರ ಕುತೂಹಲದ ಕಣ್ಣು ಅವನತ್ತ ತಿರುಗಿದವು. ಈಗವನು ಮೆಡಿಕಲ್ ಕಾಲೇಜಿನ ಕೊನೆಯ ವರ್ಷದಲ್ಲಿದ್ದು ಇನ್ನು ಮೂರುನಾಲ್ಕು ತಿಂಗಳಲ್ಲಿ ಪರೀಕ್ಷೆಗೆ ಕೂಡುವವ

ಸಿದ್ಧನು; ಪರೀಕ್ಷೆಯಾಯಿತೆಂದರೆ ಡಾಕ್ಟರನಾಗುವವನಿದ್ದನು. ಅಂತೇ ಕೇಳಿದ ಪ್ರಶ್ನೆಗೆ ಒಂದು ಮೊನೆಯಿತ್ತು. ಅದು ಅಮೃತನ ಎದೆಯಲ್ಲಿ ನಾಟಿತು; ಆದರೆ ಎದೆಗುಂದಿಸಲಿಲ್ಲ. ಅವನು ಸ್ವಲ್ಪವೂ ತಡೆಯದೆ 'ಹೌದು ಸಿದ್ಧನಿದ್ದೇನೆ' ಎಂದು ಗಟ್ಟಿದನಿಯಲ್ಲಿ ಹೇಳಿದನು. ಎಲ್ಲರೂ ಈ ಉತ್ತರವನ್ನು ಮೆಚ್ಚಿದರು; 'ವಾಹವ್ವಾ' ಎಂದರು. ಒಬ್ಬಿಬ್ಬರು ಮಾತ್ರ 'ಈ ಉತ್ಸಾಹ ಕೊನೆಬಾಳುವುದಿಲ್ಲ' ಎಂದು ಮೋರೆ ಕಿವುಚಿದರು. ಆ ಕುಚೋದ್ಯಗಾರನು ಅಲ್ಲಿಗೇ ಅಮೃತನನ್ನು ಬಿಡಲಿಲ್ಲ; ಮುಂದೆ ಕೇಳಿದನು: 'ಹಾಗಾದರೆ ಈಹೊತ್ತು ರಾತ್ರಿಗಾಡಿಗೆ ಹೊರಡು ನಿನ್ನೂರಿಗೆ. ಮನೆಯವರ ಅಪ್ಪಣೆ ತಗೊಂಡು ದೇಶಕಾರ್ಯ ಮಾಡಿ ತೋರಿಸು ನೋಡೋಣ' ಇದಕ್ಕೆ ಅಮೃತನು ಸ್ವಲ್ಪತಡೆದು 'ಈಗಲೆ ಹೊರಡಲಾರೆ; ಪರೀಕ್ಷೆ ಆಗುವವರೆಗೆ ನಾ ಪರಾಧೀನ' ಅಂದನು. ಕೂಡಲೆ 'ನೋಡಿದಿರಾ ಇವನ ಸಿದ್ಧತೆ!' ಎಂದು ಕೆಣಕಿದ ಹುಡುಗನು ಖಿಸಿಖಿಸಿ ನಕ್ಕನು. ಕೆಲವರು ತಮ್ಮ ನಗೆಗೂಡಿಸಿದರು. ಗುಂಪು ಚೆದರಿತು; ಅಮೃತನು ಗೆಳೆಯರ ಕಣಕದಿಂದ ಖಿನ್ನನಾಗಿ ತನ್ನ ಕೋಣೆ ಸೇರಿದನು.

ಸಂಜೆಗತ್ತಲೆ ಕವಿಯತೊಡಗಿತು. ಬೀದಿಯಲ್ಲಿ ಟ್ರಾಮುಗಳ ಓಡಾಟ ಹೆಚ್ಚಿದೆ; ಕಾಲಹಾದಿಗಳೆಲ್ಲ ಹೋಗಬರುವ ಜನರಿಂದ ಕಿಕ್ಕಿರಿದಿದೆ. ವಸತಿಗೃಹ ದಿಂದ ಹೊರಗೆ ಸಂಚಾರಕ್ಕೆಹೊರಡಬೇಕಾಗಿದ್ದ ಹುಡುಗರನೇಕರು ಕೋಣೆಗಳಲ್ಲಿ ರುವರು. ಸಿಳ್ಳುವಾದ್ಯದ, ಸಿನೇಮಾ ಹಾಡಿನ ತುಣುಕುಗಳ ಹಿನ್ನೆಲೆಯಲ್ಲಿ ಅವರ ಸಾಮಾನು ಕಟ್ಟುವುದು ಸಾಗಿದೆ. ಕೆಲವರು ರಾತ್ರಿ ಗಾಡಿಗೆ, ಕೆಲವರು ಬೆಳಗಿನ ಗಾಡಿಗೆ ಹೋಗುವ ತಯ್ಯಾರಿ ನಡೆಸಿದ್ದಾರೆ. ಸೂಟಿಯಲ್ಲಿ ಎಲ್ಲಿಯೂ ಹೋಗ ಕೂಡದೆಂದು ನಿರ್ಧರಿಸಿದ ಅಭ್ಯಾಸಿಗಳು ಊಟವನ್ನು ಮುಗಿಸಿ ಬಂದು ಪುಸ್ತಕ ಹಿಡಿದು ಕೂತಿದ್ದಾರೆ. ನಡುನಡುವೆ, ಹೊರಗೆ ಬೀದಿಯಮೇಲಿನ ಖಣಖಣಾಟ, ಕಲಕಲನಾದಗಳನ್ನೂ ಒಳಗೆ ಕೋಣೆಗಳಲ್ಲಿಯ ಸಪ್ಪಳಗಳನ್ನೂ ಕೇಳಿ ಓದುಸಾಗದೆ ತಲೆಹಿಡಿದು ಕೂಡುತ್ತಾರೆ. ಅಮೃತನು ಇವರಂತೆ ನಿರ್ಧಾರಮಾಡಿದ ಅಭ್ಯಾಸ ವೀರ. ಆದರೆ ಅಂದಿನ ವಾತಾವರಣ ಅಭ್ಯಾಸಕ್ಕೆ ಎಷ್ಟೂ ಅನುಕೂಲವಾಗಿರಲಿಲ್ಲ. ತನ್ನ ಕೋಣೆಗೆ ಹೋಗಿ ಇನ್ನೇನು ಮಾಡಬೇಕೆಂಬ ವಿಚಾರದಲ್ಲಿ ಟೇಬಲ್ಲಿನ ಬಳಿ ಹೋಗಿ ಕುಳಿತನು. ಇದುರಿನ ಸೆಲ್ಪಿನಲ್ಲಿಟ್ಟ ದೊಡ್ಡದೊಡ್ಡ ಹೊತ್ತಿಗೆಗಳ ಮೇಲೆ ಕಣ್ಣುಹಾಯಿಸಿದನು. ಒಮ್ಮೆಯಾದರೂ ಅವನ್ನು ಅವನು ಓದಿದ್ದನು. ಆದರೂ ಇನ್ನೂ ಓದುವುದು ಬಹಳಿದೆ ಎಂಬ ಭಾವವು ಅವನಲ್ಲಿ ತಲೆದೋರಿತು. ಪರೀಕ್ಷೆ

ಯಲ್ಲಿ ಉತ್ತಮಪ್ರತಿಯ ಯಶಸ್ಸನ್ನು ಸಂಪಾದಿಸಬೇಕೆಂದೂ ಆಮೇಲೆ ತಾನೊಬ್ಬ ಮೇಲ್ತರಗತಿಯ ಡಾಕ್ಟರನಾಗಬೇಕೆಂದೂ ಕಾಲೇಜಿನಲ್ಲಿ ಕಾಲಿಟ್ಟಂದಿನಿಂದ ಅವನು ಮನೋರಾಜ್ಯವನ್ನು ಕಟ್ಟಿದ್ದನು. ಅದು ಫಲಿಸುವುದಕ್ಕೆ ಇನ್ನು ನಾಲ್ಕೈದು ತಿಂಗಳು ಮಾತ್ರ ಉಳಿದಿವೆ. ಈ ಅವಧಿಯಲ್ಲಿ ತನ್ನ ಶಕ್ತಿಯನ್ನೆಲ್ಲ ಬಳಸಿ ಪರೀಕ್ಷೆಯಲ್ಲಿ ಮೇಲುಗೈಯಾಗಬೇಕು ಎಂದು ಅವನ ಹಂಬಲು ಮೊದಲನೆಯ ಟರ್ಮಿನಲ್ಲಿ ಅವನ ಹಂಬಲವನ್ನು ಹುಸಿಮಾಡುವಂಥ ಹಲವು ಅದ್ಭುತ ಘಟನೆಗಳು ಜರುಗಿದವು. ೧೯೪೨ ಆಗಸ್ಟ ಒಂಬತ್ತರ ಆಂದೋಲನವು ಮುಂಬಯಿಯಲ್ಲಿ ಹೊತ್ತಿಕೊಂಡು ದೇಶದ ತುಂಬ ತನ್ನ ಉರಿನಾಲಿಗೆಗಳನ್ನು ಹಾಹಾ ಅನ್ನುವುದರಲ್ಲಿ ಚಾಚಿತು. ನಾಡಿನ ಹಿರಿಯಮುಂದಾಳುಗಳೆಲ್ಲ ಸೆರೆಮನೆ ಸೇರಲು ಅನುಯಾಯಿಗಳೇ ಮುಂದಾಳುಗಳಾದರು. ವಿದ್ಯಾರ್ಥಿಗಳು ತ್ಯಾಗದ,ಉತ್ಸಾಹದ ಮೂರ್ತಿಗಳಾದರು. ಅಂಥವರಲ್ಲಿ ಎಂದಿನಿಂದಲೂ ರಾಷ್ಟ್ರೀಯ ಪ್ರವೃತ್ತಿಯುಳ್ಳವನಾದ ಅಮೃತನು ಸುಮ್ಮನಿರಬಹುದೇ ? ಕಾಲೇಜಿನ ಹುಡುಗರು ಹೂಡಿದ ಹರತಾಳದಲ್ಲಿ ಭಾಗವಹಿಸಿದನು; ಉಜ್ವಲ ಭಾಷಣ ಮಾಡಿದನು. ಒಂದು ಗುಂಪಿನೊಡನೆ ಒಂದು ದಿವಸದ ಬಂದಿವಾಸವನ್ನು ಅನುಭವಿಸಿ ತಿರುಗಿ ಬಂದನು. ಗಾಬರಿಯಾಗಿ ಓಡಿಬಂದು ಅವನ ತಂದೆಯವರು ಅವನನ್ನು ಮನೆಗೆ ಕರೆದೊಯ್ದರು. ತಿರುಗಿ ಎರಡನೆಯ ಟರ್ಮಿನ ಮೊದಲಿಗೇ ಅವನು ಮುಂಬಯಿಗೆ ಬಂದದ್ದು. ಆಗ ಪರೀಕ್ಷೆಯಾಗುವವರೆಗೆ ಯಾವುದರಲ್ಲಿಯೂ ಬೀಳುವುದಿಲ್ಲವೆಂದು ಅವನಿಂದ ವಚನಪಡೆದು ಮನೆಯಿಂದ ಕಳಿಸಿದ್ದರು. ಸುತ್ತುಮುತ್ತಿನ ಸಾವಿರಾರು ಕೆಣಕಾಟಗಳಲ್ಲಿ ಮನಸ್ಸು ಕಲಕಿದರೂ ಈವರೆಗೆ ಹೇಗೋ ಪ್ರಯತ್ನಪೂರ್ವಕವಾಗಿ ಅವನು ಕಾಲೇಜ ಜಗತ್ತಿನ ಸಣ್ಣ ಮೇರೆಯಲ್ಲಿ ಸುಳಿಯುತ್ತಿದ್ದನು; ಸಾಧ್ಯವಾದಷ್ಟು ಅಭ್ಯಾಸದಲ್ಲಿ ತೊಡಗಿರುತ್ತಿದ್ದನು. ಇಷ್ಟರಲ್ಲಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬಹುದೆಂಬ ನಂಬಿಕೆ ಹುಟ್ಟಿತ್ತು. ಅವನ ಪ್ರೊಫೆಸರರು ಅವನನ್ನು ಪ್ರೋತ್ಸಾಹಿಸಿದ್ದರು. ಆದರೆ ಇನ್ನೂ ಓದಿ ನೆನಪಿನಲ್ಲಿ ಇಡಬೇಕಾದ್ದು ಬಹಳ ಇರುವುದು, ನಾತಾಳಿ ಸೂಟಿಯ ಹತ್ತುದಿನಗಳನ್ನು ಸಹ ವ್ಯರ್ಥವಾಗಿ ಹೋಗಗೊಡಬಾರದು ಎಂಬುದು ಅವನ ನಿಶ್ಚಯವಾಗಿತ್ತು. ಅಂತೇ ಅವನಿಗೆ ತೋಚಿತು, ಹತ್ತುದಿನದ ಓದಿನ ಕಾರ್ಯಕ್ರಮವನ್ನು ಗೊತ್ತುಮಾಡಬೇಕು ಎಂದು. ಒಂದು ಬಿಡಿಕಾಗದವನ್ನು ತಗೊಂಡು ಪೆನ್ಸಿಲಿನಿಂದ ಬರೆಯಹತ್ತಿದನು. ಒಮ್ಮೆ ಪುಸ್ತಕಗಳ ಕಡೆ ನೋಡುತ್ತ, ಒಮ್ಮೆ ವಿಚಾರಪರನಾಗಿ ಪೆನ್ಸಿಲನ್ನು ಬಾಯತುದಿಗಿಟ್ಟು ಕಡಿ

ಯುತ್ತ ಒಂದು ಪಟ್ಟಿಯನ್ನು ತಯಾರು ಮಾಡಿದನು. ಏನೋ ಒಂದು ಬಗೆಯ ಸಮಾಧಾನವಾಯಿತು. 'ಇದರಂತೆ ಓದಿದಾಗ ಸರಿ' ಎಂದು ದುರ್ಬಲಮನಸ್ಸು ಅಂದಿತು. 'ಓದದೇ ಬಿಡುವೆನೇ ?' ಎಂದು ನಿರ್ಧಾರ ಉತ್ತರ ಕೊಟ್ಟಿತು. ತಟ್ಟನೆ ಎದ್ದು ಊಟಕ್ಕೆ ಹೊರಟನು; ಯಾಕೆಂದರೆ ಊಟವಾಗಿ ಬಂದೊಡನೆ ಅವನ ನಾತಾಳಿಯ ಕಾರ್ಯಕ್ರಮದ ಪ್ರಾರಂಭೋತ್ಸವವು ಆಗಬೇಕಾಗಿತ್ತು.

ಅಮೃತನು ಊಟಮಾಡಿ ಬರುವುದರಲ್ಲಿ ಹಾಸ್ಟೆಲಿನ ಮುಂದೆ ಊರಿಗೆ ಹೊರಟ ಹುಡುಗರ ಗದ್ದಲ ನಡೆದಿತ್ತು. ಒಂದೆರಡು ವಿಕ್ಟೋರಿಯಾ, ಟ್ಯಾಕ್ಸಿ ಸಾಮಾನು ಹೇರಿಕೊಂಡು ನಿಂತಿವೆ. 'ಗುಡ್‌ಬಾಯ್' ದ ಧ್ವನಿ ಎಲ್ಲ ಕಡೆಗೆ ಇಡಿಕಿರಿದಿದೆ. ಅಮೃತನನ್ನು ಕಂಡ ಕೂಡಲೇ ಹೊರಟವರಲ್ಲಿ ಒಬ್ಬಿಬ್ಬರು 'ಅನ್ ಲಕಿ ಅಮೃತ್'. ಎಂದು ಕನಿಕರ ತೋರಿದಂತೆ ಮಾಡಿ 'ಊರಿಗೆ ಹೊರಡೋ' ಎಂದು ಮನವೊಲಿಸಹತ್ತಿದರು. ತನ್ನೂರು ಕರ್ನಾಟಕದಲ್ಲಿ ದೂರದ ಒಂದು ಸ್ಥಳ ವೆಂದೂ ಹೋಗಿ ಬರುವುದಕ್ಕೆ ಮೊದಲು ೩-೪ ದಿನ ಬೇಕೆಂದೂ ಕಾರಣ ಹೇಳಿ ಅವರ ಚಕ್ರವ್ಯೂಹದಿಂದ ಪಾರಾಗಬೇಕಾದರೆ ಅವನಿಗೆ ರಗಡಾಯಿತು. 'ಸಾಧ್ಯ ವಿಲ್ಲ, ನಮಸ್ಕಾರ' ಎಂದು ಹೇಳಿ ಕೋಣೆಯಕಡೆಗೆ ವೇಗದಿಂದ ಹೋಗಿಬಿಟ್ಟನು. ಅವರೆಲ್ಲ ಹೊರಟರು. ಗದ್ದಲ ಕಡಿಮೆಯಾಯಿತು. ಬೆಳಗಿನ ಗಾಡಿಯ ಪ್ರವಾಸಿ ಕರು ಸಾಮಾನು ಕಟ್ಟಿಟ್ಟು ಸಿನೇಮಾಕ್ಕೊ ಸುತ್ತಾಡುವುದಕ್ಕೊ ಹೋಗಿದ್ದರು. ಓದುವುದಕ್ಕೆ ಅದರಂಥ ವೇಳೆಯಿಲ್ಲ. ಅಮೃತನು ಗೊತ್ತುಮಾಡಿದಂತೆ ಪಠ್ಯ ಪುಸ್ತಕವೊಂದನ್ನು ಓದುತ್ತ ಅದರಲ್ಲಿ ಸಂಪೂರ್ಣ ಮಗ್ನನಾದನು: ರಾತ್ರಿ ಹನ್ನೊಂದರವರೆಗೆ ಒಂದೆರಡು ತಾಸು ಓದು ಅಪ್ರತಿಮವಾಯಿತು. ಹೀಗೆ ಆದರೆ ತನ್ನ ಉದ್ದೇಶ ಕೈಗೂಡುವುದರಲ್ಲಿ ಸಂಶಯವೇ ಇಲ್ಲ ಎಂದುಕೊಂಡನು. ಅಷ್ಟೊತ್ತಿಗೆ ಅಭ್ಯಾಸಕ್ಕಾಗಿ ಅಲ್ಲಿಯೆ ಉಳಿದ ಕೆಳಮನಿ ಎಂಬ ಅವನ ಕನ್ನಡ ಮಿತ್ರನು ಅಂದಿನ ಕ್ರಾನಿಕಲ್ ಪತ್ರಿಕೆಯನ್ನು ತಂದುಕೊಟ್ಟನು. ಹತ್ತಿರದ ಕೋಣೆಗಳಲ್ಲಿ ಇಬ್ಬರೂ ಇದ್ದ ಕಾರಣ ಈ ದಿನಪತ್ರಿಕೆಯನ್ನು ಕೂಡಿ ತರಿಸಿ ಒಬ್ಬರದಾದ ಮೇಲೆ ಇನ್ನೊಬ್ಬರು ಓದುತ್ತಿದ್ದರು. ಸಾಮಾನ್ಯವಾಗಿ ರಾತ್ರಿ ಮಲಗುವ ಮೊದಲು ಓದುವುದು ಅಮೃತನ ರೂಢಿಯಾಗಿತ್ತು. ಕೆಳಮನಿ ಪತ್ರಿಕೆ ಕೊಡಲು ಬಂದಾಗ ಕೆಲಹೊತ್ತು ಹರಟೆ ನಡೆಯುತ್ತಿತ್ತು. ಈವೊತ್ತು ಅಮೃತನ ಮುಖಮುದ್ರೆಯನ್ನು ನೋಡಿ ಕೆಳಮನಿ ಹಾಗೇ ತಿರುಗಲು ಅಮೃತನು ತಾನಾಗಿ ಕರೆದು ಕೂಡಿಸಿದನು. ಕನ್ನಡದಲ್ಲಿ ಸಂಭಾಷಣೆಯೆಂದರೆ ಅಲ್ಲಿ

ಅಪರೂಪ. ಇಡೀ ಕಾಲೇಜಿನಲ್ಲಿ ೮-೧೦ ಜನ ಮಾತ್ರ ಕನ್ನಡ ವಿದ್ಯಾರ್ಥಿಗಳಿದ್ದರು. ಅವರು ಕೂಡಿದಾಗ ತಮ್ಮೊಳಗೆ ಕನ್ನಡ ಮಾತಾಡಿದರೆ ಏನೋ ಸಮಾಧಾನವಾಗುತ್ತಿತ್ತು. ಮೈಯೊಳಗೆ ಮಾಂಸ ಏರಿದಂತೆ ಹುರುಪು ಉಕ್ಕುತ್ತಿತ್ತು. ಏನು ಅಭ್ಯಾಸ ಜೋರಾಗಿ ಸುರುವಾದಂತೆ ಕಾಣತದೆ, ಸಿರೂರ ?' ಕೆಳಮನಿ ಕೇಳಿದನು. ಅಮೃತನ ಅಡ್ಡ ಹೆಸರು ಸಿರೂರ ಎಂದಿತ್ತು.

'ಹೌದಪ, ಮಾಡಬೇಕಲ್ಲ, ಪರೀಕ್ಷಾ ಸಮೀಪದೊಳಗೆ ಬಂತು. ನೀ ಏನು ಶ್ರೀಮಂತರ ಮಗ' ಅಮೃತ ಉತ್ತರ ಕೊಟ್ಟನು.

'ಶ್ರೀಮಂತಿಕೆ ಆದದ್ದೇನಾತೋ. ಪರೀಕ್ಷಾ ಬಂತಂತ ಊರಿಗೆ ಹೋಗೋದು ಬಿಟ್ಟು ನಾನೂ ಕೂತೀನಿ. ಅಲ್ಲ, ಸಿರೂರ, ಹೋದ ಟರ್ಮಿನ ಛಂದಲೆ ನೋಡಿದರೆ ಪರೀಕ್ಷಾ ಆಗತಾವೆಂದು ಅನಿಸಿತ್ತೇನು ?'

ಪರೀಕ್ಷಾ? ಯುನಿವರ್ಸಿಟೀನೆ ಉಳೀತದೊ ಇಲ್ಲೊ ಅನ್ನುವ ಸ್ಥಿತಿ ಇತ್ತು.'

'ಹೌದಪ. ಏಮಾನದಾಳಿಯು ಹೆಸರಿಕೆಯೊಂದು, ಮೇಲೆ ನಿಮ್ಮಂಥ ದೇಶಭಕ್ತರ ದಾಳಿಯು ಹೊಡತವೊಂದು.'

'ಏನು ? ನಾ ದೇಶಭಕ್ತನೆ? ಕೆಳಮನಿ, ದೇಶಭಕ್ತರ ಕಿಮ್ಮತ್ತು ಇಷ್ಟು ಕಡಿಮೆ ಮಾಡಬೇಡ.'

'ಅಲ್ಲ, ಸಿರೂರ, ನೀ ಏನು ಕಡಿಮೆ ಇದ್ದೀಯೇನು ? ನೀನೇ ನಮ್ಮೊಳಗೆ ಹೆಚ್ಚಿನ ದೇಶಭಕ್ತನಪ.'

'ಹೋಗಲಿ ಬಿಡು. ಅವೆಲ್ಲ ಹಳೆ ಕತೆಯಾಯಿತು. ಇನ್ನು ಮೇಲೆ ನೋಡು ನಾವೇನೋ ನಮ್ಮ ಅಭ್ಯಾಸೇನೊ. ಪರೀಕ್ಷಾ ಮುಗಿಯುವತನಕ ಯಾವದರಾಗೂ ಮನಸ್ಸು ಹಾಕುವಂತಿಲ್ಲ.'

ಅಮೃತನು ತನ್ನ ಅಂದಿನ ದೃಢತಮವಾದ ನಿಶ್ಚಯವನ್ನು ಟೇಬಲ್ಲು ಬಡಿದು ಸಾರಿದನು.

'ಹೀಗೇನು ? ಇದು ಘಟ್ಟಿ ಮಾತೇ ?' ಕೆಳಮನಿ ಸಹಜವಾಗಿ ಕೆಣಕಿ ಕೇಳಿದನು.

'ಘಟ್ಟಿ ಮಾತು. ನೋಡಿನ್ನು ಮೊದಲು ನಮ್ಮ ಮನೆಯ ಸೇವಾ, ಆಮೇಲೆ ದೇಶಸೇವಾ' ಹೀಗೆನ್ನುತ್ತ ತನ್ನ ಅಭ್ಯಾಸಪಟ್ಟಿಯು ನೆನಪಾಗಿ ಅಮೃತನು ಎದ್ದುಬಿಟ್ಟನು. ಅದನ್ನರಿತು ಕೆಳಮನಿಯೂ 'ಆಗಲಿ, ಶಿವರಾತ್ರಿ' ಎಂದು ಹೇಳಿ ತನ್ನ ಕೋಣೆಗೆ ತೆರಳಿದನು. ತನ್ನ ನಿರ್ಧಾರದ ನುಡಿಯ ಬಗ್ಗೆ ಅಮೃತನಿಗೆ

ಸಮಾಧಾನವಾದರೂ ತಾನಾಡಿದ ಮಾತು ತನ್ನ ಅಂತಃಕರಣಕ್ಕೆ ಅಷ್ಟು ಒಪ್ಪಿಗೆಯಾದ ಮಾತಲ್ಲ ಎಂಬ ಅಳುಕು ಅವನಲ್ಲಿ ಒಳದೆರೆಯಾಗಿ ಇತ್ತು. ಆದರೆ ಅದನ್ನವನು ಮೇಲಿನ ನೆಲೆಗೆ ಬರಗೊಡಲಿಲ್ಲ.

ಅವನು ಹಾಸಿಗೆಯ ಮೇಲೆ ಬಿದ್ದುಕೊಂಡು ಕ್ರಾನಿಕಲ್ ಪತ್ರಿಕೆಯ ಪುಟಗಳನ್ನು ತಿರುಪಿಹಾಕಹತ್ತಿದನು. ಹೆಚ್ಚಾಗಿ ತಲೆಬರಹಗಳನ್ನು ನೋಡುವುದೇ ಅವನ ರೂಢಿಯಾಗಿತ್ತು. ಎಲ್ಲವನ್ನು ಓದಲು ಅವನಿಗೆ ಸವಡಿರಲಿಲ್ಲ. ಮೇಲಾಗಿ ಇಂದಿನ ವರ್ತಮಾನ ಪತ್ರವೆಂದರೆ ಸಾರ್ವತ್ರಿಕವಾದ ಸಾವು ನೋವಿನ ಕರುಣಕಥೆ. ಹೆಚ್ಚು ಓದಿದಂತೆ ಹೆಚ್ಚು ಮನೋವ್ಯಥೆಯೆಂಬುದನ್ನು ಅವನು ಅನುಭವಿಸಿದ್ದನು. ಎಲ್ಲ ಕಡೆ ಕಣ್ಣು ಹಾಯಿಸಿ ಅವನು ಕೊನೆಯ ಪುಟಕ್ಕೆ ಬರಲು ಅಲ್ಲಿ 'ದೇಶವಲ್ಲಿಯ ಡಾಕ್ಟರ ಜನರಿಗೆ ಕರೆ' ಎಂಬ ತಲೆಬರಹವು ಕಂಡಿತು. ಏನೋ ಇರಬೇಕು, ನನಗೇನು ಸಂಬಂಧವೆನ್ನುತ್ತ ಓದನ್ನು ಮುಗಿಸಿ ಪತ್ರಿಕೆಯನ್ನು ಬದಿಗಿರಿಸಿದನು. ಎದ್ದು ಕುಳಿತು ಇನ್ನು ಮಲಗಬೇಕೆನ್ನುವಷ್ಟರಲ್ಲಿ ಹೊರಬದಿಗೆ ಇದ್ದ ಆ ಬರಹವು ಅದೇಕೊ ಅವನ ಕುತೂಹಲವನ್ನು ಜಾಗರಿಸಿತು. ಏನಿದೆ ವಿಷಯ, ಓದಿಬಿಡೋಣ ಎನಿಸಿತು. ಮತ್ತೆ ಪತ್ರಿಕೆಯನ್ನು ಕೈಯಲ್ಲಿ ತಗೊಂಡು ಓದು ಓದುತ್ತಲೆ ಕಾರಣವಿಲ್ಲದೆ ಅವನ ಮೈ ಜುಮ್ಮೆಂದಿತು, ಕಣ್ಣು ಹನಿದುಂಬಿತು, ಹೊಟ್ಟೆಯಲ್ಲಿ ಹೇಳಬಾರದ ಸಂಕಟವುಂಟಾಯಿತು. ಅದರಲ್ಲಿದ್ದ ವಿಷಯವೆಂದರೆ ಬಂಗಾಲ ಪ್ರಾಂತದ ಮಿದನಾಪುರ ಮತ್ತು ೨೪ ಪರಗಣ ಜಿಲ್ಲೆಗಳಲ್ಲಿ ಅಕ್ಟೋಬರ ತಿಂಗಳಲ್ಲಿ ಬೀಸಿದ ಭಯಂಕರ ಬಿರುಗಾಳಿಯ ಹಾವಳಿಯಿಂದ ಹತ್ತಾರು ಸಾವಿರ ಜನ, ಲಕ್ಷಾವಧಿ ದನ ಸತ್ತಿದ್ದಲ್ಲದೆ, ಅಸಂಖ್ಯ ಜನರು ಮನೆಯಿಲ್ಲದೆ ಕೂಳಿಲ್ಲದೆ ನಿರಾಶ್ರಿತರಾಗಿದ್ದಾರೆ, ಮಲೇರಿಯಾ-ಮಾರಿಕಾ ಮುಂತಾದ ರೋಗಗಳಿಂದ ಬಳಲುತ್ತಿದ್ದಾರೆ, ಅವರ ಶುಶ್ರೂಷೆಗಾಗಿ ಸುಪ್ರಸಿದ್ಧವಾದ ರಾಮಕೃಷ್ಣ ಮಠದವರು ಹೊರಡಿಸಿದ ವೈದ್ಯಕೀಯ ಕೇಂದ್ರಗಳಲ್ಲಿ ಕೆಲಸ ಮಾಡಲು ಸೇವಾತತ್ಪರರಾದ ಡಾಕ್ಟರರು ಬೇಕಾಗಿದ್ದಾರೆ ಎಂದಿತ್ತು. ವಿಶೇಷವಾಗಿ ತರುಣರೂ ಉತ್ಸಾಹಿಗಳೂ ಕೂಡಲೆ ಹೊರಟು ಬರಬೇಕೆಂದೂ ಒಂದೊಂದು ದಿನ ತಡವಾದಂತೆ ನೂರಾರು ಜನ ಪ್ರಾಣಕ್ಕೆ ಎರವಾಗಬಹುದೆಂದೂ ಭಾವೋದ್ದೀಪಕವಾದ ಮನವಿಯಾಗಿತ್ತು ಅದು.

ಅದನ್ನೋದಿ ಮುಗಿಸಿ ಅಮೃತನು ಒಂದೈದು ಮಿನಿಟು ಕಂಬದಂತೆ ಕುಳಿತನು. ಏನೇನೋ ಅಕರಾಳ ವಿಕರಾಳ ಚಿತ್ರಗಳು ಕಣ್ಣೆದಿರು ಹಾಯ್ದವು.

ಮಿದನಾಪುರ ಸುದ್ದಿ ಈ ಮೊದಲು ಅವನಿಗೆ ಗೊತ್ತಾಗಿತ್ತು. ಪತ್ರಿಕೆಗಳಲ್ಲಿ ಆಗಾಗ ಅದರ ವಿಷಯ ಬಂದಾಗ ಓದಿ ಮರುಗಿದ್ದನು. ಆದರೆ ಇಂದಿನಷ್ಟು ಅದೆಂದೂ ಅವನ ತಳಬುಡವನ್ನು ಅಗಲಾಡಿಸಿರಲಿಲ್ಲ. ಮೂಕ ಶೋಕ ಮುಕ್ತಿ ಬಂದಿತು. ಕೊನೆಗೆ ತಡೆಯದೆ 'ಎಂಥ ಗೋಳು!' ಎಂದು ಕೂಗಿ ಬಿಟ್ಟನು. ಹಾಸಿಗೆಯಿಂದೆದ್ದು ಗಡಿಯಾರವನ್ನು ನೋಡಲು ಹನ್ನೆರಡು ಬಡಿಯ ಬಂದಿತ್ತು. ಅದರ ಹತ್ತಿರ ಬಿದ್ದ ಅವನ ಕಾರ್ಯಕ್ರಮಪಟ್ಟಿ ಕಾಣಿಸಿತು. ತಟ್ಟನೆ ಎದ್ದು ಪತ್ರಿಕೆಯ ವಿಷಯವನ್ನು ಮರೆಯುವ ಹವ್ಯಾಸ ದಿಂದ ಕೋಣೆಯಿಂದ ಹೊರಬಿದ್ದು ಬಯಲುಗಾಳಿಯ ತಂಪನ್ನು ತಲೆಗೆ ಉಣಿಸಿ ಮರಳಿ ಬಂದು ದೀಪವಾರಿಸಿ ಮಲಗಿಕೊಂಡನು. ಮಲಗುವಾಗ ಎದ್ದೊಡನೆ ಆರು ಘಂಟೆಗೆ ಓದಬೇಕಾದ ಪುಸ್ತಕವನ್ನು ನೆನೆಸಿದನು, ಮೈತುಂಬ ರಗ್ಗನ್ನು ಹೊಚ್ಚಿಕೊಂಡನು.

ನಿದ್ದೆ ದಿನದಂತೆ ಬರಬೇಕಾಗಿತ್ತು. ಸ್ವಲ್ಪ ಬರುವಂತೆ ತೋರಿತು; ಅಷ್ಟ ರಲ್ಲಿ 'ಡಾಕ್ಟರರಿಗೆ ಕರೆ' ಎಂಬ ಆ ಅಕ್ಷರಗಳು ದೊಡ್ಡವಾಗಿ ಕಣ್ಮುಂದೆ ಸುಳಿದವು. ಎಲ್ಲ ನೋವಿನೊಡನೆ ಆ ನೆನವು ನುಗ್ಗಿತು. 'ಆ ಕರೆಯನ್ನು ಕೇಳಿ ನಾ ಏನು ಈಗ ಹೋಗುವ ವಿಚಾರವಿಲ್ಲ—ಮೊದಲು ಪರೀಕ್ಷೆ ಆಮೇಲೆ ಮುಂದಿನ ವಿಚಾರ' ಎಂದುಕೊಂಡು ತನ್ನಷ್ಟಕ್ಕೆ ಸಮಾಧಾನ ತಾಳಿ ಅವನು ನಿದ್ದೆಯನ್ನು ಒಲಿಸಿ ಕೊಳ್ಳುವ ಎಲ್ಲ ಬಗೆಯ ಯತ್ನಮಾಡಿದನು. ಎರಡು ಹೊಡೆಯಿತು, ನಿದ್ದೆ ಒಲಿ ಯಲಿಲ್ಲ. ಹಾಗಾದರೆ ಎದ್ದು ಕುಳಿತು ಆ ವಿಷಯದ ಬಗ್ಗೆ ತನ್ನೊಳಗೆ ಊಹಾ ಪೋಹ ಮಾಡಿ ಒಂದು ನಿರ್ಧಾರಕ್ಕೇ ಬಂದುಬಿಡೋಣ,ಅಂದರೆ ತುಸು ತಡವಾ ದರೂ ನಿದ್ದೆ ಹತ್ತುವುದು, ಎಂದು ಹಾಸಿಗೆಯಲ್ಲಿ ರಗ್ಗು ಹೊಚ್ಚಿಕೊಂಡೇ ಎದ್ದು ಕುಳಿತನು. ವಿಚಾರ ಮೊದಲಾಯಿತು. ಮನಸ್ಸಿನ ಕೋರ್ಟಿನಲ್ಲಿ ವಾದಿಪ್ರತಿವಾದಿ ಗಳ ವಕೀಲರು ತಂತಮ್ಮ ಪಕ್ಷವನ್ನು ಮಂಡಿಸಿದರು. ಕೊನೆಗೆ ನ್ಯಾಯಾಧೀಶರು ನಿರ್ಣಯ ಕೊಟ್ಟರು; 'ಎಲ್ಲ ಪರಿಸ್ಥಿತಿಯನ್ನು ವಿಚಾರಿಸಲಾಗಿ ಈಗ ಸಾಧ್ಯವಿಲ್ಲ. ಮಿದನಾಪುರ ಕರೆಗಿಂತ ಪರೀಕ್ಷೆಯ ಕರೆಯನ್ನು ಮೊದಲು ಕೇಳಬೇಕು.' ಅಮೃತ ನಿಗೆ ಅದೆಂಥ ಸಮಾಧಾನವಾಯಿತು! ಮುಸುಗಿನಲ್ಲಿಯೇ ಮುಗುಳುನಗೆ ನಕ್ಕನು. ಶಾಂತ ಮನಸ್ಸಿನಿಂದ ಹಾಸಿಗೆಯ ಮೇಲೆ ಒರಗಿದನು. ಅಷ್ಟರಲ್ಲಿ ನಾಲ್ಕು ಬಡಿದು ಹೋಗಿತ್ತು. ಮುಂದೆ ನಿದ್ದೆ ಹತ್ತಿತೆನ್ನಬಹುದು. ಆದರೆ ಪತ್ರಿಕೆಯಲ್ಲಿಯ ಕರೆ ತರತರದ ಸಂಕೇತ ರೂಪಗಳನ್ನು ತಾಳಿ ಕನಸಿನ ಲೋಕದಲ್ಲಿ ಅವನ ಬೆನ್ನಟ್ಟಿತು.

ನಿದ್ದೆಯ ಸುಖವೇನೂ ದೊರೆಯದೆ ಅತ್ತಿತ್ತ ಹೊರಳಾಡಿ ಬೆಳಗಿನ ಎಂಟು ಗಂಟೆಗೆ ಅವನು ಎದ್ದನು.

ಎದ್ದ ಮೇಲೆ ತುಸು ತಡವಾಗಿ ಆದರೂ ಅವನ ಕಾರ್ಯಕ್ರಮ ಮುಂದರಿಯಿತು. ಹಿಂದಿನ ರಾತ್ರಿಯ ಅನುಭವವು ಎಲ್ಲಿಯೋ ಮನದ ಮರೆಯಲ್ಲಿ ಅವಿತುಕೊಂಡಿತ್ತು. ಕಾರ್ಯದ ಒತ್ತಡದಲ್ಲಿ ಅದಕ್ಕೆ ಹೊರಬರುವ ಇಂಬು ದೊರೆಯಲಿಲ್ಲ. ಅಭ್ಯಾಸವೆಂದರೆ ಹೀಗಾಗಬೇಕೆಂದು ಅವನು ಸಂತಸಬಟ್ಟನು. ಒಂದುದಿನ ಹೋಯಿತು. ಮರುದಿನ ಬೆಳಿಗ್ಗೆ ಊರಿಂದ ತಂದೆ ಶಂಭುರಾಯರ ಪತ್ರ ಬಂದಿತು. ಊರಿನ ಪತ್ರವೆಂದರೆ ಹಿರಿಹಿರಿ ಹಿಗ್ಗು ಅವನಿಗೆ; ಅದನ್ನೋದುವಾಗ ಕೆಲವು ಕಾಲ ಮನೆಯಲ್ಲಿ ಸುಳಿದಂತೆ ಆಗುತ್ತಿತ್ತು. 'ಈ ಸೂಟಿಗೆ ಊರಿಗೆ ಬರದೆ ನೀನು ಅಲ್ಲಿಯೇ ಇದ್ದು ಅಭ್ಯಾಸ ಮಾಡುವಿಯೆಂದು ತಿಳಿಯಿತು. ಎಲ್ಲರೂ ನಿನ್ನ ನೆನಸತಾರೆ, ನೋಡಬೇಕಂತಾರೆ. ಆದರೂ ಪರೀಕ್ಷೆ ಸಮೀಪ ಇದ್ದದರಿಂದ ನೀ ಬರೆದಂತೆ ಮಾಡು. ಮನಸ್ಸು ಚಂಚಲ ಮಾಡಬೇಡ. ಮೂರು ನಾಲ್ಕು ತಿಂಗಳು ಎಲ್ಲೆಲ್ಲಿಯೂ ಕದಲದೆ ಅಭ್ಯಾಸ ಮಾಡಿ ಪರೀಕ್ಷಾ ಮುಗಿಸಿಕೊಂಡು ಬಾ. ಪ್ರಕೃತಿಯ ಕಾಳಜಿ ತಗೊ, ಎಂದು ಮುಂತಾಗಿ ಆ ಪತ್ರದಲ್ಲಿ ಬರೆದಿತ್ತು. ತನ್ನ ನಿರ್ಧಾರವು ತಂದೆಯವರ ಉಪದೇಶಕ್ಕೆ ಅನುಸರಿಸಿಯೆ ಇರುವುದೆಂದು ಅಮೃತನಿಗೆ ಆನಂದವಾಯಿತು. ಆದರೆ ಉಪದೇಶ ಇಂದಿನದಲ್ಲ. ಅವರ ಪ್ರತಿಯೊಂದು ಪತ್ರದಲ್ಲಿ ಈ ಪಲ್ಲವಿಯಿರುತ್ತಿತ್ತು.

ಹೋದ ಟರ್ಮಿನ ಅನುಭವ ಅದಕ್ಕೆ ಮುಖ್ಯಕಾರಣ. ಪರೀಕ್ಷೆ ಮುಗಿಯಿತೆಂದರೆ ಪಾರಾದೆವೆಂದು ಅವರು ಒಂದೇಸವನೆ ಧೇನಿಸುತ್ತ ಕೂತಿದ್ದರು. ಅವನ ಶಿಕ್ಷಣದ ಸಲುವಾಗಿ ಈವರೆಗೆ ಐದು ಸಾವಿರ ರೂಪಾಯಿಗಳನ್ನು ಖರ್ಚು ಮಾಡಿದ್ದರು. ಸಿರೂರಲ್ಲಿ ವರ್ಷಕ್ಕೆ ಐದುನೂರರವರೆಗೆ ಉತ್ಪನ್ನ ಬರುವ ಜಮೀನು ಇದ್ದದರಿಂದಲೆ ಇದು ಸಾಧ್ಯವಾಗಿತ್ತು. ಆದರೂ ಆ ಹಣ ಸಾಲದೆ ಹೆಂಡತಿಯ ಮೈಮೇಲಿನ ಬಂಗಾರವನ್ನೂ ಒಮ್ಮೊಮ್ಮೆ ಮಾರಿದ್ದರು; ಒಂದೆರಡು ಜಮೀನುಗಳನ್ನೂ ಮಾರಬೇಕಾಗಿ ಬಂದಿತ್ತು. ಅವನ ಇಂಗ್ಲೀಷ್ ಶಾಲೆಯ ಶಿಕ್ಷಣಕ್ಕಾಗಿ ಸಿರೂರಿಂದ ಬಾಗಲಕೋಟೆಗೆ ಬಂದು ಮನೆ ಮಾಡಿದ್ದರು; ಮುನಸಿಪಾಲಿಟಿ ಕಾರಕೂನನ ೪೦ ರೂಪಾಯಿಯ ನೌಕರಿಯನ್ನು ಹಿಡಿದಿದ್ದರು. ಅವನೇ ಅವರಿಗೆ ಹಿರಿಮಗ. ಇನ್ನು ಸ್ವಲ್ಪದಿನದಲ್ಲಿ ಅವನು ಡಾಕ್ಟರ ಪರೀಕ್ಷೆ ಆಗಿ ಬಂದನೆಂದರೆ ತಾವು ಪಟ್ಟಕಷ್ಟವೆಲ್ಲ ಸಾರ್ಥಕವಾಗುವುದೆಂದು ಅವರು ಭಾವಿಸಿದ್ದರು. ಇನ್ನೂ

ಇಬ್ಬರು ಗಂಡುಮಕ್ಕಳು ಮೂವರು ಹೆಣ್ಣುಮಕ್ಕಳು ಅವರಿಗಿದ್ದರು. ಒಬ್ಬ ಮಗಳು ಮದುವೆಯ ವಯಸ್ಸಿಗೆ ಬಂದಿದ್ದಳು. ಇದಾವುದರ ಚಿಂತೆಯೂ ಅವ ರನ್ನು ಬಾಧಿಸುತ್ತಿರಲಿಲ್ಲ. ಅಮೃತನ ಅಭ್ಯಾಸಪೂರ್ತಿಯಲ್ಲಿಯೇ ಅವರು ತಮ್ಮ ಅಮೃತ ಸಿದ್ಧಿಯನ್ನು ಕಂಡಂತಿತ್ತು.

ಪ್ರತಿದಿನ ಸಂಜೆ ಚೌಪಾಟಿಯ ಕಡೆಗೆ ಹೋಗಿ ಅಭ್ಯಾಸದಿಂದಾದ ಆಯಾಸ ವನ್ನು ಕಳೆದುಕೊಳ್ಳುವುದು ಅಮೃತನ ಪರಿಪಾಠವಾಗಿತ್ತು. ತಂದೆಯ ಪತ್ರ ಬಂದ ದಿನವೆಲ್ಲ ಉಕ್ಕಿದ ಉತ್ಸಾಹದಿಂದ ಏಳೆಂಟು ಘಂಟೆಯ ಹೊತ್ತು ಓದಿ ಅವನು ಸಂಜೆಯ ಮುಂದೆ ಹೊರಬಿದ್ದನು. ಚೌಪಾಟಿಯ ಉಸುಬಿನಲ್ಲಿ ನೊರೆನೊರೆ ಯಾಗಿ ಬರುವ ಸಮುದ್ರದ ತೆರೆಗಳನ್ನು ನೋಡುತ್ತ ಜನಸಂದಣಿಯಲ್ಲಿ ತಿರುಗಾ ಡಿದನು. ಮನಸ್ಸಿಗೆ ಬಹಳ ಹಗುರೆನಿಸಿತು. ತಾನಂದು ಓದಿದ್ದನ್ನು ನೆನೆಸುತ್ತ, ನಡುನಡುವೆ ಹೊರವೊಗವಾಗಿ ಮುಂಬಯಿ ಜೀವನದ ವಿಚಿತ್ರ ಸಂಕೀರ್ಣತೆ ಯನ್ನು ಕಾಣುತ್ತ ತನ್ನ ಕೋಣೆಯ ಕಡೆಗೆ ತಿರುಗಿ ಹೊರಟನು. ಹೋಗ ಹೋಗುತ್ತ ದಾರಿಯಲ್ಲಿ ಒಂದು ಸಭಾಮಂದಿರವು ಹತ್ತಿತು. ಅಲ್ಲಿಟ್ಟ ಹಲಗೆಯ ಮೇಲೆ 'ರಾಮಕೃಷ್ಣಮಠದ ಪ್ರಸಿದ್ಧ ಸಂನ್ಯಾಸಿಗಳಾದ ಲೋಕಸೇವಾನಂದರ ಉಪನ್ಯಾಸ' ಎಂದು ಬರೆದಿತ್ತು. ಏನಿದೆ ಸ್ವಲ್ಪ ಕೇಳಿ ಹೋಗೋಣ ಎಂದು ಒಳಗೆ ಕಾಲಿಟ್ಟನು. ನೂರಾರು ಜನ ನೆರೆದಿದ್ದರು. ಸಂನ್ಯಾಸಿಗಳ ಭಾಷಣ ಅದೇ ಆರಂಭವಾಗಿತ್ತು. ಅವರ ತೇಜಸ್ವಿಯಾದ ವ್ಯಕ್ತಿತ್ವ, ಭಾವಾವೇಶದಿಂದ ಕೂಡಿದ ವಕ್ತೃತ್ವ ಇವುಗಳಿಂದ ಯಾರಾದರೂ ಮುಗ್ಧವಾಗುವಂತಿತ್ತು. ಕೆಲವು ಮಿನಿಟು ಗಳವರೆಗೆ ತುದಿಗೆ ನಿಂತು ಕೇಳುತ್ತಿದ್ದ ಅಮೃತನು 'ಇನ್ನೇನು ದೇಶ ಕಾರ್ಯ ಮಾಡದಿದ್ದರೂ ಸರಿ, ಇಂಥವರ ಮಾತನ್ನಾದರೂ ಕೇಳೋಣ' ಎಂದು ನಿಶ್ಚಯಿಸಿ ಒಂದು ಸ್ಥಳ ನೋಡಿ ಕುಳಿತು ಕೊನೆಯವರೆಗೆ ಕೇಳಿದನು. ಆಗಾಗ ಅವನ ಹೃದಯ ದಾರುಣಸಂಕಟದಿಂದ ಒದ್ದಾಡಿತು, ಕಂಬನಿ ಧಾರೆಯಾಗಿ ಹರಿಯಿತು. ಭಾರತದ ದಾರಿದ್ರ್ಯವನ್ನು ಎದೆ ಎರಡು ಹೋಳಾಗುವಂತೆ ವರ್ಣಿಸಿ, ಅದಕ್ಕಿಂತ ಭಾರತೀಯರ ಹೃದಯ ದಾರಿದ್ರ್ಯ ಹೆಚ್ಚು ದುಃಖದಾಯಕವೆಂದು ಲೋಕ ಸೇವಾನಂದರು ಮುಂದಬ್ಬಾಗುವಂತೆ, ಎದೆಬಿರಿಯುವಂತೆ ತೋರಿಸಿಕೊಟ್ಟರು. 'ನನಗೆ ಸ್ವರ್ಗ ಬೇಡ, ರಾಜ್ಯ ಬೇಡ, ಮೋಕ್ಷವೂ ಬೇಡ, ದುಃಖತಪ್ತರಾದ ಪ್ರಾಣಿಗಳ ವ್ಯಥೆಯನ್ನು ಕಳೆಯುವ ಸಂಧಿಯನ್ನು ನಾನು ಬೇಡುತ್ತೇನೆ' ಎಂದು ಸಾರಿದ ಭಾರತ ದೇಶದಲ್ಲಿ ಈವತ್ತು ದುಃಖಿತರನ್ನು ಕಣ್ಣೆತ್ತಿ ನೋಡದಂಥ,

ನೋಡಿದರೂ ನೆರವಾಗದ ಜನ ಹುಟ್ಟಿದೆ—ಎಂದು ಮುಂತಾಗಿ ಅವರು ಮಾತಿನ ಕಿಡಿಗಳನ್ನು ಸೂಸಿದರೆ ಸಭೆಯೆಲ್ಲ ಭಾವನಾಮಯವಾಗಿ ಕಾವುಗೊಂಡಿತು. ಭಾಷಣದ ಭರದಲ್ಲಿ ಅವರು ಮೊನ್ನೆಮೊನ್ನಿನ ಮಿದನಾಪುರ ದುರಂತವನ್ನು ಕಣ್ಣೆದಿರು ಕಟ್ಟುವಂತೆ ಬಣ್ಣಿಸಿ ವೈದ್ಯಕೀಯ ಸಹಾಯ ಹಾಗೂ ಅನ್ನವಸ್ತ್ರಗಳಿಲ್ಲದೆ ಅಲ್ಲಿಯ ಜನತೆ ಮೃತ್ಯುವಿನ ಬಾಯಲ್ಲಿ ಪಟಪಟ ಬೀಳುತ್ತಿರುವುದನ್ನು ಹೇಳಿದರು. ಇದೆಲ್ಲ ನಡೆದಿದ್ದರೂ ದೇಶದ ಯುವಕರು ಸೇವೆಗೆ ಮುಂಬರದೆ ಕಲ್ಲೆದೆಯ ಕಟುಕರಂತೆ ದೂರನಿಂತಿರುವರೆಂದೂ, ಇನ್ನಾವ ದೇಶದಲ್ಲಿಯೂ ಹೀಗೆ ನಡೆಯಲಾರದೆಂದೂ ನುಡಿದರು. ಭಾಷಣದ ಪರಿಣಾಮವು ತತ್ ಕ್ಷಣವೂ ತೀವ್ರವೂ ಆಯಿತು. ಅನೇಕರು ಎದ್ದುನಿಂತು ಸಂತ್ರಸ್ತನಿಧಿಗೆ ನೂರರಿಂದ ಸಾವಿರದವರೆಗೆ ಅಂಕಿಗಳನ್ನು ಹೇಳಿದರು. ಹಿಂದೆ ಕುಳಿತ ಕೆಲವು ಟೀಕಾಕಾರರು 'ಅದೆಲ್ಲ ಸೇಡಜಿಗಳ ಕಳ್ಳಪೇಟೆಯ ಕಳ್ಳಗಂಟು' ಎಂದು ಅಪಸ್ವರವೆತ್ತಿದರು. ಒಬ್ಬಿಬ್ಬ ಡಾಕ್ಟರಜನರು ಬಂಗಾಲದ ವೈದ್ಯಕ ಕೇಂದ್ರಗಳಲ್ಲಿ ಕೆಲಸ ಮಾಡಲು ಒಪ್ಪಿಕೊಂಡರು. ಎಲ್ಲವನ್ನು ನಿರೀಕ್ಷಿಸುತ್ತಿದ್ದ ಅಮೃತನ ಮನದಲ್ಲಿ ಒಂದು ಬಗೆಯ ಆನಂದ, ಆವೇಶ, ಲಜ್ಜೆ, ಸಂಕಟ ಇವೆಲ್ಲಾ ನುಗ್ಗಿ ಬಂದವು. ಸಭೆ ಮುಗಿಯಿತು. ಜನರೆಲ್ಲ ಹೊರಟುಹೋದರು. ಲೋಕಸೇವಾನಂದರ ಸುತ್ತು ಕೆಲವು ಹಿರಿಯರ ಮತ್ತು ತರುಣರ ತಂಡವೊಂದು ಮಂದಿರದ ಹೊರಗೆ ನೆರೆಯಿತು. ಇನ್ನು ಹೊರಡೋಣ ಎಂದ ಅಮೃತನು ಎಳೆದಂತಾಗಿ ಅಲ್ಲಿ ಹೋಗಿ ಸುಮ್ಮನೆ ಅವರನ್ನು ನೋಡುತ್ತ ನಿಂತನು. ಪ್ರಶಂಸೆ, ಪ್ರಶ್ನೆ ನಡೆದಿದ್ದವು. ಮಾತು ಬೆಳೆಯಲು ಸೇವಾನಂದರು ಅಲ್ಲಿ ನೆರೆದ ತರುಣರಿಗೆ ಆಹ್ವಾನಕೊಟ್ಟಂತೆ ಕೇಳಿದರು : 'ನೂರೆಂಟು ಪ್ರಶ್ನೆ ಕೇಳಿ ನೀವು ನನ್ನ ಪರೀಕ್ಷೆಮಾಡಿ ಮನೆಗೆ ಹೋಗುವವರೊ ಏನು, ನಿಮ್ಮ ಈ ಪರೀಕ್ಷಾ ಸಮಯದಲ್ಲಿ ಮುಂದೆ ಬರುವಿರೊ?' ಯಾರಿಗೂ ಉತ್ತರ ಕೊಡುವ ಧೈರ್ಯವಾಗಲಿಲ್ಲ. ಮತ್ತೆ ಕೇಳಿದರು. ಕೆಲವರು ಅಲ್ಲಿಂದ ಕಾಲ್ತೆಗೆದರು. ಅಮೃತನು ಹೆಚ್ಚಿನ ಶಕ್ತಿಯಿಂದ ತನ್ನ ಅಂತರಾತ್ಮನ ಪ್ರೇರಣೆಯನ್ನು ತಡೆದುಕೊಳ್ಳ ಹತ್ತಿದ್ದನು. ಆದರೆ ತಡೆಯಲಾಗಲಿಲ್ಲ. ನಿಂತಲ್ಲಿಂದಲೇ 'ಮುಂದೆ ಬರತೇವೆ' ಎಂದನು. ಎಲ್ಲರ ಕಣ್ಣು ಅವನಲ್ಲಿ ನಟ್ಟವು. ಸೇವಾನಂದರ ಮುಖದಲ್ಲಿ ಸ್ಮಿತ ಮೂಡಿತು. 'ಇದ್ದರೆ ಹೀಗಿರಬೇಕು' ಎಂದರು. ಬರೀ ಮಾತಾಳಿಗಳಾದ ಉಳಿದವರನ್ನು ಕಳಿಸಿಕೊಟ್ಟು ಅಮೃತನೊಬ್ಬನ ಕೂಡ ಆದೆಷ್ಟೊ ಹೊತ್ತು ಮಾತಾಡುತ್ತ ಮುಂದೆ ಸಾಗಿದರು. ಅವನ ಸ್ಥಿತಿಗತಿಯನ್ನೆಲ್ಲ ಕೇಳಿಕೊಂಡರು. 'ಇನ್ನೂ

ಡಾಕ್ಟರನಾಗದೆ ಇದ್ದ ತನ್ನಂಥವರಿಂದ ಏನುಉಪಯೋಗ?' ಎಂದವನುಕೇಳಿದ್ದಕ್ಕೆ 'ಸಾದಾ ಔಷಧ ಕೊಟ್ಟು ಚುಚ್ಚಲು ಬರುವವರೆಲ್ಲರ ಉಪಯೋಗವಿದೆ. ಲಕ್ಷಾವಧಿ ಜನರನ್ನು ಬದುಕಿಸಿದ ಪುಣ್ಯ ಅವರ ಪಾಲಿಗೆ ಬರುವದು. ತಜ್ಞರ ಕೈಕೆಳಗೆ ಕೆಲಸ ಮಾಡುವ ಯುವಕರು ಬೇಕಾಗಿದ್ದಾರೆ. ಒಂದು ತಿಂಗಳಾದರೂ ನೀನು ಬರಬಹುದಲ್ಲವೇ ?' ಎಂದು ಮನವೊಲಿಸಿದರು. 'ಒಳ್ಳೇದು ಬರತೇನೆ' ಎಂದು ಒಳಗಿನ ಹೊಯ್ದಾಟವನ್ನು ಮರೆಮಾಡಿ ಅಮೃತ ಹೇಳಿಬಿಟ್ಟನು. 'ನಿನ್ನಂಥ ಬುದ್ಧಿವಂತರೂ ಧ್ಯೇಯವಾದಿಗಳೂ ದೇಶಸೇವೆಯಲ್ಲಿ ಆತ್ಮಾರ್ಪಣ ಮಾಡುವ ಕಾಲವಿದು' ಹೀಗೆಂದು ರಾಮಕೃಷ್ಣ ಮಠದ ಕಲಕತ್ತೆಯ ವಿಳಾಸ ಮತ್ತು ಬೇರೆ ಕೆಲವು ವಿವರಗಳನ್ನು ತಿಳಿಸಿ ಅವರು ತಮ್ಮ ಬಿಡಾರಕ್ಕೆ ಹೋದರು.

ಅಮೃತನು ಕಲಕಿದ ಮನಸ್ಸು ಕಟ್ಟಿಕೊಂಡು ಖೋಲಿ ಸೇರಿದನು. ಊಟ ವಾಯಿತು. ಯಂತ್ರದಂತೆ ಪುಸ್ತಕ ತೆರೆದು ಕುಳಿತನು. ಓದು ಸಾಗಿತೆಂದರೆ ಸಾಗಿತು. ಮನಸ್ಸು ಹತ್ತುಚೂರಾಗಿತ್ತು. ತಿರುತಿರುಗಿ ಸೇವಾನಂದರ ಮುಖ ಪುಸ್ತಕದ ಅಕ್ಷರಗಳನಡುವೆ ಸುಳಿಯುತ್ತಿತ್ತು. ಅವರ ಉಜ್ವಲ ಭಾಷಣ ಕಿವಿಯಲ್ಲಿ ನಿನಾದಿಸುತ್ತಿತ್ತು. ಅವರ ಆಹ್ವಾನಕ್ಕೆ ಹೂಂ ಎಂದು ಉತ್ತರ ಕೊಟ್ಟು ಈಗ ಹಿಂದೆಗೆದ ಹೇಡಿ, ಮೋಸಗಾರ ಎಂದು ಮನಸ್ಸಿನ ಒಂದು ಭಾಗವು ಅವನನ್ನು ಒಂದೇಸವನೆ ಬಯ್ಯುತ್ತಿತ್ತು. ರಾತ್ರಿ ಏರಿತು, ಪುಸ್ತಕ ಮುಚ್ಚಿಟ್ಟು ಅಮೃತ ನಿದ್ದೆಹೋದನು. ಎಷ್ಟು ಹವಣಿಸಿದರೂ ನಿದ್ದೆ ಬರಲಿಲ್ಲ. ಯೋಚನೆಗಳು ಮಾತ್ರ ದಂಡೆತ್ತಿ ಬಂದವು. ವಸ್ತುಸ್ಥಿತಿ-ಆದರ್ಶಗಳ ಕಾಳಗವಾಯಿತು. ಯಾವುದೂ ಬಗೆ ಹರಿಯಲಿಲ್ಲ. ಹಾಗೇ ಬಿದ್ದುಕೊಂಡನು. ಅರೆನಿದ್ದೆಯಲ್ಲಿ ತಂದೆತಾಯಿ ತಮ್ಮಂದಿರು ತಂಗೆಂದಿರ ಅಳುಮೋರೆ ಕಂಡವು. ಮನೆತನಕ್ಕೆ ತಾನೇ ಆಧಾರನೆಂದೂ ತಾ ಕೈಬಿಟ್ಟರೆ ಎಲ್ಲ ಹದಗೆಡುವುದೆಂದೂ ಆ ದೃಶ್ಯ ಹೇಳಿತು. ಸರಿ, ಬೆಳಗಾಗ ಏಳುತ್ತಲೆ ನಿರ್ಧಾರ ಮಾಡಿಬಿಟ್ಟನು, ಮನೆ ಗೆದ್ದು ಮಾರು ಗೆದಿಯಬೇಕೆಂದು. ದೇಶಸೇವೆಗೆ ತಾನು ನಿರುಪಯೋಗಿ, ಸದ್ಯ ಅತ್ತ ಮನಸ್ಸುಹಾಕುವುದೇ ಹುಚ್ಚು ತನವೆಂದು ಸ್ವನಿಂದೆಯಲ್ಲಿ ಸಮಾಧಾನ ತಾಳಿದನು. ಇಷ್ಟು ವರ್ಷ ದುಡ್ಡು ನೀರಿನಂತೆ ಸುರಿದು ಪ್ರಸಂಗ ಬಿದ್ದಾಗ ಹೊಲಮನೆ ಮಾರಿ ತನಗೆ ಕಲಿಸಿದ ತಂದೆಯ ಮೋಸ ಮಾಡಿ ಮನೆತನದ ಬುಡಕ್ಕೆ ಉರಿಹಚ್ಚುವುದು ಸರ್ವಥಾ ಶಕ್ಯವಿಲ್ಲ ಎಂದುಕೊಂಡು ತನ್ನ ನಿರ್ಧಾರಕ್ಕೆ ಬಿಗಿತವನ್ನುಂಟುಮಾಡಿದನು. ಗೊತ್ತುಮಾಡಿದ ಪ್ರಕಾರ ದಿನಚರಿ ಮೊದಲಾಯಿತು. ಅಂದಿನ ಅಭ್ಯಾಸ

ಚಂಚಲಚಿತ್ತನ ಯೋಗಸಾಧನೆಯಂತಾಯಿತು. ಎಷ್ಟು ಗಟ್ಟಿಯಾದ ಮನಸ್ಸು ಮಾಡಿದ್ದರೂ ಓದು ಸಾಗಲಿಲ್ಲ. 'ಹಾಗಾದರೆ ಈವೊತ್ತು ಓದುವದೇ ಬೇಡ, ಆರಾಮಾಗಿ ತಿರುಗಿಬರೋಣ' ಎಂದು ಕೆಳಮನಿಯನ್ನು ಹುರುಪಿಗೆಬ್ಬಿಸಿ ಮಧ್ಯಾಹ್ನ ೨ ಘಂಟೆಯ ಉರಿಬಿಸಿಲಿನಲ್ಲಿ ಇಬ್ಬರೂ ಹೊರಟರು. ಎಲ್ಲಿಗೆ ಹೋಗ ಬೇಕೆಂದು ಗೊತ್ತಿಲ್ಲ. ಹಾಗೇ ಪಿರಿಪಿರಿ ತಿರುಗುತ್ತಿರುವರು. ದಾರಿನೋಟ ನೋಡುತ್ತ ನಗೆಯಾಡುತ್ತ ಜೋಡು ನಡೆದಿದೆ. ಹಾದಿಯಲ್ಲಿ ಮುಖ ವಿಕಾರವಾಗಿದ್ದರೂ ಅದನ್ನು ಮುಚ್ಚಿಕೊಳ್ಳಲು ಎರಚಿದ ಪೌಡರು, ಮಾಡಿದ ವೇಷಭೂಷೆಗಳನ್ನು ನೋಡಿ ಕೆಳಮನಿ ತನ್ನ ಸ್ವಭಾವಕ್ಕನುಸರಿಸಿ ಚೇಷ್ಟೆ ಮಾಡಿದನು. 'ನೋಡಿದೇನು ಈ ಹೆಣ್ಣು?' ಎಂದು ಒಂದೆರಡು ಕೀಳುನುಡಿ ಆಡಿದನು. ಅಮೃತ ಆ ಕ್ಷಣ ನಕ್ಕಂತೆ ಮಾಡಿದನು, ಆರಾಮಿನ ಬೇಟೆಗೆ ಹೊರಟಿದ್ದರಿಂದ. ಆದರೆ ಅದು ಸರಿಯಲ್ಲ ಎಂದು ಒಳಗೆ ತನ್ನನ್ನು ಹಳಿದುಕೊಂಡನು. ಇರಾಣಿ ಹಾಟೆಲಿನಲ್ಲಿ ಚಹಪಾನವಾಯಿತು. ಬೀದಿಯಲ್ಲಿಯ ಭಿಕಾರಿಗಳ, ರೋಗಿಗಳ ದರ್ಶನವಾಯ್ತು. ಅವರನ್ನು ನೋಡಲಾರದೆ ಅಮೃತ ನೋಡುತ್ತಿದ್ದನು. 'ಈ ಊರ ಭಿಕ್ಷುಕರು ಭಾಳ ಲುಚ್ಚೇರು, ಸಿರೂರ' ಎಂದ ಕೆಳಮನಿಯ ಮಾತಿನ ಕಡೆ ಅವನ ಲಕ್ಷ್ಯವಿರಲಿಲ್ಲ. ಮೆಟ್ರೊದಲ್ಲಿಯ ಚಿತ್ರಪಟವೊಂದನ್ನು ನೋಡಿದರು. ಅಲ್ಲಿ ಕೆಮ್ಮೋರೆಯವರ ಕುಣಿತ-ಕೆಲೆತಗಳಿಂದ ಕೆಲಕಾಲ ಮನಸ್ಸಿನ ಉದ್ವೇಗ ಮರೆಯಾಯ್ತು. ತಿರುಗಿ ಕೋಣೆಗೆ ಬಂದು ಮಾತಾಡುತ್ತಾ ಕುಳಿತಾಗ ಕೆಳಮನಿ ಕೇಳಿದನು. 'ಸಿರೂರ, ಈವತ್ತೆಲ್ಲಾ ಮೋಜು ಮಾಡಿದಿವಿ. ಇನ್ನ ಅಭ್ಯಾಸ ಜೋರಾಗಿ ಆಗುವುದು ನೋಡು.' 'ಹೌದು' ಎಂದಿಷ್ಟೆ ಉತ್ತರ ಬಂದಿತು. 'ಅಲ್ಲ, ನಿನಗ ಕೇಳಬೇಕಂತೀನಿ. ಯಾಕೋ ನೀ ಭಾಳ ಮಾತಾಡುವದಿಲ್ಲ ಇತ್ತಿತ್ತಲಾಗ. ಅದಕ್ಕೇನು ಕಾರಣ?' ಹೀಗೆ ಮಾತು ಸಾಗಲು ಹೇಳಲೋ ಬೇಡವೊ ಎನ್ನುತ್ತ ಕೊನೆಗೆ ಅಮೃತ ಆಡಿದನು; 'ನೋಡು, ಕೆಳಮನಿ. ನಾವು ಇಷ್ಟೆಲ್ಲ ಕಲ್ತೇನು ಬಂದಂತಾಯಿತು, ಈ ಕ್ಷಣ ಸಾಯುತ್ತಿರುವ ರೋಗಿಗಳ ಶುಶ್ರೂಷೆ ಮಾಡದಿದ್ದರೆ?' 'ಅಂಥವರ್‍ಯಾರು ಮಾರಾಯ? ನಮ್ಮ ಆಸ್ಪತ್ರಿಯೊಳಗೆ ಹೌದಲ್ಲೊ? ಸಾಯೋದು ಅವರ ಹಣೆಬರಹದೊಳಗೆ ಇದ್ದರೆ ಸಾಯುಲಿ ಬಿಡು.' 'ಅದಲ್ಲ ಕೆಳಮನಿ. ಯಾರೂ ನೋಡಿಕೊಳ್ಳುವವರಿಲ್ಲದೆ ಬಂಗಾಲ ಪ್ರಾಂತದಲ್ಲಿ ನೆರೆಹಾವಳಿಯಲ್ಲಿ ಸಿಕ್ಕ ಜನ ಹುಳದಂತೆ ಸಾಯುತ್ತಿರುವಂತೆ' 'ಓಹೋ. ದೂರಹೋತು ಬಿಡು ನಿನ್ನ ದೃಷ್ಟಿ. ಇಂಥ ಮೆತ್ತಗಿನ ಮನುಷ್ಯ

ಡಾಕ್ಟರ ಆಗಲಿಕ್ಕೆ ಲಾಯಖಿಲ್ಲ ನೋಡು ಸಿರೂರ' ' ಇರಬಹುದು. ನೀ ಕೇಳಿದಿ ಯೆಂದು ಹೇಳಿದೆ' 'ಅದೆಲ್ಲ ತಲೆಯಿಂದ ತೆಗೆದುಹಾಕು. ಮೊದಲು ಪರೀಕ್ಷಾ ಮುಗಿಯಲಿ, ಅಲ್ಲಿಂದ ಬಂಗಾಲದ ಕಾಳಜೀ ಮಾಡೀಯಂತೆ.' 'ಹೂಂ. ಅಲ್ಲ ಕೆಳಮನಿ, ಅಷ್ಟರಲ್ಲಿ ನಾವು ಆರೈಕೆ ಮಾಡುವೆವೆಂದರೂ ಯಾರೂ ಬದುಕಿರಲಿ ಕ್ಕಿಲ್ಲ ! ಒಂದು ದಿವಸ ಸಹ ತಡೆಯುವುದಕ್ಕೆ ಅವಕಾಶವಿಲ್ಲ ನೋಡು'. 'ಹೌದು ಹೌದು ಹೊರಡಪ ಈವತ್ತು ರಾತ್ರಿ ಗಾಡಿಗೆ!' ಕೆಳಮನಿಗೆ ಇದೆಲ್ಲ ಅಮೃತನ ಧ್ಯೇಯವಾದದ ಹುಚ್ಚೆಂದೂ ಸಮುದ್ರದತೆರೆಯೇರಿದಂತೆ ಬಂದು ಮತ್ತೆ ಝರ್ರನೆ ಇಳಿಯುವುದೆಂದೂ ತೋರಿತು. ಮರುದಿನ ಹಾಗೇ ಆಯಿತು. ಅಮೃತ ಅಭ್ಯಾಸ ದಲ್ಲಿ ತಲ್ಲೀನನಾಗಿದ್ದಾನೆ. ಸೂಟಿಯಲ್ಲಿ ಅಲ್ಲಿಯೇ ಉಳಿದ ಕಾರಣ ಅಭ್ಯಾಸ ನೆಟ್ಟಗೆ ನಡೆದಿರುವದೆಂದೂ ತನ್ನ ವಿಷಯಕ್ಕೆ ಎಳ್ಳಷ್ಟು ಕಾಳಜಿಮಾಡಬಾರದೆಂದೂ ಅವನು ತಂದೆಗೆ ಉತ್ತರ ಬರೆದನು. ದೂರದ ಕೆಳದನಿಯ ಗುಡುಗಿನಂತೆ ಹಿಂದಿನ ಆವೇಶ ಮೊಳಗುತ್ತಿದೆ, ಆದರೆ ನಿತ್ಯಕ್ರಮಕ್ಕೆ ಅದರಿಂದ ಅಡ್ಡಿಯಾಗಿಲ್ಲ.

೨-೩ ದಿನ ಸುಸೂತ್ರವಾಗಿ ಉರುಳಿದವು. ಡಿಸೆಂಬರ ೩೦ ಬಂದಿತು. ಅಂದು ಸಾಯಂಕಾಲ ಎಂದಿನಂತೆ ತಿರುಗಾಟಕ್ಕೆ ಅಮೃತ ಸಮುದ್ರದ ದಂಡೆಗೆ ಹೋದನು. ಬ್ಯಾಕಬೇದ ಹತ್ತಿರ ದಂಡೆಗುಂಟ ಇರುವ ಕಟ್ಟೆಯ ಮೇಲೆ ವೇಗ ದಿಂದ ಹೆಜ್ಜೆಯಿಡುತ್ತ ನಡೆದನು. ಎಷ್ಟೋ ಜನರು ಅಲ್ಲಿ ತಿರುಗುತ್ತಿದ್ದರು. ಅವೆಷ್ಟೋ ದಂಪತಿಗಳು ಹರಟುತ್ತ ನಗುತ್ತ ಹೋದರು. ರಾತ್ರಿ ಸಮೀಪಿಸಿದಂತೆ ಚಳಿಗಾಲದ ತಂಪು ಹೆಚ್ಚಿತು. ಆದರೆ ಸಮುದ್ರದ ನೋಟ ಅವನನ್ನು ಎಳೆದು ಕೊಂಡುಹೋಯಿತು. ಬಿಟ್ಟುಬಿಡದೆ ಏರೇರಿ ಈ ತೆರೆ ಎಲ್ಲಿಂದ ಬರುತ್ತಿರುವವು? ಈ ಬುರುಗಿನ ಬೆಡಗೇಕೆ ಇವಕ್ಕೆ ? ಎಂದು ಕೇಳುತ್ತ ತಿರುತಿರುಗಿ ನೋಡುತ್ತ ಮುಂದೆ ಸಾಗಿದನು. ತೀರ ತುದಿಗೆ ಹೋಗಿ ಅಲ್ಲಿಯೊಂದು ಕರಿಯ ಬಂಡೆಗಲ್ಲಿನ ಮೇಲೆ ಕುಳಿತುಕೊಂಡನು. ತೆರೆಗಳ ಸಳಸಳ ನಡೆದಿತ್ತು. ಒಂದು ಕಡೆ ಅಪಾರ ವಾದ ಜಲರಾಶಿಯ ಒತ್ತಿನ ಅಂಚೊಂದು, ಇನ್ನೊಂದು ಕಡೆ ಅಪಾರವಾದ ಮಾನವ ಸಮುದ್ರದ ಒಂದು ಹನಿಯಂತಿದ್ದ ಜನಸಂದಣಿ.

ಮಬ್ಬುಗತ್ತಲೆಯಾಯಿತು. ಇನ್ನೇಳಬಹುದು ಎಂದು ಅಮೃತ ಅನ್ನುವದ ರಲ್ಲಿ ಅವನ ಹಿಂದೆ ಯಾರೋ ಬೇರೆ ದಿಕ್ಕಿಗೆ ಮುಖಮಾಡಿ ಕೂತಿದ್ದರು. 'ಯಾವನೋ ಗಡ್ಡದ ಮನುಷ್ಯ ಕಾಣತದೆ' ಎಂದು ಅಮೃತ ಸುಮ್ಮಗಾದನು. ಆ ವ್ಯಕ್ತಿ ಮೆಲ್ಲಗೆ ಎದ್ದು ಹೊರಟಂತೆ ಮಾಡಿ ಸುತ್ತೆಲ್ಲ ನೋಡಿ ಅಮೃತನ

ಹಿಂದೆ ಬಂದು ನಿಂತಿತು. ಗಕ್ಕನೆ ಹಿಂದೆ ನೋಡಿ ಅಮೃತ ಹೆದರಿದನು. ಮುಂಬಯಿಯಲ್ಲಿಯ ಪಠಾಣರ ಲೀಲೆ ಅವನಿಗೆ ಕೇಳಿ ಗೊತ್ತಿತ್ತು. ಕೂಡಲೆ ಎದ್ದು ಹೊರಡಲನುವಾದನು. ಅವನು ಎದ್ದರೆ ಆ ವ್ಯಕ್ತಿ ಅಲ್ಲಿಯೇ ಕೂತಿತು. ಅಮೃತ ಒಂದೆರಡು ಹೆಜ್ಜೆ ಇಟ್ಟನು. 'ಇಠರಾವ್' ಎಂದು ಉರ್ದು ಮಾತಿನಲ್ಲಿ ಆ ವ್ಯಕ್ತಿ ಕರೆಯಿತು. ಕತ್ತಲೆ ಹೆಚ್ಚತೊಡಗಿತ್ತು. ಜನರ ಗದ್ದಲವೆಲ್ಲ ಕಡಿಮೆ ಯಾಗಿತ್ತು. ಅಮೃತ ಈಗ ಮಾತ್ರ ಕೈಕಾಲು ತಣ್ಣಗಾದಂತಾಗಿ ಅಲ್ಲಿಯೆ ನಿಂತುಬಿಟ್ಟನು. ಆ ವ್ಯಕ್ತಿ ತಾನೇ ಹತ್ತಿರ ಬಂದು 'ಡರೋಮತ್' ಎಂದು ಅವ ನನ್ನು ಹೆಗಲೊತ್ತಿ ಕೆಳಗೆ ಕೂಡಿಸಿತು. ಅಮೃತ ತನ್ನ ಧೈರ್ಯವನ್ನೆಲ್ಲ ಕೂಡ ಹಾಕಿ 'ನನ್ನ ಹತ್ತಿರ ಏನೂ ಇಲ್ಲ' ಎಂದು ಸನ್ನೆ ಮಾಡಿ ಹೇಳಿದನು. ಅದಕ್ಕೆ ಆ ವ್ಯಕ್ತಿ ಹುಸಿನಗೆ ನಕ್ಕಿತು. 'ನಿನಗೇನೂ ಮಾಡುವದಿಲ್ಲ, ಗಾಬರಿ ಆಗಬೇಡ' ಎಂದು ಸಂಕೇತದಿಂದ ಸೂಚಿಸಿತು. ಹೀಗೆ ಇಬ್ಬರೂ ಒಂದೆರಡು ಮಿನಿಟು ತಣ್ಣಗೆ ಕುಳಿತರು. ಅಮೃತನಿಗೆ ಏನು ಮಾಡಬೇಕೆಂಬುದು ತಿಳಿಯದಾಯಿತು. ಬಲುಮೆಯಿಂದ ಏನಾದರೂ ಮಾಡಹೋದರೆ ಇಂಥವರ ಹತ್ತಿರ ಹದನಾದ ಚೂರಿ ಇರುವದೆಂದು ಅವನಿಗೆ ಗೊತ್ತಿತ್ತು. ಕತ್ತಲೆ ಹೆಚ್ಚಿತು. ಮುಂಬಯಿ ಪಟ್ಟಣವೆಲ್ಲ ವಿದ್ಯುದ್ದೀಪಗಳಿಂದ ಉಡಿಯಲ್ಲಿ ಕೋಟ್ಯಾವಧಿ ರತ್ನಗಳನ್ನು ತೂರಿ ಕೊಂಡ ರಾಜ್ಞಿಯಂತೆ ಮೆರೆಯಿತು. 'ಈಗ ನಾ ಹೋಗಬಹುದೇ ?' ಎಂದು ಹೆದಹೆದರುತ್ತ ಅಮೃತ ಕೇಳಿದನು. ಕೂಡಲೆ 'ನಿಂದಿರು ಅಮೃತ' ಎಂಬ ಅಚ್ಚಗನ್ನಡ ಉತ್ತರ ಬಂದಿತು ಆ ವ್ಯಕ್ತಿಯಿಂದ. ಅವನ ಅಚ್ಚರಿ ಹೆಚ್ಚಾಯಿತು. ಕನ್ನಡ ಮನುಷ್ಯ ತಾನೆಂದು ತಿಳಿದು ಬಂದು ಈ ತುಡುಗ ಮೋಸ ಮಾಡುತ್ತಿರ ಬಹುದೇ ? ಎಂದು ಅಂದುಕೊಂಡನು. ಆದರೆ ಹೊರತೋರಿಕೆಗೆ 'ಯಾರು ನೀವು ?' ಎಂದನು. 'ನಾ ನಿಮ್ಮವನೇ, ಕನ್ನಡಿಗ' ಎಂಬ ಉತ್ತರ ಬಂದಿತು. 'ನಿಮ್ಮ ಗುರುತು ಹತ್ತಲಿಲ್ಲ.' 'ಅದು ಹೇಗೆ ಹತ್ತೀತು ?' ಎಂದದ್ದೇ ಆ ವ್ಯಕ್ತಿ ತನ್ನ ಉದ್ದನ್ನ ಕೆಂಪು ಟೊಪ್ಪಿಗೆಯನ್ನೂ ಗಡ್ಡವನ್ನೂ ತೆಗೆದು ಕೈಯಲ್ಲಿ ಹಿಡಿದು ನಕ್ಕಿತು. ಆಗ ಯಾರೆಂಬುದು ಅಮೃತನಿಗೆ ಹೊಳೆಯಿತು. ಗಾಬರಿಯೆಲ್ಲ ಮಟಮಾಯವಾಯಿತು. 'ನಮಸ್ಕಾರ' ಎಂದು ಕೈಮುಗಿದನು. 'ನೀವು ನಮಗೆಲ್ಲಾ ಮುಂದಾಳುಗಳು' ಎಂದನು. 'ಈಗಂತೂ ಹಿಂದಾಳುಗಳಾಗಿದ್ದೇವೆ. ದೇಶದ ಬಿಡುಗಡೆಯ ಸಲುವಾಗಿ ನೂರಾರು ವೇಷವನ್ನು ಹಾಕಬೇಕಾಗತದೆ, ಅಮೃತ!' ಅವನಿಗೆಲ್ಲ ಅರ್ಥವಾಯ್ತು. ಅವನು ಹೆಚ್ಚು ಕೆದರಿ ಕೇಳಲಿಲ್ಲ.

ಸ್ವಾತಂತ್ರ್ಯದ ಆಂದೋಲನದಲ್ಲಿ ಅತಿ ಸೂಕ್ಷ್ಮ ಕಾಲವು ಬಂದಿರುವದೆಂದು ಅವನಿಗೆ ಗೊತ್ತಿತ್ತು. ಬೇರೆ ಮಾತು ಸಾಗಿದವು. ಅವರು ಅವನ ಯೋಗಕ್ಷೇಮ ಕೇಳಿದರು. ಚಿಕ್ಕವನಿದ್ದಾಗಿನಿಂದ ಅವರಿಗೆ ಅವನ ಪರಿಚಯವಿತ್ತು. ಅಂದಿನಿಂದಲೂ ಅವನ ರಾಷ್ಟ್ರೀಯ ಆಶೆ ಆಕಾಂಕ್ಷೆಗಳನ್ನೂ ಧೈರ್ಯ ಸಾಹಸಗಳನ್ನೂ ಅರಿತಿದ್ದರು. ಶಾಲೆಯಲ್ಲಿದ್ದಾಗ ಗಾಂಧಿ ಜಯಂತಿಯ ಆಚರಣೆಯನ್ನು ಮಾಡಬೇಕೆಂದು ಅವನು ಹಟತೊಟ್ಟಿದ್ದು, ಶಾಲೆಯ ಅಧಿಕಾರಿಗಳು ಅವನಿಗೆ ಹೆದರಿಸಿದ್ದು, ಆದರೂ ಅವನು ಶಾಲೆಯ ಹೊರಗಿನ ಬಯಲಿನಲ್ಲಿ ಕಾರ್ಯಕ್ರಮ ಮಾಡಿ ತೋರಿಸಿದ್ದು ಎಲ್ಲಾ ಅವನ ಬಗ್ಗೆ ಅವರ ಪ್ರೀತಿಯನ್ನು ಹೆಚ್ಚಿಸಿದ್ದವು. ಇನ್ನು ಕೆಲವು ತಿಂಗಳಲ್ಲಿ ಪರೀಕ್ಷೆ ಮುಗಿಸಿ ಪಾಸಾದ ಮೇಲೆ ಡಾಕ್ಟರನಾಗುವೆನೆಂದು ಅವನು ಹೇಳಿದನು. 'ಡಾಕ್ಟರನಾಗಿ ದೇಶಸೇವೆಗೆ ನಿಲ್ಲು' ಎಂದು ಅವರು ಬೋಧಿಸಿದರು. ದೇಶಸೇವೆಯೆಂದೊಡನೆ ಅಮೃತನಲ್ಲಿ ಅಡಗಿದ್ದ ಆಶೋತ್ತರಗಳು ಪ್ರಕಟವಾದವು. ತನ್ನ ಅಂತರಂಗವನ್ನು ಅವರ ಮುಂದೆ ತೋಡಿಕೊಂಡನು. ತನ್ನ ಕುಟುಂಬದ ಸಮಸ್ಯೆಯನ್ನು ಅವರಿಗೆ ತಿಳಿಸಿದನು. ಮಾತು ಹೀಗೆ ಸಾಗಿರಲು 'ಸಂಸಾರ ಯಾರಿಗಿಲ್ಲ ಅಮೃತ ದೇಶದ ಸಂಸಾರದಲ್ಲಿ ಬೆರೆತವನೇ ನಿಜವಾದ ಮನುಷ್ಯ' ಎಂದರು. 'ಎಲ್ಲರೂ ತಂತಮ್ಮ ಸಂಸಾರವೆಂದರೆ ಎಲ್ಲರ ಸಂಸಾರಸುಖವನ್ನು ಹಾಳುಮಾಡುತ್ತಿರುವ ದಾಸ್ಯವನ್ನು ಯಾರು ನಾಶ ಮಾಡಬೇಕು ? ನಿಮ್ಮಂಥ ತರುಣರು ಈ ಸಂಗ್ರಾಮದಲ್ಲಿ ಧುಮುಕಬೇಕು, ರಾಷ್ಟ್ರದೇವಿಯ ಪದತಲದಲ್ಲಿ ಪ್ರಾಣ ಅರ್ಪಿಸಬೇಕು' ಮುಂತಾಗಿ ಒಂದು ದೇಶಭಕ್ತಿಯ ಭಾಷಣವೇ ನಡೆಯಿತು.. ಆದರೆ ದನಿಯನ್ನು ಎತ್ತರಿಸದಂತೆ ಮಾತ್ರ ಅವರು ಎಚ್ಚರವಹಿಸಿದ್ದರು. ಪಿಸುಮಾತಿನಂತೆ ಮಾತು ನಡೆದಿತ್ತು. ಅಮೃತನ ಅಂತಃಕರಣದಲ್ಲಿ ಮಂದ್ರಸ್ವರದಲ್ಲಿ ಮಂತ್ರೋಪದೇಶ ಕೇಳಿದಂತಾಗಿ ಎಂದಿಲ್ಲದ ಶಕ್ತಿ ಸಂಚಾರವಾಯಿತು. 'ನೀವು ಹೇಳಿದರೆ ಮುಂದಾದದ್ದು ಆಗಲಿ,ಬಂಗಾಲದ ಕರೆಗೆ ಈಗಲೆ ಓಗೊಡುತ್ತೇನೆ' ಎಂದನು. 'ನಾನು ಹೇಳದಿದ್ದರೆ ದೇಶದ್ರೋಹಿಯಾದೇನು. ಹೋಗು ಅಮೃತ. ಬಂಗಾಲದ ಸೇವೆಗೆ ಕರ್ಣಾಟಕವೇ ಮೂರ್ತಿವೆತ್ತು ಹೋದಂತೆ ಹೋಗು. ನಾಳೆ ಕರ್ನಾಟಕಕ್ಕೆ ಇಂಥ ಕೇಡುಗಾಲ ಬಂದರೆ ಬಂಗಾಲವು ನಾವಿದ್ದಲ್ಲಿ ಓಡಿ ಬರಲಾರದೇ? ಪ್ರಾಂತ ಪ್ರಾಂತಗಳು ಹೀಗೆ ಅಕ್ಕತಂಗಿಯರ ಅಕ್ಕರೆಯಿಂದ ನಡೆದಾಗಲೆ ಭಾರತವೊಂದು ಅಖಂಡ ರಾಷ್ಟ್ರವಾಗುವದು.'

ಇಬ್ಬರೂ ಎದ್ದರು. ಅವರು 'ನೀ ಮುಂದೆ ಹೋಗು' ಎಂದರು; ತಮ್ಮ ವೇಷವನ್ನು ಮತ್ತೆ ಧರಿಸಿ ಮೊದಲು ಕುಳಿತಲ್ಲಿ ಹೋಗಿ ಕುಳಿತರು. ಅಮೃತನು ಕತ್ತಲೆಯಲ್ಲಿ ಮೆಲ್ಲಗೆ ನಡೆಯುತ್ತ ತನ್ನಲ್ಲಿ ಉದಿಸಿದ ಹೊಸ ಸ್ಫೂರ್ತಿಯ ಬೆಳಕಿನಿಂದ ಕಳೆಗೊಂಡು ಮುಂದೆ ಸಾಗಿದನು.

ಅಮೃತನ ನಿಶ್ಚಯವು ಈಗ ಸಮುದ್ರ ಮಧ್ಯದ ದೀಪಸ್ತಂಭದಂತೆ ಅಚಲವಾಗಿತ್ತು. ತೂಗಾಟವೆಲ್ಲ ಮುಗಿದು ಹೋಗಿತ್ತು. ಆಗಾಗ ಮನೆಯ ಚಿಂತೆಯೇನೋ ಕನುಸುಳುತ್ತಿತ್ತು. ಅದಕ್ಕೆ ಅವನ ಉತ್ತರವೀಗ ಸಿದ್ಧವಾಗಿದೆ. 'ಈ ವರ್ಷ ಹೋದರೆ ಮುಂದಿನ ವರ್ಷ ಪರೀಕ್ಷೆಯಾದೀನು.' ೩೧ನೆಯ ದಿನ ಅವನು ತನ್ನ ಷ್ಟಕ್ಕೆ ಹೊರಡುವ ಸಿದ್ಧತೆ ನಡೆಸಿದನು. ಕೆಳವನಿಗೆ ಒಮ್ಮೆ ಹೇಳಬೇಕೆಂದೆನಿಸಿತು. ಆದರೆ ಕೊನೆಗೆ ಬೇಡವೆಂದೇ ಗೊತ್ತುಮಾಡಿದನು. ತನ್ನ ಸಂಕಲ್ಪಿತ ಸ್ಥಳಕ್ಕೆ ಹೋಗುವವರೆಗೆ ಯಾರಿಗೂ ಗೊತ್ತಾಗಕೂಡದೆಂಬುದು ಅವನ ಆಶಯವಿತ್ತು.

೧೯೪೩ ಜನೆವರಿ ಮೊದಲ ದಿನ ಬಂದಿತು. ಹೊಸ ವರ್ಷದ ಹೊಸ ನಿರ್ಧಾರವಾಗಿ ಅಮೃತನಿಗೆ ನೆರೆಬರವು ಬಂದಿತು. ಆ ನೆರೆಯಲ್ಲಿ ಅವನ ದೌರ್ಬಲ್ಯವೆಲ್ಲ ಕೊಚ್ಚಿ ಹೋಯಿತು; ಅವನ ಬಾಳು ಹೊಸ ಹೆಜ್ಜೆಯಿಕ್ಕಿತು.

ತನ್ನ ಪ್ರವಾಸದ ಸಾಮಾನುಗಳನ್ನು ತಗೊಂಡು, ತಡವಾಗಿ ತನ್ನ ಕೋಣೆಯ ಕೀಲಿ ಕೈ ಕೆಳವನಿಗೆ ಸಿಗುವಂತೆ ವ್ಯವಸ್ಥೆ ಮಾಡಿ ಅಮೃತನು ಅಂದು ರಾತ್ರಿ ಕಲಕತ್ತೆಗೆ ಹೊರಟನು.

## ೩. ಕರುಳ ಕೊರೆತ

ಹೊಸ ವರ್ಷದ ಮೊದಲ ದಿನ ರಾತ್ರಿ, ದಿನದ ವಾಡಿಕೆಯಂತೆ ಪತ್ರಿಕೆಯನ್ನು ಕೊಡಲು ಕೆಳವನಿ ಸಿರೂರನ ಕೋಣೆಗೆ ಹೋಗಿ ಬಾಗಿಲು ಬಡಿದನು. ಉತ್ತರವಿಲ್ಲ. ಒಳಗೆ ದೀಪವೂ ಇಲ್ಲ. ನೋಡಲಾಗಿ ಬೀಗ ಹಾಕಿದ್ದು ಗೊತ್ತಾಯಿತು. 'ಈ ಹೊತ್ತಿನಲ್ಲಿ ಎಲ್ಲಿ ಹೋಗಿರಬಹುದು ಈ ಗಡಿ ?' ಎಂಬ ಪ್ರಶ್ನೆ ಹುಟ್ಟಿತು. 'ಅಭ್ಯಾಸದ ವಿಷಯ ಕೇಳಲು ಯಾರ ಖೋಲಿಗಾದರೂ ಹೋಗಿರಬಹುದು' ಎನ್ನುತ್ತ ಕೆಳವನಿ ತನ್ನ ಕೋಣೆಗೆ ಹೋಗಿ ಮಲಗಿಕೊಂಡನು. ಮರುದಿನ ಎದ್ದು ಸ್ವಲ್ಪ ಹೊತ್ತಿನ ಮೇಲೆ ತನ್ನ ಟೇಬಲ್ಲಿನ ಮೇಲೆ ಒಂದು ಕೀಲಿ ಕೈಯನ್ನು ಕಂಡನು. ಅದನ್ನು ಯಾರಿಟ್ಟಿದ್ದರೊ ತಿಳಿಯದು. ಕಸವುಡುಗುವ

ಆಳುಮನುಷ್ಯನು ಬಂದು ಸಿರೂರ 'ಸಾಹೇಬ'ರ ಕೋಣೆಯ ಕೀಲಿ ಕೈ ಇರು ವದೇ ಎಂದು ಕೇಳಿದನು. 'ಇನ್ನೂ ಹೇಗೆ ಬಂದಿಲ್ಲ ಇವನು ? ಈ ಕೈ ನನ್ನ ಕೋಣೆಯಲ್ಲಿ ಹೇಗೆ ಬಂತು ?' ಎಂದು ತನ್ನಲ್ಲಿ ಹಲವಾರು ಪ್ರಶ್ನೆಗಳನ್ನು ಕೇಳುತ್ತ ಕೆಳಮನಿ ಸಿರೂರನ ಕೋಣೆಯ ಬಾಗಿಲನ್ನು ತೆರೆದನು. ಒಳಗೆ ಕಾಲಿಟ್ಟು ನೋಡಿದೊಡನೆ ಅವನ ಎದೆ ಝುಲ್ಲೆಂದಿತು. ಒಳಗೆಲ್ಲ ಭಣಭಣ ಸುರಿ ಯುತ್ತದೆ. ಸಿರೂರನ ಪ್ರೀತಿಯ ಗಾಂಧಿ-ನೆಹರು-ರಾಮಕೃಷ್ಣವಿವೇಕಾನಂದರ ಛಾಯಾ ಚಿತ್ರಗಳೆಲ್ಲ ಟೇಬಲ್ಲಿನ ಇದುರು ಗೋಡೆಯಿಂದ ಮಾಯವಾಗಿವೆ. ಅವುಗಳ ಮುಂದಿನ ಊದುಬತ್ತಿಯ ತೂತುಬಟ್ಟಲವು ಕಾಣಲೊಲ್ಲದು. ಎಲ್ಲ ಪುಸ್ತಕಗಳು ದೊಡ್ಡ ಸಂದುಕವನ್ನು ಸೇರಿದಂತಿವೆ. ಗಾದಿಯನ್ನು ಕಾಟಿನ ಮೇಲೆ ಕಟ್ಟಿಟ್ಟಿದೆ. ಸಿರೂರನು ಊರಿಗೆ ಹೋಗಿರಬೇಕೆಂಬುದು ಸ್ಪಷ್ಟವಾಯಿತು. ಅಭ್ಯಾಸ ಮಾಡಿ ತಲೆ ಚಿಟ್ಟುಹಿಡಿದಿರಬೇಕು, ಮನೆಯ ನೆನಪಾಗಿರಬೇಕು. ಹೀಗೆಂದು ಆಳಿನ ಕೈಯಿಂದ ಕಸವುಡುಗಿಸಿ ಬಾಗಿಲು ಹಾಕಿ ತನ್ನ ಕೋಣೆಗೆ ಬಂದನು. ಆದರೆ ಅವನ ಮನಸ್ಸಿಗೆ ಸಮಾಧಾನವಾಗಲಿಲ್ಲ. ೪-೫ ದಿನದ ಸಲು ವಾಗಿ ಊರಿಗೆ ಹೋದರೆ ಉಳಿದೆಲ್ಲ ಸಾಮಾನುಗಳನ್ನು ಕಟ್ಟಿಡುವ ಅವಶ್ಯಕತೆಯೇ ನಿತ್ತು ? ತನಗೆ ತಿಳಿಸದೆ ಯಾಕೆ ಹೋದನು ? ಇದರಲ್ಲಿ ಏನೋ ಗೂಢವಿರಬಹು ದೆಂದು ಅವನು ವಿಚಾರವ್ಯಗ್ರನಾದನು. ಕಡೆಗೆ ಅವನಿಗೆ ತೋರಿತು, ಸಿರೂರನ ತಂದೆಯವರಿಗೆ ತಾರು ಮಾಡಿ ಕೇಳಬೇಕೆಂದು. ಕೂಡಲೆ ಹತ್ತಿರದ ತಾರಾಫೀಸಿಗೆ ಹೋಗಿ ತಾರು ಮಾಡಿ ಬಂದನು. ತಾರು ನೋಡಿದ ಮಾತ್ರಕ್ಕೆ ಸಿರೂರನ ತಾಯಿತಂದೆಗಳ ಸ್ಥಿತಿ ಏನಾದೀತೆಂಬುದು ಅವನಿಗೆ ಆಗ ಹೊಳೆಯಲಿಲ್ಲ. ತನ್ನ ಹೊಣೆಯಿಂದ ತಾನು ಮುಕ್ತನಾದೆನೆಂಬ ಭಾವದಿಂದ ತನ್ನ ಕೆಲಸದಲ್ಲಿ ತೊಡಗಿ ದನು ಆ ದಿನಗಳಲ್ಲಿ ತಾರು ಅಂದೇ ಮುಟ್ಟಿ ಉತ್ತರ ಬರುವ ನಿರೀಕ್ಷೆಯೇ ಇರಲಿಲ್ಲ.

ಇತ್ತ ಬಾಗಲಕೋಟೆಯಲ್ಲಿ ಒಂದು ದಿನ ಸಂಜೆ ಶಂಭುರಾಯರ ಮನೆಯಲ್ಲಿ ಮದುವೆಗಾದ ಅವರ ಮಗಳ 'ಪ್ರದರ್ಶನ'ವು ನಡೆದಿತ್ತು. ಮನೆತುಂಬ ಓಡಾಟ ವೇ ಓಡಾಟ. ವರನು ಇಂಟರ ಫೇಲಾದವನಾದರೂ ಮಿಲಿಟರಿ ಲೆಕ್ಕದ ಖಾತೆ ಯಲ್ಲಿ ಕೆಲಸ ಹಿಡಿದು ಪುಣೆಯಲ್ಲಿದ್ದನು. ಮಿಲಿಟರಿಯಲ್ಲಿ ಸೈನಿಕರಾಗಿ ಹೋಗು ವವರಿಗಿಂತ ಈ ಲೆಕ್ಕಿಗರ ಸಂಖ್ಯೆ ಆಗ ಹೆಚ್ಚಿದಂತಿತ್ತು. ಅರ್ಜಿ ಹಾಕಲಿ ಬಿಡಲಿ, ಪಾಸಾಗಲಿ ನಾಪಾಸಾಗಲಿ, ಗಾಡಿಯಿಂದಿಳಿದು ಹೋಗಿ ಭೆಟ್ಟಿಯಾದರೆ ತೀರಿತು

ಅಂದೇ ನೌಕರಿಗಾರಂಭವೆಂದೇ ತಿಳಿಯಬೇಕು. ಕೆಲಸವ ಕಲ್ಪತರುವೆಂದು ಈ ಖಾತೆಯನ್ನು ತರುಣರೆಲ್ಲ ಭಾವಿಸಿದ್ದರು. ಮೇಲಾಗಿ ಅಕ್ಕಿ-ಗೋದಿ ಮುಂತಾದ ಧಾನ್ಯ, ಬಟ್ಟೆಬರೆಗಳ ಕೊರತೆಯಿಲ್ಲ. ಸುತ್ತೆಲ್ಲ ಜಗತ್ತು ಗೋಳಾಡುತ್ತಿದ್ದರೂ ತಮ್ಮ ಮಟ್ಟಿಗೆ ತಾವು ಯುದ್ಧಕಾಲದಲ್ಲಿ ಸುಖಿಯಾಗಿರಬೇಕಾದರೆ ಈ ಕಲ್ಪ ವೃಕ್ಷದ ಬುಡದಲ್ಲಿ ಆಶ್ರಯ ಹೊಂದಿದರೆ ಸಾಕು ಎನ್ನುವಂತಿತ್ತು. ಸರಿ, ನೌಕರಿ ಸಿಕ್ಕಮೇಲೆ ಮದುವೆಯಾಗದ ತರುಣರು ವಿವಾಹದ ಪೇಟೆಯಲ್ಲಿ ತುಟ್ಟಿಬೆಲೆಯ ವರಗಳಾಗುತ್ತಿದ್ದರು. ಈ ವರನಿಗೆ ಸ್ವಲ್ಪ ಉತ್ಪನ್ನವೂ ಇದ್ದಿತಂತೆ. ಅಂತೂ ತಾಯಿ ತಂದೆ ಹಾಗೂ ಒಬ್ಬಿಬ್ಬ ಗೆಳೆಯರನ್ನು ಕೂಡಿಕೊಂಡು ಐಟಿನಿಂದ ಕನ್ಯೆ ಯನ್ನುನೋಡಲು ಅವನು ಶಂಭುರಾಯರಲ್ಲಿ ಬಂದಿದ್ದನು. ಎಲ್ಲರೂ ಕೂತಮೇಲೆ ಸಾಲಂಕೃತ ಕನ್ಯೆಯನ್ನು ಕರೆದರು. ಅವಳು ಬಾಗಿ ಎರಡೆರಡು ಸಲ ಕೈಮುಗಿ ಯುತ್ತ ಎಲ್ಲರಿಗೆ ನಮಸ್ಕಾರ ಮಾಡಿದಳು. 'ಈ ಪ್ರದರ್ಶನ ಕಡೆಯದಾಗಲಿ, ದಯಮಾಡಿ ಮಾಡಿಕೊಳ್ಳಿರಿ' ಎಂದು ಅವಳ ಆ ಜೋಡು ನಮಸ್ಕಾರ, ಆ ತ್ರಸ್ತ ಮುಖದ ದೈನ್ಯ ಹೇಳುವಂತಿತ್ತು. ಅವಳು ಮುದುಡಿ ಬಾಗಿ ಕುಳಿತ ಮೇಲೆ ಹೆಸರು ಕೇಳುವದಾಯ್ತು. 'ಸುಂದರಾ' ಎಂದು ಹೇಳಿದಳು. 'ಹೆಸ ರೊಂದು ಬೇಸ್ಯದರಪ' ಎಂದು ವರನ ಗೆಳೆಯನೊಬ್ಬನು ಕೊಂಕಿನಿಂದ ಆಡಿ ದನು. ಶಂಭುರಾಯರ ಎದೆ ಹಾರುತ್ತಿತ್ತು. ಬಾಗಿಲ ಸಂದಿಯಿಂದ ಕಂಡರೂ ಕಾಣ ದಂತೆ ಶಂಭುರಾಯರ ಹೆಂಡತಿ ಪಾರ್ವತಿಬಾಯಿ ವರನನ್ನೂ ಇಡಿಯ ದೃಶ್ಯವನ್ನೂ ಇಣಿಕಿ ನೋಡುತ್ತಿದ್ದರು. ಓದಿಸುವುದಾಯಿತು. ಒಂದೆರಡು ಮಾಮೂಲಿ ಪ್ರಶ್ನೆ ಗಳಾದವು. ಸುಂದರಾ ಅಪ್ಪಣೆಯಾದೊಡನೆ ಮತ್ತೆ ನಮಸ್ಕರಿಸಿ ಭಾವೀ ಮಾವಂ ದಿರು ಕೊಟ್ಟ ಕಾಗದ ಪುಡಕಿಯನ್ನು ತಗೊಂಡು ಎದ್ದುಹೋದಳು. ಅಲ್ಲಿಂದ ಚಹಾ ಫರಾಳದ ಗಡಿಬಿಡಿಗೆ ಮೊದಲಾಯ್ತು. ಈ ವರನ ಮನಸ್ಸಿಗೆಬಂದರೆ ಕೊಟ್ಟು ಮದುವೆಮಾಡಿಬಿಡಬೇಕು. ಮದುವೆಯ ಹೊತ್ತಿಗೆ ನಾತಾಳಿಯಲ್ಲಿ ಬರಲಿಕ್ಕಾಗದ ಅಮೃತನನ್ನು ಕರೆಸಿಕೊಳ್ಳಬೇಕು ಎಂದು ಶಂಭುರಾಯರು ಆಲೋಚಿಸುತ್ತ ಕುಳಿ ತಿದ್ದರು. ಬಿಸಿ ಬಿಸಿ ಉಪ್ಪಿಟ್ಟಿನ ಪ್ಲೇಟು ಬಂದವು, ಬೇಸನ್ನಿನ ಉಂಡಿಯನ್ನು ತಂದಿಟ್ಟರು. 'ತಗೊಳ್ಳಿರಿ' ಎಂದು ಶಂಭುರಾಯರು ಹೇಳಿದ ಸ್ವಲ್ಪಹೊತ್ತಿಗೆ ಮನೆಯ ಮುಂದೆ ಸಾಯಕಲ್ ಘಂಟಿಯಾಯಿತು. ಯಾರೆಂದು ಎದ್ದು ನೋಡು ತ್ತಾರೆ, ತಾರಿನವನು ಬಂದುನಿಂತಿದ್ದಾನೆ. ಅವರ ಎದೆ ಇನ್ನಿಷ್ಟು ಬಡಿದುಕೊಳ್ಳಹತ್ತಿತು. ನಡುಗುವ ಕೈಯಿಂದ ಸಹಿಮಾಡಿ ತಾರಿನ ಪಾಕೀಟನ್ನು ಕೈಯಲ್ಲಿ ತಗೊಂಡರು.. ಇಷ್ಟರಲ್ಲಿ ಏನು ಏನೆಂದು

ಕೇಳುತ್ತ ಹೆಂಡತಿ-ಮಕ್ಕಳು ನೆರೆದಿದ್ದರು. ವರನ ಕಡೆಯವರು ಕುತೂಹಲಿಗಳಾದರು. ಶಂಭುರಾಯರು ಪಾಕೀಟನ್ನು ಒಡೆದು ನೋಡಿದರು. ದೊಪ್ಪನೆ ನೆಲದಲ್ಲಿ ಕೂತರು. ಅವರಿಗೆ ಕಣ್ಣು ಕತ್ತಲೆಗಡಸಿದಂತಾಯಿತು. ಮಾತು ಹೊರಡಲಿಲ್ಲ. ವರನ ತಂದೆ ಅದರಲ್ಲಿ ಇದ್ದುದನ್ನು ಓದಿ ಹೇಳಿದರು. ಅಮೃತ ಮುಂಬಯಿಯಲ್ಲಿ ಇಲ್ಲವೆಂದೂ ಊರಿಗೆ ಬಂದಿರುವನೋ ಹೇಗೆಂದು ಕೇಳಮನಿಯ ಕೇಳಿಕೆಯಿತ್ತು. ನಡುವೆ ತಂತಿ ಕಡಿದಿದ್ದರಿಂದಲೋ ಏನೊ ತಾರು ಒಂದು ದಿನ ತಡವಾಗಿ ಬೇರೆ ಮುಟ್ಟಿತ್ತು. 'ಎಲ್ಲಿ ಹೋದನರೆ ನನ್ನ ಅಮೃತ!' ಎಂದು ಪಾರ್ವತಿಬಾಯಿ ಆಳು ದನಿಯಲ್ಲಿ ಆಕ್ರೋಶ ನಡೆಸಿದಳು. ಅವರನ್ನು ನೋಡಿ ಹುಡುಗರ ಮುಖ ಇಷ್ಟಾದವು. ವರನೂ ಅವನ ಕಡೆಯವರು ಫರಾಳವನ್ನು ಸ್ವಲ್ಪ ಮುಟ್ಟಿದರೋ ಇಲ್ಲವೊ ಮುಂದೆ ಅವರಿಗೆ ತಿನ್ನುವದಾಗಲಿಲ್ಲ. ಈ ಹುಡುಗಿಯನ್ನು ಮಾಡಿಕೊಳ್ಳುವ ಮನಸ್ಸಿಲ್ಲವೆಂದು ಆಗಳೆ ತಮ್ಮೊಳಗೆ ನಿರ್ಧರಿಸಿದ್ದರೊ ಏನೊ, ಗಡಿಬಿಡಿಯಿಂದ ಎದ್ದು ಹೊರಟರು. 'ಎಲ್ಲಾ ತಿಂದು ಚಹಾ ತಗೊಂಡು ಹೋಗಿರಲ್ಲ' ಎಂದು ಪ್ರಯಾಸದಿಂದ ಶಂಭುರಾಯರು ಹೇಳಿದರು. 'ಛೇ, ನಿಮಗಿಂಥಾ ಹಳಾಳಿ ಆದಾಗ ತಿನಕೊತ ಕೂಡಬೇಕೇ ? ಲಗ್ನದ ವಿಷಯಕ್ಕೆ ಹಿಂದಾಗಡೆ ತಿಳಿಸತೇವಿ' ಎಂದು ಹೊರಟೇಬಿಟ್ಟರು. ಅವರಿಗೆ ತಯ್ಯಾರಾದ ಚಹವನ್ನು ಕೊಡುವ ಎಚ್ಚರು ಸಹ ಯಾರಿಗೂ ಉಳಿಯಲಿಲ್ಲ. ಸಂಭ್ರಮ ಹೋಗಿ ಗಾಬರಿ ಮನೆಯನ್ನು ಮುಸುಕಿತು. 'ಎಲ್ಲಿ ಹೋದನೊ ಏನೊ ಅಮೃತ, ನಾ ಹೆಂಗ ಮಾಡಲೆ...' ಎಂದು ಒಂದೆ ಸವನೆ ಪಾರ್ವತಿಬಾಯಿ ಹಲಬುತ್ತಿರುವರು. ಹುಡುಗರು ಅಡ್ಡ ತಿಡ್ಡ ಪ್ರಶ್ನೆಗಳನ್ನು ತಂದೆಗೆ ಕೇಳುತ್ತಿರುವರು. ಮುಂಬಯಿಯ ಹತ್ತಿರ ಏನಾದರು ನೋಡಲಿಕ್ಕೆ ಹೋಗಿರಬೇಕೆಂದು ಸುಂದರಾನೇ ಸ್ವಲ್ಪ ಧೈರ್ಯಮಾಡಿ ಸಮಾಧಾನ ಮಾಡುತ್ತಿದ್ದಾಳೆ. ಶಂಭುರಾಯರಿಗೆ ಮಾತೇ ಬರವಲ್ಲವು. ಹೋದ ಸಾರೆ ಬಂದ ಅನುಭವದಿಂದ ತಮ್ಮ ಮಗ ಚಳುವಳಿಯಲ್ಲಿ ಬೀಳಬಹುದೆಂಬ ಹೆದರಿಕೆ ಅವರಿಗೆ ಭೂತದಂತೆ ಗಂಟುಬಿದ್ದಿತ್ತು. ಅಭ್ಯಾಸ ನೆಟ್ಟಗೆನಡೆದಿರುವುದೆಂದುಮೊನ್ನೆ ಪತ್ರ ಬಂದಿರುವುದು, ಇಷ್ಟರಲ್ಲಿ ಎಲ್ಲಿ ಹೋದನೊ ಏನೊ ಎಂಬ ಚಿಂತೆ ಹೆಚ್ಚಿತು. ಊರಿಗೆ ಹೋಗುವೆನೆಂದು ಹೇಳಿ ಎಲ್ಲಿಯೊ ಗುಪ್ತವಾಗಿರಬೇಕೆಂದು ಒಮ್ಮೆ ಅನಿಸಿತು. ಅದಾಗಿದ್ದರೆ ಪರೀಕ್ಷೆಗೆ ಕೂಡುವದೆಲ್ಲ ಹಳ್ಳ ಕೂಡಿತೆಂದೂ ತಮ್ಮ ಸಾವಿರಾರು ರೂಪಾಯಿಗಳ ವೆಚ್ಚ ಹೊಳೆಯಲ್ಲಿ ಹುಣಿಸೆಂಣು ತೊಳಿದಂತಾಯಿತೆಂದೂ ಮರಮರ ಮರುಗಿದರು. ಆ ಹೊತ್ತು ರಾತ್ರಿ ತಾಯಿ-ತಂದೆಗಳಿಬ್ಬರೂ

ಊಟಮಾಡಲಿಲ್ಲ. ಯಾರನ್ನು ಕೇಳಬೇಕು, ಏನುಮಾಡಬೇಕು ಎಂದು ಆಲೋಚನೆ ಮಾಡಿದರು. ಹೆಚ್ಚು ಬೊಬ್ಬಾಟ ಮಾಡಿದರೆ ಮೈಮೇಲೆ ಬರುವುದೆಂದು ಇಲ್ಲದ ಭೀತಿಬೇರೆ. ಅಮೃತನ ಜೀವದ ಗೆಳೆಯನಾದ ಗಂಗಾಧರನೆಂಬುವನು ಅಲ್ಲಿ ಇಂಗ್ಲೀಷ್ ಶಾಲೆಯಲ್ಲಿ ಶಿಕ್ಷಕನಾಗಿದ್ದನು. ಅವನನ್ನು ಕರೆಸಿ ಏನು ಮಾಡಬೇಕೆಂದು ಕೇಳಿದರು. 'ನಾ ಹೋಗಿ ನೋಡಿಬರುತ್ತೇನೆ' ಎಂದನವನು. ಹಾಗೇ ಮೊದಲು ಗೊತ್ತಾಯಿತು. ಆದರೆ ಮರುದಿನ ಶಂಭುರಾಯರ ಜೀವ ನಿಲ್ಲಲಿಲ್ಲ. ಇಬ್ಬರೂ ಕೂಡಿ ಮುಂಬಯಿಗೆ ಬೆಳಗಿನ ಗಾಡಿಯಿಂದ ಹೊರಟರು. ಪಾರ್ವತಿಬಾಯಿ 'ಹುಡುಕಿ ಕರಕೊಂಡುಬರ್ರಿ'ಎಂದು ಕಣ್ಣೀರು ತೆಗೆದು ಕಳಿಸಿಕೊಟ್ಟಳು. ಹೊರಡುವ ಮೊದಲು ಅಮೃತ ಊರಿಗೆ ಬಂದಿಲ್ಲ'ೆಂದೂ ತಾವು ಅಲ್ಲಿಗೆ ಬರುವುದಾಗಿಯೂ ಕೆಳಮನಿಗೆ ತಾರು ಕೊಟ್ಟರು.

ಗಾಡಿಯಲ್ಲಿ ಜನದ ವಿಪರೀತ ಗದ್ದಲವಿದ್ದದರಿಂದ ಪುಟಗಿಯಲ್ಲಿ ಒಂದು ಗಾಡಿ ತಪ್ಪಿಸಿಕೊಂಡು ಮುಂದಿನ ಗಾಡಿಯಲ್ಲಿ ಅಖಂಡವಾಗಿ ನಿಂತು, ದುಃಖದ ಮೇಲೆ ಬರೆಕೊಟ್ಟ ಪ್ರವಾಸದ ವನವಾಸವನ್ನು ಅನುಭವಿಸಿ, ಮರುದಿನರಾತ್ರಿ ಅವರು ಮುಂಬಯಿ ಸೇರಿದರು. ಕೆಳಮನಿಯ ಕೋಣೆಗೆ ಹೋದಾಗ ಅವರ ತಾರಿನ್ನೂ ಬಂದಿರಲೇ ಇಲ್ಲ. ಪರಸ್ಪರ ಪರಿಚಯುವಾಯಿತು. ಅವರ ಸಪ್ಪಗಿನ ಮೋರೆ ನೋಡಿದಾಗಲೆ ಅವರ್‍ಯಾರೆಂದು ಕೆಳಮನಿಗೆ ತಿಳಿದಿರಬೇಕು. ತನಗೆ ಗೊತ್ತಿದ್ದ ಸಂಗತಿಗಳನ್ನೆಲ್ಲ ಅವನು ಹೇಳಿದನು. ಅಮೃತನ ಕೋಣೆಯನ್ನು ತೆರೆದು ತೋರಿಸಿದನು. ಎಲ್ಲಿಯೋ ಹೋಗುವ ಸಿದ್ಧತೆ ಮಾಡಿ ಹೋಗಿದ್ದಾನೆಂಬುದು ಮೇಲೆ ಕಾಣುತ್ತಿತ್ತು. ಆದರೆ 'ಎಲ್ಲಿಗೆ ? ಈಗ ಯಾಕೆ ?' ಈ ಪ್ರಶ್ನೆಗಳಿಗೆ ಉತ್ತರ ದೊರೆಯಲಿಲ್ಲ. ಇಷ್ಟರಲ್ಲಿ ಕಾಲೇಜು ಆರಂಭವಾಗಿತ್ತು. ಪ್ರಿನ್ಸಿಪಾಲರಿಗೂ ವಿದ್ಯಾರ್ಥಿಗಳಿಗೂ ಈ ಸುದ್ದಿ ಗೊತ್ತಾಗಿತ್ತು. ಎಲ್ಲರೂ ತರ್ಕವಿತರ್ಕಗಳನ್ನು ನಡೆಸಿದ್ದರು. 'ಎಲ್ಲಿ ಹೋಗತಾನೆ, ಅಭ್ಯಾಸ ಮಾಡಿ ತಲೆಕೆಟ್ಟು ಯಾವನಾದರೂ ಗೆಳೆಯನ ಕಡೆ ಹೋಗಿರಬೇಕೇಳು' ಎನ್ನುವ ಒಂದು ಪಕ್ಷವಿತ್ತು. ಗವಿ ಸೇರಿದ ಗುಪ್ತ ಆಂದೋಲಕರೊಳಗೆ ಒಬ್ಬನಾಗಿ ಹೋಗಿರುವುದೇ ನಿಶ್ಚಯವೆನ್ನುವ ಇನ್ನೊಂದು ಪ್ರಬಲ ಪಕ್ಷವಿತ್ತು. ಶಂಭುರಾಯರು ಪ್ರಿನ್ಸಿಪಾಲರನ್ನು ಕಂಡು 'ಹೇಗಾದರೂಮಾಡಿ ಪತ್ತೆ ಹಚ್ಚಿ ಕೊಡಿರಿ' ಎಂದು ತಮ್ಮ ಮ್ಯಾಟ್ರಿಕ್ ವಿದ್ಯೆಯ ಹರಮುರಕ ಇಂಗ್ರೇಜಿಯಲ್ಲಿ ಕಂಬನಿದುಂಬಿ ಹೇಳಿದರು 'ನಾ ಏನು ಮಾಡಲಿ ? ಪೋಲಿಸರಿಗೆ ವರದಿ ಕೊಟ್ಟಿದ್ದೇನೆ. ಶಕ್ಯವಿದ್ದ ಪ್ರಯತ್ನ

ಮಾಡತೇನೆ' ಎಂದು ಅವರು ಉಪಚಾರವಾಗಿ ಹೇಳಿ ಕಳಿಸಿದರು. ಹೆಚ್ಚು ಆಸ್ಥೆ ತಾಳಿದರೆ ತಮ್ಮ ಸುತ್ತು ಬರಬಹುದೆಂದು ಅವರಿಗೂ ಹೆದರಿಕೆ ಹುಟ್ಟಿರಬೇಕು. ಹೀಗಾಗಿ ಏನೂ ತಿಳಿಯದೆ ಗಂಗಾಧರನೂ ಶಂಭುರಾಯರೂ ಊರೆಲ್ಲ ಅಲೆದಾಡಿ ಕಂಡವರನ್ನು ಕೇಳಿ ಕಾಲು ಬಾಯಿ ಸೋತು ಸುಣ್ಣಾಗಿ ಜೀವ ಹಣ್ಣಾಗಿ ಎರಡು ಮೂರು ದಿನ ಕಳೆದರು.

ಆಮೇಲೆ ರಾತ್ರಿ ಹೊತ್ತು ಊಟಮಾಡಿ ಕೆಳಮನಿಯ ಖೋಲಿಯಲ್ಲಿ ಎಲ್ಲರೂ ಕುಳಿತಾಗ ಗಂಗಾಧರನು ಕ್ರಾನಿಕಲ್ ಪತ್ರಿಕೆಯನ್ನು ವಿಶೇಷ ಲಕ್ಷ್ಯ ವಿಲ್ಲದೆ ತಿರುವಿ ಹಾಕುತ್ತಿದ್ದನು. ಎಲ್ಲರ ಮನಸ್ಸು ಅಮೃತನ ಧ್ಯಾನವನ್ನೇ ಮಾಡುತ್ತಿತ್ತು. ಆಗ ಆಕಸ್ಮಾತ್ತಾಗಿ 'ತರುಣನೊಬ್ಬನ ಆತ್ಮಹತ್ಯೆ, ಎಂಬ ಶಿರೋನಾಮೆ ಕಣ್ಣಿಗೆ ಬಿತ್ತು. ಅದನ್ನವನು ಗಟ್ಟಿಸಿ ಓದಿದನು. ಶಂಭುರಾಯರು ಕೇಳಿದೊಡನೆ ಗಾಬರಿಯ ಮೂರ್ತಿಯಾದರು. 'ಏನದು ಸುದ್ದಿ ?' ಎನ್ನುತ್ತ ಹತ್ತಿರ ಬಂದು ಕುಳಿತರು. ಪೂರ್ಣ ಓದಲಾಗಿ ಅದು ಬೇರೊಬ್ಬನದೆಂದು ಗೊತ್ತಾಯಿತು. ಅಲ್ಲಿಂದ ಮುಂದೆ ಮಿದನಾಪುರ ನೆರೆಹಾವಳಿಯ ಬಗ್ಗೆ ಒಬ್ಬ ಬಂಗಾಲ ಮುಖಂಡರ ಹೇಳಿಕೆಯಿತ್ತು. ಅದರ ವಿಷಯ ಬರುತ್ತಲೆ ಕೆಳಮನಿ ನೆನೆಸಿಕೊಂಡು ಒಮ್ಮೆಲೆ ಅಂದನು. 'ಈಗ ನೆನಪಾಯಿತು. ೭-೮ ದಿನದ ಹಿಂದೆ ಅವನು ನಮ್ಮ ಮಾತಿನಲ್ಲಿ ಅಂದಿದ್ದ; 'ಅಲ್ಲಿ ಹುಳದಂತೆ ಜನ ಸಾಯುವರು. ನಾವು ಕೂಡಲೆ ಆರೈಕೆ ಮಾಡಲಿಕ್ಕೆ ಹೋಗಬೇಕು' ಎಂದು. ನಾನು ಚೇಷ್ಟೆ ಯಲ್ಲಿ 'ಒಳ್ಳೇದು, ಇಂದೇ ರಾತ್ರಿ ಗಾಡಿಗೆ ಹೊರಡಪ' ಅಂದಿದ್ದೆ.' 'ಹಿಂಗ ? ಅಲ್ಲಿಗೆ ಹೋಗ್ಯಾನೋ ಏನೊ ?' ಎಂದು ಶಂಭುರಾಯರು ಕುತೂಹಲ ತೋರಿಸಿ ದರು. 'ಛೇ, ಅದು ಸಾಧ್ಯವೇ ಇಲ್ಲ. ಅಭ್ಯಾಸದ ಸಲುವಾಗಿ ಎಲ್ಲಿಯೂ ಹೋಗ ಬಾರದೆಂದು ಗಟ್ಟಿಮನಸ್ಸು ಮಾಡಿ ಕೂತವನು ಬಂಗಾಲಕ್ಕೆ ಹೋಗುವದು ಶಕ್ಯವೇ ಇಲ್ಲ. 'ಪರೀಕ್ಷಾಕ್ಕೆ ಕೂಡೋದು ಮೊದಲನೇ ಕೆಲಸ.' ಎಂದು ಹಗಲೆಲ್ಲ ನನ್ನ ಮುಂದೆ ಹೇಳತಿದ್ದ.' ಎಂದು ಕೆಳಮನಿ ಆಡಿದನು. ಚಳವಳಿಯಲ್ಲಿ ತಿಳಿ ಯದಂತೆ ಸೇರಿರುವದೇ ಹೆಚ್ಚುಸಂಭವವೆಂದು ಶಂಭುರಾಯರು ಅಂದಾಜು ಮಾಡಿ ದರು. 'ಇನ್ನೇನು ಹುಡುಕಿ ಉಪಯೋಗ ? ಬಂದಾಗ ಬರಲಿ. ಆತು, ಪರೀಕ್ಷಾ ಹೋತು, ನಮ್ಮಗ ನಮ್ಮ ಪ್ರಾಣ ಹಿಂಡಿದ, ತನ್ನ ಆಯುಷ್ಯ ಹಾಳು ಮಾಡಿದ' ಎಂದವರು ಗಂಗಾಧರನೊಡನೆ ಹೊರಟರು. ಏನಾದರೂ ಸುದ್ದಿ ತಿಳಿದ ಕ್ಷಣ ತಂತಿ ಮಾಡಲು ಕೆಳಮನಿಗೆ ಹೇಳಿ ಅಮೃತನ ಸಾಮಾನುಗಳನ್ನೆಲ್ಲ ತಗೊಂಡು ಗಾಡಿ

ಹತ್ತಿದರು. ಬಿಟ್ಟು ಬಿಟ್ಟು ಸುರಿಯುವ ಮಳೆಗಾಲದ ಸರಿಗಳಂತೆ ಪ್ರವಾಸದಲ್ಲೆಲ್ಲ ಅವರ ಕಣ್ಣಿಂದ ಧಾರೆ ಹರಿಯುತ್ತಿತ್ತು, ಎದೆ ಬೇಯುತ್ತಿತ್ತು.

ಶಂಭುರಾಯರು ಊರಿಗೆ ಹೋದ ಮೇಲೆ, ಊಟ ಉಡಿಗೆ ಬಿಟ್ಟು ಕುಳಿತ ಪಾರ್ವತಿಬಾಯಿ ಮಗನದು ಏನೂ ಪತ್ತೆಯಾಗಲಿಲ್ಲವೆಂದು ತಿಳಿದು ಗೋಳೋ ಎಂದು ಅತ್ತಳು. ಕುಲದೇವತೆ ತುಳಜಾಭವಾನಿಗೂ ಗಾಣಗಾಪುರದ ದತ್ತಗುರುವಿಗೂ ಹರಕೆಹೊತ್ತಳು. ಮನೆಯನ್ನು ನಿರಾಶೆಯ ನೆರಳು ಕವಿಯಿತು. ಸುದ್ದಿ ಕೇಳಲು ಬಂದವರ ಸಮಾಧಾನದ ಮಾತುಗಳೂ ಎದೆಗೆ ಚುಚ್ಚಿ ಕಣ್ಣೀರನ್ನು ತರಿಸುತ್ತಿದ್ದವು. ಇಷ್ಟುದಿನ ಮನೆತನದ ಕೀರ್ತಿಮಂದಿರವಾಗಲೆಂದು ಕಟ್ಟುತ್ತಿದ್ದ ಗೋಪುರ ದೊಪ್ಪನೆ ಕಳಚಿ ಬಿದ್ದಂತಾಗಿತ್ತು. ದೇಶಸೇವೆಗೆ ಹೋಗಿರಬಹುದು, ಹೋದರೆ ಅವನನ್ನು ಹರಸೋಣ ಎಂಬ ಧೈರ್ಯವಾಗಲಿ ರಾಷ್ಟ್ರೀಯ ವೃತ್ತಿಯಾಗಲಿ ತಂದೆತಾಯಿಗಳಲ್ಲಿ ಇರುವುದು ಇಂದು ಅಪರೂಪವೇ. ದಾಸ್ಯದಿಂದ ನಮ್ಮ ಜನಕ್ಕೆ ದೊರೆತ 'ಲಾಭ'ಗಳಲ್ಲಿ ಅನಿವಾರ್ಯವಾದ ದೃಷ್ಟಿಸಂಕೋಚವೂ ಹೆದರ ಬಡಕತನವೂ ಎದ್ದು ಕಾಣುವಂತಿವೆ. ದಾಸ್ಯ ಹೋಗದೆ ಇವು ಹೋಗುವಂತಿಲ್ಲ. ಇವನ್ನು ಕಳೆದೊಗೆಯದೆ ದಾಸ್ಯ ಹೋಗುವಂತಿಲ್ಲ. ೩-೪ ದಿನ ಸಿದ್ದೆ ಸೇರಡಿಕೆಯಿಲ್ಲದೆ ಜಡವಾಗಿ ಸಾಗಿದವು. ತರುವಾಯ ಒಂದು ನಸುಕಿನಲ್ಲಿ ಪಾರ್ವತೀಬಾಯಿಯ ಕನಸಿನಲ್ಲಿ ಅಮೃತ ಬಂದು ತನ್ನ ಕಾಳಜಿ ಮಾಡಬಾರದೆಂದೂ ದೂರ ಇದ್ದರೂ ಸುರಕ್ಷಿತ ಇರುವೆನೆಂದೂ ಹೇಳಿದ ಹಾಗಾಯಿತು. ಬೆಳಗಾದ ಮೇಲೆ ಆ ಕನಸನ್ನು ಧೇನಿಸುತ್ತ ಎಲ್ಲರೂ ಕೂತಿದ್ದರು. ಅದೇಕೋ ಮುಚ್ಚು ಹಾಕಿದ ಮೋಡದಲ್ಲಿ ಒಮ್ಮೆಲೆ ರವಿಕಿರಣ ಹಾಯ್ದು ಹೊರಬಂದಂತೆ ಉಲ್ಲಾಸ ಸುಳಿಯಿತು. ಆವೊತ್ತು ಸಂಜೆ ಟಪಾಲಿಗೆ ಒಂದು ಪತ್ರ ಬಂದಿತು. ಒಡೆದು ನೋಡಲಾಗಿ ಅದು ಅಮೃತನದೇ ಎಂದು ತಿಳಿಯಿತು. ಅದನ್ನೋದುವ ಮೊದಲು ಸಂತೋಷದ ಮಾದಕಸೇವನೆಯಿಂದ ಅಮಲೇರಿದಂತೆ ಎಲ್ಲರೂ ಹುಚ್ಚೆದ್ದು ಕುಣಿದರು. ಶಂಭುರಾಯರ ಮೋರೆ ಇಷ್ಟಗಲವಾಯಿತು. ಗುರುನಾಥ ಕಾದನೆಂದು ಪಾರ್ವತಿಬಾಯಿ ಅಂದಳು. ಸಣ್ಣ ಹುಡುಗರು 'ಅಣ್ಣನ ಪತ್ರಬಂತು' ಎಂದು ತಿರುತಿರುಗಿ ಅನ್ನುತ್ತ ಗಿಮಿಗಿಮಿ ತಿರುಗಿದರು. 'ನಾ ಹೇಳಿರಲಿಲ್ಲೇನು' ಎಂದು ಸುಂದರಾ ತನ್ನ ಭವಿಷ್ಯ ಹೇಳುವ ಶಕ್ತಿಯನ್ನು ಮೆಚ್ಚಿಕೊಂಡಳು. ಆಮೇಲೆ ಶಂಭುರಾಯರು ಪತ್ರ ಓದಿದರು. ಅದರ ಪ್ರತಿಯೊಂದು ಮಾತನ್ನು ರೇಡಿಯೊ ಭಾಷಣವನ್ನು ಮೊದಲ ಸಲ ಕೇಳುವ ಕುತೂಹಲದಂತೆ ಉಳಿದೆಲ್ಲರೂ ಕೇಳಿದರು.

ಅದು ಕಲಕತ್ತೆಯಿಂದ ಬಂದಿತ್ತು. ತಾನು ಅಲ್ಲಿಗೆ ಹೋದದ್ದೇಕೆ ಎಂಬುದನ್ನು ತಿಳಿಸಿ, ಅಪ್ಪಣೆ ತಗೊಳ್ಳದೆ ಬಂದದ್ದಕ್ಕೆ ಅಮೃತ ಕ್ಷಮೆ ಕೇಳಿದ್ದನು. ತನ್ನ ಬಗ್ಗೆ ಎಷ್ಟೂ ಚಿಂತೆ ಮಾಡಬಾರದೆಂದೂ ವಾರಕ್ಕೊಮ್ಮೆ ಪತ್ರ ಬರೆಯುವೆನೆಂದೂ ಕಾಣಿಸಿ ಊರಿಂದಲೂ ತಪ್ಪದೇ ಬರೆಯಬೇಕೆಂದೂ ಕೇಳಿಕೊಂಡಿದ್ದನು. 'ಅಭ್ಯಾಸ ಮಾಡಲು ಅತ್ಯಂತ ಪ್ರಯತ್ನ ಮಾಡಿದೆ. ಆದರೆ ಇಲ್ಲಿಯ ದುಃಖದ ಕರೆ ನನ್ನ ಕೂಡಿಸಗೊಡಲಿಲ್ಲ. ಅಂತೇ ಹೊರಟು ಬಂದೆ. ದೂರ ಹೋದಂತೆ ಊರ ನೆನವು ಹಗಲೆಲ್ಲ ಆಗುತ್ತದೆ. ಆದರೆ ಕರ್ತವ್ಯ ತಡೆದು ನಿಲ್ಲಿಸುತ್ತದೆ. ಸಿಮುಗಾದ ದುಃಖವನ್ನು ನುಂಗಿಕೊಳ್ಳಬೇಕು. ಅಪ್ಪನಿಗೆ ಸಮಾಧಾನ ಮಾಡ ಬೇಕು. ತಂಗೆಂದಿರಿಗೆ ತಮ್ಮಂದಿರಿಗೆ ತಿಳಿಸಿ ಹೇಳಬೇಕು' ಎಂದು ಮುಂತಾಗಿ ಆ ಪತ್ರ ಕೊನೆಗೊಂಡಿತ್ತು. ಶಂಭುರಾಯರ ದುಃಖ ಕಡಿಮೆಯಾಗಲಿಲ್ಲ. ಆದರೂ ಮನಸ್ಸಿನ ಮೇಲಿನ ಭಾರವಷ್ಟೇ ಇಳಿಯಿತು. ಚಳವಳಿಯಲ್ಲಿ ಸೇರ ಲಿಲ್ಲವಲ್ಲ, ಅಷ್ಟೇ ಸಾಕು ಎಂದುಕೊಂಡರು. ಎಲ್ಲಿಗೇ ಹೋಗಲಿ, ಮಗ ಬದುಕಿರುವನೆಂದು ಪಾರ್ವತೀಬಾಯಿ ಉಸ್ಸೆಂದಳು. ಮರುದಿನ ಕೆಳಮನಿಯಿಂದ ತಂತಿ ಬಂತು, ತನಗೆ ಅಮೃತನ ಪತ್ರ ಬಂದಿರುವದೆಂದು. ತಮಗೂ ಬಂದಿರುವ ದೆಂದು ಶಂಭುರಾಯರು ಅವನಿಗೆ ಬರೆದು ತಿಳಿಸಿದರು. ಅಮೃತನ ಕಲಕತ್ತೆಯ ಪತ್ತೆಯ ಮೇಲೆ ಅವನಿಗೆ ವಿಸ್ತಾರವಾದ ಒಂದು ಪತ್ರ ಬರೆದರು. ಸುರಕ್ಷಿತ ವಾಗಿದ್ದ ಬಗ್ಗೆ ಸಮಾಧಾನ ವ್ಯಕ್ತ ಮಾಡಿಯೂ, ಅವನ ಮೂರ್ಖತನ ಹಾಗೂ ಹೊಣೆಗೆಟ್ಟ ನಡತೆಯನ್ನು ಕುರಿತು ಬಹಳ ನೊಂದುಕೊಂಡು ಬರೆದು, ಪತ್ರ ಮುಟ್ಟಿದಾಕ್ಷಣ ಹೊರಟು ಬರಬೇಕೆಂದೂ ದೇಶಸೇವೆಯ ಹುಚ್ಚು ಸಾಕೆಂದೂ ಜೋರಾಗಿ ವಿಧಿಸಿದರು. ತಮ್ಮ ಪತ್ರ ನೋಡಿ ಅವನು ಹೊರಟು ಬರಬಹು ದೆಂದೂ ಅಲ್ಲಿಂದ ಮತ್ತೆ ಕಾಲೇಜಿಗೆ ಹೋಗಿ ಪರೀಕ್ಷೆಗಾಗಿ ಓದಬಹುದೆಂದೂ ಅವರಿಗೆ ಆಶೆ ಹುಟ್ಟಿತು. ೧೦-೧೨ ದಿನದ ಮೇಲೆ ತಡವಾಗಿಯೆ ಅವನಿಂದ ಉತ್ತರ ಬಂದಿತು. ಆದರೆ ಅದು ಮಿದನಾಪುರ ಜಿಲ್ಲೆಯ ಕೊಂತಾಯಿ ಎಂಬ ಊರಿನಿಂದ. ಕಲಕತ್ತೆಯಿಂದ ಕೊಂತಾಯಿಗೆ ಹೋಗಿ ಕೆಲಸಕ್ಕೆ ಮೊದಲು ಮಾಡಿದ್ದು ಅದರಲ್ಲಿ ಬರೆದಿತ್ತು. ಕ್ಷೇಮಸಮಾಚಾರ ಹೊರತಾಗಿ ಶಂಭುರಾಯರು ಎತ್ತಿದ ಮಾತಿಗೆ ಯಾವ ಉತ್ತರವೂ ಇರಲಿಲ್ಲ. ಬರುವುದಂತೂ ದೂರೇ ಉಳಿಯಿತು. ಅವರು ಸಿಟ್ಟು ಬೆಂಕಿಯಾದರು. ಹೆಂಡತಿಯ ಮುಂದೆ ಒದರಾಡಿದರು ; 'ಇವನ ದೆಸಿಂದ ನಮ್ಮ ಮನಿಮಾರು ಹಾಳುಮಾಡಿಕೊಂಡು ಜೀವ ವತ್ತಿಯಿಟ್ಟು ಕಲಿಸಿದಿವಿ, ಆಯ್ತು ಹೊತ್ತಿಗೆ ಫರಾರಿ ಆದ. ನೋಡಿದ್ಯಾ

ನಿನ್ನ ಮಗನ ಪ್ರತಾಪ! ಎಂಥಾ ಕೆಟ್ಟ ಕಾಲ ಬಂದಾವ ಏನು ಸುದ್ದಿ! ಕಾಳ ಸಿಗವಲ್ಲವು. ಕೂಳಿಗೆ ಗತಿಯಿಲ್ಲ. ಇವ ದೇಶಸೇವಾಂತ ದೇಶಾಂತರ ಹೋಗ್ಯಾನ. ತಿರುಗಿ ಹೊರಟ ಬಾ ಅಂತ ಬರದರ ಅದರ ಮಾತೇ ಇಲ್ಲ! ಎಷ್ಟು ಅಶಿಕ್ಷಾ ಇದು! ಕಲಿಸಿದ್ದು ನಮ್ಮದೇ ಮೂರ್ಖತನ ಆತು.'' ತಮ್ಮ ಬತ್ತಳಿಕೆಯಲ್ಲಿಯ ಎಲ್ಲ ಬಾಣಗಳನ್ನು ಮಗನನ್ನುಗುರಿಯಿಟ್ಟು ಶಂಭುರಾಯರು ಹೆಂಡತಿಯ ಮೇಲೆ ಎಸೆದರು. ಅವಳೇನು ಮಾಡಬೇಕು? ಅಡಿಗೆ ಮಾಡುತ್ತ ಬಕ್ಕರಿ ಬಡಿಯುವ ಪರಾತಿನ ಮೇಲೆ ಪಟಪಟ ಹನಿಯುದುರಿಸುತ್ತ ಹಿಟ್ಟನ್ನು ನಾದಿದಳು. ಮಾತು ಮೀರಿದ ದುಗುಡ ಒತ್ತರಿಸಿ ಬಂದಿತು. ಸಂಜೆಯ ಹೊತ್ತು ಶಂಭುರಾಯರ ಸಿಟ್ಟಿನ ಅವತಾರ ಸ್ವಲ್ಪ ಇಳಿಯಿತೆಂದು ನೋಡಿ ಪಾರ್ವತಿಬಾಯಿ ಮೆತ್ತಗೆ ಹೇಳಿದಳು: 'ಹಾಂಗೆಲ್ಲಾ ಸಿಟ್ಟಿಗೆದ್ದು ಜೀವಕ್ಕ ತ್ರಾಸ ಮಾಡಿಕೋಬ್ಯಾಡಿರಿ. ಎಲ್ಲಿ ಹೋಗತಾನ, ಇಂದಿಲ್ಲ ನಾಳೆ ಬಂದ ಬರತಾನ. ಸುರಕ್ಷಿತ ಇಟ್ಟಾನಲ್ಲ ಗುರುರಾಯ, ಅಷ್ಟೇ ಸಾಕು. ಮತ್ತ ತಲೆಕೆಡಿಸುಹಂಗ ಹುಚ್ಚುಚ್ಚಾರ ಬರೀಬ್ಯಾಡರಿ. ಜೀವಕ್ಕೇನಾರ ಮಾಡಿಕೊಂಡಾನು' 'ನನಗೆ ಅಷ್ಟು ತಿಳಿಯುವದಿಲ್ಲವೇನು?' ಎಂದು ಶಂಭುರಾಯರು ಮಾತು ಮುಗಿಸಿದರು. ಆದರೆ ಅವರ ಕೋಪವಾರಲಿಲ್ಲ. ಮರುದಿನ ಮಾತ್ರ ಅವರಿಗೆ ಒಂದು ಯುಕ್ತಿ ತೋಚಿತು. ಅಮೃತನು ಎಷ್ಟಾದರೂ ತಿಳುವಳಿಕೆಯುಳ್ಳ ಹುಡುಗ. ಊರಲ್ಲಿ ಮತ್ತು ಮನೆಯಲ್ಲಿ ನಡೆದ ಕಾಳುಕಡಿಯ ಗೋಳಾಟವನ್ನು ಪರಿಣಾಮವಾಗುವಂತೆ ಬಣ್ಣಿಸಿ ಅವನಿಗೆ ಪತ್ರ ಬರೆದರೆ ಅವನು ಕೂಡಲೇ ಹೊರಟು ಬರಬಹುದು ಎಂದು ತಿಳಿದು ಹಾಗೆ ದೊಡ್ಡದೊಂದು ಪತ್ರ ಬರೆದರು. ಎಲ್ಲ ಮಕ್ಕಳಿಂದ ಬೇರೆ ಬೇರೆ ಚೀಟಿಗಳನ್ನು ಬರಸಿ ಅದರಲ್ಲಿ ಹಾಕಿದರು. ಕರುಳಿನ ಕರೆ ಅವನನ್ನು ಕರೆತಂದು ಬಿಡುವುದೆಂದು ಬಲವಾಗಿ ಕೋರಿದರು.

ಹೀಗೆ ಉತ್ತರದ ನಿರೀಕ್ಷೆಯಲ್ಲಿರುವಾಗ ಹೆಚ್ಚಿನ ಗಾಬರಿ ಹುಟ್ಟಿಸುವ ಸಂಗತಿಯೊಂದು ನಡೆಯಿತು. ಜನೆವರಿ ಮೂರನೇ ವಾರದಲ್ಲಿ ಜಪಾನಿ ವೈಮಾನಿಕರು ಕಲಕತ್ತೆಯ ಮೇಲೆ ಬಾಂಬು ಹಾಕಿದರೆಂದು 'ಸಂಯುಕ್ತ ಕರ್ನಾಟಕ'ದಲ್ಲಿ ಸುದ್ದಿ ಬಂದಿತು. ಈ ಮೊದಲು ಕಳೆದ ಡಿಸೆಂಬರದಲ್ಲಿ ಮೊದಲನೆಯ ಸಲವಾಗಿ ನಾಲ್ಕೈದು ಬಾರಿ ಅದೇ ಪಟ್ಟಣದ ಮೇಲೆ ಬಾಂಬು ಬಿದ್ದಿದ್ದವು. ಹೋದ ವರ್ಷದಲ್ಲೆಲ್ಲ ಜಪಾನಿಗಳು ಪೂರ್ವ ಏಶಿಯದಲ್ಲಿ ನುಗ್ಗಿದಲ್ಲೆಲ್ಲ ಜಯಹೊಂದಿ ದ್ವೀಪದ ಮೇಲೆ ದ್ವೀಪವನ್ನು ನುಂಗುತ್ತ ಬ್ರಹ್ಮದೇಶವನ್ನು ಆಕ್ರಮಿಸಿ ಹಿಂದುಸ್ತಾನದ ಹತ್ತಿರಕ್ಕೆ ಬಂದಿದ್ದರು. ಪೂರ್ವಸಮುದ್ರದ ದಂಡೆಯ ಬಂದರಗಳಾದ ಚಿತಗಾಂಗ,

ಕೋಕಿನಾಡ, ವಿಝುಗಪಟ್ಟಣ ಇವುಗಳ ಮೇಲೆ ಕಳೆದ ವರ್ಷದ ಎಪ್ರಿಲ್ ಮೇ ತಿಂಗಳಲ್ಲಿ ಮೊದಲ ಸಲವಾಗಿ ಬಾಂಬೆಸೆದು ಸಾಕಷ್ಟು ಎದೆಗುಂದಿಯನ್ನುಂಟುಮಾಡಿದ್ದರು. ಇದರಿಂದ ಹಿಂದುಸ್ತಾನದ ಮೇಲೇರಿ ಬರುವ ಪೂರ್ವ ಸೂಚನೆಯೆಂದರೆ ಕಲಕತ್ತೆಯ ಮೇಲಿನ ವೈಮಾನಿಕ ಹಲ್ಲೆಯೆಂದು ಎಲ್ಲರ ಭಾವನೆ. ಹಾ ಹಾ ಅನ್ನುವುದರಲ್ಲಿ ಊರಲ್ಲಿ ಸುದ್ದಿ ಹಬ್ಬಿತು. ಯುದ್ಧವೆಂದರೇನು, ದಾಳಿಯೆಂದರೆ ಆಗುವುದೇನು ಎಂಬುವದರ ಅನುಭವವೆಷ್ಟೋ, ಇಲ್ಲಿದ ಅನೇಕ ವರ್ತಮಾನಪತ್ರಿಕೆಯ ಯುದ್ಧನಿರೀಕ್ಷಕರು ದೊಡ್ಡ ಮುತ್ಸದ್ದಿಗಳಂತೆ ಹೀಗೆ ಹೀಗೆ ಆಗುವುದು ನಿಶ್ಚಿತವೆಂದು ಕಾಯಾಸ ಕಟ್ಟಿ ಹೇಳಹತ್ತಿದರು. ರಾಮಾಯಣ ಮಹಾಭಾರತಗಳ ಯುದ್ಧಗಳ ವಾರ್ತೆ ಎಷ್ಟು ರಮ್ಯವೊ ಅಷ್ಟೇ ಇದೂ ಇವರಿಗೆ ರಮ್ಯವಾಗಿತ್ತು. ಇವರಲ್ಲಿ ಕೆಲವರಿಗೆ ಮಾತ್ರ ಕಾಳಿನ ದುರ್ದೆಸೆಯಿಂದ ಕಾಳಗದ ಝಳ ಸ್ವಲ್ಪ ಮಟ್ಟಿಗೆ ತಾಕಿದ್ದಿತಷ್ಟೆ. 'ಕಲಕತ್ತೆಯ ಮೇಲೆ ವಿಮಾನ ದಾಳಿ ಆಯಿತು, ಇನ್ನು ಬಂಗಾಲದಲ್ಲಿ ಜಪಾನಿಗಳು ಸೇರುವರು' ಎಂಬ ಹಾರಸುದ್ದಿಗಳು ಸತ್ಯಸಿದ್ಧಾಂತವಾಗಿ ಗಾಳಿಯಲ್ಲಿ ಸುಳಿದವು. ಮುನಸಿಪಾಲಟಿಯಲ್ಲಿ ಕುಳಿತಾಗಲೆ ಇದು ಗೊತ್ತಾಗಿ ಶಂಭುರಾಯರು ಹೌಹಾರಿ ಮನೆಗೋಡಿ ಬಂದರು. ನೆರೆಮನೆಯ ಮಾತು ಬಾಯಿಕೆಗೋದವ್ವ ಬಾವಿಯ ಮೇಲೆ ನೀರಿಗೆ ಹೋದಾಗ 'ಅಯ್ಯಯ್ಯ ಕಲಕತ್ತಾದ ಮ್ಯಾಲ ಬಾಂಬ ಬಿದ್ದುವಂತ.' ಎಂದು ಪಾರ್ವತಿಬಾಯಿಯ ಮುಂದೆ ಸುದ್ದಿ ಸೂರವ್ವನ ಆತ್ಮೀಯತೆಯಿಂದ ಬಾಯಿ ತೆರೆದು ಹೇಳಿದಳು. ಆಯಿತು. 'ನಮ್ಮ ಅಪ್ಪು ತನ ಗತಿಯೇನವ್ವ, ಇನ್ನು ಹೆಂಗ ಮಾಡಲೆ...' ಎಂದು ಘಾಬರಿ ಘಾಬರಿಯಿಂದ ಕೊಡವನ್ನು ತುಂಬಿಕೊಳ್ಳದೆ ಪಾರ್ವತಿಬಾಯಿ ಮನೆಗೆ ಬಂದಳು. ಶಂಭುರಾಯರನ್ನು ಕರಸಬೇಕೆನ್ನುವಷ್ಟರಲ್ಲಿ ಅವರೂ ಮನೆಗೆ ಬಂದರು. ಮತ್ತೆ ಎಲ್ಲರೂ ಕೂತು ಕಣ್ಣೀರಿಟ್ಟರು. 'ದೂರ ಬ್ಯಾರೆ ಹೋಗ್ಯಾನ. ಈಗೇನ ಕರಕೊಂಡ ಬರುಹಂಗದನ್ರಿ? ತಾರ ಮಾಡಿರಿ, ಮುಟ್ಟಿದ ಘಳಿಗೆ ಹೊರಟು ಬಾ ಅಂತ' ಎಂದು ಹೆಂಡತಿ ಹೇಳಲು ಶಂಭುರಾಯರು ಕೊಡಲೆ ಹೋಗಿ ತಾರು ಕೊಟ್ಟರು. ೨-೩ ದಿನದ ಮೇಲೆ ತಾರಿನಿಂದ ಉತ್ತರ ಬಂತು. 'ನನಗೇನೂ ಆಗಿಲ್ಲ, ಆರಾಮಿದ್ದೇನೆ. ಕಾಳಜಿ ಮಾಡಬೇಡಿರಿ.' ಎಂದು. ಇಷ್ಟಾದರೂ ಬರುವ ಸುದ್ದಿಯೇ ಇಲ್ಲ. ಶಂಭುರಾಯರಿಗೆ ಕೋಪ ಸಹಿಸುವದಾಗಲಿಲ್ಲ. 'ಈ ಶತಮೂರ್ಖಗೇನು ಮಾಡಬೇಕು? ಅವ್ಯಾಕ ಬಂದಾನು ನಿರ್ಲಜ್ಜ? ನಾನು ಹೋಗಿ ದರದರ ಯಳಕೊಂಡು ಬರತೀನಿ' ಎಂದು ಘೋಷಿಸಿಬಿಟ್ಟರು. ಮಗನನ್ನು ಬಯ್ಯುವುದು ಪಾರ್ವತಿಬಾಯರಿಗೆ ಸರಿ

ಬರಲಿಲ್ಲ. ಆದರೆ ಘೋಷಣೆ ಯೋಗ್ಯವೆಂದು ತೋರಿತು. 'ಹಂಗs ಮಾಡಿರಿ' ಎಂದಳು. ಮರುದಿನ ಹೊರಡುವುದೆಂದು ನಿರ್ಣಯವಾಯಿತು. ೭-೮ ದಿನದ ರಜೆ ಯನ್ನು ಪಡೆದರು. ಗಂಗಾಧರನಿಗೆ ಮನೆಯ ಕಡೆಗೆ ನೋಡಬೇಕೆಂದು ಹೇಳಲಿಕ್ಕೆ ಅವನ ಮನೆಗೆ ಹೋದರು. ಅವರು ಹೋಗುವುದು ಅವನ ಮನಸ್ಸಿಗೆ ಎಷ್ಟೊ ಬರಲಿಲ್ಲ. ಯಾಕೆಂದರೆ ರೇಲ್ವೆ ಪ್ರಯಾಣದ ನರಕಯಾತನೆ ಸಹಿಸಿ ಅಮೃತನಿದ್ದ ಲ್ಲಿಗೆ ಹೋಗಿ ಮುಟ್ಟುವುದು ವಯಸ್ಸಾದ ಅವರಿಗೆ ತೀರ ದುಸ್ತರವಾದದ್ದು, ಆದ್ದರಿಂದ ತಾನೊಂದು ಸುದೀರ್ಘ ಪತ್ರ ಬರೆದು ತನ್ನ ಗೆಳೆತನದ ಎಲ್ಲ ವರ್ಚಸ್ಸನ್ನು ಉಪಯೋಗಿಸಿ ಅಮೃತನನ್ನು ಕರಸಿಯೇ ಬಿಡುವೆನೆಂದು ವಚನ ಕೊಟ್ಟು ಅವನು ಹೋಗದಿರಲು ಶಂಭುರಾಯರ ಮನವೊಲಿಸಿದನು. ಹೇಳಿದಂತೆ ದೊಡ್ಡ ಪತ್ರವೊಂದನ್ನು 'ಅರ್ಜಂಟ್' ಎಂದು ಮೇಲೆ ಬರೆದು ಹಾಕಿದನು.

ಜನೆವರಿ ತಿಂಗಳು ಮುಗಿಯುತ್ತ ಬಂದಿತ್ತು. ಮನೆಯಲ್ಲಿ ಕಾಳು ತೀರಿ ದ್ದವು. ಕೈಯಲ್ಲಿ ಪಗಾರವು ಈ ಮೊದಲೇ ತೀರಿತ್ತು. ಶನಿವಾರ ಸಂತೆ ಬಂತು. ಅಕ್ಕಿ, ಜೋಳ-ಬೇಳೆ ಮುಂತಾದ ಸಾಮಾನುಗಳ ಒಂದು ಪಟ್ಟಿಯನ್ನೇ ಪಾರ್ವತಿ ಬಾಯಿ ಕೊಟ್ಟಳು. 'ಇವತ್ತ ತಂದರ ಅಡಿಗಿ ಇಲ್ಲಂದರ ಒಲಿ ಥಣ್ಣಗ' ಎಂದಳು. ಶಂಭುರಾಯರ ಮೋರೆ ಸಣ್ಣದಾಯಿತು. ಕೈಯಲ್ಲಿ ಹಣವಿಲ್ಲೆಂದು ಹೆಂಡತಿಯ ಮುಂದೆ ಹೇಳಬೇಕಾದ ಪ್ರಸಂಗ ಬರಬೇಕೆ? ಮುಂಬಯಿಗೆ ಓಡಾಟ, ತಾರಿನ ಖರ್ಚು ಇವೆಲ್ಲ ಕಾರಣಗಳೇನೊ ಇದ್ದವು. ಆದರೆ ಹೊಟ್ಟೆ ಇವನ್ನು ಕೇಳುವುದೇ? ಚೀಲ ತಗೊಂಡು ಕೆಳಮೋರೆಯಿಂದ ಹೊರಟರು. ತಮ್ಮ ಮುನಸಿಪಾಲಟಿ ಕಾರ ಕೂನರಲ್ಲಿ ಮನೆಯಿಂದ ನೆಟ್ಟಗಿದ್ದ ಸ್ನೇಹಿತರೊಬ್ಬರಿದ್ದರು. ಅವರಿಗೆ ಬಾಯಿ ತೆರೆದು ಸಾಲ ಕೇಳಿದರು. 'ನಮಗೂ ಭಾಳ ಅಡಚಣಿ ಈಗ' ಎಂದವರು ಸ್ವರವೆತ್ತಿ ಕೊನೆಗೆ ಜಿಕೀರಿಯಿಂದ ಐದುರೂಪಾಯಿ ಕೊಟ್ಟರು. ಕೊಡಲಿಕ್ಕೆ ಬೇಕಾದಷ್ಟಿದ್ದರೂ ಶಂಭುರಾಯರಿಂದ ತಿರುಗಿ ಬೇಗ ದೊರೆಯಲಾರದೆಂದು ಅವರ ಮನೋಗತವಿರಬೇಕು. ಶಂಭುರಾಯರು ಪೇಟೆಯಲ್ಲಿ ಹೋಗಿ ನೋಡು ತ್ತಾರೆ. ಆಸೆ ತಿನ್ನುವ ಅಕ್ಕಿಗೆ ರೂಪಾಯಿಗೆ ಮೂರು ಸೇರಿನಂತೆ. ಮುಗ್ಗು ಜೋಳ ರೂಪಾಯಿಗೆ ಆರು ಸೇರಿನಂತೆ ಇದ್ದವು. ಆ ವರುಷ ವಿಜಾಪುರ ಜಿಲ್ಲೆಯಲ್ಲಿ ಮಳೆ ಎಷ್ಟೊ ಆಗಲಿಲ್ಲ: ಆದಷ್ಟು ಸಕಾಲಕ್ಕೆ ಆಗಲಿಲ್ಲ; ಬೆಳೆಯ ಆಸೆ ಕೈಬಿಟ್ಟಿತು. ಮೊದಲಿನ .ಸಂಗ್ರಹವನ್ನು ಹೆಚ್ಚು ವಿಶಾಲದೃಷ್ಟಿಯ ವರ್ತಕರು ಜಿಲ್ಹೆಯಿಂದ ಹೊರಗೆ ವ್ಯಾಗನ್ನು ತುಂಬಿ ತುಂಬಿ ಕಳಿಸಿದರು!

ಸರಕಾರಕ್ಕೆ ಮುನ್ನೋಟವಿರಲಿಲ್ಲ. ಅಂತೂ ಬೇಸಿಗೆಯ ಉರಿಬಿಸಿಲಿನೊಡನೆ ಬರಗಾಲದ ಬೇಗೆ ಈ ಜಿಲ್ಲೆಯಲ್ಲಿ ವ್ಯಾಪಿಸುವುದೆಂದು ಎಲ್ಲರೂ ಭಯಗ್ರಸ್ತರಾಗಿದ್ದರು. ಇಂದು ಸಿಗುವ ತುತ್ತು ಅನ್ನವೂ ಕೂಡ ಮುಂದಿನ ಭೀತಿಯಿಂದ ಹೊಟ್ಟೆಗೆ ಹತ್ತುವಂತಿರಲಿಲ್ಲ. ಶಂಭುರಾಯರು ಐದೂರೂಪಾಯಿಗಳನ್ನೂ ಖರ್ಚು ಮಾಡಿ ಸಿಕ್ಕಂಥ ಸಾಮಾನು ಸಿಕ್ಕಷ್ಟು ತಂದು ಹಾಕಿದರು. 'ಇವೇನು ಒಂದು ವಾರಸೈತ ಆಗೂದಿಲ್ಲ' ಎಂದು ಪಾರ್ವತಿಬಾಯಿ ಕಾಳು ನೋಡಿ ಪನಿಯೆಳೆದಳು. 'ಮುಂದಿನದು ಮುಂದ' ಎಂದು ಉತ್ತರ ಬಂದಿತು. 'ಅಲ್ಲ ಇಂಥ ಅಕ್ಕೀ ಅನ್ನ ಹುಡುಗೂರು ಹೆಂಗ ತಿಂಪಾವು?' ಮತ್ತೊಂದು ಬಾಣ ಬಿಟ್ಟಳು. 'ತಿನಕೋತ ಹೋದರ ತಾನ: ಸೂಧಾ ಆಗತದ. ಬ್ಯಾರೆ ಸಿಗೋದ್ಯ ಇಲ್ಲಾ' ಎಂದರು ರಾಯರು. 'ಏನು ರೂಢಾನೊ ಏನೊ! ಈ ವರ್ಷ ಮಳಿ ಬೆಳಿ ಇಲ್ಲದಂಗಾತು. ಹಿಂಗಾಗಿ ಸಿರೂರಿಂದ ಏನೂ ಸಿಗುಹಂಗಿಲ್ಲ. ಸುಡುಗಾಡ ಸಿವ್ಮ್ರದರ ನಾಲ್ವತ್ತು ರೂಪಾಯಿ ದರಿದ್ರ ನೌಕರಿ! ಇದರಾಗ ಹೆಂಗ ಸಂಸಾರ ನಡೀಬೇಕು? ಕಾಲ ಭಾಳ ಕಠಿಣ ಬಂತು' ಈ ಮೊನೆಯ ತಿವಿತದಿಂದ ಶಂಭುರಾಯರು ಗಾಸಿಯಾದರು. ಸ್ವಾಭಿಮಾನ ಮುಕ್ಕಾಯಿತು. ಆದರೆ ಕ್ರೂರವಾದ ಸತ್ಯವನ್ನು ಯಾರು ಬದಲಿಸಬಲ್ಲರು? 'ನಾ ಆರ ಏನ ಮಾಡಲಿ? ನಮಗೇನು ಜಮೀನಿನ ಉತ್ಪನ್ನ ಕಡಿಮೇ? ಇವ ಮುಂದಾಗಲಿ, ಡಾಕ್ಟರ ಆಗಿ ಕಿಸೆ ತುಂಬ ಘಳಿಸಲಿ ಎಂದು ಹಿಂದಿನದೆಲ್ಲಾ ಉತ್ಪನ್ನ ಒಯ್ದು ಇವನ ಹೆಣಕಿಟ್ಟೆ. ಈ ವರ್ಷಂತೂ ಆಶಾನೇ ಇಲ್ಲ. ಒಂದು ಹೋಗಿ ಒಂದಾತು!' ಈ ಮಾತಿನಿಂದ ಪಾರ್ವತಿಬಾಯಿ ಬಹಳ ವ್ಯಥೆಪಟ್ಟಳು. 'ಹಂಗ್ಯಾಕ ಆಡತೀರಿ ಅಭದ್ರ ಮಾತು! ಈ ವರ್ಷ ಹೋದರ ಮುಂದಿನ ಸಾಲಿ ಆರ ಪರೀಕ್ಷಾಕ್ಕ ಕೂತು ನನ್ನ ಅಮೃತ ಪಾಸಾಗಿ ಬರತಾನ. ಡಾಕ್ಟರ ಆಗತಾನ' ಎಂದು ತನ್ನ ಆಶೆಯ ಗಾಳಿಗೋಪುರವನ್ನು ಕಟ್ಟಿದಳು. ಇನ್ನೂ ಅಡಿಗೆ ಆಗಬೇಕಾಗಿತ್ತು. ಮಾತು ಅಲ್ಲಿಗೇ ನಿಂತಿತು. ಏಳೆಂಟು ದಿನದೊಳಗೆ ಅಮೃತನಿಂದ ಪತ್ರ ಬಂದಿತು. ಅದರಲ್ಲಿ ಗಂಗಾಧರನಿಗೆ ಉತ್ತರವೂ ಇತ್ತು. ಶಂಭುರಾಯರಿಗೆ ಬರೆದ ಪತ್ರವೂ ಇತ್ತು. ಈ ಸಾರೆಯ ವಿಶೇಷವೆಂದರೆ ಕೊಂತಾಯಿಯಿಂದ ಅವನು ಕಾಲೀಚರಣಪುರಕ್ಕೆ ಹೋಗಿದ್ದನು. ಅಲ್ಲಿಯ ರಾಮಕೃಷ್ಣಮಠದ ದವಾಖಾನೆಯೊಂದರಲ್ಲಿ ನೆರೆಹಾವಳಿ ಪೀಡಿತರ ನಿತ್ಯ ಸೇವೆಯಲ್ಲಿ ತಾನು ತೊಡಗಿರುವುದಾಗಿಯೂ ಅದರಿಂದ ಮನಸ್ಸಿಗೆ ಎಂದಿಲ್ಲದ ಸಮಾಧಾನವೆಂದೂ ಬರೆದಿದ್ದನು. ತನ್ನ ಬಗ್ಗೆ ಎಷ್ಟೂ ಯೋಚಿಸಬಾರದೆಂದೂ

ಬರಬೇಕೆಂದು ಆಗಾಗ ಎನಿಸುವುದಾದರೂ ಈ ಸದ್ಯ ಕೆಲಸವನ್ನು ಅರ್ಧಕ್ಕೆ ಬಿಟ್ಟು ಬರಲಾರೆನೆಂದೂ ಸ್ಪಷ್ಟವಾಗಿ ತಿಳಿಸಿದ್ದನು. ಗಂಗಾಧರನ ಬಿನ್ನಹವೆಲ್ಲ ಬರಡಾಯಿತು. ತಾನಿರುವುದು ಪಶ್ಚಿಮ ಬಂಗಾಲದಲ್ಲಿ ದೂರದೊಂದು ಹಳ್ಳಿ. ಕಲಕತ್ತೆಗೆ ಬಾಂಬಿನ ಭಯವೆಷ್ಟೋ ಅಷ್ಟು ಆ ಹಳ್ಳಿಗೆ ನಿರ್ಭಯವೆಂದೂ ಈ ವಿಷಯಕ್ಕೆ ಹೆದರಬಾರದೆಂದೂ ತಾಯಿತಂದೆಗಳಿಗೆ ಬೇಡಿಕೊಂಡಿದ್ದನು. ತನ್ನೂರಲ್ಲಿಯ ಕಾಳು ಕಡ್ಡಿಯ ಗೋಳಿನಿಂದ ಅವನ ಜೀವ ಮರುಗಿತು. ಆದರೆ ಅವನು ಗಂಗಾಧರನಿಗೆ ಬರೆದಿದ್ದನು : 'ಗಂಗಾಧರ, ಇಲ್ಲಿಯ ಲಕ್ಷಾವಧಿ ಜನದ ಯಮ ಯಾತನೆಗಿಂತ ಯಾವುದು ಹೆಚ್ಚಿನ ಗೋಳು ? ಪ್ರತಿಕ್ಷಣವೂ ದುಡಿದು ಆರೈಕೆ ಮಾಡಿದರೂ ಕೆಲವರನ್ನು ಮಾತ್ರ ಬದುಕಿಸಬಹುದು. ಇಲ್ಲವಾದರೆ ಇಲ್ಲಿ ಎಲ್ಲರೂ ಯಮಲೋಕದ ಹೊಸತಿಲಲ್ಲಿ ಒಂದು ಕಾಲಿಟ್ಟವರೇ ಆಗಿದ್ದಾರೆ. ಇಂಥ ಸೇವೆಯ ಸಂಧಿ ನಿನಗೆ ದೊರೆತರೆ ನೀ ಕೂಡ ಬಿಟ್ಟು ಬರಲಾರೆ.' ಇದನ್ನೆಲ್ಲ ಕೇಳಿ ಶಂಭುರಾಯರು ತಪ್ತರಾದರು. 'ತಾ ಒಬ್ಬ ಮಹಾ ಮೂರ್ಖ ಹೋದದ್ದಲ್ಲದೆ ಗಂಗಾಧರನ್ನ ಕರಿತಾನ. ಬಿಟ್ಟು ಬರೂಹಂಗ ಆಗೂದುಲ್ಲಂತ ! ಹೆಂಗಾದೀತು ? ನಾಚಿಕೀನs ಬಿಟ್ಟಮ್ಯಾಲೆ. ತನ್ನಿಂದ ಜೀವ ಸುಟ್ಟು ಸುಣ್ಣಾದವರು ಸತ್ತು ಪಿಶಾಚಿ ಆಗಿ ಗಂಟು ಬಿದ್ದಾಗ ಗೊತ್ತಾಗ್ತೀತು ! ' ಆಡಬಾರದ ಮಾತು ಅಡಿದ್ದಾಯಿತು. ಮತ್ತೆ ಅವರಿಬ್ಬರ ಕಣ್ಣಲ್ಲಿ ಅಶ್ರುಧಾರೆ. ಕಾಲರಾಯ ಅವನ್ನೊರಸಿ ಮುಂದೆ ಸಾಗಿದನು. ಮೂರು ನಾಲ್ಕು ದಿನಗಳಾದಮೇಲೆ ಮನೆಯಲ್ಲಿ ಎರಡು ಸಣ್ಣ ಹುಡುಗರು ಜ್ವರದಿಂದ ಹಾಸಿಗೆ ಹಿಡಿದವು. ಒಂದು ರಾತ್ರಿ ಜ್ವರ ನೂರನಾಲ್ಕರ ವರೆಗೆ ಹೋಯಿತು. ಗಾಬರಿಗೊಂಡು ಡಾಕ್ಟರರನ್ನು ಕರೆದರು. ಅವರ ಔಷಧ-ಇಂಜೆಕ್ಷನ್ನು ಸುರುವಾದವು. ಮುಂದಿನ ತಿಂಗಳಿನ ಪಗಾರವನ್ನೆಲ್ಲ ನುಂಗುವ ಬಕಾಸುರನು ಹುಟ್ಟಿಬಂದನೆಂದು ಶಂಭುರಾಯರು ಚಿಂತೆಯಿಂದ ನವೆದರು. ಮನೆಯಲ್ಲಿ ಅಕ್ಕಿ ತೀರಿಹೋಗಿತ್ತು. ತರಬೇಕೆಂದರೆ ಕೈಯೊಳಗೆ ಕಾಸಿಲ್ಲ. ಸಾಲ ಕೇಳಲು ಮೋರೆಯಿಲ್ಲ. ಕಡೆಗೆ ನೆರೆಹೊರೆಯವರಲ್ಲಿ ಬೆಳ್ಳಿಯ ತಾಟನ್ನು ಒತ್ತೆಯಿಟ್ಟು ಪಾರ್ವತಿಬಾಯಿ ಹತ್ತು ರೂಪಾಯಿ ತಂದಳು. ಅದರಿಂದ ಮತ್ತೆ ಸಂಸಾರರಥ ಕುಂಟುತ್ತ ಕೂರುತ್ತ ಸಾಗಿತು. ಪೇಟೆಯ ಅಕ್ಕಿ ಜಡ್ಡಿನಿಂದ ಎದ್ದ ಮಕ್ಕಳಿಗೆ ಹೋಗದಾಯಿತು. ಸಣ್ಣಕ್ಕಿಯನ್ನು ಎಲ್ಲಿಂದ ತರಬೇಕು ? [illegible] ಕೇವಲ [illegible] ಯಜ

ಮಾನರು ಕೆಲವು ದಿನಸ ಹಿಂದೆ ಅದೇ ಊರಿಗೆ ಮಾಮಲೇದಾರರಾಗಿ ಬಂದಿದ್ದರು. ಅವರಲ್ಲಿ ಹೋಗಿ ಅಲ್ಪರಿದು ಬೇಡಿ ಒಂದು ಹಿಡಿಯಷ್ಟು ಸಣ್ಣಕ್ಕಿಯನ್ನು ತಂದಳು. ಅದೊಂದು ದಿನದ ಮಟ್ಟಿಗೆ ಮಾತ್ರ ಮಕ್ಕಳಿಗೆ ಸವಿಯನ್ನವನ್ನು ಒದಗಿಸಿಕೊಟ್ಟಿತು. ಮುಂದೆ? ಇದಕ್ಕೆ ಉತ್ತರವೇ ಇಲ್ಲ. ಜನೆವರಿಯ ಪಗಾರ ಕೈಗೆ ಬಂದಿತು. ಬಂದು ಸುಖವನ್ನೇನು ತರಲಿಲ್ಲ. ಅವರವರಿಗೆ ಕೊಡುವುದು ಹೆಚ್ಚಾಗಿತ್ತು. ಡಾಕ್ಟರರಿಗೆ ಸ್ವಲ್ಪ ಮಾತ್ರ ಕೊಟ್ಟು ಉದ್ರಿ ಹೇಳಿ ಉಳಿದ ಅತ್ಯಾವಶ್ಯಕ ಖರ್ಚು ಮಾಡಿದರು. ಇನ್ನು ಮೇಲೆ ಅಕ್ಕಿಯ ಊಟ ಕಡಿಮೆ ಮಾಡಿ ಎರಡು ಹೊತ್ತು ಬಕ್ಕರಿಯನ್ನು ತಿನ್ನಬೇಕು. ಹೊತ್ತು ಬಂದಂತೆ ಹೋಗದಿದ್ದರೆ ಹೇಗೆ ಎಂದು ರಾಯರು ಕಟ್ಟಳೆ ಮಾಡಿದರು. 'ಆತು ಒಕ್ಕಲಿಗೇರ ಪಂಗ ಆಗಂತೀರಿ ಹೌದಲ್ಲೊ. ಬಕ್ಕರಿ ಬಡಿಯುವರ ಭವಣಿ ನಿಮಗೇನು ಗೊತ್ತು ?' ಎಂದು ಮುಂತಾಗಿ ಗೃಹಿಣಿಯ ಗುಡುಗು ಕೇಳಿತು. ಅಷ್ಟೊತ್ತಿಗೆ ಮನೆಯ ಕೆಲಸಗಿತ್ತಿ ಈರವ್ವ ಅಲ್ಲಿಗೆ ಬಂದಳು. 'ಈರವ್ವ ನಿನ್ನ ಪಗಾರ ತಗೊಂಡು ಹೋಗು' ಎಂದರು ರಾಯರು. ಅವಳ ಪಗಾರವೆಂದರೆ ಒಂದುವರೆ ರೂಪಾಯಿ. ಅದರಲ್ಲಿ ಕಸ- ಮುಸರೆ, ಒಗೆತವನ್ನು ಅವಳು ಮಾಡುತ್ತಿದ್ದಳು. 'ನನಗೇನು ಬ್ಯಾಡರಿ' ಅಂದಳು ಈರವ್ವ. 'ಯಾಕ ಈರವ್ವ ಹಿಂದಾಗಡೆ ಬರತೀಯಾ?' ಎಂದು ಯಜಮಾನತಿ ಕೇಳಿದಳು. 'ಯಾವಾಗಾರ ಒಯ್ದೇನು ಬಿಡಿರಿ, ಆಟ ರಾಗ ಬಗಿಪರಾಣಿಲ್ಲ ಬಾಯರ. ದಿವಸ ಕಾಲ ಕೆಟ್ಟ ಬಂದವು' ಈರವ್ವ ಪ್ರಸ್ತಾಪವೆತ್ತಿದಳು. 'ಅದೇನು ನಿನಗೊಬ್ಬಾಕೀಗೇ ಬಂದಿಲ್ಲ. ದೇಶಕ್ಕ ಬಂದದ' 'ಬಾಯರ, ನಿಮ್ಮಂತವರಿಗೆ ಹ್ಯಾಗಾರ ಸಾಗತತಿ. ಬಡಮಂದಿನ್ನ ಯಾರ ಕೇಳಾವರು ? ಹೊಟ್ಟೆಗಿಲ್ಲದ ಸಾಯುಹೊತ್ತು ಬಂತು. ಕಾಳು ಕಡಿ ಮನಾರೆ ತುಟ್ಟಿ ಆದವು. ರೂಪಾಯಿ ಎರಡು ರೂಪಾಯಿದಾಗ ಪರಪಂಚ ಹ್ಯಾಗ ನಡೀಬೇಕ ಹೇಳ್ರಿ?' ಹೀಗೆ ಮಾತು ಬೆಳೆಯಿತು. ಶಂಭುರಾಯರು ಈರವ್ವನ ಹಟಮಾರಿತನವನ್ನು ನೋಡಿ ಸಿಟ್ಟಿಗೆದ್ದು 'ತಗೊಳ್ಳತಿದ್ದರ ತಗೊ. ಇಲ್ಲಂದರ ಬಿಡು. ದೀಡು ರೂಪಾಯಿ ಮ್ಯಾಲೆ ಒಂದು ದುಡ್ಡು ಕೊಡುವುದಿಲ್ಲ' ಎಂದು ಗದ್ದರಿಸಿದರು. ಪಾರ್ವತಿಬಾಯರು ನಡುವಾಗಿ ಒಪ್ಪಂದ ಮಾಡುವ ಪಾತ್ರ ವಹಿಸಿ 'ನೀ ಎಷ್ಟರ ಕೇಳತಿ ಹೇಳಿರ ಹೇಳು?' ಎಂದರು. ಐದು ರೂಪಾಯಿಯ ಕೆಳಗೆ ಶಕ್ಯವಿಲ್ಲವೆಂದು ಹೇಳಿಬಿಟ್ಟಳು. ಹೊಟ್ಟೆಯ ಕೂಗು ಅವಳಲ್ಲಿ ಎಂದಿಲ್ಲದ ದಿಟ್ಟತನವನ್ನು ತಂದಿತ್ತು. 'ಅಷ್ಟಾಗುವದಿಲ್ಲ. ಬೇಕಾರ ಮಾಡು ಸಾಕಾರ ಬಿಡು. ಈ ಮಂದಿಗೆ ಭಾಳ

ಸೊಕ್ಕು ಬಂದದ' ಎಂದು ರಾಯರು ಪ್ರತಿಭಟಿಸಿದರು. ಕೊನೆಗೆ ಎರಡು ರೂಪಾಯಿಗೇರಿಸಿ ಹೇಗೋ ಒಡಂಬಡಿಸಿ ಕಳಿಸಬೇಕಾದರೆ ಪಾರ್ವತಿಬಾಯಿ ತನ್ನ ಮಾತಿನ ಜಾಣ್ಮೆಯನ್ನೆಲ್ಲ ವೆಚ್ಚಮಾಡಬೇಕಾಯಿತು.

ಫೆಬ್ರುವರಿಯ ಮಧ್ಯಕ್ಕೆ ಚಳಿಗಾಲದ ಕೊನೆಯ ಚಾಬೂಕಿನೇಟಿನಂತೆ ಬೆಳಗಿನಲ್ಲಿ ಸಿಳ್ಳೆಂಬ ಗಾಳಿ ಬೀಸಹತ್ತಿತು. ಊರಲ್ಲಿ ಜ್ವರದ ಬಾಧೆ ಹೆಚ್ಚಿತು. ಶಂಭುರಾಯರ ಮನೆಯಲ್ಲಿ ಸಣ್ಣಹುಡುಗರೆಲ್ಲ ಕೆಮ್ಮುಜ್ವರದಿಂದ ಹಾಸಿಗೆ ಹಿಡಿದರು. ಅಡಿಗೆ ಕೆಲಸ ಮಾಡಿಕೊಂಡು ಅವರ ಆರೈಕೆ ಮಾಡುವುದರಲ್ಲಿ ನಿದ್ದೆಗೆಟ್ಟು ಪಾರ್ವತೀಬಾಯಿಗೆ ನಿತ್ರಾಣವಾಯಿತು. ೨-೩ ದಿನ ಹಾಗೆಯೇ ಮೈಯಲ್ಲಿ ಜ್ವರ ಮುಚ್ಚಿಕೊಂಡು ಕಾಲೆಳೆಯುತ್ತಾ ಕೆಲಸ ಮಾಡಿದಳು. ನಾಲ್ಕನೆಯ ದಿನ ಹಾಕಿದ ಮುಸುಕನ್ನು ತೆಗೆಯುವಹಾಗಲಿಲ್ಲ. ಸುಂದರಾ ಮದುವೆಯಾಗದೆ ಮನೆಯಲ್ಲಿದ್ದುದರ ಮಹತ್ವ ಈಗ ಗೊತ್ತಾಯಿತು. ಅವಳ ಕೊರಳಿಗೆ ಎಲ್ಲ ಕೆಲಸ ಬೊಗಸೆ ಬಿದ್ದಿತು. ಆದರೆ ಮರುದಿನ ಅವಳು ಹೊರಗೆ ಕೂತಳು. ಆಯಿತು. ಯಜಮಾನರೇ ಯಜಮಾನತಿಯಾಗುವ ಪ್ರಸಂಗ ಬಂದಿತು! ಹುಡುಗರ ಜಡ್ಡು ಇನ್ನೂ ಕಡಿಮೆ ಆಗಿಲ್ಲ. ಎಲ್ಲ ವನ್ನು ನೋಡಿಕೊಂಡು ಮೇಲೆ ತಮ್ಮ ಕೆಲಸಕ್ಕೆ ಹೋಗುವುದೆಂದರೆ ಶಂಭು ರಾಯರಿಗೆ ಅಸಾಧ್ಯಪ್ರಕರಣವಾಯಿತು. ಇಂಥದರಲ್ಲಿ ಒಂದು ದಿನ ಬೆಳಿಗ್ಗೆ ಈರವ್ವ ಕಸಮುಸುರಿಯ ಕೆಲಸಕ್ಕೆ ಬರಲೇ ಇಲ್ಲ. ಅದೊಂದು ಹೆಚ್ಚಿನ ಕೆಲಸ ಅವರ ಇದಿರು ಧುತ್ತೆಂದು ನಿಂತಿತು. ಮನೆಯಲ್ಲಿಯ ಒದ್ದಾಟ ಒದರಾಟಗಳಿಗೆ ಮಿತಿಯೇ ಇಲ್ಲ. ಇದರಲ್ಲಿ ನಡುನಡುವೆ ಅಮೃತನ ಕಹಿ ನೆನಪೊಂದು ಬಂದು ಗಾಯದ ಬಾಯಿಗೆ ಉಪ್ಪು ಬೆರೆಸುತ್ತಿತ್ತು. ಅವನ ವಾರದ ಪತ್ರ ಬಂದರಂತೂ ಇಂಥ ಸಮಯದಲ್ಲೂ ಸಂತೋಷದ ಬದಲು ರಾಯರಿಗೆ ಸಂಕಟವಾಗುವದೇ ಹೆಚ್ಚು. 'ಮನಿಯೊಳಗ ಇಲ್ಲಿ ನಾವು ಹುಡುಗರು ಹುಪ್ಪಡಿ ಸಹಿತ ಸಾಯಲಿಕ್ಕೆ ಹತ್ತೀವಿ. ಒಬ್ಬರು ಬಾಯಾಗ ಕಾಳು ನೀರು ಹಾಕುವವರಿಲ್ಲ. ಇವ ಎಲ್ಲಿಯೋ ಯಾರೋ ಸಾಯೂ ದರಿದ್ರ ಮಂದಿನ್ನ ಉಳಿಸಿಗೊಳ್ಳಿಕ್ಕೆ ಹೋಗ್ಯಾನ. ತಂಪೊತ್ತಿನಾಗ ಇವನ ಹೆಸರು ತಗೋಬಾರದು, ಅಂಥಾ ಕುಲಕಂಟಕ!' ಎಂಬ ಅವರ ಆವೇಶಯುಕ್ತ ಭಾಷಣ ತಪ್ಪದೆ ಆಗುತ್ತಿತ್ತು; ಕೇಳಿ ಕೇಳಿ ಪಾರ್ವತಿಬಾಯಿಗೆ ದಡ್ಡು ಬಿದ್ದುಹೋಗಿತ್ತು, ಮರುದಿನ ಮಧ್ಯಾಹ್ನವಾಯಿತು. ಈರವ್ವನ ದರ್ಶನವೇ ಇಲ್ಲ. ರಾಯರು ಬಂದೆರಡು ದಿನ

ರಜೆ ತಗೋಬೇಕಾಯಿತು. ಸಂಜೆಯ ಹೊತ್ತು ಈರವ್ವನ ಗುಡಿಸಲ ಕಡೆಗೆ ಹೋಗಿ ಬಂದರು. ಅಲ್ಲಿ ಯಾರೂ ಕಾಣಲಿಲ್ಲ. ತಟ್ಟಿಯ ಬಾಗಿಲು ಮುಂದೆ ಮಾಡಿತ್ತು. ತಿರುಗಿ ಹೊರಡುವುದರಲ್ಲಿ ಈರವ್ವ ಎಲ್ಲಿಂದಲೋ ದಣಿದಂತಾಗಿ ಬರುತ್ತಿದ್ದಳು. ರಾಯರು ಮಾತಿನ ಶಸ್ತ್ರವನ್ನು ಮಸೆದು 'ಏನು ಈರವ್ವ, ನಾಚಿಕಿ ಆದ ಏನು ?' ಎಂದು ಬೈಗಳ ದಾಳಿಯನ್ನು ಸುರುವು ಮಾಡಿದರು. ಈರವ್ವ ಬಂದು ಉಸ್ಸೆಂದು ತನ್ನ ಗುಡಿಸಲ ಬಾಗಿಲ ಮುಂದೆ ಕಾಲು ಚಾಚಿ ಕೊತುಕೊಂಡಳು. ಅವರ ಮಾತು ಹಾಗೇ ಚುರುಕಾಗಿ ಸಾಗಿತ್ತು. ಅವಳೇನು ಉತ್ತರ ಕೊಡಲಿಲ್ಲ. 'ಯಾಕ ಏನಂತೀ, ಈಗರ ಬರತೀಯೋ ಇಲ್ಲೋ ? ಮನ್ಯಾಗ ಆಕಿ ಜಡ್ಡಿಲೆ ಮಲಗ್ಯಾಳ. ಎಲ್ಲಾ ಕೆಲಸ ನಮ್ಮ ಮ್ಯಾಲೇ ಬಿದ್ದದ.' 'ಇನ್ನ ಆಗಾಣೆಲ್ಲರಿ ಎಪ್ಪ' ಎಂದಿಷ್ಟೆ ಅವಳ ಉತ್ತರ. 'ಆಗದಿದ್ದರ ತಿಳಿಸಬಾರ ದೇನು, ಸೈಲಾ ತಾರೀಕಿನ ತನಕ ಅರ ಮಾಡಬೇಕು' ಎಂದು ಮುಂತಾಗಿ ನೌಕರಿಯ ನಿಯಮಗಳನ್ನು ವಿವರಿಸುವ ಲೆಕ್ಚರು ಬೇರೆ ಕೊಟ್ಟರು.ಅವ್ಯಾವುದೂ ಅವಳಿಗೆ ಹತ್ತಲಿಲ್ಲ. ಬಹಳಹೊತ್ತು ಬಾಯಿ ಸೋಲುವವರೆಗೆ ರಾಯರು ಮಾತಾ ಡಿದರು. 'ಈ ಸದ್ಯ ನಡಿ, ಭಾಂಡಿ ಒಗಿಯೋಣ ಮಾಡಿ ಬಾ' ಎಂದರು. ಅವಳೇನು ಏಳಲಿಲ್ಲ. 'ಅಪ್ಪವರ, ನಮ್ಮ ಹೊಟ್ಟಿಗ ನಿಮ್ಮ ಪಗಾರ ಸಾಲವಲ್ಲದು' ಎಂದಳು. 'ನಿನಗೇನು ಧಾಡಿ ಆಗೇದ. ನಾಕ ಮನಿ ಹಿಡದೀದಿ' ಎಂದು ರಾಯರು ಗದರಿಸಿದರು. ಅವಳ ಸುಖ ದುಃಖ ಅವರಿಗೇನು ಗೊತ್ತು ? ಗೊತ್ತಿದ್ದರೆ ಸಹ ಯಾರ ಹೊಟ್ಟೆ ಕಡಿದರೆ ಯಾರು ಅಜಿವಾನ ತಿನಬೇಕು ? ಅಂತೂ ರಾಯರು ನಿರಾಶರಾಗಿ ಅವಳ ನಿರ್ಲಜ್ಜ ನಡತೆಗಾಗಿ ಶಪಿಸುತ್ತ ಹೊರಟರು. ಈಗೆಲ್ಲಿಯೋ ಹೆಚ್ಚು ದಿನಗೂಲಿಯನ್ನುಕೊಟ್ಟು ಬಾವಿ ತೋಡಿಸುತ್ತಿರುವರೆಂದೂ ಅಲ್ಲಿಗೆ ಅವಳು ಹೋಗುತ್ತಿರುವಳೆಂದೂ ತಿಳಿಯಿತು. ಮನೆಗೆ ಬಂದು ಹೆಂಡತಿಯ ಮುಂದೆ ಎಲ್ಲ ಪುರಾಣವನ್ನು ಹೇಳಿದರು. 'ಹೋಗನಹ್ಯಾಕ, ನಾನು ಸುಂದರಾ ಕೂಡಿ ಎಲ್ಲಾ ಮಾಡಕೋತಿವಿ. ಯಾರೂ ಮಾಡೋದು ಬ್ಯಾಡ. ನನ್ನ ಜಡ್ಡೀಗ ಕಡಿಮಿ ಆಗೇದ' ಎಂದು ಪಾರ್ವತಿಬಾಯಿ ಜಡ್ಡಿನ ಕಳೆಯನ್ನು ಮರೆ ಮಾಡಿದ ದನಿಯಲ್ಲಿ ಸ್ವಾವಲಂಬನದ ಆಶಾವಾದವನ್ನು ಪ್ರತಿಪಾದಿಸಿದಳು.

ಬೇನೆಯ ಸತ್ರ ನಿಂತಿತು. ಆದರೆ ಹೊಟ್ಟೆಬೇನೆ ಹೇಗೆ ನಿಂತೀತು ? ಬರಬರುತ್ತ ಕಾಳುಕಡಿಯ ದುರವಸ್ಥೆ ಹೆಚ್ಚಿತು. ಜಿಲ್ಹೆಯ ಹಳ್ಳಿಹಳ್ಳಿಯಿಂದ ಗೋಳಿನ ಕೂಗು ಕೇಳಿಬಂದವು. ಈ ಸಲ ಬರಗಾಲ ಬೀಡುಬಿಡುವುದು

ನಿಶ್ಚಯವೆಂದು ಎಲ್ಲರೂ ಆಡಹತ್ತಿದರು. ಆದರೆ ಆಡಳಿತದಲ್ಲಿ ಅಚಲ ವಿಶ್ವಾಸವಿಟ್ಟು ಕೆಲವರು ಕಾಲಹಾಕುತ್ತಿದ್ದರು. ಈ ವಿಶ್ವಾಸಕ್ಕೆ ಕಾರಣರಾದ ಅಲ್ಲಿಯ ಮುಖ್ಯಾಧಿಕಾರಿಗಳೆಂದರೆ ಮಾಮಲೇದಾರ ಮಧ್ವರಾಯರು. ಕಾರಕೂನ ಜಾಗೆಯಿಂದ ಏರುತ್ತೇರುತ್ತ ಸಿರಸ್ತೇದಾರರಾಗಿ ಒಂದೆರಡು ವರ್ಷದ ಹಿಂದೆ ಅವರು ಮಾಮಲೇದಾರರಾಗಿದ್ದರು. ಮನೆಯಲ್ಲಿ ಸೌಖ್ಯ-ಸಂಭ್ರಮಗಳು ಸುಳಿದಾಡುತ್ತಿದ್ದವು. ಅವರಿಗಾಗಲಿ ಅವರ ಕುಟುಂಬಕ್ಕಾಗಲಿ ದುಃಖವೆಂಬುದೇ ಗೊತ್ತಿಲ್ಲ. ಮನೆಯಲ್ಲಿ ಬೇಕಾದಷ್ಟು ಬಂಗಾರವಿದೆ. ಬ್ಯಾಂಕಿನಲ್ಲಿ ಸಾವಿರಗಟ್ಲೆಯಾಗಿ ಇಟ್ಟಿದ್ದಾರೆ. ಅದು ಹೇಗೆ ಬಂತೆಂದು ಕೆದರಿ ಕೇಳಬಾರದು. ಮನೆತುಂಬ ಮಕ್ಕಳು. ಆರು ಗಂಡು, ಐದು ಹೆಣ್ಣು. ಮೂವರು ಹೆಣ್ಣುಮಕ್ಕಳನ್ನು ಒಳ್ಳೆಯ ಮನೆತನಗಳಿಗೆ ಕೊಟ್ಟು ಮದುವೆ ಮಾಡಿದ್ದಾರೆ. ಗಂಡುಮಕ್ಕಳಲ್ಲಿ ನಾಲ್ವರು ಅಷ್ಟೇನು ಹುಶಾರಿಲ್ಲದಿದ್ದರೂ ಕಲಿಯುವಷ್ಟು ಕಲಿತು ಮಧ್ವರಾಯರ ವಶೀಲಿಯಿಂದ ಅಲ್ಲಲ್ಲಿ ಕೆಲಸಕ್ಕೆ ಹತ್ತಿದ್ದಾರೆ. ತಿನ್ನಲಿಕ್ಕೆ ಉಣಲಿಕ್ಕೆ ಕೊರತೆಯಿಲ್ಲ. ಆಳುಹೋಳಂತೂ ಕೈಗೊಂದು ಕಾಲಿಗೊಂದು. ಇವರಲ್ಲಿ ಬಹಳ ವರ್ಷದಿಂದ ತಿಂಗಳಿಗೊಮ್ಮೆ ಸತ್ಯನಾರಾಯಣಪೂಜೆ ಮಾಡುವ ಸಂಪ್ರದಾಯವಿತ್ತು. ಏನು ಬೇಕಾದ್ದು ಆದರೂ ಅದನ್ನು ಅವರು ಬಿಟ್ಟಿರಲಿಲ್ಲ. ಫೆಬ್ರುವರಿ ಕೊನೆಯ ಸುಮಾರಿಗೆ ಕೈಯಲ್ಲಿಯ ಹಣ ತೀರಿ ಮುಂದಿನ ಚಿಂತೆ ಮಾಡುತ್ತ ಶಂಭುರಾಯರು ಒಮ್ಮೆ ಕುಳಿತಾಗ ಮಧ್ವರಾಯರ ಮನೆಯಿಂದ ಸತ್ಯನಾರಾಯಣಪೂಜೆಯ ದಿನಕ್ಕೆ ಊಟದ ಆಮಂತ್ರಣ ಬಂತು. ಮನೆಯಲ್ಲಿಯ ಎಲ್ಲರೂ ಬರಬೇಕೆಂದೂ ಒಲೆಹೊತ್ತಿಸಲೇ ಕೂಡದೆಂದೂ ಮಧ್ವರಾಯರ ಪತ್ನಿ ಕಮಲಾಬಾಯಿ ಗೆಳತಿ ಪಾರ್ವತೀಬಾಯಿಗೆ ಆಗ್ರಹದಿಂದ ಹೇಳಿ ಕಳಿಸಿದ್ದಳು. ಮರುದಿನ ಊಟಕ್ಕೆ ಎಲ್ಲರೂ ಹೋಗುವುದೆಂದು ಗೊತ್ತಾದಂತಾಯಿತು. ಆದರೆ ಶಂಭುರಾಯರ ಎದೆಯ ದುಗುಡ ಹೋಗಲಿಲ್ಲ. ಒಂದು ದಿನದ ಸವಿಯೂಟದಿಂದ ಮುಂದಿನ ಪ್ರಶ್ನೆ ಬಗೆಹರಿಯುವುದೇ ? ಅದರ ಬದಲು ಇನ್ನಷ್ಟು ಮನೋವ್ಯಥೆ ಆದೀತೆಂದು 'ನೀವು ಹೋಗರಿ, ನಾ ಬರುವದಿಲ್ಲ' ಎಂದು ಹೆಂಡತಿಗೆ ಹೇಳಿಬಿಟ್ಟರು. ಪಾರ್ವತೀಬಾಯಿ ಬರಲೇಬೇಕೆಂದು ಹಟತೊಟ್ಟಳು; 'ದೊಡ್ಡ ಮನಸ್ಯಾರು; ಊಟಕ್ಕ ಎಂದಿಲ್ಲ ಒಮ್ಮೆ ಕರದರ ಒಲ್ಲೆಂದರ ಏನು ಛಂದ ? ಮ್ಯಾಲೆ ಸತ್ಯನಾರಾಯಣನ ಪೂಜಿ. ಹೋಗಿ ಕಥಿ ಕೇಳಿ ಪ್ರಸಾದ ತಗೊಳ್ಳದ ಇರತಾರ ?' ಕೊನೆಗೆ ವ್ಯಾವಹಾರಿಕವಾದ ಒಂದು ಯುಕ್ತಿಯನ್ನು

ಹೂಡಿದಳು. 'ನಿಮಗ ಅವರ ಗುರುತು ಹೆಚ್ಚಾತಂದರ ಫಲೋ ಕಾಳುಕಡಿ ಸಿಗತಾವ.' ತಮ್ಮ ನಿರ್ವೀರ್ಯತೆಯನ್ನುಕಂಡು ಕೊರಗುತ್ತಿದ್ದ ಶಂಭುರಾಯರು ನಿರ್ವಾಹವಿಲ್ಲದೆ ಒಪ್ಪಿದರು.

ಮಧ್ವರಾಯರ ಬಂಗಲೆಯ ದೊಡ್ಡ ನಡುಮನೆಯಲ್ಲಿ ಸುಂದರವಾದ ಮಂಟಪಕ್ಕೆ ಬಾಳೆದಿಂಡುಗಳನ್ನು ಕಟ್ಟಿ ಸತ್ಯನಾರಾಯಣನನ್ನು ಕೂಡಿಸಿ ಎರಡೂ ಕಡೆಗೆ ತುಪ್ಪದ ದೀಪಗಳನ್ನು ಹಚ್ಚಿದ್ದಾರೆ. ಬೆಳ್ಳಿಯ ಭಾಂಡಿಗಳು ಎಲ್ಲ ಕಡೆಗೆ ಲಕಲಕಿಸುತ್ತವೆ. ಕಮಲಾಬಾಯಿಯರು ಮಡಿಯನ್ನುಟ್ಟುಕೊಂಡು ಎಲ್ಲ ವಸ್ತುಗಳನ್ನು ಹಾಕಿಕೊಂಡು ಓಡಾಡುತ್ತಿದ್ದಾರೆ. ಮಧ್ವರಾಯರು ಹೊಟ್ಟೆಬಂದಿರುವ ತಮ್ಮ ಪುಷ್ಟದೇಹವನ್ನು ನೋಡಿಕೊಳ್ಳುತ್ತ ದೇವರ ಮುಂದೆ ಕೂತಿದ್ದಾರೆ. ಆಚಾರ್ಯರಿಂದ ಸತ್ಯನಾರಾಯಣನ ಪೂಜೆ-ಕಥೆಗಳಾದವು; ಕೊನೆಯ ಮಂಗಳಾರತಿಯಾಯಿತು. ಆಮಂತ್ರಿತರಾದ ಕೆಲವು ಅಧಿಕಾರಿಗಳು ಬಂದು ತೀರ್ಥಪ್ರಸಾದ ತಗೊಂಡರು. ಶಂಭುರಾಯರು ಹೆದಹೆದರುತ್ತ ಬಂದು ಕೈಯೊಡ್ಡಿದರು. 'ಬರ್ರಿ ತಗೊಳ್ರಿ' ಎಂದು ಮಧ್ವರಾಯರು ಸಲಿಗೆಯನ್ನು ತೋರಿಸಿದರು. ಮುಂದೆ ಊಟಕ್ಕೆ ಆರಂಭವಾಯ್ತು. ದೊಡ್ಡ ಬಾಳೆಯಲೆಗಳ ಮೇಲೆ ಎರಡು ಮೂರು ಪಲ್ಯೆ, ಕೋಸಂಬರಿ, ಕಾಯಿರಸ ಮುಂತಾದ ಪದಾರ್ಥಗಳನ್ನು ಬಡಿಸಿದ್ದರು. ಸುವಾಸನೆಯ ಸಣ್ಣಕ್ಕಿಯ ಅನ್ನ ಬಂದಿತು. ಅದನ್ನು ಕಾಣದೆ ಎಷ್ಟೋ ದಿನಗಳಾದ ಶಂಭುರಾಯರಿಗೆ ಬಾಯಲ್ಲಿ ನೀರೂರಿತು. ಆದರೆ ಇದು ಒಂದು ದಿನದ ಮುದ ಮಾತ್ರವೆಂದು ತೋರಿ ಮೋರೆ ಬಾಡಿತು.ಉತ್ತಮವಾದ ಖೀರು, ಹೋಳಿಗೆ ಮುಂತಾದ ಪ್ರಶಸ್ತವಾದ ಊಟ ನಡೆಯಿತು. ಊಟ ನಡೆದಿರುವಾಗ ದೇಶದಲ್ಲಿ ಕಾಳಿನ ಗೋಳು ಇರುವುದೆಂಬುದನ್ನು ಯಾರಾದರೂ ಅಂದಿದ್ದರೆ ಅವರನ್ನು ಹುಚ್ಚರ ಆಸ್ಪತ್ರೆಗೆ ಕಳಿಸಬೇಕೆನ್ನುವಂತಿತ್ತು. ಆದರೆ ಅಂಥ ಶಿಷ್ಟಾಚಾರದ ಮಾತುಕತೆ ಮಾತ್ರ ನಡೆದವು. ಶಿರಸ್ತೆದಾರರು 'ಈ ಸಾರೆ ಮಳಿ ಬೆಳಿ ಹೋದವು ರಾಯರ ಪರಿಸ್ಥಿತಿ ಕಠಿಣದ' ಎಂದು ಪ್ರಸ್ತಾಪಿಸಿದರು. 'ಹೌದು, ಭಾಳ ಕಠಿಣದ.' ಮಧ್ವರಾಯರು ಹಾರ್ದಿಕವಾದ ಬೆಂಬಲವಿತ್ತರು. 'ಈಗs ಮಂದಿಗೆ ಅಕ್ಕಿ ಸಿಗವಲ್ಲವು. ಸಿಕ್ಕರೂ ದನಕ್ಕೆ ಹಾಕುವಂಥಾವು ಸಿಗತಾವ. ಮುಂದೇನುಗತಿ ಅಂತೀನಿ!' ಎಂದರು ಒಬ್ಬ ಆಮಂತ್ರಿತರು. 'ಇನ್ನೋಡರಿ,ಅಕ್ಕೀ ಊಟಾನ ಬಿಡಬೇಕು ಮಂದಿ. ಈ ಊರಾಗ ನಾ ಅಂತೂ ಎಲ್ಲಾರಿಗೆ ಹೇಳಿಬಿಡತೀನಿ' ಎಂದು ಮಧ್ವರಾಯರು ಅಧಿಕಾರವಾಣಿಯಿಂದ ಆಡಿದರು. ತಾವು ಈ

ಉಪದೇಶವನ್ನು ಮೊದಲು ಆಚರಣೆಯಲ್ಲಿ ತರುವರೇ ಎಂಬ ಪ್ರಶ್ನೆ ಕೇಳಬೇಕೆಂದು ಶಂಭುರಾಯರ ಬಡತನದಿಂದ ಬೆಂದ ಮನದಲ್ಲಿ ಮೂಡಿತು. ಕೇಳುವ ಧೈರ್ಯ ಬರುವುದು ಸಾಧ್ಯವೇ ಇರಲಿಲ್ಲ. ಶಿರಸ್ತೆದಾರರಂದರು : 'ರಾಯರ, ಅಕ್ಕಿದೇನು ಹೇಳತೀರಿ. ಅಕ್ಕಿ ಇರದಿದ್ದರೂ ನಡದೀತು. ಜ್ವಾಳ ಸಹಿತ ದುರ್ಮಿಳ ಆಗೇದ.' 'ಇನ್ನಮ್ಯಾಲ ಸಜ್ಜಿ, ರಾಗಿ 'ಉನ್ನ ಸರಕಾರದವರು ಕಳಿಸುಹಂಗ ಕಾಣಸ್ತಾದ ಈ ಜಿಲ್ಲ್ಯಾಕ್ಕ. ಅದರ ಮ್ಯಾಲೇ ಸಾಗಸಬೇಕು, ಕಾಲ ಬಂಧಂಗ ಇರಬೇಕಲ್ಲ ?' ಮಧ್ವರಾಯರು ಸರಕಾರದ ಗುಪಿತವನ್ನು ಒಡೆಯುವಂತೆ ಹೇಳಿದರು, 'ಹೌದು, ತಮ್ಮನ್ನು ಬಿಟ್ಟು ಎಲ್ಲರೂ ಕಾಲ ಬಂದಂತೆ ಇರಬೇಕು, ಹೊರಡುವ ಕಾಲಬರುವವರೆಗೆ!' ಎಂದು ಶಂಭುರಾಯರು ಮನಸ್ಸಿನಲ್ಲಿ ಉತ್ತರಕೊಟ್ಟರು. ಅವರು ಬಹಳ ಹೊತ್ತು ಸುಮ್ಮನೆ ಕೂತದ್ದು ನೋಡಿ ಮಾತಾಡಿಸಬೇಕೆಂದು ಮಧ್ವರಾಯರು 'ಏನು ಶಂಭುರಾವ, ನಿಮ್ಮ ಹುಡುಗ 'ದೇಭ' ಆಗ್ಯಾನಂತಲ್ಲ?' ಎಂದರು. ಎಲ್ಲರೂ ನಕ್ಕರು. ಶಂಭುರಾಯರು 'ಎಲ್ಲೀದು ?' ಎಂದು ಕೆಳದನಿಯಲ್ಲಿ ಅಂದರು. ಆ ನಗೆ ಮಾತ್ರ ಅವರ ಹೊಟ್ಟೆಯಲ್ಲಿ ತಣ್ಣೀರು ಹಾಕಿತು. ತಾವು ಮಗನಿಗೆ ಬೇಕಾದಷ್ಟು ಶಪಿಸುತ್ತಿದ್ದರೂ ನಾಲ್ಕು ಜನ ಕೂಡಿದಲ್ಲಿ ದೊಡ್ಡವರು ಆಡಿದ ಅಪಹಾಸ್ಯದ ಮಾತು ಅವರಿಗೆ ಶಲ್ಯಪ್ರಾಯವಾಯಿತು.

ಊಟ ಮುಗಿಯಿತು. ಶಂಭುರಾಯರು ಮನೆಮಂದಿಯೊಡನೆ ಮನೆಗೆ ಮರಳಿದರು. ಊಟ ಛಲೋ ಆತೆಂದು ಮಡದಿ ಅಂದಳು. ಹೌದೆಂದರು ಅವರು. ಆದರೆ ಅವರ ಆ ಹೌದೆನ್ನುವುದರಲ್ಲಿ ಮುಳುಗಿದ ಹುರಹುರವನ್ನು ಅವಳು ಅರಿಯಲಿಲ್ಲ. ಮಾರ್ಚ ತಿಂಗಳ ಬಂತು. ಸಂಸಾರ ಕಿರಚುತ್ತ ಸಾಗಿದ ಖಟಾರ ಗಾಡಿಯಂತೆ ಮುಂದುವರೆಯಿತು. ಬೆಟ್ಟದ ಹಿಂದೆ ಕೊನೆಯಾಗದ ಬೆಟ್ಟ ಇರುವಂತೆ ಬಾಳಿನ ದುಃಖ ಅನಂತವಾಗಿ ಇದಿರು ನಿಂತಂತೆ ಅವರಿಗೆ ತೋರಿತು. ಪ್ರಪಂಚದ ಚಿಂತೆ, ಮಗನ ಚಿಂತೆ, ಮಗಳ ಮದುವೆಯ ಚಿಂತೆ ಇವುಗಳಿಂದ ದಟ್ಟವಾದ ನಿರಾಶೆಯ ಪಟಲ ಕವಿಯಿತು. ಈ ಪಟಲವನ್ನು ಭೇದಿಸಿ ಒಂದೇ ಒಂದು ತೀರ ಜಿನುಗಾದ ಆಶೆಯ ಕದಿರು ಒಂದು ದಿನ ಹೊಮ್ಮಿ ಬಂದಿತು. ಅದೆಂದರೆ 'ಇನ್ನೊಂದು ತಿಂಗಳಲ್ಲಿ ನನ್ನ ಇಲ್ಲಿಯ ಕೆಲಸ ಮುಗಿಯುವುದು. ತಪ್ಪದೇ ಬರತೀನಿ. ನನ್ನ ಬಗ್ಗೆ ಚಿಂತಿಸಬಾರದು' ಎಂಬ ಅಮೃತನ ಪತ್ರದಲ್ಲಿಯ ಆಶ್ವಾಸನ. ಅದೇ ಅವರನ್ನು ಈಮುಂದೆ ಬದುಕಿಸುವ ಅನ್ನವಾಯಿತು.

## ೪. ಎರಡು ಓಲೆಗಳು

ಕಾಲೀಚರಣಪುರ, ૩-૩-೧೯೪૩.

ಪ್ರಿಯ ಕೆಳೆಮನಿ,

ನಿನ್ನ ಎಲ್ಲ ಪತ್ರಗಳೂ ಮುಟ್ಟಿದವು. ನಿನಗೆ ಹೇಳದೆ ಕೇಳದೆ ನಾ ಇತ್ತಲಾಗ ಓಡಿ ಬಂದ ಮೇಲೆ ಕಲಕತ್ತೆಯಿಂದ ನಿನಗೊಂದು ಪತ್ರ ಬರೆದೆ. ಅದಕ್ಕೆ ಎಲ್ಲ ಸುದ್ದಿ ತಿಳಿಸಿ ನೀ ಈವರೆಗೆ ಮೂರುನಾಲ್ಕು ಪತ್ರಬರೆದೆ. ಇಲ್ಲಿಯ ನನ್ನ ಪತ್ತೆಗೆ ತಡವಾಗಿ ಆದರೂ ಅವೆಲ್ಲ ಮುಟ್ಟಿದುವು. ಇಷ್ಟು ದಿನ ಅವಕ್ಕೆ ಉತ್ತರ ಬರೆಯದೆ ಇದ್ದದ್ದು ನೋಡಿ 'ಈ ಆಸಾಮಿ ಕೈಬಿಟ್ಟಿತು' ಎಂದು ನೀ ತಿಳಿದಿರಬೇಕು ! ಮೋಸಗಾರ, ಮೂರ್ಖ ಮುಂತಾದ ಪದವಿಗಳನ್ನು ಕೊಟ್ಟು ಗೆಳೆಯರ ಮುಂದೆ ಮರ್ಯಾದೆ ಮಾಡಿರಬೇಕು ! ಏನು ಬೇಕಾದ್ದು ಮಾಡು. ನಾನೇನು ಸಿಟ್ಟಿಗೇಳುವುದಿಲ್ಲ. ಯಾಕೆಂದು ಕೇಳುವಿಯ ? ಇವನೇನು ಯೋಗಿಯಾದನೇನು ಅನಬೇಡ. ಈ ಎರಡು ತಿಂಗಳೆಂದರೆ ಎರಡು ವರ್ಷ—ಅದೇಕೆ ನೂರಾರು ವರ್ಷಗಳ – ಅನುಭವವನ್ನು ನನಗೆ ತಂದುಕೊಟ್ಟಿದೆ. ಅದರಿಂದ ನನ್ನ ಆಯುಷ್ಯದಲ್ಲಿ ಹೊಸ ಮಾತು ಎಂದೂ ಇಲ್ಲದ ವೇಗದಿಂದ ತಿಳಿಯಹತ್ತಿರುವವು. ಸಿಟ್ಟೆಂಬುದು ಸ್ವಾರ್ಥವೆಂಬುದು ಹಿಂದೆ ಸರಿದು ಕರುಣೆ, ಸೇವೆ ಮುನ್ನೆಲೆಯಲ್ಲಿ ಬರಹತ್ತಿವೆ. ನೀ ಇದುರಿಗಿದ್ದರೆ ನಾ ಅನುಭವಿಸಿದ್ದು ನನಗನಿಸಿದ್ದು ಇಲ್ಲಿ ನಡಸಿದ್ದು ಎಲ್ಲಾ ಬಾಯ್ತುಂಬಿ ಹೇಳುತ್ತಿದ್ದೆ. ಅದಂತೂ ಸಾಧ್ಯ ಇಲ್ಲ. ಹಾಗಾದರೆ ನೀ ಇದುರಿಗೆ ಕೂತಂತೆ ಕಲ್ಪಿಸಿಕೊಂಡು—ಅಂದರೆ ಹಾಸ್ಟೆಲಿನ ಆ ನನ್ನ ಕೋಣೆಯಲ್ಲಿ ಇಬ್ಬರೂ ಮಾತಾಡುತ್ತ ಕೂಡುತ್ತಿದ್ದೆವಲ್ಲ–ಹಾಗೆ ತಿಳಿದು ದೊಡ್ಡದೊಂದು ಪತ್ರ ಬರೆಯಬೇಕೆನಿಸಿತು. ಆದರೆ ಸ್ವಲ್ಪೂ ಸವಡು ಸಿಗಲಿಲ್ಲ; ಮನಸ್ಸಾಗಲಿಲ್ಲ. ಇಲ್ಲಿ ನೋಡು, ಇಪ್ಪತ್ನಾಲ್ಕು ತಾಸು ಕೆಲಸ. ನಡುವೆ ನಿದ್ದೆಗೂ ಊಟಕ್ಕೂ ನಾಲ್ಕೈದು ತಾಸಿನ ಬಿಡುವು ಮಾತ್ರ. ಮೇಲೆ ಕ್ಷಣಕ್ಷಣಕ್ಕೆ ಮನಸ್ಸಿನ ಮೇಲೆ ಆಘಾತಗಳು. ಸುತ್ತೆಲ್ಲ ಆಕ್ರೋಶಗಳು. ಇವತ್ತು ರಾಮಕೃಷ್ಣ ಮಠದ ಚಾಲಕರಿಗೆ ಹೇಳಿಕೊಂಡು ಇನ್ನೊಬ್ಬರ ಬದಲಿಕೊಟ್ಟು ಸ್ವಲ್ಪುಸವಡು ದೊರಕಿಸಿರತೇನೆ. ಅದೂ ಯಾವಾಗ? ನಡುರಾತ್ರಿಯಲ್ಲಿ. ಈಗ ನಾ ಬರೆಯುತ್ತಿರುವುದು ರಾತ್ರಿಯ ತಂಪುಹೊತ್ತಿನಲ್ಲಿ. ಈ ಕೇಂದ್ರದ ದವಾಖಾನೆಯ ಬೇರೆ ಬೇರೆ ಗುಡಿಸಲುಗಳಲ್ಲಿ ರೋಗಿಗಳು ಮಲಗಿದ್ದಾರೆ. ಅಲ್ಲಲ್ಲಿ ಕೆಲವು ನರಳಿಕೆ ಕೇಳುತ್ತಿವೆ. ಕೆಲವು ಕೂಸು ಹಲಬುತ್ತಿವೆ. ಇವುಗಳ ತುದಿಗೆ ಇರುವ ಡಾಕ್ಟರಜನರ ಗುಡಿಸಲಲ್ಲಿ ನನ್ನ ಹಾಸಿಗೆಯ ಮೇಲೆ ಕೂತು

ಈ ಪತ್ರ ಬರೆಯುತ್ತಿರುವೇನು ಬರೆಯುಬೇಕೆಂದು ಅದೆಷ್ಟು ಜೋರಾಗಿ ಅನಿಸಿರು ವದೆಂದು ಹೇಳಲಿ ? ಲೆಕ್ಕಣಿಕೆಗಿಂತ ಮುಂದೆ ಮಾತು ಓಡುತ್ತಿರುವವು. ಅನಿಸಿದ್ದ ನ್ನೆಲ್ಲ ಬರೆದುಬಿಡತೀನಿ. ಇದನ್ನು ಓದುವದರಲ್ಲಿ ನಿನ್ನ ಒಂದೆರಡು ತಾಸಿನ ಅಭ್ಯಾಸ ಹಾಳಾಗಬಹುದು. ತಾ ಒಬ್ಬ ಪರೀಕ್ಷಾ ಕಳಕೊಂಡು ನಮ್ಮನ್ನೂ ಅದೇ ಸ್ಥಿತಿಗೆ ತರುವನೆಂದು ನೀ ಶಾಪ ಕೊಡಬಹುದು! ಕೊಟ್ಟರೆ ಕೊಡು. ಶಾಪದಿಂದ ಏನೂ ತಾಪ ಅಗದಂಥ ಕಾಲದಲ್ಲಿ ನಾವೀಗ ಇರತೇವೆ !

ಹೂಂ. ಎಲ್ಲಿಂದ ಸುರುವು ಮಾಡಲಿ? ಮುಂಬಯಿಯಿಂದ ನಾ ಹೊರಟ ಕ್ಷಣದಿಂದ ಹೇಳಲೇ? ಹೌದು. ಆಗಿನಿಂದಲೆ ನನಗೆ ಹೊಸ ಹೊಸ ಅನುಭವಗಳು ಬಂದವು. ಆವತ್ತು ರಾತ್ರಿ ಧೈರ್ಯ ಮಾಡಿ ಹೊರಟೆ. ಹೇಗೋ ತಿಕೀಟನ್ನು ಪಡೆದು ಕಲಕತ್ತಾ ಮೇಲಿನ ಡಬ್ಬಿಗಳ ಮುಂದೆ ತಿರುಗಿ ನೋಡತೇನೆ. ಎಲ್ಲೆಲ್ಲಿಯೂ ನುಸಿಗೆ ಸಹ ಜಾಗವಿಲ್ಲ. ಅತ್ತಿಂದಿತ್ತ ತಿರುಗಿ ಒಂದೆರಡು ಕಡೆ ಕಾಲಿಟ್ಟು ಹೊರಗೆ ಹಾಕಿಸಿಕೊಂಡು ಕೈಯಲ್ಲಿ ಸಾಮಾನು ಹಿಡಿದು ನಿಂತುಬಿಟ್ಟೆ. ಕೊನೆಯ ಸೀಟಿ ಆಯಿತು. ಗಾಡಿ ಸರಿಯಿತು. ತಿರುಗಿ ಹೊರಡೋಣ ಎನ್ನುವಷ್ಟರಲ್ಲಿ ಏನೋ ತಿಸಿದಂತಾಗಿ ಒಂದು ಡಬ್ಬಿಯ ಕಿಡಿಕಿಯಿಂದ ಒಳಗೆ ಸಾಮಾನು ಒಗೆದು ಬಾಗಿಲ ಹತ್ತಿರ ಏರಿದೆ. ನನ್ನ ದುರ್ದೈವದಿಂದ ಅದು ಮಿಲಿಟರಿಗಾಗಿ ಕಾದಿಟ್ಟ ಡಬ್ಬಿ ಆಗಬೇಕೆ? ಒಳಗಿನ ಖಾಕಿ ಬಟ್ಟೆಯ ಶೂರರು ಗದ್ದರಿಸಿದರು. ನನ್ನನ್ನು ನೂಕ ಬಂದರು. ಗಾಡಿಯ ವೇಗ ಹೆಚ್ಚಾಗಹತ್ತಿದೆ. ಅವರು ನನ್ನ ನುಗಿಸಹತ್ತಿದ್ದಾರೆ. ಆಯ್ತು ಇಲ್ಲಿಯೇ ನಮ್ಮ ಆಹುತಿ ಆಗುವದೆಂದು ತಿಳಿದೆ. ಅಷ್ಟರಲ್ಲಿ ಅವರಲ್ಲಿದ್ದ ಒಬ್ಬ ಪುಣ್ಯಾತ್ಮಾ ಆ ಶೂರ ಸೈನಿಕರನ್ನು ತಡೆದು ಬಾಗಿಲು ತೆರೆದು ನನ್ನನ್ನು ಒಳಗೆ ತಗೊಂಡ. ಒಳಗೆ ಹೋಗಿ ಅವನಿಗೆ 'ಉಪಕಾರವಾಯಿತು'ಎಂದು ಹೇಳಿ ಉಸ್ಸೆಂದು ಕೂತುಕೊಂಡೆ. ಸುತ್ತೆಲ್ಲ ಡಬ್ಬಿಯಲ್ಲಿ ನೋಡಿದೆ. ಇನ್ನೂ ಹತ್ತಾರೂ ಜನ ಬಂದು ಮಲಗುವಷ್ಟು ಜಾಗವಿತ್ತು. ಅದನ್ನು ಅನ್ನುವ ಧೈರ್ಯ ಯಾರಿ ಗಿದೆ ? ನನ್ನನ್ನು ಒಳಗೆ ತಗೊಂಡದ್ದಕ್ಕೆ ಇನ್ನೂ ಗೊಣಗಾಟ ನಡೆದೇ ಇತ್ತು. 'ಇದು ಮಿಲಿಟರಿಯ ಡಬ್ಬಿ. ನೀ ಮುಂದಿನ ಸ್ಟೇಷನಿಗೆ ಇಳಿದು ಹೋಗು' ಎಂದು ಕೆಲವರು ಆರ್ಡರು ಮಾಡಿದರು. ಆಗಲಿ ಎಂದೆ. ಆದರೆ ಆ ಪುಣ್ಯಾತ್ಮನ ಮುಂದೆ ಅವರಾಟ ನಡೆಯಲಿಲ್ಲ. ಅವರಿಗೆಲ್ಲ ಅವನೇ ಆಫೀಸರೆಂದು ತೋರಿತು. ಬರಬರುತ್ತ ಅವನ ಪರಿಚಯ ಮಾಡಿಕೊಂಡೆ. ಅವನ ಹೆಸರು ವಿನೋದ ಸಾಗರನೆಂದೂ ಅವನು ಬಂಗಾಲ ಕಡೆಯ ಒಬ್ಬ ಜಮೀನುದಾರನ ಮಗ

ನೆಂದೂ ಪದವೀಧರನಾದ ಮೇಲೆ ಕಿಂಗ್ಸ ಕಮಿಶನ್‌ದಲ್ಲಿ ಆರಿಸಿ ಬಂದು ಸೈನ್ಯ ಶಿಕ್ಷಣ ಪಡೆದು ಆಫೀಸರ ಆಗಿ ಈಗ ಈ ಪಥಕವನ್ನು ಕರಕೊಂಡು ಕಲಕತ್ತೆಗೆ ಹೊರಟಿರುವನೆಂದೂ ತಿಳಿಯಿತು. 'ನೀವು ಸೆಕೆಂಡ್‌ಕ್ಲಾಸಿನಲ್ಲಿ ಯಾಕೆ ಕೂತಿಲ್ಲ?' ಎಂದು ಕೇಳಿದೆ. 'ಅಲ್ಲಿ ಕೂತಿದ್ದರೆ ನಿಮಗೆಲ್ಲಿ ಈ ಜಾಗ ಸಿಗತಿತ್ತು ? ನೀವೆಲ್ಲಿ ಬದಕತಿದ್ದಿರಿ?' ಎಂದವನು ನಗೆಯಾಡಿದನು. 'ನಿಮಗೆ ವಿನೋದಸಾಗರ ಎಂಬ ಹೆಸರು ಸಾರ್ಥಕವಾಯಿತು.' ಎಂದು ನಾ ಹೇಳಿದೆ. 'ಇರಬಹುದು. ಈ ಪರ್ಕಟ ಸೈನ್ಯವನ್ನು ಸುರಕ್ಷಿತ ಕಲಕತ್ತೆಗೆ ಮುಟ್ಟಿಸುವ ಹೊಣೆ ಹೊತ್ತು ನಾನಾಗಿ ಈ ಡಬ್ಬಿಯಲ್ಲಿ ಕೂತಿದ್ದೇನೆ' ಹೀಗೆ ಪರಿಚಯ ನಿಕಟವಾಗುತ್ತ ಪೋಯಿತು. ಇಬ್ಬರೂ ನಂನಮ್ಮ ಮನೆಯ ಸುದ್ದಿಗಳನ್ನು ಹೇಳಿದೆವು. ವಿನೋದಸಾಗರನು ತನ್ನ ಪ್ರಾಂತಕ್ಕೆ ತಿರುಗಿ ಹೊರಟಿದ್ದರಿಂದ ಸಂತೋಷದಲ್ಲಿ ಎಲ್ಲವನ್ನು ನೆನಸಿ ಹಿಗ್ಗುತ್ತಿದ್ದನು. ನಾನೋ ಕ್ಷಣಕ್ಷಣಕ್ಕೆ ನನ್ನ ಪ್ರಾಂತ ಮತ್ತು ನನ್ನ ಜನರಿಂದ ದೂರ ಹೋಗುತ್ತಿರುವೆನು. ಅವರ ಸಂತೋಷವನ್ನು ನೋಡಿ ನನಗೆ ಹೇಳಬಾರ ದಷ್ಟು ತಳಮಳವಾಯಿತು. ಮನೆಯಲ್ಲಿ ತಾಯಿ-ತಂದೆ-ಹುಡುಗರು ಎಲ್ಲರೂ ನೆನಪಾಗಿ ಕಣ್ಣ ಮುಂದೆ ಸುಳಿದು ಹೋದರು. ಕಂಠ ವುಬ್ಬಿ ಬಂತು. ತಂದೆ ಯವರ ಸಿಟ್ಟಿನಿಂದ ರಾವಾದ ಮೋರೆ, ತಾಯಿಯ ಅಳುಮೋಗ ತಿರುತಿರುಗಿ ಕಾಣಿಸಿ ಮನಸ್ಸನ್ನು ಕಲಕಿದವು. ಆಮೇಲೆ ಹಾಸ್ಟೇಲಿನ ಕೋಣೆಗೆ ಬಂದೆ. ಎಂಟು ಹತ್ತು ದಿವಸದ ಸಂಗತಿಗಳು ಚಿತ್ರಪಟದಂತೆ ಚಲಿಸಿದವು. ನಿನ್ನೆನ್ನು ನೆನಸಿ ಈಗ ನೀನು ಸ್ವಸ್ಥವಾಗಿ ಕೂತು ಅಭ್ಯಾಸಮಾಡುತ್ತಿರಬಹುದು ಎಂದು ಆಸೂಯೆಪಟ್ಟೆ. ಹೊರಗೆ ವಿನೋದಸಾಗರನೊಡನೆ ಆ ಈ ಮಾತು ನಡೆದಿದೆ. ಒಳಗೆ ಈ ನಾಟಕ ನಡೆದಿದೆ. ನಡುವೊಮ್ಮೆ ಕಿಡಿಕಿಯಿಂದ ಹೊರಗೆ ನೋಡಿ 'ಇಷ್ಟೇಕೆ ಲಗುಬಗೆಯಿಂದ ಈ ಗಾಡಿ ನಡೆದಿರುವದು ? ಸರಪಳಿ ಹಿಡಿದು ನಿಲ್ಲಿಸಿ ನಾನೇಕೆ ಇಳಿದುಬಿಡಬಾರದು ? ಮೊದಲು ಊರಿಗೆ ಹೋಗಿ ಅವ್ವ-ಅಪ್ಪನ ಅಪ್ಪಣೆ ತಗೊಂಡು ಬೇಕಾದರೆ ಈ ಕೆಲಸಕ್ಕೆ ಹೋಗ ಬಹುದು' ಎಂದು ಗಂಭೀರವಾಗಿ ವಿಚಾರಮಾಡಿದೆ. ಇನ್ನು ೩-೪ ತಿಂಗಳ ಮಾತ್ರ ಪರೀಕ್ಷೆ ಇರಲಿಕ್ಕೆ ಬಿಟ್ಟು ಹೋಗುವದು ಎಂಥ ಮೂರ್ಖತನ ಎಂದು ಹಳಿದುಕೊಂಡೆ. ಇದರ ಪರಿಣಾಮ ಮನೆಯಲ್ಲಿ ಏನಾದೀತು ? ಯಾರೋ ದೂರ ಇರುವವರನ್ನು ಉಳಿಸಲಿಕ್ಕೆ ಹೋಗಿ ನನಗಾಗಿ ಎಲ್ಲವನ್ನು ತ್ಯಾಗ ಮಾಡಿದ ತಂದೆ ತಾಯಿಯನ್ನೇ ಕಳಕೊಂಡರೆ ? ನಾ ಹೋದ ಸುದ್ದಿ ಕೇಳಿ

ಅವರ ಸ್ಥಿತಿಯೇನಾದೀತು ? ಈ ರೀತಿ ವಿಚಾರಿಸುತ್ತ ಹೋದಂತೆ ನನ್ನ ದೃಢ ಸಂಕಲ್ಪವೆಲ್ಲ ಮಣ್ಣುಗೂಡಿದಂತೆ ಆಗಹತ್ತಿತು. ಈ ಹೊತ್ತಿಗೆ 'ನೀವು ನಮ್ಮ ಪ್ರಾಂತಕ್ಕೆ ಬಡಜನದ ಶುಶ್ರೂಷೆಗೆಂದು ಹೋಗುವದು ತಿಳಿದು ನನಗೆ ಬಹಳ ಸಂತೋಷ' ಎಂದು ವಿನೋದಸಾಗರನಂದನು. 'ನನಗೂ ಬಹಳ ಸಂತೋಷ' ಎಂದು ಹಿಗ್ಗಿದಂತೆ ಮಾಡಿದೆ. ಒಳಗುದಿ ನನಗೊಬ್ಬನಿಗೇ ಗೊತ್ತು. ದಾರಿಯಲ್ಲಿ ಯಾವುದೋ ದೊಡ್ಡ ಜಂಕ್ಶನ್ನು ಬಂತು. ಇಲ್ಲಿಳಿದು ತಿರುಗಿ ನೆಟ್ಟಗೆ ಊರ ಹಾದಿ ಹಿಡಿಯಲ್ಯಾ ಎನಿಸಿತು. ಸಾಮಾನಿನ ಕಡೆ ನೋಡಿದೆ. ಎತ್ತೆಂದು ಕೈ ಹೇಳಿತು. ಆದರೆ ವಿನೋದಸಾಗರಗೆ ಏನೆಂದು ಹೇಳಲಿ ? ನಾನೆಂಥ ಹೇಡಿ ಎಂದು ಅವನು ತಿಳಿಯಬಹುದು ? ನನ್ನ ಪ್ರಾಂತದ ಬಗ್ಗೆ ಅವನಲ್ಲಿ ಎಂಥ ತಿಳಿವಳಿಕೆ ಆದೀತು ? ಅವನಿಗೇನು ಸುಳ್ಳು ಹೇಳಿ ಇಳಿಯಬಹುದು ಎಂದು ಮಂಗಮನಸ್ಸು ಸೂಚಿಸಿತು. ಇಷ್ಟನ್ನುವದರಲ್ಲಿ ಗಾಡಿ ಬಿಡುವ ಹೊತ್ತಾಯಿತು. ಒಂದು ನಿಮಿಷ ಕಣ್ಣು ಮುಚ್ಚಿದೆ. ಅದು ಹೇಗೋ ಮುಂಬಯಿಯಲ್ಲಿ ಕಂಡ ನನ್ನ ನಾಡಿನ ಆ 'ಗಡ್ಡದ ವ್ಯಕ್ತಿ' ಇದಿರು ನಿಂತಿತು. ಅವರಾಡಿದ ಮಾತು ಕಿವಿಯಲ್ಲಿ ಕಟ್ಟಿದವು. ಅವರಿಗೆ ಮನೆಯಿಲ್ಲವೇ ? ಮಕ್ಕಳಿಲ್ಲವೇ ? ಎಲ್ಲವನ್ನು ತೊರೆದು ಪ್ರಾಣವನ್ನೇ ಹೋಮಿಸಲು ಸಿದ್ಧರಾಗಿ ದೇಶದ ಬಿಡುಗಡೆಗಾಗಿ ಅವ ರೆಂಥ ಕಷ್ಟನಷ್ಟಗಳನ್ನು ಅನುಭವಿಸುತ್ತಿರುವರು ? ಮುಳ್ಳಿನ ಹಾಸಿಗೆಯ ಮೇಲೆ ನಡೆಯುತ್ತ ಮುಳ್ಳಿನ ಕಿರೀಟವನ್ನು ಹಾಕಿಕೊಂಡ ಅವರೆಲ್ಲಿ ? ಅಳ್ಳೆ ದೆಯ ನಾನೆಲ್ಲಿ ? ಆಯಿತು, ಈ ನೆನವಿನಿಂದ ಮತ್ತೆ ನನ್ನ ನಿಶ್ಚಯ ಗಟ್ಟಿಯಾ ಯಿತು. ಜೋಲಾಟ ನಿಂತಿತು. ಗಾಡಿ ಹೊರಟಿತು. ಆಮೇಲೆ ನನ್ನ ಸಮಾಧಾನ ವನ್ನು ಅದು ಎಳ್ಳಷ್ಟೂ ಕಪಲಿಸಲಿಲ್ಲ. ಇದೇ ನನ್ನ ಮೊದಲನೆಯ ಅದ್ಭುತ ಅನುಭವ, ಕೆಳಮನಿ, ನಿನಗೆ ಸೇರುವದೋ ಇಲ್ಲವೊ, ಇದನ್ನು ಇಂದಿಗೂ ನಾನು ನೆನಸುತ್ತಿರುವೆನು.

ದೀರ್ಘ ಪ್ರವಾಸದಲ್ಲಿ ಆಗಾಗ ಊಟ ಸಿದ್ದಿಗಳಾದವು. ಉಳಿದನೇಕ ಡಬ್ಬಿಗಳಲ್ಲಿಯ ಗದ್ದಲ-ಗುದ್ದಾಟ ನಮ್ಮಲ್ಲಿ ಎಷ್ಟೋ ಕಡಿಮೆಯಾಗಿತ್ತು. ಆಗಾಗ ನನ್ನಂಥವರು ಕನಿಕರದ ಮುಖಮಾಡಿಕೊಂಡು ಒಳಗೆ ಬರಬೇಕೆನ್ನು ತ್ತಿದ್ದರು. ವೈರಿಗಳ ಆಕ್ರಮಣವನ್ನು ತಡೆಹಿಡಿಯಲು ಕಲಿತ ನಮ್ಮ ಹಿಂದೀ ಸೈನಿಕರು ಅವರಿಗೆ ಒಂದಿಂಚು ಕೂಡ ಜಾಗ ಕೊಡುತ್ತಿರಲಿಲ್ಲ. ವಿನೋದ ಸಾಗರನೂ—ನನಗೇನು ಕಾರಣ ಅನುಗ್ರಹಿಸಿದನೋ ಏನೋ,— ಉಳಿದವರ

ವಿಷಯದಲ್ಲಿ ಸುಮ್ಮನಿದ್ದನು. ನಾವಿಬ್ಬರೇ ಆ ಡಬ್ಬಿಯಲ್ಲಿ ಸುಶಿಕ್ಷಿತರು; ಇಂಗ್ಲಿಷ ಮಾತಾಡಬಲ್ಲವರು. ಅವನಿಂದ ಮಿಲಿಟರಿ ಜೀವನ ಹೇಗೆ ಎಂತು ಎಂಬುದನ್ನು ವಿಸ್ತಾರವಾಗಿ ಕೇಳಿಕೊಂಡೆ. ಮಾತಾಡುತ್ತ 'ಹಿಂದೀ ಜನರನ್ನು ಹೇಗೆ ನಡೆಸಿಕೊಳ್ಳುತ್ತಾರೆ ? ' ಎಂದು ಕೇಳಿದೆ. ಅವನು ಸುತ್ತೆಲ್ಲ ನೋಟ ಬೀರಿ ಸುಮ್ಮನಾದ. ಕೇಳಬಾರದಾಗಿತ್ತು ಅನಿಸಿತು. 'ಸಾರಿ' ಎಂದೆ. ಅವನು ನನ್ನ ತೀರ ಹತ್ತಿರ ಬಂದು ಕೆಳದನಿಯಲ್ಲಿ 'ತಿನಲಿಕ್ಕೆ ಉಣಲಿಕ್ಕೆ ನಮಗೇನೂ ಕೊರತೆ ಯಿಲ್ಲ' ಎಂದನು. 'ಹೀಗೇನು ? ' ಅಂದೆ. ಏನೋ ಹೇಳಬೇಕೆಂದು ಅವನಿಗೆ ಅನಿಸುತ್ತಿತ್ತು. ಹೇಳಲೊಲ್ಲ. ಸ್ವಲ್ಪ ಹೊತ್ತಾದ ಮೇಲೆ, ನಮ್ಮಾತು ಅಲ್ಲಿಯ ವರಿಗೆ ತಿಳಿಯುವದು ಅಷ್ಟರಲ್ಲೇ ಇದೆ ಎಂದುಕೊಂಡೋ ಏನೋ ಎಷ್ಟೆಷ್ಟೋ ಅಂತರಂಗದ ಮಾತನ್ನು ನನಗೆ ಹೇಳಿದ. ಅದರಿಂದ ನನ್ನ ತಿಳಿವು ಹೆಚ್ಚಿತು. ಆದರೆ ಜೀವ ಕೆರಳಿತು. ಭಾರತವೆಲ್ಲ ಇಂದಿನ ಹೋರಾಟದಲ್ಲಿ ಬಾಡಿಗೆ ಯೆತ್ತಾಗಿದೆ ಎಂದು ನನ್ನಷ್ಟಕ್ಕೆ ಅಂದುಕೊಂಡೆ. ಅವನು ಕೊನೆಗೆ ಮನುಷ್ಯ-ಮನುಷ್ಯರ ನಡುವಿನ ಭೇದ ಹೇಗೆ ಹೋದೀತು ಅಮೃತ ? ಬ್ರಾಹ್ಮಣ-ಹೊಲೆಯ, ಕರಿ-ಬಿಳಿ, ರೈತ-ಸಾವುಕಾರ, ಅಧಿಕಾರಿ-ಕಾರಕೂನ ಹೀಗೆ ನೂರಾರು ಭೇದ ಸೇರಿ ಈ ಯುದ್ಧ ಹುಟ್ಟಿಸಿ ನಮ್ಮನ್ನು ಮನೆಮಾರು ಬಿಡಿಸಿ ತೋಫಿನ ಬಾಯಲ್ಲಿ ಕೊಡಲಿಕ್ಕೆ ಸಿದ್ಧವಾಗಿವೆ.' ಈ ಮಾತು ಅವನ ಅಂತಃಕರಣದಿಂದ ಉಕ್ಕಿ ಬಂದಿತು. ನನ್ನೆದೆ ತಟ್ಟಿತು. ಅವನ ಬಗ್ಗೆ ನನ್ನ ಆದರ ಹೆಚ್ಚಿತು. ಅವನ ವೀರ ಮುದ್ರೆಯನ್ನು ನೋಡಿದಂತೆ, ದೇಶಪ್ರೀತಿಯಿಂದ ತುಂಬಿ ತುಳುಕುವ ಅವನ ಸಂವಾದವನ್ನು ಕೇಳಿದಂತೆ, ಇವನಂಥ ಸೈನ್ಯಾಧಿಕಾರಿಗಳು ಸ್ವತಂತ್ರ ಭಾರತಕ್ಕೆ ಹೆಚ್ಚು ಹೆಚ್ಚಾಗಿ ಬೇಕೆಂದೆನಿಸಿತು.

ಬೆಳಗಿನಲ್ಲಿ ಕಲಕತ್ತೆಯ ಸ್ಟೇಶನ್ನು ಬಂತು. ಎಲ್ಲರೂ ಉಳಿದು ಒಡ್ಡುಮುರಿ ದೆವು. ಹೊಸ ನೋಟ ನೋಡುತ್ತ ನಾನು ದಂಗಾಗಿ ನಿಂತಿದ್ದೆ. ಎಲ್ಲಿಗೆ ಹೋಗ ಬೇಕೆಂಬುದು ನಿಶ್ಚಿತವಿಲ್ಲ. ವಿನೋದಸಾಗರನು ನನ್ನನ್ನು ತನ್ನ ಕೂಡ ಕರ ಕೊಂಡು ಹೋಗಿ ಒಂದು ಹಾಟೆಲಿನಲ್ಲಿ ಇಳಿಸಿ ತನ್ನ ಬಿಡಾರಕ್ಕೆ ಹೋದನು. ಗುರುತು ಮರೆಯಬಾರದೆಂದು ಹೇಳಿ ಇಬ್ಬರೂ ನಿಕಟ ಸ್ನೇಹಿತರಂತೆ ನಿರೋಪ ತಗೊಂಡೆವು. ಹೊಸ ವಾತಾವರಣ,ಹೊಸ ವೇಷ-ಭಾಷೆಗಳುಳ್ಳ ಸಮಾಜಜೀವನ ಇವು ನನ್ನಲ್ಲಿ ಕುತೂಹಲದ ಪರಮಾವಧಿಯನ್ನುಂಟುಮಾಡಿದ್ದವು. ಹಾಟೆಲ್ಲಿನ ಅಂತಸ್ತಿನ ಕಟಾಂಜನದಲ್ಲಿ ಬಂದು ವಿಶಾಲವಾದ ಕಲಕತ್ತಾ ನಗರವನ್ನೂ

ಬೀದಿಯಲ್ಲಿಯ ಟ್ರ್ಯಾಮು-ಮೋಟಾರಗಳ ಓಡಾಟವನ್ನೂ ಜನಸಂದಣಿಯನ್ನೂ ಸುಮ್ಮನೆ ನೋಡುತ್ತ ನಿಂತೆ. ಮುಂಬಯಿಯಲ್ಲಿ ನಾಲ್ಕೈದು ವರ್ಷಗಳನ್ನು ಕಳೆದ ನನಗೆ ದೊಡ್ಡ ಪಟ್ಟಣದ ಪರಿಚಯವಿತ್ತು. ಆದರೆ ಹಿಂದುಸ್ತಾನದಲ್ಲಿಯ ಮೊದಲನೆಯ ಅತಿ ದೊಡ್ಡ ಪಟ್ಟಣಕ್ಕೆ ಬಂದದ್ದು ಇದೇ ಮೊದಲನೇ ಸಲ. ಅಂತೇ ಲವಲವಿಕೆ ಮಿಕ್ಕಿತ್ತು. ಕೆಲವು ಮಿನಿಟು ನಾ ಬಂದ ಉದ್ದೇಶ ಮರೆತಂತಾಗಿ ಊರು ನೋಡಲು ಬಂದ ಪೆದ್ದನಂತಾದೆ. ಬಂಗಾಲೀ ಭಾಷೆ ಎಲ್ಲ ಕಡೆ ವಿಚಿತ್ರವೆನ್ನುವಂತೆ ಕಿವಿಯ ಮೇಲೆ ಬೀಳುತ್ತಿತ್ತು. ಅರಿಯದೆ ಇದ್ದ ಯಾವ ಭಾಷೆಯೂ ವಿಚಿತ್ರವೇ ಅಲ್ಲವೇ? ಒಂದು ದಿನ ದಣಿವಾರಿಸುವುದರಲ್ಲಿ ಹೋಯಿತು. ಮರುದಿನ ಸೇವಾನಂದರು ಕೊಟ್ಟ ವಿಳಾಸದ ಮೇಲಿಂದ ಹುಡುಕುತ್ತ ರಾಮಕೃಷ್ಣ ಮಠದ ಮಂದಿರಕ್ಕೆ ಹೋದೆ. ಅದರೊಳಗೆ ಕಾಲಿಟ್ಟೊಡನೆ ನನ್ನ ಮನಸ್ಸು ಪ್ರಸನ್ನವಾಯಿತು. ಅಲ್ಲೋಲಕಲ್ಲೋಲವಾದ ಸಮುದ್ರದ ನಡುವೆ ಸದ್ದಿಲ್ಲದೆ ಹಸುರುದ್ವೀಪದಂತೆ ಆ ಜಾಗ ಅನಿಸಿತು. ಪ್ರಜ್ಞಾನಂದರೆಂಬ ಸಂನ್ಯಾಸಿಗಳ ಹತ್ತಿರಹೋದೆ. ಅವರೆಷ್ಟು ಪ್ರೀತಿಯಿಂದ ನನ್ನ ಬರಮಾಡಿಕೊಂಡರೆನ್ನುವಿ! ಒಂದರ್ಧ ತಾಸಿನ ಮಾತಿನಲ್ಲಿ ನನಗೆ ಮನೆ ಮಾರಿನ ಹಂಬಲಿಕೆ ಆಗದಂತೆ ನನ್ನೊಡನೆ ಆತ್ಮೀಯವಾಗಿ ಬಿಟ್ಟರು. ಮಂದಿರದ ಎಲ್ಲ ಕಡೆ ಕರಕೊಂಡು ಹೋಗಿ ತೋರಿಸಿದರು. ನಡುವಿನ ಒಂದು ಕೋಣೆಯಲ್ಲಿ ರಾಮಕೃಷ್ಣ ಪರಮಹಂಸರ ದೊಡ್ಡ ಛಾಯಾಚಿತ್ರವಿತ್ತು. ಸುತ್ತೆಲ್ಲ ವಿವೇಕಾನಂದ ಮೊದಲಾದ ಪ್ರಸಿದ್ಧ ವ್ಯಕ್ತಿಗಳ ಚಿತ್ರಗಳಿದ್ದವು. ನಾನು ಭಕ್ತಿಯಿಂದ ಕೈಮುಗಿದೆ. ಎಂದೂ ಇಲ್ಲದ ಸಹಜ ರೀತಿಯಲ್ಲಿ ನನ್ನ ಹೃದಯ ತುಂಬಿ ಬಂದಿತು. ಪ್ರಜ್ಞಾನಂದರ ತೇಜಸ್ವಿಯಾದ ವ್ಯಕ್ತಿತ್ವ ತನ್ನ ಪ್ರಭಾವಳಿಯಲ್ಲಿ ನನ್ನ ಸೆಳೆಯಿತು. ಅವರು ನನ್ನ ಪರಿಚಯಮಾಡಿಕೊಂಡು, ಬಂದ ಕಾರಣ ಕೇಳಿದರು. ಬೆನ್ನು ತಟ್ಟಿ ಸಂತೋಷಪಟ್ಟರು. 'ಇಷ್ಟು ದೂರದಿಂದ ಜನಸೇವೆಯ ಕೆಲಸಕ್ಕಾಗಿ ನೀನು ಬಂದದ್ದು ಬಹಳ ಹೆಚ್ಚಿನದು' ಎಂದರು. ಸಾಮಾನುಸಹಿತ ಮಂದಿರಕ್ಕೆ ಬರಹೇಳಿದರು. ಹಾಗೆ ಮಾಡಿದೆ. ಆಮೇಲೆ ಮಿದನಾಪುರ ಜಿಲ್ಹೆಯಲ್ಲಿ ವೈದ್ಯಕೀಯ ಸಹಾಯಕ ಕಾರ್ಯಕ್ಕೆ ನನ್ನ ಕಳಿಸುವ ಬಗ್ಗೆ ಮಾತುಕತೆ ನಡೆದವು. ಆಗ 'ಇನ್ನು ಏಳು ದಿನ ಇಲ್ಲಿಯೆ ಇರು. ಎಲ್ಲ ಮಾಹಿತಿ ಮಾಡಿಕೊಂಡು ಹೋಗೀಯಂತೆ' ಎಂದು ಇಟಗೊಂಡರು. ಇಂಗ್ಲೀಷಲ್ಲದೆ ನನಗೆ ಹಿಂದೀ ಭಾಷೆನೆಟ್ಟಗೆ ಬರುವದೆಂದು ಕೇಳಿ ಅವರು 'ಉತ್ತಮವಾಯಿತು' ಎಂದರು. ಆದರೂ ಹಳ್ಳಿಯಲ್ಲಿ ಕೆಲಸ ಮಾಡು

ವಾಗ ಸ್ವಲ್ಪವಾದರೂ ಬಂಗಾಲಿಯ ಅರಿವು ಅಗತ್ಯವೆಂದು ನನಗೆ ತಾವಾಗಿ ಪ್ರತಿ ದಿನ ದಿನಬಳಕೆಯ ಭಾಷೆಯನ್ನು ಕಲಿಸಹತ್ತಿದರು. ಅಲ್ಲಿ ನಡೆಯುವ ಪ್ರಾರ್ಥನೆಗಳಿಂದ ನನಗೆ ಯಾರೋ ಹೊಸ ಲೋಕಧಲ್ಲಿ ಕರಕೊಂಡು ಹೋದಂತಾಯಿತು. ಈ ಮೊದಲು ದೇವರ ಬಗ್ಗೆ ಭಕ್ತಿ, ಧರ್ಮಶ್ರದ್ಧೆ ನನ್ನಲ್ಲಿ ಅಷ್ಟೇನು ಎದ್ದು ಕಾಣುವಂತೆ ಇರಲಿಲ್ಲ. ನಿನಗೆ ಗೊತ್ತೇ ಇದೆ, ಒಮ್ಮೊಮ್ಮೆ ನಾಸ್ತಿಕರಂತೆ ನಾವು ಮಾತಾಡುತ್ತಿದ್ದೆವು. ಇಲ್ಲಿ ಬಂದ ಮೇಲೆ ಮಾತ್ರ ಈ ವಿಷಯಗಳ ಬಗ್ಗೆ ಜೋರಾಗಿ ವಿಚಾರ ಮಾಡಹತ್ತಿರತೇನೆ. ವಿವೇಕಾನಂದರಂಥವರು ಮೊದಲು ಪ್ರಖರ ನಾಸ್ತಿಕರಾಗಿ ಆಮೇಲೆ ಪರಮವೇದಾಂತಿಗಳಾದರಂತೆ. ನಿನ್ನ ಪಾಡೇನು ಎಂದು ಅನಿಸಿದಾಗ ಎಲ್ಲ ವಿಚಾರ ನಿಂತುಹೋಗುತ್ತದೆ. ಆದರೆ ಮತ್ತೆ ನನ್ನಷ್ಟಕ್ಕೆ ಇದ್ದಾಗ ನಾಸ್ತಿಕತೆ ತಲೆ ಎತ್ತುವುದು. ಪ್ರಜ್ಞಾನಂದರು ಮಠದ ಧ್ಯೇಯಗಳನ್ನು ವಿವರಿಸುತ್ತ ಸರ್ವಧರ್ಮಸಮನ್ವಯದ ದೃಷ್ಟಿಯನ್ನು ಚೆನ್ನಾಗಿ ತಿಳಿಸಿಹೇಳುತ್ತಿದ್ದರು. ಆಜನ್ಮಬ್ರಹ್ಮಚಾರಿಗಳಾದ ದೇಶಸೇವಕರು ತಮ್ಮ ಸಂಸ್ಥೆಗೆ ಬಂದಷ್ಟು ಬೇಕೆಂದರು. ಇವರೆಲ್ಲಿ ಹಾರಗೆ ನನ್ನನ್ನೂ ಸಂನ್ಯಾಸಿ ಮಾಡಿ ಅಮೃತಾನಂದ ಮಾಡಿಬಿಡುವರೋ ಎಂಬ ಹಾಗೆ ತೋರುತ್ತಿತ್ತು. ಸಮಾಜಿಗೆ ಹೋಗಿ ಮಸೀದಿಯನ್ನು ಕೊರಳಿಗೆ ಹಾಕಿಕೊಂಡಂತೆ ಆಗಬಹುದೇ ಅಂದುಕೊಂಡು ಒಮ್ಮೆ ನಕ್ಕುಬಿಟ್ಟೆ.

ನನ್ನ ಗುರಿ ನಿಚ್ಚಳವಾಗಿ ಕಾರ್ಯದ ಕಲ್ಪನೆ ಬಂದು ಮನಸ್ಸು ಸ್ಥಿರವಾದ ಕೂಡಲೆ ಇಲ್ಲಿಂದಲೇ ನಾನು ನಿನಗೂ ಊರಿಗೂ ಮೊದಲು ಪತ್ರ ಬರೆದದ್ದು. ಅಲ್ಲಿಂದ ಕಲಕತ್ತೆಯಲ್ಲಿ ಎಂಟು ಹತ್ತು ದಿನ ಇದ್ದ ಮೇಲೆ ಪ್ರಜ್ಞಾನಂದರ ಆಜ್ಞೆಯ ಪ್ರಕಾರ ಮಠದ ಪ್ರಸಿದ್ಧರಾದ ಒಬ್ಬ ಡಾಕ್ಟರರೊಡನೆ ನಾನು ಮಿದನಾಪುರಕ್ಕೆ ಹೋದೆ. ಆ ಭಾಗದ ಕರುಣಕಥೆಯನ್ನು ಕೇಳಿ ಸಾಕಷ್ಟು ಹೌಹಾರಿಹೋಗಿದ್ದೆ. ಈಗ ಅದನ್ನು ನೋಡುವ ದುರ್ಭಾಗ್ಯ ಒದಗಿತು. ಆ ದೃಶ್ಯವನ್ನು ನೋಡಿ ನಾನು ತಡೆದುಕೊಳ್ಳಬಹುದೇ ಎಂದು ಮಿದನಾಪುರ ಹತ್ತಿರ ಬಂದಂತೆ ನನ್ನೆದೆಯ ಡವಡವ ಹೆಚ್ಚಿತು. ಮಿದನಾಪುರಕ್ಕೆ ಹೋದ ಮೇಲೆ ಮಾತ್ರ ಒಮ್ಮೆಲೆ ಎದೆ ಒಡೆಯುವಂಥದೇನು ಕಾಣಲಿಲ್ಲ. ಎಲ್ಲ ಜಿಲ್ಹೆಯ ಸ್ಥಳಗಳಂತೆ ಅದು ತೋರಿಕೆಯ ಸುಖಶಾಂತಿಯನ್ನು ಬೀರಿತು. ರೊಕ್ಕಸ್ಥರೂ ಅಧಿಕಾರಸ್ಥರೂ ಎಂದಿನಂತೆ ಸುಖವಾಗಿದ್ದರು. ಬಡವರ ಮೈ ಮೋರೆಗಳು ಮಾತ್ರ ನಿತ್ಯ ಸೂತಕದ ಮೂರ್ತಿ ಆಗಿದ್ದವು. ಅಗಸ್ಟ ೪೨ರ ರಾಜಕೀಯ ಆಂದೋಲನಕ್ಕಾಗಿ ಅದು ಪ್ರಸಿದ್ಧಿ ಪಡೆದಿತ್ತು. ಒಂದು ಗುಪ್ತವಾದ ಪ್ರತಿಸರಕಾರವೇ ಅಲ್ಲಿ ಸ್ಥಾಪಿತವಾಗಿತ್ತು. ಅಲ್ಲಿ

ಒಂದೆರಡು ದಿನ ಇದ್ದು ಆ ಪ್ರಸಿದ್ಧ ಡಾಕ್ಟರರ ಕೂಡ ನಾನು ಜಿಲ್ಹೆಯ ಎಲ್ಲ ಕಡೆಗಳಲ್ಲಿ ತಿರುಗಾಡಿದೆ. ಸಮುದ್ರದ ದಂಡೆಯವರೆಗೆ ಹೋದೆ. ಆಗ ಮಾತ್ರ ನನ್ನೆದೆ ನೂರು ಹೋಳಾಯಿತು. ಕಣ್ಣೀರು ಸಾವಿರ ಸಲ ಹರಿಯಿತು. ಮೂರ್ಛೆ ಹೋಗುವಂಥ ನೋಟ ನೋಡಿ ದಿಕ್ಕುತಪ್ಪಿದಂತಾದೆ. 'ಈ ಜಗತ್ತಿನಲ್ಲಿ ದೇವರು ಇಲ್ಲ. ಸರ್ವಥಾ ಇಲ್ಲ' ಎಂದು ಒದರಿಕೊಂಡೆ. ಕೆಳಮನಿ, ಅದನ್ನು ನಿನಗೆ ಬರೆದು ತಿಳಿಸಬೇಕೆಂದರೆ ಮತ್ತೆ ಆ ಚಿತ್ರ ಕಣ್ಣಿಗೆ ಕಟ್ಟಿ ನನಗೆ ಎಚ್ಚರ ತಪ್ಪಿದಂತಾದೀತು. ತಿಳಿಸದಿದ್ದರೆ ನಾನೇಕೆ ಇಲ್ಲಿ ಇನ್ನೂ ಇದ್ದೇನೆ ಎಂಬುದೇ ನಿನಗೆ ತಿಳಿಯಲಾರದು. ತಿರುತಿರುಗಿ 'ಹೊರಟು ಬಾ' ಎಂದು ನೀನೂ ತಂದೆಯವರೂ ಪತ್ರ ಬರೆಯುತ್ತೀರಿ. ಆದರೆ ನಾನು ಹೇಗೆ ಬಿಟ್ಟುಬರಲಿ ? ಇಲ್ಲಿಂದ ಬಿಟ್ಟು ಬಂದರೆ ನಾಚಿಕೆಯನ್ನೂ ಮನುಷ್ಯತ್ವವನ್ನೂ ಬಿಟ್ಟು ಶುದ್ಧಪಶುವಾಗಿ ಬರುವಂತೆ ನನಗೆ ಅನಿಸುವದು. ಇನ್ನೊಂದು ತಿಂಗಳಲ್ಲಿ ಬರುವದಾಗಿ ಮನೆಯವರ ಸಮಾಧಾನಕ್ಕಾಗಿ ಪತ್ರ ಬರೆದೀನಿ. ನಿನಗೂ ಹಾಗೆ ಬರೆದೇನು ಉಪಯೋಗ ? ದಯ ಮಾಡಿ ಈ ಗುಟ್ಟನ್ನು ಒಡೆಯಬೇಡ.

ಅಕ್ಟೋಬರ ನೆರೆಹಾವಳಿ ಹೇಗೆ ಬಂತು, ಏನಾಯಿತು ಎಂಬುದನ್ನು ಯಾರೂ ಹೆಚ್ಚಾಗಿ ಕಂಡವರಿಲ್ಲ. ಕಂಡವರ ಸಂಖ್ಯೆ ಕಣ್ಮರೆಯಾದರೂ. ಬದುಕಿದ ಕೆಲವರಿಗೆ ಅದರ ಅರಿವು ಮಸಮಸಕಾಗಿದೆ. ಹೊರಗಿನ ಜಗತ್ತಿಗೆ ಈ ಹೃದಯ ವಿದಾರಕ ಸುದ್ದಿ ತಿಳಿದದ್ದು ತಿಂಗಳ ಮೇಲಂತೆ. ಬಿರುಮಳೆ ಧೋ ಧೋ ಎಂದು ಬೀರುತ್ತಿರವಾಗ ಖಟ್‌ಖಡಲ್ ಎಂದು ಸಿಡಿಲೊಂದು ಗುಡುಗಿ ಮನೆಯೊಂದರ ಮೇಲೆರಗಿ ಅದನ್ನು ನೆಲಸಮಮಾಡಿ ಅನೇಕರನ್ನು ಸುಟ್ಟು ಉಳಿದವರ ಎಚ್ಚರು ತಪ್ಪಿಸಿ ಹೋಗುವಂತೆ ಈ ನೆರೆ ದಕ್ಷಿಣಬಂಗಾಲದ ಪಡುವಣ ತುದಿಯ ನಾಡನ್ನೆಲ್ಲ ಅದುರಿಸಿಬಿಟ್ಟಿತು. ಈಗಿನ ಉಳಿವುಗಳಿಂದ ಆಗಿನ ಅಳಿವನ್ನು ತಿಳಿಯಬೇಕು. ಸಮುದ್ರದ ತಡಿಯವರೆಗೆ ಹೋಗಿ ಒಂದು ದಿನ ಸಂಜೆ ಎತ್ತರದ ಬಂಡೆಯೊಂದರ ಮೇಲೆ ಡಾಕ್ಟರ ಮಹಾಶಯರೊಡನೆ ನಾನು ಕುಳಿತಾಗ ಅದೇಕೊ ಗಾಳಿ ಬಿರುಸಾಯಿತು. ತೆರೆ ಏರೇರ ಹತ್ತಿದವು. ಡಾಕ್ಟರ ಮೋರೆ ಗಂಟಿಕ್ಕಿತು. 'ಹೀಗೇ ಹೀಗೇ ಬಂದಳು ಅಂದಿನ ಮೃತ್ಯುದೇವತೆ !' ಎಂದರು. ಬೆಂಗಾಲಿಗಳು ಯಾವ ಉದ್ಯೋಗದಲ್ಲಿದ್ದರೂ ಪ್ರಾಂತಾಭಿಮಾನಿಗಳೆಂದೂ ಅತ್ಯಂತ ಭಾವನಾಶೀಲರೆಂದೂ ಕೇಳಿದ್ದೆ. ಇಲ್ಲಿ ಬಂದ ಮೇಲೆ ನನಗೆ ಅದು ನಿಜವೆಂದು ತೋರಿತು; ಈ ಡಾಕ್ಟರರಂತೂ ರಾಮಕೃಷ್ಣ ಮಠದ ಉದಾತ್ತ ಸಂಪ್ರದಾಯದಲ್ಲಿ ಬೆಳೆ

ದವರು. ಅವರೊಡನೆ ಪ್ರವಾಸ-ಸಹವಾಸಗಳಿದ್ದ ಮೂಲಕವೇ ನಾನು ಆ ಯಾತನೆಯಲ್ಲಿ ಬದುಕಿದ್ದು. ಅವರಾಡಿದ ಆ ಒಂದು ಚಿತ್ರ ನಿಲ್ಲಿಸುವ ದಾರುಣ ವಾಕ್ಯದಿಂದ ನನ್ನ ಭೀಕರ ಕಲ್ಪನೆ ಜಾಗೃತವಾಯಿತು. ನಮ್ಮ ಕೊನೆಗಾಲವೂ ಬಂತೇನೊ ಎನ್ನುವಂತೆ ಸಮುದ್ರವನ್ನು ನೋಡುತ್ತ ಸಚಿಂತನಾಗಿ ಕುಳಿತೆ. ಅದನ್ನರಿತು 'ಈಗೇನು ಆಗುವದಿಲ್ಲ, ಅಮೃತ್. ಹೆದರಬೇಡ, ಆದರೆ ಅಂದು ನೋಡು ಹೀಗಾಯಿತೆಂದು ಹೇಳುತ್ತಾರೆ. ಇದ್ದಿರಲಿಕ್ಕೆ ಒಮ್ಮೆಲೆ ಈ ಭಾಗದಲ್ಲಿ ಅಕ್ಟೋಬರ ೧೬ ಬೆಳಿಗ್ಗೆ ಬಿರುಗಾಳಿ ಮೊದಲಾಯಿತು. ಸಮುದ್ರದ ತೆರೆಗಳು ಗಡಬಡಿಸಿಕೊಂಡೆದ್ದು ಹೆಡೆ ತೋರಿದವು. ಇದರಲ್ಲೇನು ವಿಶೇಷವೆಂದು ಹಳ್ಳಿ ಹಳ್ಳಿಯ ಜನ ತಮ್ಮ ಹೊಲಮನೆಯ ಕೆಲಸಗಳಲ್ಲಿ ತೊಡಗಿದ್ದರು. ಕೆಲವು ವೃದ್ಧರು ಮಾತ್ರ ಅಪಶಕುನವನ್ನಾಡಿದರು. ಬರಬರುತ್ತ ಬಿರುಗಾಳಿ ಮರಗಾಳಿ ಯಾಗಿ ಈ ಭೂಮಿಯನ್ನೇ ಎತ್ತಿ ಒಗೆಯಲು ಬಂದ ಪ್ರಳಯಝುಂಝಾವಾತ ವಾಗಿ ಬಿಟ್ಟುಬಿಡದೆ ಹೆದ್ದಾಳಿಯನ್ನು ನಡಸಿತು. ಅಬ್ಬ ! ಏನದರ ಆರ್ಭಟಿ ! ಎಂತ ದರ ಪ್ರಚಂಡ ಕೋಪಾಟೋಪ ! ನಿಂತುನಿಂತಂತೆ ಮನೆಯ ಛಪ್ಪರ ಧೊಪ್ಪನೆ ಕುಸಿದವು. ತೊಲೆ ಹಾರಾಡಿದವು. ಮರಗಳು ಬೇರುಸಹಿತ ಕಿತ್ತುಕೊಂಡು ನೆಲ ಕ್ಕುರುಳಿದವು, ದನ, ಜನ ಲೆಕ್ಕವಿಲ್ಲದೆ ಸಾವಿನ ಇಡಿ ತೆರೆದ ಆ ಕರಾಳ ಬಾಯಲ್ಲಿ ಒಂದು ತುತ್ತಾಗಿ ಸೇರಿದವು. ಇಷ್ಟಕ್ಕೆ ಮುಗಿಯಿತೇ, ಪ್ರಳಯರುದ್ರನ ತಾಂಡವ ನೃತ್ಯಕ್ಕೆ ತಾಳ ಹಾಕಲು ವರುಣ ದೇವನು ಪರಿವಾರಸಹಿತ ಬಂದಂತೆ, ಸಮುದ್ರದ ಅಲೆಗಳು ಮಲೆಗಳಾಗಿ ಏರೇರಿ, ತುಂತುರುಗಳ ಸುರಿಮಳೆಯನ್ನು ಸುರಿಸುತ್ತ ಸಳ ಸಳಿಸುತ್ತ ನೆಲದ ಮೇಲೆ ನುಗ್ಗಿದವು. ನೆಲ-ಹೊಲ; ಊರು-ಉದ್ಯಾನವೆಲ್ಲವೂ ನೀರಿನ ನೆಲೆಯಾಯಿತು. ಮೃತ್ಯುರಾಜನ ಸೇನಾಪತಿಯಾಗಿ ಬಂದ ಸಮುದ್ರ ನಾಥನ ಬಿಡಾರವಾಯಿತು. ಮೇಲೆ ಭಯಂಕರವಾದ ಬಿರುಮಳೆ ಸುರಿಯತೊಡ ಗಿತು. ಈ ತಾಂಡವದ ತೊತ್ತಳದುಳಿತದ ಬುಡದಲ್ಲಿ ಸಿಕ್ಕ ಪ್ರಾಣಿಗಳಿಗೆ ಮರಣವೇ ಮುಕ್ತಿಯಾಯಿತು. ಬಡಜನರ ಬುದ್ಧಿ ಮಂಕಾಯಿತು. ಸತ್ತವರು ಹೋದರೆಂದು ಇದ್ದವರು ಅಳುವುದಕ್ಕೂ ಆಗದೆ ನೀರಲ್ಲಿ ಕಟಕಟ ನಡುಗುತ್ತ ನಿಂತರು. ನೀರು ಏರುತ್ತ ಆಳೆತ್ತರವನ್ನು ಮೀರಿ ಅವರನ್ನು ನೀರ್ಗುಡಿಸಿ ಮುಳುಗಿಸಿತು. ಕೆಲವರು ಮರವೇರಿದರೆ ಅವರೊಡನೆ ಮರಗಳೂ ನೀರಿಗೆ ಗಾಳಿಗೆ ಆಹುತಿಯಾದವು. ನಷ್ಟ ಸಂಸಾರರಾಗಿ ಮೃತ್ಯುಮುಖ ಪತಿತರಾದ ಹಳ್ಳಿಗರ ಕರುಳು ಕತ್ತರಿಸುವ ಕೂಗು ಗಳನ್ನು, ತಾಯಿಯನ್ನೊದರಿ ಪ್ರಾಣ ಹೋಗುವವರೆಗೆ ಹಲುಬುತ್ತಿರುವ ಎಳ

ಮಕ್ಕಳ ಅಳುವಿಕೆಗಳನ್ನು ಯಾರು ಕೇಳಬೇಕು ? ಗಾಳಿಯ ಗಾನದಲ್ಲಿ ಎಲ್ಲ ಅಪಸ್ವರಗಳು ಅಡಗಿಹೋದವು. ಅವ್ವೃತ, ಈ ಮರಿಪ್ರಳಯವೇ ಹೀಗಿದ್ದಮೇಲೆ ಅಪರಂಪಾರವಾದ ಈ ವಿಶ್ವವನ್ನೇ ನುಂಗುವ ಮಹಾಪ್ರಳಯ ಹೇಗಿರಬೇಡ ? ' ಡಾಕ್ಟರರು ಒಂದು ಕ್ಷಣ ಸ್ತಬ್ಧರಾದರು. ಅವರ ಕೊರಳುಬ್ಬಿ ಮಾತು ತಡೆಯಿತು. ನನಗಂತೂ ಕಂಬನಿಯ ಧಾರೆಯನ್ನು ಸಿಲ್ಲಿಸುವದಾಗಲಿಲ್ಲ. ಇನ್ನು ಕೇಳುವ ತ್ರಾಣವೂ ಇರಲಿಲ್ಲ. 'ಇನ್ನು ಹೋಗೋಣವೇ ? ' ಎಂದು ಅವರೊಡನೆ ಎದ್ದುಬಿಟ್ಟೆ. ಕೆಳಮನಿ, ಈ ಅಭೂತಪೂರ್ವವಾದ ಹಾವಳಿಯಿಂದ ಲಕ್ಷಾವಧಿ ಮನೆ ನೆಲಕ್ಕುರುಳಿದವು. ಎಣಿಸಲಾಗದಷ್ಟು ಮರಗಳು ಕೆಳಬಿದ್ದವು. ನಾವು ತಿರುಗಾಡಿದ ಯಾವ ಹಳ್ಳಿಯನ್ನು ನೋಡಿದರೂ ಎಲ್ಲಾ ಹಾಳು, ಬೀಳು. ನೂರಕ್ಕೆ ಐದು ಮನೆಗಳೂ ಗಟ್ಟಿಮುಟ್ಟಿಯಾಗಿಲ್ಲ. ಎಲ್ಲ ಭತ್ತದ ಬೆಳೆ ನಷ್ಟವಾಯಿತು. ದನಕರುಗಳೆಲ್ಲ ಸತ್ತುಹೋದವು. ಬಂಗಾಲದ ಮಂತ್ರಿಗಳು ಎಷ್ಟು ಎಚ್ಚರಿಕೆಯಿಂದ ಹೇಳಿದ ಅಂಕಿಗಳಲ್ಲಿಯೂ ಸುಮಾರು ೭ ಲಕ್ಷ ಗುಡಿಸಲು ನಾಶಹೊಂದಿದವೆಂದೂ ಸುಮಾರು ೧೫ ಲಕ್ಷ ಜನ ನಿರಾಶ್ರಿತರಾಗಿರುವರೆಂದೂ ಲಕ್ಷದವರೆಗೆ ದನಕರುಗಳು, ಹದಿನಾರು ಸಾವಿರದಷ್ಟು ಜನ ಸತ್ತರೆಂದೂ ನಿರ್ದೇಶವಿದೆ. ಇದಕ್ಕಿಂತ ಎಷ್ಟೋ ಹೆಚ್ಚು ಹಾನಿಯಾಗಿರಬೇಕೆಂದು ಬಲ್ಲವರು ಹೇಳುತ್ತಾರೆ. ಹಿಂದೆ ಬಿಹಾರ ಮತ್ತು ಕ್ವೆಟ್ಟಾದ ಭೂಕಂಪಗಳ ಸುದ್ದಿ ಕೇಳಿದಾಗ ನಾನಂತೂ ಇದೇನು ಭೂಲೋಕವೋ ಮೃತ್ಯುಲೋಕವೋ ಎಂದು ಮರುಗಿದ್ದೆ. ಇಂದಿಲ್ಲಿ ಯಮಲೋಕವನ್ನು ಬದುಕಿದ್ದಾಗಲೇ ಕಾಣುತ್ತಿದ್ದೇನೆ. ನೆರೆಹಾವಳಿ ಎಷ್ಟೇ ಘೋರವಾದರೂ ಬಯಲಾಟದ ರಾವಣನಂತೆ ಹತ್ತು ಮುಖ ಕಟ್ಟಿಕೊಂಡು ಬಂದು ಕೂಗಿ ಕುಣಿದು ಹೋಗಿದ್ದರೆ ಕ್ಷೇಮವಿತ್ತು. ಹಾಗಾಗಲಿಲ್ಲ. ಅಂದಿಗಿಂತ ಇಂದಿನ ಮೆಲ್ಲಡಿಗೆಯ ಮೃತ್ಯು ಹೆಚ್ಚು ಭಯಂಕರವಾಗಿದೆ. ತಿನ್ನಲಿಕ್ಕೆ ಕೂಳಿಲ್ಲದೆ ಕೈಗೆ ಸಿಕ್ಕದ್ದನ್ನು ತಿಂದು ಅರೆಬತ್ತಲೆಯಾಗಿ ಕಾಲಹಾಕುತ್ತಿರುವ ಜೀವಂತ ಹೆಣಗಳ ಸುತ್ತು ಮಾರಿಕಾ ಮಲೇರಿಯಾ ಬೇನೆಗಳು ಕೈತೊಳೆದುಕೊಂಡು ಬೆನ್ನುಹತ್ತಿವೆ. ಬಹುಕಾಲ ಪೀಡಿಸಿ ಕೆಲಕೆಲರನ್ನು ದಿನದಿನವೂ ಕುತ್ತಿಗೆ ಹಿಚುಕುತ್ತಿವೆ. ಈ ದೃಶ್ಯ ನೋಡಲಸಾಧ್ಯ, ಕೆಳಮನಿ. ಆದರೂ ಈಗ ನೋಡಲಿಕ್ಕೆ ಕಲಿತಿದ್ದೇನೆ. ಎಂದಿಲ್ಲದ ಧೈರ್ಯ ನನ್ನಲ್ಲಿ ಬಂದುಬಿಟ್ಟದೆ. ಪರೀಕ್ಷೆಯ ಚಿಂತೆ, ಮನೆಯಲ್ಲಿಯ ದುಃಖ ಎಲ್ಲವನ್ನು ನುಂಗಿದ ನೀಲಕಂಠನಂತೆ ಸೇವೆಗೆ ಮನಸ್ಸು ಅಪೂರ್ವ ಉತ್ಸಾಹದಿಂದ ಸಿದ್ಧವಾಗಿದೆ. ಸರಕಾರದವರೂ ಸಾರ್ವಜನಿಕ ಸಂಸ್ಥೆಗಳೂ ಈ ಭಾಗದ

ಜರ್ಜರಿತ ಜನರನ್ನು ಮನುಷ್ಯ ಬಟ್ಟೆಗೆ ತರಲಿಕ್ಕೂ ಮನೆ ಕಟ್ಟಿ ಮತ್ತೆ ಸಂಸಾರ ಸಂಮುಖವಾಗಲು ನೆರವಾಗುವದಕ್ಕೂ ಹೆಣಗುತ್ತಿರುವವು. ಆಡಳಿತದ ವಿಲಂಬ, ಅಲಕ್ಷ್ಯ, ಭೂತದಯೆಯ ಅಭಾವವನ್ನು ಟೀಕಿಸುವ ಮಾತೆಲ್ಲಾ ಕಡೆ ಕೇಳುತ್ತವೆ. ನಾನೋ ಸೇವೆ ಮಾಡುವ ಯೋಗ ದೊರೆತದ್ದು ನನ್ನ ಹೆಚ್ಚಿನ ಪುಣ್ಯವೆಂದು ನನ್ನ ಅಳಿಲುಸೇವೆಯಲ್ಲಿ ತೊಡಗಿದ್ದೇನೆ.

ಸಂಚಾರವೆಲ್ಲ ಮುಗಿದ ಮೇಲೆ ಕೊಂತಾಯಿ ಕೇಂದ್ರದಲ್ಲಿ ನನ್ನನ್ನು ಕೆಲಸಕ್ಕೆ ನಿಯಮಿಸಿದರು. ಅಲ್ಲಿ ಮುಖ್ಯವಾಗಿ ಪುಕ್ಕಟೆ ಸೀಪಾ ಕೊಡುವ ಕಾರ್ಯ ನಡೆದಿತ್ತು. ಆದರೆ ಅನೇಕ ನಿರಾಶ್ರಿತರು ರೋಗಪೀಡಿತರಾಗಿದ್ದ ಕಾರಣ ಆಹಾರ ವ್ಯವಸ್ಥೆಯ ಜೊತೆಗೆ ವೈದ್ಯಕೀಯ ವ್ಯವಸ್ಥೆ ಅವಶ್ಯವಾಗಿತ್ತು. ಹಲವು ತರುಣ ಡಾಕ್ಟರರ ಕೂಡ ನಾನು ಅಲ್ಲಿಯ ಕೆಲಸವನ್ನು ಕೈಕೊಂಡೆ. ಅವರ ಪರಿಚಯವು ಕೆಲದಿನಗಳಲ್ಲಿ ನಿಕಟ ಸ್ನೇಹವಾಗಿ ಬೆಳೆಯಿತು. ಅವರ ಒಡನಾಟವೆಂದರೆ ನನಗೆ ಹೆಚ್ಚಿನ ಪೌಷ್ಟಿಕವಾಗಿತ್ತು. ಕಾಲೇಜಿನ ಆಸ್ಪತ್ರೆಯಲ್ಲಿ ಆರೈಕೆಯ ಕೆಲಸವನ್ನು ಮಾಡುವಾಗಿನ ಬೇಸರ ಈಗ ಮಾಯವಾಗಿ ಎಷ್ಟು ತಾಸು ದುಡಿದರೂ ಶ್ರಮವೆನಿಸುತ್ತಿರಲಿಲ್ಲ. ರೋಗಿಗಳು ಗುಣಹೊಂದಿದಂತೆ ಅವರ ಮೈಯಲ್ಲಿ ಶಕ್ತಿ ಬಂದು ಮೋರೆಯ ಮೇಲೆ ಕಳೆ ಸೂಸಿದಂತೆ ನಮ್ಮೆಲ್ಲರಿಗೆ ಎಷ್ಟು ಸಂತಸವಾಗುವದು! ಸಂಚಾರದ ಕಾಲಕ್ಕೆ ಹೋದಹೋದಲ್ಲಿ ಕಂಡ ಎಲುಬಿನ ಹಂದರಗಳನ್ನೂ ತಲೆಬುರುಡಿಗಳನ್ನೂ ಹಾಳುಬಿದ್ದ ಗುಡಿಸಲುಗಳನ್ನೂ ನೋಡಿ ಕಣ್ಣಿಂಗುವಂತಾದ ಕಳವಳವನ್ನೂ ಈ ಅಲ್ಪ ಸೇವೆಯ ಸಫಲತೆಯಲ್ಲಿ ಮರೆತು ಬಿಟ್ಟೆನು. ಹೀಗಿರಲು ನನ್ನನ್ನು ಮುಂದೆ... ಹೌದು ಮರೆತು ಬಿಟ್ಟೆ. ನಿನಗೆ ಇಲ್ಲಿಯ ವಿಚಿತ್ರ ಅನುಭವವೊಂದನ್ನು ಬರೆದು ತಿಳಿಸಲೇ ಇಲ್ಲ. ಅದನ್ನು ನಿನಗೆ ತಿಳಿಸಲೇಬೇಕೆಂದು ಎಷ್ಟು ದಿನದಿಂದ ಕನವರಿಸುತ್ತಿರುವೆನು! ನೋಡು, ಇಲ್ಲಿಗೆ ಬಂದ ಕೆಲವು ದಿನ ಸುತ್ತಲಿನ ಭಾಗವನ್ನೂ ಕೊಂತಾಯ ಊರನ್ನೂ ಸುತ್ತಿಕೊಂಡು ಬಂದೆ. ಎಲ್ಲ ಭಾಗಗಳಿಗಿಂತ ಇದು ಹೆಚ್ಚು ಸಂಕಟಗ್ರಸ್ತ ಮತ್ತು ಭಯಾನಕವಾದುದೆಂದು ಹೇಳಿದ್ದರು. ನಮ್ಮ ತಿರುಗಾಟದಲ್ಲಿ ಇದನ್ನು ಸ್ವಲ್ಪಮಟ್ಟಿಗೆ ಅರಿತಿದ್ದೆ. ಈಗ ಸಾವಧಾನದಿಂದ ನೋಡುವ ಸಮಯ ಬಂದಿತು. ಒಂದು ಕಾಲುವೆಯಲ್ಲಿ ಜನರ ಹಾಗೂ ದನಗಳ ಹೆಣದ ಬಣವೆಯನ್ನು ನೋಡಿದೆ. ಒಂದು ಸಣ್ಣ ಹೊಂಡದಲ್ಲಿ ೫೦ ಹೆಣಗಳನ್ನು ಒಗೆದದ್ದು ಕಂಡೆ. ಕೊಂತಾಯಿಯ ಸಣ್ಣ ಸಣ್ಣ ಹಾಳು ಬೀದಿಗಳಲ್ಲಿ ಭಾರವಾದ ಹೆಜ್ಜೆ

ಇಡುತ್ತ ಒಬ್ಬನೇ ನಡೆದೆ. ಮಧ್ಯಾಹ್ನದ ಸೂರ್ಯನು ತಪ್ತನಾಗಿ ತೋರಿದನು. ಎಲ್ಲ ಕಡೆ ಭಣಭಣ ಸುರಿಯುತ್ತದೆ, ಒಂದು ಪಿಳ್ಳೆಯ ಮಿಸುಕಾಟವಿಲ್ಲ. ಬಹುಶಃ ಎಲ್ಲ ಮನೆಗಳು ನೆಲಸಮವಾಗಿದ್ದು ಅಲ್ಲಿಯೊಂದು ಇಲ್ಲಿಯೊಂದು ಗೋಡೆಯ ತುಣುಕು ಮರಣೋನ್ಮುಖನಾದ ಮುದುಕನಂತೆ ಮೈ ತೆರೆದು ನಿಂತಿವೆ. ಒಂದು ಬೀಳಲಾದ ಗುಡಿಸಲಿನ ಬಳಿ ಬಂದೆ. ಅಲ್ಲಿ ಜಡೆಗಟ್ಟಿದ ಬಿಳಿ ಗೂದಲು ಕೆದರುತ್ತ ಕುಷ್ಟ ಕುಷ್ಟ ಮುದುಕಿಯೊಂದು ಕೂತಿದೆ. ಮೈಯಲ್ಲಿ ಸಾವಿರ ಮಡಿಕೆ ಎದೆಯ ಮೇಲಿನ ಜೋಲು ಮೊಲೆ ತೆರೆದ ಎಲುಬಿನ ಹಂದರಕ್ಕೆ ಅಂಟಿಕೊಂಡು ನಿಸ್ಸತ್ವನೀರಸವಾಗಿ ತೂಗುಬಿದ್ದಿವೆ. ಅವೆಷ್ಟು ಹಸುಗೂಸುಗಳಿಗೆ ಹಾಲುಣಿಸಿ ಸೆರಗಿನಲ್ಲಿ ಒರಗಿಸಿ ಬೆಳಸಿದ ಈ ಮೊಲೆ ಈಗ ಬಾಡಿದ ಬಳ್ಳಿಯ ಕೊಳೆತ ಹಣ್ಣಿನಂತಾಗಿದೆ ! ಅವಳನ್ನು ನೋಡುತ್ತ ನಾ ಮೂಕನಾಗಿ ನಿಂತೆ. ಟೊಂಕದ ಸುತ್ತ ಒಂದು ಮಾನ ಮುಚ್ಚುವಷ್ಟು ಹೊಲಸು ಹರಕು ಚಿಂದಿ ಯಿದೆ. ಹತ್ತಿರ ಒಂದು ಒಡೆದ ಮಡಕೆಯಿದೆ. ನನ್ನ ನೋಡಿದೊಡನೆ ಅರೆ ಹುಚ್ಚಿಯಂತೆ ಅವಳು ಬಡಬಡಿಸಹತ್ತಿದಳು. 'ಏನು ನೋಡತೀಯೋ ಹುಡುಗ. ನಿನ್ನ ಹತ್ತಿರ ವಿಷದ ಗುಳಿಗೆ ಇದ್ದರೆ ಕೊಡು. ಅನ್ನ ಕೊಡಲಿಕ್ಕೆ ಬರಬೇಡ ಹೋಗು' 'ಹಾಗೇಕೆ ಅನ್ನುವಿ ಮುದುಕಿ, ನನ್ನ ಕೂಡ ಬಾ' ಅಂದೆ. ಅಲ್ಲಿಂದ ಅವಳು ತನ್ನ ದುರಂತ ಪುರಾಣವನ್ನು ಬಿಚ್ಚಿದಳು. 'ಯಾಕಂತೇನು ಕೇಳತಿ ಬೇಟಾ! ಸಾವು ಬಂದು ಈ ತುಂಬಿದ ಮನೆಯೊಳಗಿನ ಎಲ್ಲರನ್ನು ನುಂಗಿ ನನ್ನೊಬ್ಬಾಕೆಯನ್ನುಳಿಸಿತು. ನನ್ನ ಸಂಸಾರ ಎಷ್ಟು ಛಂದವಾಗಿತ್ತು ! ನಾಲ್ಕು ಜನ ತುಂಡುತೊಲಿಯಾಗಿದ್ದ ಗಂಡುಮಕ್ಕಳು. ಅವರೆಲ್ಲರ ಮದುವೆ ಮಾಡಿದ್ದೆ. ಅವರ ಹೊಟ್ಟೆಯಲ್ಲಿ ನನಗೆ ಅದೆಷ್ಟು ಮೊಮ್ಮಕ್ಕಳಿದ್ದವು. ಈ ಮನೆತುಂಬ ಓಡಾಡುತ್ತಿದ್ದವು. ಮೊನ್ನೆ ಮೊನ್ನೆ ಸಣ್ಣ ಸೊಸೆ ಮುತ್ತಿನಂಥ ಗಂಡು ಮಗುವನ್ನು ಹೆತ್ತು ಹಸಿಬಾಣಂತಿಯಾಗಿದ್ದಳು. ಅವಳನ್ನೂ ಆ ಮಗು ವನ್ನೂ ತಗೊಂಡು ಹೋಗಿ ಅಲ್ಲಾನು ಈ ಗೋರಿಯೊಳಗೆ ಕಾಲಿಟ್ಟ ಮುದುಕಿ ಯನ್ನು...' ಎನ್ನುವುದಕ್ಕೆ ಅವಳ ಮಾತು ನಿಂತಿತು. ಕಣ್ಣ ಕೆಳಭಾಗದಲ್ಲಿ ದೊಡ್ಡ ಹನಿಯೊಂದು ಮೂಡಿ ಉರುಳಿತು. ಹೆಚ್ಚು ಅಳುವ ಶಕ್ತಿಯೂ ಇಲ್ಲದೆ ಹಿಂದಿನ ನೆನಪಿನ ದಂದುಗದಿಂದ ನೆಲಕ್ಕುರುಳಿದಳು. ನನಗೂ ಶೋಕ ಉಕ್ಕಿ ಬಂದಿತು. ಅವಳನ್ನು ಎಬ್ಬಿಸಿ ಮಡಿಕೆಯ ರಾಡಿನೀರಿನಿಂದ ಉಪಚರಿಸಿದೆ. ಸ್ವಲ್ಪ ಹೊತ್ತಿನ ಮೇಲೆ ತಾನು ಉಳಿದ ಬಗೆಯನ್ನು ಬಣ್ಣಿಸಿದಳು. ಬಿರು

ಗಾಳಿಯೂ ಮಳೆಯೂ ಆರಂಭವಾದ ಮೇಲೆ ಕೋಲು ಹಿಡಿದು ಮನೆಗೆ ಹೊರಟಿದ್ದ ಇವಳನ್ನು ಜಮೀನದಾರನ ಆಳೊಬ್ಬನು ಕನಿಕರದಿಂದ ಎತ್ತಿ ಒಯ್ದು ಅಟ್ಟದ ಮೇಲೆ ಮಲಗಿಸಿದನಂತೆ. ಅವಳನ್ನು ಮನೆಗೆ ಎಷ್ಟುಮಾಡಿದರೂ ಹೋಗ ಗೊಡಲಿಲ್ಲ. ಎಲ್ಲ ಶಾಂತವಾದ ಮೇಲೆ ತನ್ನ ಕರುಳಿನ ಬಳ್ಳಿ ಕಮರಿದ್ದು ನೋಡ ಲೆಂದು ಅವಳನ್ನಿಲ್ಲಿಗೆ ತಂದು ಬಿಟ್ಟಂತಾಯಿತು. ಇಂಥ ದಾರುಣ ದೃಶ್ಯಗಳನ್ನು ನಾನು ನೋಡಿದ್ದು ಒಂದೇ ಎರಡೇ ? ಒಂದು ಮನೆಯ ಗೋಡೆ ಕೆಳಗೆ ಬಿದ್ದಿವೆ. ಛಪ್ಪರವಂತೂ ಹಾರಿಹೋಗಿದೆ. ಅಡಿಗೆಮನೆಯಲ್ಲಿ ಸಣ್ಣ ಮಕ್ಕಳೊಡನೆ ಊಟ ಮಾಡುತ್ತ ಕುಳಿತ ತಾಯಿತಂದೆ ಒಬ್ಬರೊಬ್ಬರನ್ನು ತಬ್ಬಿ ಸಾವಿಗೆತುತ್ತಾದ ಸಂಗತಿ ಯನ್ನು ಸೂಚಿಸುವ ಅಸ್ಥಿಪಂಜರಗಳನ್ನು ಒಂದು ಕಡೆ ನೋಡಿದೆ. ಇನ್ನೊಂದು ಕಡೆ ನೀರು ಏರುತ್ತೇರುತ್ತ ಭೂತದಂತೆ ಬೆನ್ನಟ್ಟಲು ಬದುಕುವ ಆಸೆಯಿಂದ ಹೆಣಗಿ ಕೊನೆಗೆ ಮನೆ ಕಾಣುವುದು ಅಸಾಧ್ಯವಾಗಿ ಕೈಯಲ್ಲಿ ಕೈಹಿಡಿದು ನೆಲಕ್ಕೆ ಬಿದ್ದ ತರುಣ ಸತಿಪತಿಯರನ್ನು ನೋಡಿದೆ. ದೇಹ ಸುಸ್ಥಿತಿಯಲ್ಲಿದ್ದಾಗ ಕೈಯಲ್ಲಿ ಕೈ ಹಾಕಿ ಈ ದಂಪತಿಗಳು ಹೊರಟಿದ್ದರೆ ಈ ಮೋರೆಯಲ್ಲಿ ಎಂಥ ಕುಲುಕುಲು ! ಜೀವನದಲ್ಲಿ ಎಂಥ ಸೊಗಸು ! ಅದೇ ಈಗ ಎಲುಬಿನ ಬೆರಳು ಇನ್ನೊಂದರ ಎಲುಬಿನ ಬೆರಳಲ್ಲಿ ಮಲಕುಹಾಕಿ ಹದ್ದುನರಿಗಳ ಹಬ್ಬವಾಗಿ ಬಿದ್ದ ಹೆಣಗಳಾಗಿವೆ. ಹೀಗೆ ಕೊಂತಾಯಿಯ ಊರನ್ನು ನೋಡುತ್ತ ನಡೆದಿರಲು ನಡುಭಾಗದಲ್ಲಿ ಕಾಲು ಸಾಗದೆ ನಿಂತುಬಿಟ್ಟೆ. ‘ಯಮರಾಯನೇ ಈ ಲೋಕವನ್ನಾಳುತ್ತಿರುವನು. ದಯಾ ಳುವಾದ ದೇವನೊಬ್ಬನು ಇರುವನೆಂದು ಯಾರು ಬೇಕಾದವರು ಹೇಳಲಿ— ಪ್ರತ್ಯಕ್ಷ ರಾಮಕೃಷ್ಣ ಪರಮಹಂಸರಾಗಲಿ ವಿವೇಕಾನಂದರಾಗಲಿ—ಯಾರು ಹೇಳಿದರೂ ನಾನು ನಂಬುವುದಿಲ್ಲ. ದೇವನಿದ್ದರೆ, ಅವನಿಗೆ ದಯೆಮಾಯೆ ಯೆಂಬುವದಿದ್ದರೆ ಈ ಕೊಲೆಪಾತಕ ನಡೆಯುತ್ತಿತ್ತೇ ? ಈ ಯಮಪಟ್ಟಣದ ದೃಶ್ಯ ಕಾಣುತ್ತಿತ್ತೇ ? ತಾಯಿಯೆಂದಾದರೂ ತನ್ನ ಪ್ರೀತಿಯ ಮಕ್ಕಳನ್ನು ಹೀಗೆ ಕೊಲ್ಲುವಳೇ ? ಕಷ್ಟ ಬಡಿಸುವಳೇ ? ’ ಎಂದು ಮುಂತಾಗಿ ರಭಸದ ಆಲೋಚನೆ ನನ್ನ ಮುತ್ತಿದವು. ಕಣ್ಣು ಮುಚ್ಚಿದೆ. ಅದೇ ನೋಟಗಳು ಕಂಡವು. ನೋಡಲಾ ರದೆ ಕಣ್ಣು ತೆರೆದೆ. ಸುತ್ತೆಲ್ಲ ನೋಡಿದೆ. ಮನುಷ್ಯಲೋಕವೆಲ್ಲವೂ ಮಸಣದಂತೆ ಭಾಸವಾಯಿತು. ಅಷ್ಟರಲ್ಲಿ—ಅದೇನು ವಿಚಿತ್ರವೊ ಇನ್ನೂ ನನಗೆ ತಿಳಿದಿಲ್ಲ— ಮೋಡವಿಲ್ಲದೆ ತಂಪು ಗಾಳಿಯಿಲ್ಲದೆ ಆಕಾಶದಿಂದ ನನ್ನ ಸುತ್ತು ನಾಲ್ಕು ದೊಡ್ಡ ದೊಡ್ಡ ಹನಿಗಳುದುರಿದವು. ಇದೆಲ್ಲಿಯದೆಂದು ಮೇಲೆ ಮುಗಿಲತ್ತ ನೋಡಿದೆ.

ನನ್ನ ಹಣೆಯ ಮೇಲೆ ಒಂದು ಕಾದಹಸಿ ಬಿದ್ದಿತು. ಮುಂದೆ ಯಾವುದರ ಸುಳಿವೂ ಇಲ್ಲ. ಇದು ಮಳೆಯಲ್ಲವೆಂಬುದು ನನಗೆ ಸಿಚ್ಚಳವಾಗಿತ್ತು. ಹಾಗಾದರೆ ಏನಿರ ಬೇಕು ಎಂಬುದು ತಿಳಿಯಲಿಲ್ಲ. ಮುಂದೆ ಹೆಜ್ಜೆಯಿಟ್ಟು ಸಾಗಿದೆ. 'ಏನಾದರೇನು, ಇನ್ನೂ ನಾನಿರುವೆ' ಎಂದು ಆ ಅಳದಕ್ಕಿ ದೇವರು ಕಂಬನಿಗರೆದು ನನಗೆ ತಿಳಿಸಿದ ನೇನೋ ಎಂದೊಂದು ಕಲ್ಪನೆ ನನಗೆ ಹೊಳೆದು ಹೋಯಿತು.

ಕೊಂತಾಯಿಯಿಂದ ಇಲ್ಲಿಗೆ ಕಾಲೀಚರಣಪುರಕ್ಕೆ ಬಂದು ತಿಂಗಳಾಗ ಬಂತು. ಇಲ್ಲಿಯ ವೈದ್ಯಕೀಯ ಕೇಂದ್ರದಲ್ಲಿ ಹಗಲಿರುಳು ಕೆಲಸ ಮಾಡುತ್ತಿದ್ದೇನೆ. ನನಗೆ ಈಗ ಬೆಂಗಾಲಿ ಚೆನ್ನಾಗಿ ಅರ್ಥವಾಗಹತ್ತಿದೆ. ಸ್ವಲ್ಪ ಮಾತಾಡಲು ಬರು ತ್ತಿದೆ. ಇಲ್ಲಿಯ ಸೇವೆ ಅನೇಕ ತೆರನಾಗಿದೆ. ಔಷಧ, ಚುಚ್ಚುವಿಕೆ ಮುಂತಾದ ಶುಶ್ರೂಷೆಯಂತೂ ಸರಿಯೇ. ಅದರ ಜೊತೆಗೆ ಅನೇಕರಿಗೆ ಸಮಾಧಾನದ ಮಾತು ಹೇಳಿ ಮಾನಸಿಕರೋಗ ಅವರಿಗೆ ಬರದಂತೆ ನೋಡಿಕೊಳ್ಳಬೇಕಾಗಿದೆ. ಎಲ್ಲರೂ ತಮ್ಮ ಬಂಧುಮಿತ್ರರನ್ನು ಕಳಕೊಂಡು ಹೊಲಮನೆ ಹಾಳಾಗಿ, ಮುಳುಗಿದ ಹಡಗದಿಂದ ಹೇಗೋ ಪಾರಾಗಿ ಬಂದ ಪ್ರವಾಸಿಕರಂತೆ ನಿರ್ಗತಿಕರಾಗಿದ್ದಾರೆ. ಅವರಿಗೆ ವ್ಯಾಧಿಗಿಂತ ಆಧಿ ಹೆಚ್ಚಾಗಿದೆ. 'ಚಿಂತಿಸಬೇಡಿರಿ. ನಿಮ್ಮ ಹೊಲಮನೆ ಗಳಿವೆ. ಏನೂ ಆಗಿಲ್ಲ. ನಿಮ್ಮ ಬಂಧುಗಳೆಲ್ಲ ಬೇರೆ ಕಡೆ ಸುರಕ್ಷಿತವಾಗಿದ್ದಾರೆ' ಎಂಬ ಸುಳ್ಳಿನ ಪಠನ ಮಾಡಿ ಮಾಡಿ ದಡ್ಡುಬಿದ್ದಂತಾಗಿದೆ. ಇಂಥವರಲ್ಲಿ ರೋಗ ಬಲಿತು ನಮ್ಮ ಔಷಧೋಪಚಾರಕ್ಕೆ ಹಣಿಯದೆ ಹಲವು ಜನ ದಿನಾಲು ಸಾವಿನ ಬಾಯಲ್ಲಿ ಬೀಳುತ್ತಾರೆ. ಉಳಿದ ರೋಗಿಗಳಿಗೆ ತಿಳಿಯದಂತೆ ಅವರನ್ನು ಹೊತ್ತು ಹಾಕುವ ಹೊಣೆಯೂ ನಮ್ಮ ಮೇಲೆ ಬಿದ್ದಿರುತ್ತದೆ. ಈ ಎಲ್ಲ ಪ್ರಯಾಸವನ್ನು ತಡೆಯಲು ನನ್ನ ಮನಸ್ಸೊಮ್ಮೊಮ್ಮೆ ಒಪ್ಪುವದಿಲ್ಲ. 'ನಿನ್ನ ಕೈಲಾಗದ ಕೆಲಸವಿದು. ಸುಮ್ಮನೆ ಮುಂಬಯಿಗೆ ಹೋಗಿ ಅಭ್ಯಾಸ ಮಾಡು ಇಲ್ಲವೆ ಮನೆಗೆ ಹೋಗು' ಎಂದು ದೌರ್ಬಲ್ಯ ಆಗಾಗ ತಿವಿಯುತ್ತದೆ. ಆದರೆ ಇತರ ಕೆಲಸ ಗಾರರ ಅದ್ಭುತ ಉತ್ಸಾಹವನ್ನೂ ಸೇವಾವೃತ್ತಿಯನ್ನೂ ನೋಡಿದೊಡನೆ ಅದು ತಾನಾಗಿ ಕಾಲ್ದೆಗೆಯುತ್ತದೆ. ಮರಣದ ಮನೆಯಿಂದ ಒಬ್ಬಿಬ್ಬರನ್ನು ಉಳಿಸಿ ಅವರು ಮೈತುಂಬಿಕೊಂಡು ಓಡಾಡುವಂತೆ ಮಾಡಿದಾಗ ಅದೇನೊ ಒಂದು ತೃಪ್ತಿ ತುಂಬಿಬರುತ್ತದೆ. ಪರೀಕ್ಷೆಯಲ್ಲಿ ಫರ್ಸ್ಟ್‌ಕ್ಲಾಸ ಬಂದರೂ ಇಂಥ ಸಂತೋಷ ಆಗಲಾರದು, ಕೆಳಮನಿ.

ಮೊನ್ನೆ ಒಂದುದಿನ ಸಂಜೆಯವರೆಗೆ ದುಡದು ಬಹಳ ದಣಿದಂತಾಗಿ

ಪಾಸಿಗೆಯ ಮೇಲೆ ಬಂದು ಬಿದ್ದುಕೊಂಡೆ. ಕಣ್ಣು ಮುಚ್ಚಿದೆ. ರೋಗಿಗಳ ಚಿತ್ರಗಳು ಒಳಗಣ್ಣು ಮುತ್ತಿದವು. ಆ ಜೀವಂತ ಹೆಣಗಳ ವೈಕ್ಯ, ಮೋರೆ, ಅವುಗಳ ನೈರಾಶ್ಯ ನನ್ನಲ್ಲಿ ಬೇರೂರಿದಂತಾಗಿ ಚಿತ್ತ ನಿರ್ವಿಣ್ಣವಾಯಿತು. ಭಾರತವೆಲ್ಲ ರೋಗಿಗಳಿಂದ ತುಂಬಿದ ದೇಶವೆಂದು ತೋರಿಸುವ ಹಾಗೆ ಹಿಂದುಸ್ಥಾನದ ನಕಾಶದಲ್ಲಿ ಎಲ್ಲ ಕಡೆಗಳಲ್ಲಿ ರೋಗಗ್ರಸ್ತರ ಮುಖಗಳು ಕಂಡವು, ನರಳಿಕೆ ಕೇಳಿದವು. ನೋಡಲಾರದಾಗಿ ಕಣ್ಣು ತೆರೆದೆ. ಅದೇ ಕ್ಷಣಕ್ಕೆ ನನ್ನ ಡಾಕ್ಟರ ಮಿತ್ರನೊಬ್ಬನು ಬಂದು, 'ಇದು ನೋಡು ಅಮೃತ. ನಿನಗೊಂದು ಪತ್ರ ಬಂದಿದೆ' ಎಂದು ಪಾಕೀಟೊಂದನ್ನು ಕೊಟ್ಟನು. ಚಟ್ಟನೆ ಎದ್ದು ಕುಳಿತು ಪತ್ರ ತಗೊಂಡು ಒಡೆಯುತ್ತ ಮನೆಯಿಂದ ಅಥವಾ ನಿನ್ನಿಂದ ಬಂದ ಪತ್ರವಿರಬೇಕೆಂದು ಊಹಿಸಿದೆ. ಆದರೆ ಒಡೆದು ನೋಡಿದ ಮೇಲೆ ನಿರೀಕ್ಷೆ ತಪ್ಪಿಹೋಯಿತು. ಅದರಲ್ಲಿ ಪತ್ರವೇ ಇಲ್ಲ. ಕನ್ನಡ ಕವಿತೆಯೊಂದಿದ್ದು ಅದರ ಕೊನೆಗೆ 'ಪ್ರಸಾದ' ಎಂಬ ಹೆಸರಿತ್ತು. ಈ ಪ್ರಸಾದನಾರು ನನಗೆ ತಿಳಿಯಲೇ ಇಲ್ಲ. ಕವಿತೆಯ ಹೊರತು ಇನ್ನೇನೂ ಅದರಲ್ಲಿ ಬರೆದಿಲ್ಲ. ಪಾಕೀಟಿನ ಮೇಗಡೆಯನ್ನು ನೋಡಲಾಗಿ ನನ್ನ ಕಲಕತ್ತೆಯ ವಿಳಾಸಕ್ಕೆ ಹೋಗಿ ತಿರುಗಿ ಇಲ್ಲಿಗೆ ಬಂದಿತ್ತು. ಹೊರಟ ಸ್ಥಳದ ಅಂಚೆಯ ಮುದ್ರೆ ಯಾವುದೋ ಒಂದು ಊರಿನದು. ಸ್ಪಷ್ಟವಾಗಿ ಅರ್ಥವಾಗಲಿಲ್ಲ. ಹೋಗಲಿ,ಕವಿತೆಯಾದರೂ ಏನಿರುವದೆಂದು ಓದತೊಡಗಿದೆ. ಅದರ ಪ್ರತಿಯೊಂದನ್ನು ಇಲ್ಲಿ ನಿನಗಾಗಿ ಬರೆಯುವೆ. ಅಂದರೆ ಈ ಕವಿ ಯಾರೆಂದು ನೀನು ಕಂಡುಹಿಡಿಯಬಹುದು.

ಸಾಲದು ಸಾಲದು ಸುಲಭದ ಕಾಣಿಕೆ  
ಕಾಲವು ಬಂದಿದೆ ಸತ್ವಪರೀಕ್ಷಣಕೆ  
ಶತ ಶತಮಾನದ ಬಿಗುವಿನ ಸಂಕಲೆ  
ಗತಿಸುವುದೇ ತುಸು ಮಾತ್ರದ ತಿಣುಕಿನಲೆ ?  
ನಾಡಿಗೆ ನಾಡೇ ತನ್ನೆಚ್ಚರಿಸಿ  
ನರ ನರಸ್ರೋತವು ಕೆಚ್ಚನು ಹೆಚ್ಚಿಸಿ  
ಒಂದೇ ಕನಸಿನ ಒಂದೇ ಮನಸಿನ  
ಕೂಟದ ಬಲದಿಂದಲುಗಿಸೆ ಬಂಧನ  
ಸಡಿಲುತ ಕಳಚದೆ ? ಬಿಡುಗಡೆ ತಾರದೆ ?  
ನೂತನ ರಾಷ್ಟ್ರದ ಬೀಜವನೂರದೆ ?  
ಸೆರೆಮನೆಯೆಂಬುದನರಮನೆಯಾಗಿಸಿ

ತರತರ ಹಿಂಸೆಗೆ ಮೈಮನ ತೂಗಿಸಿ
ಹರಣವ ಬಿಡುವಿಗೆ ಮುಡಿಪೆಂದೊರೆಯುತ
ಮರಣವ ಕರುಣೆಯು ಕರೆಯೆಂದೊಲಿಯುತ
ತ್ಯಾಗದ ಯಾಗದಿ ತನ್ನೆಲ್ಲವನು
ಹೋಮಿಸಬಲ್ಲನೆ ಧನ್ಯನು ಧೀರನು.
ಇಂದಿನ ಯಾತನೆ ಹಿರಿದಹುದಾದರು
ಬರಲಿಹ ಭವಣೆಗೆ ಅದು ಯಾವಿದಿರು ?
ಹಿಮವತ್‌ಪರ್ವತ ನಡುಗಿಸಿ ತಾವು
ಶೋಕದ ಒರಲಿಕೆ ಗದುಗಮಿಸ್ಯಾವು !
ನದಿಗಳ ನೆರೆಯನು ಬರಿಸುತ ದಿನವು
ನೆತ್ತರ ಹೊಳೆಗಳು ಹರಿಹರಿದಾವು !
ನಾಡಿನ ಎಲ್ಲೆಡೆ ಹೇಳಲು ಬಾರದ
ನಿಸರ್ಗ ಕೋಪದ ಮಾನವತಾಪದ
ಉರಿಯುರಿ ಹತ್ತುತ ನಾಲಿಗೆ ಚಾಚುತ
ನಮ್ಮಯ ಧೈರ್ಯವ ಚಾಗವ ಕೆಣಕುತ
ಬರುವುದು ನಿಶ್ಚಯ, ಬೆದರುವುದೇಕೆ ?
ಯಾವುದೊ ಶಕುತಿಯು— ಸಂಶಯವೇಕೆ ?—
ಇಂದಿನ ನಾನಾದುಃಖದ ಭಾರವ
ತಂದಿದೆ ಮಾಡಲು ಧೈರ್ಯದ ಮೇರುವ.
ಈ ಸ್ವಾತಂತ್ರ್ಯದ ಕುದಿವಾವಗೆಯಲಿ
ವಿಧವಿಧವೇದನೆ ತಾಳುತ ನಗೆಯಲಿ
ಹಣ್ಣುತ ಬಲಿಯುತ ಹುಟ್ಟುತಲಿಹನು
ನಮ್ಮಯ ಹೆಮ್ಮೆಯ ರಾಷ್ಟ್ರದ ಪುರುಷನು.

—ಪ್ರಸಾದ

ಕೆಳವುನಿ, ಈ ಕವಿತೆಯನ್ನು ಓದುತ್ತಿರುವಂತೆ ನನ್ನ ದಣಿವೆಲ್ಲ ಹಾರಿ ಹೋಯಿತು. ಮೈಯಲ್ಲಿ ಹೊಸ ಚೈತನ್ಯ ತುಂಬಿದಂತಾಯಿತು. ಇದನ್ನು ತಿರತಿರುಗಿ ಅನ್ನುತ್ತ ಕೋಣೆಯಲ್ಲಿ ತಿರುಗಾಡಿದೆ. ಇದನ್ನು ನನ್ನ ಕಡೆ ಕಳಿಸಿದ ಕವಿಯ ಹೆಸರು ಪ್ರಸಾದನೆಂದರಾರು ಗೊತ್ತಿಲ್ಲದೆ ಹೋದರೇನಾಯಿತು, ಅವನು

ಕಳಿಸಿದ ಈ ಕವಿತೆ ನನಗೊಂದು ಪ್ರಸಾದವಾಗಿ ದೊರಕಿತು. ಜಗತ್ತಿನಲ್ಲಿ ದೇವರಿಲ್ಲ ಎಂದು ಹಿಂದೆ ಹಲವು ಸಾರಿ ಕೂಗಿದ್ದೆ; ಇಂದೂ ನನ್ನ ಬುದ್ಧಿಗೆ ಮನ ವರಿಕೆಯಾಗಿಲ್ಲ. ಆದರೆ ಒಳ್ಳೆಯ ಕಾರ್ಯಕ್ಕೆಂದು ನಿಂತವರಲ್ಲಿ ಹೊಸ ಹೊಸ ಹುರುಪನ್ನು ತಂದು ತುಂಬುವ ಯಾವುದೋ ಅದ್ಭುತ ಶಕ್ತಿಯೊಂದು ಇರಬಹು ದೆಂದು ಮಾತ್ರ ನನಗೆ ಈಗ ತೋರಿದೆ. ಕವಿತೆಯನ್ನು ಸಾವಧಾನವಾಗಿ ಓದಿಕೊಂಡೆ ; ಅದರಲ್ಲಿಯ ಉಜ್ವಲವಾದ ದೇಶಾಭಿಮಾನವೂ ಈಗಿನ ತ್ಯಾಗ ಸಾಲದು, ಮಿಗಿಲಾದ ತ್ಯಾಗವಿನ್ನೂ ಬೇಕೆಂಬ ಮನೋಭಾವವೂ ಕಷ್ಟಸಹ ನೆಯ, ತ್ಯಾಗದ ತಳಹದಿಯ ಮೇಲೆ ಹೊಸ ರಾಷ್ಟ್ರ ನಿರ್ಮಾಣವಾಗುತ್ತಲಿದೆ ಎಂಬ ಆಶಾದಾಯಿತ್ವವೂ ನನಗೆ ಬಹಳ ಮೆಚ್ಚಿಗೆಯಾದುವು. ಕತ್ತಲೆಯಲ್ಲಿ ಎಡವುತ್ತ ಮುಗ್ಗುತ್ತ ಹೊರಟ ನನಗೆ ಗುರಿಯೂ ದಾರಿಯೂ ಆರದ ಜ್ಯೋತಿ ಯಾಗಿ ದೊರೆತವು. ಈ ಕವಿ ನಮ್ಮ ನಾಡಿನ ಸ್ವಾತಂತ್ರ್ಯದ ಆಂದೋಲನದಲ್ಲಿ ಧುಮುಕಿದ ಒಬ್ಬ ಕನ್ನಡ ತರುಣನಾಗಿರಬಹುದೇ ಎಂದು ಒಂದು ಕ್ಷಣ ಆಲೋಚಿಸಿದೆ. ಆಮೇಲೆ, ಯಾರಿದ್ದರೇನು, ಅವನ ಅಂತಃಕರಣ ರಾಷ್ಟ್ರಭಾವನೆ ಯಿಂದ ಪ್ರದೀಪ್ತವಾಗಿರಬೇಕೆಂದು ಅಂದುಕೊಂಡೆ. 'ಇಂದಿನ ನಾನಾದುಃಖದ ಭಾರವ, ತಂದಿದೆ ಮಾಡಲು ಧೈರ್ಯದ ಮೇರುವ' ಎಂದು ಮುಂತಾದ ಕೊನೆಯ ಸಾಲುಗಳನ್ನು ಮರಮರಳಿ ಗುಣಿಗುಣಿಸುತ್ತ ನನ್ನ ಕಾರ್ಯಕ್ಕೆ ರೋಗಿಗಳ ಕುಟೀರದತ್ತ ಹೊರಟೆ. ಯೋಗಕ್ಷೇಮ ಕೇಳುವುದರಲ್ಲಿ, ಔಷಧಕೊಡುವುದರಲ್ಲಿ, ಚುಚ್ಚುವುದರಲ್ಲಿ ಅದೆಂಥ ಆಸ್ಥೆ, ಅದೆಂಥ ಉತ್ಸಾಹ ನನ್ನಲ್ಲಿ ಸೂಸುತ್ತಿದ್ದವು ! ಇಂದು ನನ್ನ ಮೈಯೆಲ್ಲ ಸಾವಿರ ಚೂರಾಗಿ ಹೋದರೂ ಚಿಂತೆಯಿಲ್ಲ. ನಮ್ಮ ರಾಷ್ಟ್ರದ ಮಹಾಮಂದಿರದ ತಳದಲ್ಲಿ ಮರೆಯಾಗಿ ಹುದುಗಿದ ಕಲ್ಲಿನಂತೆ ನನ್ನ ಮೂಕಸೇವೆಯನ್ನು ಸಲ್ಲಿಸಬೇಕೆಂದು ಹಾತೊರೆದೆ. ಎಲ್ಲರೂ ನನ್ನ ಅಂದಿನ ಉಕ್ಕಂದವನ್ನು ನೋಡಿ ಆಶ್ಚರ್ಯಚಕಿತರಾದರು. ಇವನ ಮೈಯಲ್ಲಿ ಗಾಳಿ ಹೊಕ್ಕಿದೆ ಎಂದು ಒಬ್ಬಿಬ್ಬರು ಚೇಷ್ಟೆ ಸಹ ಮಾಡಿದರು. ಹಾಸಿಗೆಯಿಂದ ಹಾಸಿಗೆಗೆ ಹೋಗುತ್ತ ಒಬ್ಬ ಹದಿನೆಂಟು ವರ್ಷದ ತರುಣಿಯ ಹತ್ತಿರ ಬಂದೆ. ಕೆಟ್ಟ ಮಲೇ ರಿಯಾದಿಂದ ಅವಳು ಬಳಲುತ್ತಿದ್ದಳು. ಎಷ್ಟು ಕ್ವಿನಾಯಿನ್ ಹಾಕಿದರೂ ಚುಚ್ಚಿದರೂ ಅವಳಿಗೆ ಚಳಿಜ್ವರ ಬಿಟ್ಟಿರಲಿಲ್ಲ. ಮೈಯತ್ರಾಣ ಸರಿದುಹೋಗಿದೆ, ಮುಖ ಬಿಳಿಪೊಡೆದಿದೆ. ಆ ಸಂಜೆ ಅವಳಿಗೆ ಚಳಿಯಾಗಿ ಜ್ವರ ಬರುವ ಪಾಳಿ ಇತ್ತು. 'ಏನು ಬಂತೇನು ಹೇಮುಂತಖುತು ?' ಎಂದು ಅವಳನ್ನು ನಗೆಚಾಟಿಕೆ

ಯಲ್ಲಿ ಕೇಳಿದೆ. ಅವಳು ಮೋರೆಯ ಮೇಲಿನ ಮುಸುಗನ್ನು ತೆಗೆದು ಮುಗುಳ್ನಗೆ ನಕ್ಕಳು. ನನಗೆ ಆಶ್ಚರ್ಯವಾಯಿತು. ಹತ್ತಿರ ಕರೆದು ನನ್ನ ಕೈಯನ್ನು ತನ್ನ ಕೈಯಲ್ಲಿ ತಗೊಂಡು ಒತ್ತಿದಳು. 'ಯಾಕೆ ಹೇಗಿದೆ ?' ಎಂದು ಮತ್ತೆ ಕೇಳಿದೆ. ಅವಳು ನನ್ನನ್ನು ನಿಟ್ಟಿಸಿ ನೋಡುತ್ತಿರುವಾಗಲೆ ಕಣ್ಣಿಂದ ಕಂಬನಿಯ ಧಾರೆ ಸುರುವಾಯಿತು. ನಾನು ಗಾಬರಿಯಾದೆ. ಅವಳಿಗೆ ಅವಸಾನಕಾಲ ಬಂದಿತೆಂದು ಹೆದರಿರಬೇಕು ಎಂದು ಸಲಿಗೆ ದನಿಯಲ್ಲಿ 'ಹಾಗೆಲ್ಲ ಕಾಳಜಿ ಮಾಡಬಾರದು, ವೀಣಾ' ಎಂದೆ. ಅವಳು ಅಳುವಿನಲ್ಲಿಯೇ ಮುಗುಳ್ನಗೆ ನಕ್ಕು 'ಇನ್ನೇಕೆ ಕಾಳಜಿ ನನಗೆ ಅಮೃತ್ ? ಅಮೃತ್, ನೀವು ನನಗೆ ಸಂಜೀವಿನಿಯಾಗಿ ನನ್ನ ಬದುಕಿಸಿ ದಿರಿ' ಎಂದು ಭಾವಾವೇಶದಿಂದ ಮಾತಾಡಹತ್ತಿದಳು. ನನ್ನನ್ನು ಎಲ್ಲರೂ ಅಮೃತ್ ಎಂದೇ ಇಲ್ಲಿ ಕರೆಯುತ್ತಿರುವರು. ವೀಣೆಯ ಮಾತಿಗೆ ನಾನು 'ಓಹೋ ಈಗರ್ಥವಾಯಿತು' ಎಂದೆ. 'ಹಾಗಾದರೆ ಈವತ್ತು ಜ್ವರ ಬರಲಿಲ್ಲವಲ್ಲವೇ ? ' ಎಂದು ಆಡಿದೆ. ಅದಕ್ಕೆ ವೀಣೆ ತುಸು ತಲೆದಿಂಬಿಗೆ ಆತು ಎದ್ದು ಕುಳಿತು 'ಇನ್ನು ಜ್ವರ ಹೋಯಿತು, ಅಮೃತ್. ನನಗೆ ಶಕ್ತಿ ಬಂದಂತಾಗಿರುವದು' ಎಂದು ಇಲ್ಲದ ಆಶಾವಾದದಿಂದ ಉತ್ತರ ಕೊಟ್ಟಳು. ಆದರೂ ಅವಳ ಮಾತಿಗೆ ನನ್ನ ಸಂಪೂರ್ಣ ಬೆಂಬಲಕೊಟ್ಟು ಔಷಧ ಕುಡಿಸಿ ಮುಂದೆ ಸಾಗಿದೆ. ಅವಳ ಆ ಕೃತಜ್ಞತೆಯಿಂದ ತುಂಬಿ ತುಳುಕಿದ ಕಣ್ಣೋಟ, ಆ ಸಪ್ಪನ್ನ ಮೋರೆಯಲ್ಲಿಯೂ ಮಿನುಗಿದ ನಸುನಗೆ ನನ್ನ ಮನಸ್ಸಿನಲ್ಲಿ ನೆಲೆ ನಿಂತುವು. ಇದಕ್ಕಿಂತ ಹೆಚ್ಚಿಗೆ ಸೇವೆಯಲ್ಲಿ ತೊಡಗಿದವನಿಗೆ ಬೇಕಾದ ಸಾಫಲ್ಯವೇನು ಎಂದು ಹಿಗ್ಗಿದೆ. ಕೆಳವುಸ್ಸಿ, ಈ ಪತ್ರ ಹನುಮನ ಬಾಲದಂತೆ ಬಹಳ ಬೆಳೆಯಿತು. ನೀನು ಮಾತ್ರ ಸಿಟ್ಟಿಗೆದ್ದು ಇದಕ್ಕೆ ರಾವಣ ಮಾಡಿದಂತೆ ಮಾಡಬೇಡ. ನಿನ್ನ ಮೇಲೆ ತಿರುಗಿ ಬಿದ್ದೀತು ! ಇಷ್ಟೆಲ್ಲ ಬರೆದದ್ದೋದಿ, ನಾನೇಕೆ ಇಲ್ಲಿರುವೆ, ಯಾಕೆ ಇಲ್ಲಿಂದ ಬಿಟ್ಟು ಬರಲಾರೆ ಎಂಬುದನ್ನು ನೀ ತಿಳಿಯಬಹುದು. ನಾನಂತೂ ಬರಲಾರೆ. ನಿನಗೆ ಅನಿಸಿದರೆ ನೀನೇ ಇಲ್ಲಿಗೆ ಹೊರಟು ಬಾ. ಇಬ್ಬರು ಕನ್ನಡಿಗರು ಕೂಡಿ ಈ ಸೇವೆಯ ಸತ್ರದಲ್ಲಿ ಭಾಗವಹಿಸಿ ಸಫಲರಾಗೋಣ. ನಮ್ಮ ಪ್ರಾಂತಕ್ಕೆ ಕೀರ್ತಿ ತರೋಣ. ಪರೀಕ್ಷೆಯ ಗತಿಯೇನು ಅನ್ನುವಿಯಾ ? ಈ ಸತ್ವಪರೀಕ್ಷೆಯ ಮುಂದೆ ಆ ನಿಸ್ಸತ್ವಪರೀಕ್ಷೆಯದೇನು ಮಹತ್ವ ? ಎಲ್ಲ ಕಾಲೇಜಿನ ಗೆಳೆಯರಿಗೆ ಪ್ರೀತಿಯ ನೆನಪು ಕೊಡು. ಪತ್ರ ಬರೆಯುತ್ತಿರು.



ನಿನ್ನ ಅಮೃತ ಸಿರೂರ.

ಮುಂಬಯಿ, ೧೦-೩-೧೯೪೩

ಪ್ರಿಯ ಸಿರೂರ.

ಅಂತೂ ನಿನ್ನ ಉದ್ದಾನುದ್ದ ಪತ್ರ ಒಮ್ಮೆ ಬಂತು. ಅದಕ್ಕೆ ಪೋಸ್ಟಿನವರಿಗೆ ಸುಂಕ ಕೊಡಬೇಕಾಯಿತು. ಅದನ್ನು ಒಡೆದು ನೋಡಿ, ಸವಡಿದ್ದಾಗ ಈ 'ಅಮೃತಪುರಾಣ' ಓದೋಣಂತ ಎರಡು ದಿನ ತೆಗೆದಿಟ್ಟೆ. ಕಡೆಗೆ ನಿನ್ನೆ ರಾತ್ರಿ ಅಭ್ಯಾಸದಲ್ಲಿ ಸವಡುಮಾಡಿಕೊಂಡು ಹಾಸಿಗೆಯ ಮೇಲೆ ಬಿದ್ದುಕೊಂಡು ಓದಿದೆ. ಓದು ಓದುತ್ತ ನಿದ್ದೆ ಬಂತು. ಹೇಗೊ ಮುಗಿಸಿ ಸ್ವಸ್ಥ ನಿದ್ದೆಮಾಡಿದೆ. ಈವತ್ತು ಅದನ್ನ ಮರೆತೇ ಬಿಟ್ಟಿದ್ದೆ. ಆದರೆ ಹಾಸಿಗೆ ಹಾಸುವಾಗ ಕೈಗೆ ಹತ್ತಿತ್ತು. ಹಾಗೂ ಒಂದು ವಿಚಾರ ಬಂತು. ನಿನಗೆ ಲಗೂನೆ ಉತ್ತರ ಬರೆದು ತಿಳಿಸದಿದ್ದರೆ ನಿನ್ನ ಪುರಾಣದ ಮುಂದಿನ ಭಾಗವನ್ನು ಓದುವ ಪ್ರಸಂಗಬಂದೀತು ಎಂದು'. ಅದಕ್ಕೇ ಮಹಾರಾಯ, ಇನ್ನು ಮೇಲೆ ಕ್ಷೇಮಸಮಾಚಾರದ ಪತ್ರ ಇಷ್ಟು ಬರೆ. ನೋಡು, ನಮ್ಮ ಪರೀಕ್ಷೆ ಎದೆಯ ಮೇಲೆ ಬಂದು ಕೂತಿದೆ. ಓದಿದ್ದೆಲ್ಲ ಮರೆಯಲಿಕ್ಕೆ ಹತ್ತಿದೆ. ನನ್ನ ಮಿದುಳಿನ ಮೇಲೆ ನಿನ್ನ ಪತ್ರಗಳ ಬಾಂಬಿನದಾಳಿಯೊಂದು ಸುರುವಾದರೆ ಗತಿಯೇನು? ನಿನ್ನ ಅನುಭವಗಳ ಕತೆ ಬಹಳ ಮನೋರಂಜಕವಾಗಿದೆ ಆದರೆ ನೀ ಮಾಡುವುದೆಲ್ಲ ನನಗಂತೂ ಅವ್ಯಾವಹಾರಿಕ ಎಂದು ತೋರತದೆ. ಹೀಗೆ ಬರೆದದ್ದಕ್ಕೆ ತಪ್ಪು ತಿಳಕೋಬೇಡ.ಅಲ್ಲ, ಇನ್ನೊಂದು ನಾಕು ತಿಂಗಳ ತಡೆದು ಪರೀಕ್ಷಾ ಪಾಸಾಗಿ ನಿನಗೆ ಬೇಕಾದಷ್ಟು ದೇಶಸೇವಾ ಮಾಡಲಿಕ್ಕೆ ಬರತಿದ್ದಿಲ್ಲೇನು? ದೇಶದ ತುಂಬ ಒಂದಿಲ್ಲೊಂದು ಅನಾಹುತ ನಡದೇ ಇರತವೆ. ಅವುಗಳ ಕಾಲಾಗ ನಮ್ಮ ಆಯುಷ್ಯ ಹಾಳುಮಾಡಿಕೋಬೇಕೇನು? ಆದರೂ ಒಪ್ಪಿಗೋತೀನಿ ನೀ ಮಾಡಿದ ವರ್ಣನಾ ಬಹಳ ಛಲೋ ಇರುವುದು. ಆದರೆ ಅದರಿಂದ ನನ್ನ ತಲೆ ಮಾತ್ರ ಕೆಡಲಿಲ್ಲ. ಸಾವಿನ ಸುದ್ದಿ ಕೇಳಿ ತಲೆ ಕೆಡುವಂಥವನು ಅದೆಂಥಾ ಡಾಕ್ಟರ ಅವನು? ನಮ್ಮ ದೇಶದ ಜನರಿಗೆ ಮೊದಲೇ ತಾಳಿಕೊಳ್ಳುವ ಶಕ್ತಿ ಕಡಮೆ ಇರುವದೆಂದು ಅಂಕಿಸಂಖ್ಯೆಗಳಿಂದ ಸಿದ್ಧವಾಗಿರುವಾಗ ಮಲೇರಿಯಾ-ಮಾರಿಕಾದಂಥ ರೋಗ ಗಂಟುಬಿದ್ದರಾಯಿತು, ಪಟಪಟ ಸಾಯುತ್ತಾರೆ. ಅದಕ್ಕೇ ಈ ದೇಶದಲ್ಲಿ ಡಾಕ್ಟರ ಧಂದೆಕ್ಕೆ ಫಾಯದೆ ಎಂದು ಅನ್ನುವುದು. ಆತು, ನೀ ಆ ದರಿದ್ರ ಬಂಗಾಲ ಬಿಟ್ಟು, ಬರುವುದಿಲ್ಲ ಅಂದಂತಾಯಿತು. ಬರದಿದ್ದರೆ ಬಿಡು. ನಮ್ಮನ್ನ ಮಾತ್ರ ಎಳಕೋಬೇಡ ಮಾರಾಯ. ಮನುಷ್ಯ ಮೊದಲು ತನ್ನ ಸ್ವಾರ್ಥ ನೋಡಬೇಕು.ಅಂದರೆ ನಮಗೇನು ದೇಶಾಭಿಮಾನ ಕಡಿಮೆ ಇರುವದೆಂದು ತಿಳಿಯಬೇಡ.

ಆದರೆ ತನ್ನದು ತಾ ನೋಡಿಕೊಂಡು ರೊಕ್ಕಗಿಕ್ಕ ಮಾಡಿ ಅಲ್ಲಿಂದ ಇದ್ದೂರೊಳಗೆ ಇದ್ದು ಸ್ವಲ್ಪ ದೇಶಸೇವಾ ಮಾಡಬೇಕು. ಯಾರು ಬೇಡನ್ನತಾರೆ ?

ಹೋಗಲಿ' ನಿನ್ನ ಹಾದಿ ಬೇರೆ, ನನ್ನದು ಬೇರೆ. ಆದರೆ ನಿನ್ನ ಪತ್ರದಲ್ಲಿ ಒಂದು ಸುದ್ದಿ ಬಹಳ ಮೋಜೆನಿಸಿತು. ನೀನೇನೋ ಅಲ್ಲಿ ಸ್ವಲ್ಪು ರೋಮಾನ್ಸ ಸುರುವುಮಾಡಿದಂತೆ ಕಾಣಿಸತದೆ ಆ ವೀಣಾನ ಜೋಡಿ. ಹೌದಲ್ಲೋ ? ಆತು, ಎಂದಾರೆ ಬಂದೆಂದರೆ ಮದುವೆ ಮಾಡಿಕೊಂಡೇ ಬಾ. ನೀ ಏನು ಕವಿತಾ ಬರೆದು ಕಳಿಸೀದಿ, ಖರೆ ಹೇಳುವದೆಂದರೆ ಅದು ನನಗೇನೂ ತಿಳಿಯಲಿಲ್ಲ. ನನಗನಿಸತದೆ ನಮ್ಮ ಕನ್ನಡ ಕವಿಗಳ ಸಾದಾಮಾತೇ ಅರ್ಥ ಆಗೂದುಲ್ಲ, ಅವರ ಕವಿತಾ ತಿಳಿಯೂದಂತೂ ದೂರದ ಮಾತು ! ಆ ಕವಿ ಯಾವನೋ ಕಾಲೇಜ ಬಿಟ್ಟ ದೇಖ ಕಾಣತಾನೆ. ನನ್ನ ಅಭ್ಯಾಸದೊಳಗೆ ನಾ ಎಲ್ಲಿ ಅವನ್ನ ಹುಡುಕಿಕೋತ ಹೋಗಲಿ ? ಇಲ್ಲದ ಉಪದ್ವ್ಯಾಪ. ಇನ್ನು ಅಭ್ಯಾಸಕ್ಕೆ ಕೂಡುವ ಹೊತ್ತಾತು. ಹೆಚ್ಚೇನು ಬರೆಯುವದಿಲ್ಲ. ನಿನ್ನ ಹನುಮನ ಬಾಲದ ಪತ್ರಕ್ಕೆ ಇದು ನನ್ನ ಕುದುರೆಯ ಬಾಲದ ಉತ್ತರ ! ನಿನ್ನ ಪತ್ರಕ್ಕೆ ಈಗ ರಾವಣನ ಕೊಳ್ಳಿ ಹಚ್ಚಿ ಬಿಡತೀನಿ — ನಿನ್ನ ಮಾತು ಮೀರಿ, ಯಾಕಂದರೆ ಅದು ಹತ್ತಿರ ಇರುವದು ಸುರಕ್ಷಿತಲ್ಲ. ನೆಟ್ಟಗಿದ್ದದ್ದು ಬರೀತಿರು. ನಾ ಪರೀಕ್ಷಾ ಮುಗಿದ ಮೇಲೆ ಬರೀತೀನಿ.

ನಿನ್ನ
ಕೆಳವುನಿ

## ೫. ಅಮೃತ — ವೀಣೆ

ಅಮೃತನ ದೈನಂದಿನ ಕಾರ್ಯಕ್ರಮವು ತಪ್ಪದೆ ನಡೆಯಿತು. ಹೊಸದಾಗಿ ಬಂಗಾಲಪ್ರಾಂತದಲ್ಲಿ ಕಾಲಿಕ್ಕಿದಾಗ, ಊರಿಂದೂರಿಗೆ ಅಲೆದಾಗ ತೋರಿದ ವಿಚಿತ್ರತೆ–ದಿಙ್ಮೂಢತೆಗಳು ಈಗ ಕಡಿಮೆಯಾಗಿವೆ. ಮನಸ್ಸಿನ ಹೊಯ್ದಾಟ ಹೋಗಿದೆ. ಶುಶ್ರೂಷೆಯಲ್ಲಿ ತಲ್ಲೀನನಾಗಿದ್ದಾನೆ. ಬಂಗಾಲದ ಹವೆ–ನೀರು ಅವನಿಗೆ ಸಂಪೂರ್ಣ ಒಗ್ಗಿರದಿದ್ದರೂ ಈಗ ಪರಿಚಿತವಾಗಿರುತ್ತದೆ. ಬ್ರಹ್ಮಪುತ್ರಾ ಗಂಗಾ ಇವುಗಳಂಥ ಮಹಾನದಿಗಳಿಂದಲೂ ದಾಮೋದರದಂಥ ಅನೇಕ ಸಣ್ಣ ನದಿಗಳಿಂದಲೂ ಜಲಮಯವಾದ ಬಂಗಾಲವು ಸಣ್ಣ ದೊಡ್ಡ ಅರ್ಘ್ಯಪಾತ್ರ ಗಳೊಡನೆ ಸಮುದ್ರರಾಜನಿಗೆ ಅರ್ಘ್ಯವರ್ಪಿಸಲು ಹೊರಟಂಥ ದೃಶ್ಯ. ಸಾಲು

ಸಾಲಾದ ಸಮನೆಲದ ಭತ್ತದಗದ್ದೆಗಳು, ಅವುಗಳ ಮೇಲೆ ಚಾಮರಬೀಸಲು ನಿಂತ ತಾಳಮರಗಳು ಇವುಗಳ ದೃಶ್ಯ ಎಚ್ಚರದಲ್ಲಿ ನಿದ್ದೆಯಲ್ಲಿ ಅವನಿಗೆ ಆಪ್ತೇಷ್ಟರಷ್ಟು ಆತ್ಮೀಯವಾಗಿವೆ. ಆದರೆ ಇಂಥ ಸಮೃದ್ಧಿಯ ಸೀಮೆಯಲ್ಲಿಯೆ ಅತಿವೃಷ್ಟಿ ಅನಾವೃಷ್ಟಿಗಳ ಅನಾಹುತದಿಂದಲೂ ನೆರೆಹಾವಳಿ-ರೋಗರುಜಿನಗಳ ಶಸ್ತ್ರಗಳೊಡನೆ ಪ್ರಕೃತಿ ಮಾಡುವ ದಾಳಿಗಳಿಂದಲೂ ಕವಿರವೀಂದ್ರರು ಮೆಚ್ಚಿ ಕೊಂಡಾಡಿದ 'ಬಂಗಾರದ ಬಂಗಾಲ'ವು (ಸೋನಾರ ಬಂಗ್ಲಾ) ಆರೋಗ್ಯ ಸಂಪತ್ತಿಗಳ ಸೌಖ್ಯ ಸೌಕರ್ಯಗಳ ಅಂಗಾರದಂತಾಗಿದೆ ಎಂದು ನೆನೆದು ಅವನು ತುಂಬ ಮಿಡುಕಿದ್ದಾನೆ.

ಒಂದು ದಿನ ಬೆಳಗ್ಗೆ ತನ್ನ ನಿತ್ಯಕ್ರಮದಂತೆ ಅಮೃತನು ಎಲ್ಲ ರೋಗಿಗಳ ಕ್ಷೇಮಸಮಾಚಾರವನ್ನು ಕೇಳುತ್ತ ಸ್ತ್ರೀಶಾಖೆಯ ಕಡೆಗೆ ಹೋದನು. ಅನೇಕರು ಇನ್ನೂ ರೋಗದ ದವಡೆಯಲ್ಲಿ ಸಿಕ್ಕು ಒದ್ದಾಡುತ್ತಿರುವರು. ಮಲೇರಿಯಾ ಜ್ವರದ ಬಾಧೆಯಿಂದ ಕೆಲವರು ಸೋತು ಸುಣ್ಣಾಗಿದ್ದಾರೆ. ಅವರ ಮೈಯಿಂದರೆ ಎಲುಬಿನ ಹಂದರಕ್ಕೆ ತೊಗಲಿನ ಹಚ್ಚಡ ಹೊಚ್ಚಿದಂತಿದೆ. ಮುಖದಲ್ಲಿಯ ಎಲುಬುಗಳು ಹೊರಬಿದ್ದು ತಲೆಗೂದಲು ಜಡೆಗಟ್ಟಿ ಸ್ತ್ರೀಸೌಂದರ್ಯದ ಪ್ರಶಂಸಕರನ್ನು ಕೆಣಕಿ ಸ್ಮಶಾನ ವೈರಾಗ್ಯವನ್ನು ಹುಟ್ಟಿಸುವಂತಿವೆ. ಗುಣವಾಗುವ ಲಕ್ಷಣಗಳು ಕೆಲವರಲ್ಲಿ ತೋರುತ್ತಲಿವೆ. ಅಂಥವರಲ್ಲಿ ವೀಣಾ ಒಬ್ಬಳು. ಹಾಸಿಗೆಯಿಂದ ಹಾಸಿಗೆಗೆ ಹೋಗಿ ರಾತ್ರಿಯ ಪಾಳಿಯ ನರ್ಸಳು ಬರೆದಿಟ್ಟ ರಿಪೋರ್ಟನ್ನು ಲಕ್ಷ್ಯಪೂರ್ವಕವಾಗಿ ನೋಡುತ್ತ ಅವರಿವರನ್ನು ತಪಾಸಮಾಡಿ ವಿಚಾರಿಸುತ್ತ ಅಮೃತನು ವೀಣಾ ಇದ್ದಲ್ಲಿಗೆ ಬಂದನು. ಅವಳು ಅಷ್ಟರಲ್ಲಿ ಎದ್ದು ಚೆನ್ನಾಗಿ ಆತುಕೊಂಡು ಕುಳಿತು ಕನ್ನಡಿಯಲ್ಲಿ ನೋಡುತ್ತ ಹಣಿಗೆಯಿಂದ ಕೂದಲನ್ನು ಹಿಕ್ಕಿಕೊಳ್ಳುತ್ತಿದ್ದಳು. ಅಮೃತ ಬಂದೊಡನೆ ಒಂದು ಕ್ಷಣ ಬೆಪ್ಪಾಗಿ ನಿಂತನು. ಅವಳು ಕನ್ನಡಿಯನ್ನು ಬದಿಗೆ ಹಿಡಿದು ಖೊಳ್ಳೆಂದು ನಕ್ಕಳು. ಓಹೋ ನೀನು ! ನನಗೆ ಮೊದಲು ಯಾರೋ ಅನಿಸಿತು. ಅಮೃತ ಪರಿಚಯದ ದನಿಯಲ್ಲಿ ಮಾತಾಡಿದನು. 'ಹುಂ. ನನ್ನಲ್ಲಿ ಈಗ ಇಷ್ಟು ಬದಲಾವಣೆ ಆಗಿರುವದೇನು ? ' ಎಂದು ವೀಣಾ ಕನ್ನಡಿಯ ಮುಂದೆ ಮುಖವನ್ನು ನೋಡಿಕೊಳ್ಳುತ್ತ ಕೇಳಿದಳು. 'ಸ್ವಲ್ಪ ಆಗಿದೆ.' ಎಂದು ಅಮೃತನು ಅವಳ ಪ್ರಕೃತಿಯನ್ನು ನೋಡುತ್ತ ಅವಳ ಮೋರೆಯಲ್ಲಿ ಚಿಮ್ಮಿದ ಹೊಸ ಕಳೆಯನ್ನು ಕಂಡು ಸಮಾಧಾನಪಟ್ಟನು. ಇಲ್ಲಿಯವರೆಗೆ ಎಲ್ಲ ರೋಗಿಗಳಂತೆ ನಿಸ್ತೇಜವಾಗಿ

ಕಾಣುತ್ತಿದ್ದ ವೀಣೆಯ ಮುಖ ಈವೊತ್ತು ಮೊಟ್ಟಮೊದಲನೆಯಲ ಸಲ ಆರೋಗ್ಯದ ಅರುಣೋದಯವಾದ ಕ್ಷಿತಿಜದಂತೆ ಅವನಿಗೆ ತೋರಿತು. ಮನಸ್ಸಿನಲ್ಲಿ ಉತ್ಸಾಹಗೊಂಡನು. ಆದರೆ ಹಾಗೆ ಹೇಳಲಾಗದೆ ಸಿಗ್ರುಹದಿಂದ 'ನಿನಗೆ ಈಗ ಸ್ವಲ್ಪ ಗುಣವಾಗಿದೆ. ಇನ್ನೂ ಜಪ್ಪಿಸಬೇಕು' ಎಂದನು. ಅದಕ್ಕೆ ವೀಣೆ 'ನೀವೇನು ಹೇಳತೀರಿ ? ನನಗೆ ಪೂರ ಗುಣವಾಗಿದೆ.' ಎಂದು ಬಹಳ ದಿನದ ರೋಗಿಗಳಿಗೆ ಬರುವ ವೈದ್ಯತನದ ಅಧಿಕಾರದಿಂದ ಆಡಿದಳು. ಅಮೃತನು 'ಹೀಗೇನು ? ' ಎಂದು ನಕ್ಕುಬಿಟ್ಟು ಮುಂದೆ ನಡೆದನು. ಅವನು ಒಂದೆರಡು ಹೆಜ್ಜೆ ಇಡುವದರಲ್ಲಿ 'ಅಮೃತ್,' ಎಂದು ವೀಣೆ ಕರೆದಳು. 'ಇದೇ ಈಗ ಔಷಧ ಕಳಿಸತೇನೆ ಎಲ್ಲರಿಗೆ' ಎಂದು ಅಮೃತ ಗಡಿಬಿಡಿಯಿಂದ ಮುಂದೆ ಸಾಗಿದನು. ವೀಣೆ ಮತ್ತೆ ಕರೆದು 'ದಿನದ ಔಷಧ ಸಾಕಾಗಿಹೋಗಿದೆ. ಔಷಧ ಬದಲಿಸುವಿರಾ ? ' ಎಂದಳು. 'ಆಗಲಿ, ಶಕ್ತಿವರ್ಧಕ ಔಷಧ ಕೊಡತೇನೆ, ಆಯಿತ್ತೇ ?' ಎನ್ನುತ್ತ ಅವನು ಹೊರಟು ಹೋದನು.

೨-೩ ದಿನಗಳಾದವು. ಮಾರ್ಚ ಮಧ್ಯದ ಸುಮಾರಕ್ಕೆ ಊರಿಂದ ತಂದೆಯವರ ಪತ್ರ ಬಂದಿತು. ಒಂದು ತಿಂಗಳಲ್ಲಿ ತಪ್ಪದೆ ಬರುವೆನೆಂದು ಅವನು ತಿಳಿಸಿದಕ್ಕೆ ಶಂಭುರಾಯರು ಬಹಳ ಸಂತುಷ್ಟರಾಗಿ ಉತ್ತರ ಬರೆದಿದ್ದರು. ಅದರಲ್ಲಿ 'ಮನೆಯಲ್ಲಿ ಎಲ್ಲರೂ ನೆಟ್ಟಗಿದ್ದಾರೆ. ಕಾಳುಕಡಿಯ ಸ್ಥಿತಿ ಮಾತ್ರ ಬಹಳ ಕೆಡಲಿಕ್ಕೆ ಹತ್ತಿದೆ. ಯಾವದೂ ಸಿಗದಂತಾಗಿರುವದು. ಮೇಲೆ ಹಳ್ಳಿಯ ಜನರು ಗುಳೇಕಟ್ಟಿಕೊಂಡು ಹೋದವರು ಈಗ ಊರಿಗೆ ತಿರುಗಿ ಬರುತ್ತಿರುವರು. ನಮ್ಮ ಸಿರೂರು ಅರ್ಧಕರ್ಧ ಖಾಲಿ ಆಗಿತ್ತು. ಈಗ ತುಂಬಲಿಕ್ಕೆ ಹತ್ತಿದೆ. ರೈತರಿಂದ ಈ ಸಾರೆ ಲಾವಣಿ ಏನೂ ವಸೂಲಾಗುವ ಲಕ್ಷಣ ಇಲ್ಲ. ಬಡಬಗ್ಗರಿಗೆ ಅನ್ನ ಛತ್ರ ಅದು ಇದು ಎಂದು ಕಮಿಟಿ ಮಾಡಿಕೊಂಡು ಈ ಜಿಲ್ಹಾದೊಳಗೆ ದೊಡ್ಡ ಖಟಾಟೋಪ ನಡಸಿರತಾರೆ. ನಮ್ಮಂಥ ನಡುಮಧ್ಯದ ಮಂದಿನ್ನ ಯಾರು ಕೇಳಬೇಕು ?' ಎಂದು ಅದರಲ್ಲಿ ಬರೆದಿತ್ತು. ಕೊನೆಗೆ 'ಪರೀಕ್ಷಾ ಅಂತೂ ಕಳಕೊಂಡು ನಮ್ಮನ್ನು ದುಃಖದ ಸಮುದ್ರದಲ್ಲಿ ಮುಳುಗಿಸಿದಿ. ನಿನ್ನ ತಾಯಿ ಹಗಲುರಾತ್ರಿ ನೆನಸಿ ನೆನಸಿ ನವಕೋತ ಹೊರಟಾಳೆ. ನೀ ಏನು ಗಳಿಸದಿದ್ದರೂ ಚಿಂತಿಲ್ಲ, ಕಣ್ಣ ಮುಂದೆ ಇರು. ಜರೂರ ಜರೂರ ಬಾ' ಎಂಬ ಭರತವಾಕ್ಯವಿತ್ತು. ಈ ತರದ ಮಾತು ಪ್ರತಿಯೊಂದು ಪತ್ರದಲ್ಲಿ ಇದ್ದೇ ಇರುತ್ತಿತ್ತು. ಈ ಸಾರೆ ದುಷ್ಕಾಳದ ಸುದ್ದಿ ತಿಳಿಸಿ ತಿರುಗಿ ಬರಬೇಕೆನ್ನುವ ಅವನ ವಿಚಾರಕ್ಕೆ ಜೋರಾದ ಚಾಲನೆ

ಯನ್ನು ಕೊಡಬೇಕೆಂದು ಶಂಭುರಾಯರು ಅದನ್ನು ಪತ್ರದಲ್ಲಿ ಕಾಣಿಸಿದ್ದರು. ಎಲ್ಲ ಓದಿ ಅಮೃತನ ಕೊರಳು ಉಬ್ಬಿತು. ಒಡಲಲ್ಲಿ ಸಂಕಟವಾಯಿತು. ನೆನಪು ರೆಕ್ಕೆಪರಹಿ ಊರಿಗೆ ಧಾವಿಸಿ ಹೋಗಿ ಮನೆಯೊಳಗೆ ಸುತ್ತಾಡಿ ಎಲ್ಲರನ್ನು ಕಂಡು ಬಂದಿತು. ತನ್ನನ್ನು ಅಸರಂತ ನೆನೆಯುತ್ತ, ಬಂದವರ ಮುಂದೆ ಗೋಳು ತೋಡಿ ಕೊಂಡು ಕಣ್ಣೀರುಹಾಕುತ್ತ ಕುಳಿತ ತಾಯಿ ಕಂಡಳು. ಮದುವೆಯೊಗದೆ ಬೆಳೆದು ನಿಂತ ತಂಗಿ ಸುಂದರೂನ ಸಪ್ಪಗಿನ ಮೋರೆ ಬಾಣದ ಮೊನೆಯಂತೆ ಅವನ ಎದೆ ಸೀಳಿತು. ಕಾಳು ದೊರೆಯದೆ ಪಗಾರ ಸಾಲದೆ ಗಂಟುಮೋರೆ ಮಾಡಿಕೊಂಡು ತಿರುಗಾಡುವ ತಂದೆಯಂತೂ ಕನಿಕರದ ಗೊಂಬೆಯಾಗಿ ತೋರಿದರು. ಅದರ ಕೂಡ ಸಿರೂರಿನ ಮತ್ತು ಇಡೀ ಜಿಲ್ಹೆಯ ಬಡಜನರ ಚಿತ್ರಗಳು ಕಣ್ಣಮುಂದೆ ಸುಳಿದು ಸುಳಿದು ಅವನ ಸಂಕಟದುರಿಗೆ ಎಣ್ಣೆಯುಗ್ಗಿದವು. ತನ್ನ ಕುಳಿತ ಜಾಗ ದಿಂದ ಎದ್ದು ನಿಂತು ಗಂಭೀರ ಯೋಚನೆಯ ಉತ್ಕಟ ಭಾವನೆಯ ಸೆಳವಿನಲ್ಲಿ ಸಿಕ್ಕು ಹುಟ್ಟು ಹಾಕುತ್ತಿರುವಂತೆ ಅವನು ಅತ್ತಿಂದಿತ್ತ ತನ್ನ ಗುಡಿಸಲಿನಲ್ಲಿ ಅಲೆ ಯುಹತ್ತಿದನು. 'ನೂರಾರು ಮೈಲು ದೂರ ನನ್ನ ದೇಶಕೋಶ ಬಿಟ್ಟು ಇಲ್ಲಿಗೆ ಬಂದು ನಾನು ಮಾಡುತ್ತಿರುವುದೇನು ? ನನ್ನವರಿಗೂ ನನ್ನ ಜನಕ್ಕೂ ದುರ್ಲ ಕ್ಷನ ಝುಳ ತಾಕುತ್ತಿರುವಾಗ ಅವರ ಹೊತ್ತಿಗಾಗದೆ ಇಲ್ಲಿಯ ಶುಶ್ರೂಷೆಗೆ ನಿಂತದ್ದು ಸರಿಯೇ ? ಇಲ್ಲಿಯವರು ಇಲ್ಲಿಯ ಸುಖ ದುಃಖ ನೋಡಿಕೊಳ್ಳು ವರು. ನಾನೇಕೆ ನನ್ನ ಪ್ರಾಂತಕ್ಕೆ ಹೋಗಬಾರದು ? ತಂದೆಯವರು ಬರೆದದ್ದರಲ್ಲಿ ಅವರ ಸ್ವಾರ್ಥವಿರಬಹುದು. ಆದರೆ ನನ್ನ ಪ್ರಾಂತದ ಸೇವೆಯಲ್ಲಿ ತೊಡಗು ವಂಥ ಹೆಚ್ಚಿನ ಸ್ವಾರ್ಥದಲ್ಲಿ ದೋಷವೇನು ? ಈ ರೀತಿ ಅವನ ವಿಚಾರವಾಹಿನಿ ಹರಿಯಿತು. ಈಗಿಂದೀಗಲೇ ಹೊರಡುವನೇನೋ ಎನ್ನುವಂತೆ ತನ್ನ ಸಣ್ಣ ಟೇಬಲ್ ಮೇಲಿನ ಪುಸ್ತಕಗಳನ್ನು ಓರಣವಾಗಿ ಕೂಡಿಸಹತ್ತಿದನು. ಓದಿ ಗೆಳೆಯನೊಬ್ಬನಿಗೆ ಅಲ್ಲಿ ತಿರುಗಿ ಕೊಡಬೇಕಾದ ಬೆಂಗಾಲಿ ಪುಸ್ತಕವನ್ನು ಕೈ ಯಲ್ಲಿ ಎತ್ತಿ ಉಳಿದ ಪುಟಗಳನ್ನು ಓದಲೆಂದನು. ಅಷ್ಟರಲ್ಲಿ 'ಡಾಕ್ಟರ, ಡಾಕ್ಟರ' ಎಂಬ ಅವಸರದ ಕೂಗು ಕೇಳಿತು. ಏನೆಂದು ಒತ್ತರದಿಂದ ನೋಡಲು ಹೊರಟನು. ಒಬ್ಬ ರೋಗಿಗೆ ಜ್ವರ ೧೦೪ ರ ಮೇಲೆ ಬಂದು ಬಡಬಡಿಸಹತ್ತಿರುವನು. ಸುತ್ತಿನವರಿಗೆಲ್ಲ ತ್ರಾಸವಾಗಹತ್ತಿದೆ. ಕೂಡಲೆ ಅಮೃತನು ಅಲ್ಲಿ ಹೋಗಿ ಹಣೆಗೆ ಒದ್ದೆಯ ಪಟ್ಟಿಯನ್ನಿಟ್ಟು ಔಷಧ ಕುಡಿಸಿ ತಿರುಗಿ ಬಂದನು. ಈಗ ಮೊದಲಿನ ಭಾವನಾಭರವು ಕಡಿಮೆಯಾಗಿತ್ತು. ಶಾಂತವಾಗಿ ಕೂತುಕೊಂಡು ಎರಡೂ ಕಡೆ

ಯಿಂದ ಯೋಚಿಸಿದನು. 'ಹೇಗೂ ಬಂದಿರುವೆ. ಕೆಲಕಾಲವಿಲ್ಲಿದ್ದು ಈ ಸೇವಾವ್ರತ ವನ್ನು ಪೂರೈಸಬೇಕು, ಮುಂದಿನ ಸೇವೆಗೆ ಇಲ್ಲಿ ತಯ್ಯಾರಿ ಹೊಂದಬೇಕು' ಎಂದು ತೋರಿತು. ಇದಿರು ಗೋಡೆಗೆ ಕಣ್ಣೆತ್ತಿ ನೋಡಲಾಗಿ ಅಲ್ಲಿ ಕಪ್ಪು ಕೋಟನ್ನು ಹಾಕಿ ತಲೆಗೆ ಶೀವಿಯಿಂದ ರುಮಾಲು ಸುತ್ತಿ ಕೈಯೊಳಗೆ ಕೈಯಡ್ಡ ಹಾಕಿ ತೇಜೋನಿಧಿಯೊಂದು ಮನುಷ್ಯರೂಪವನ್ನು ತಾಳಿದಂಥ ವಿವೇಕಾನಂದರ ಚಿತ್ರ ಕಂಡಿತು. 'ಈಗ ನೀ ಬಿಟ್ಟು ಹೋಗುವುದು ಸರಿಯೇ ?' ಎಂದದು ಗದರಿಸಿ ದಂತಾಯಿತು. ಇದೇ ನಿಶ್ಚಯವೆಂದವನು ವಿಚಾರಯುದ್ಧ ನಿಲ್ಲಿಸಿದನು. ಮರು ದಿನ ತನ್ನ ಸುದೀರ್ಘವಾದ ಪತ್ರಕ್ಕೆ ಕೆಳಮನಿಯಿಂದ ಉತ್ತರ ಬಂದಿತು. ಅದ ನ್ನೋದಿ 'ಎಂಥ ಮನೋವೃತ್ತಿಯಿದು !' ಎಂದು ಬಹಳ ಖಿನ್ನನಾದನು. ಹೊಸ ತರುಣಮಿತ್ರರ ಪೀಳಿಗೆ ಕರ್ನಾಟಕದಲ್ಲಿ ಹೇಗಿದೆ ಎಂಬುದರ ಸತ್ಯದರ್ಶನವು ಇಂದು ಅವನಿಗಾಯಿತು. ತನ್ನ ಪ್ರಾಂತವೂ ದೇಶವೂ ಅಪಾರವಾದ ತ್ಯಾಗ ಸೇವೆ ಗಳನ್ನು ಬೇಡುತ್ತಿರುವಾಗ ಅದರ ಒಂದು ನೂರರಷ್ಟು ಸಹ ನೀಡಲಾರದ ಯುವ ಕರು ಸ್ವಾರ್ಥದ ಇಶಾರಾಮಿನ ಬೆನ್ನುಹತ್ತಿದ್ದಾರೆ. ತನ್ನ ರೀತಿಯೆಲ್ಲ ಕೆಳಮನಿಗೆ ಅವ್ಯವಹಾರ್ಯವೆಂದು ಕಂಡಿತಂತೆ. ಕಾಣಲಿ, ಮನುಷ್ಯತ್ವದ ಸಾಧನೆ-ಸಾಹಸ ವೆಲ್ಲ ಸಂಕುಚಿತ ಸ್ವಾರ್ಥದ ಕಣ್ಣಿನಿಂದ ನೋಡುವವರಿಗೆ ಹೀಗೆ ಕಾಣುವುದರಲ್ಲಿ ಆಶ್ಚರ್ಯವೇನು ? ಉದಾತ್ತವಾದ ವಿಚಾರಗಳ ಅಂತರಿಕ್ಷದಲ್ಲಿ ವಿಹರಿಸಿ ಅವನು ತನ್ನ ಧ್ಯೇಯವಾದವನ್ನು ಬಲಗೊಳಿಸಿಕೊಂಡನು. ತನ್ನ ಮತ್ತು ವೀಣೆಯ ಬಗ್ಗೆ ಕೆಳಮನಿ ಬರೆದ ಕೀಳು ಮಾತು ಅವನಿಗೆ ಅಸಹ್ಯವೆನಿಸಿತು. ತಾನು ಕಳಿಸಿದ ಆ ಕನ್ನಡ ಕವಿತೆಯ ವಿಷಯದಲ್ಲಿ ಅವನ ಚೇಷ್ಟೆ ಮರ್ಕಟಚೇಷ್ಟೆಯಾಗಿ ತೋರಿ ನೊಂದುಕೊಂಡನು. ಕಡೆಗೆ ತನ್ನ ಜೀವಜೀವಾಳದ ಕಥನವುಳ್ಳ ಪತ್ರಗಳ ನ್ನೆಂದಿಗೂ ಇನ್ನು ಕೆಳಮನಿಗೆ ಬರೆಯಬಾರದೆಂದು ನಿರ್ಧರಿಸಿಬಿಟ್ಟನು.

ಒಂದೆರಡು ದಿನಗಳಾದವು. ಹೆಣ್ಣುಮಕ್ಕಳ ವಾರ್ಡಿನಲ್ಲಿ ಒಂದು ರಾತ್ರಿ ಒಬ್ಬ ವಯಸ್ಸಾದ ಹೆಂಗಸು ಮಾರಿಕಾಬೇನೆಗೆ ಆಹುತಿಯಾಗಿ ಪ್ರಾಣಬಿಟ್ಟಳು. ಔಷಧೋಪಚಾರವಾವುದೂ ನಾಟಲಿಲ್ಲ. ಅವಳಿಗಾಗಿ ಎರಡು ದಿನ ನಿದ್ದೆನೀರಡಿಕೆ ಯಿಲ್ಲದೆ ಅಮೃತನೂ ಇತರ ಡಾಕ್ಟರರೂ ದುಡಿದರು. ಎಲ್ಲ ವ್ಯರ್ಥವಾಯಿತು. ಅವಳ ಹೆಣವನ್ನು ಹೊತ್ತು ಹೊರಗೊಯ್ದರು. ಒಯ್ಯುವ ಕಾಲಕ್ಕೆ ಹತ್ತಿರದ ರೋಗಿಗಳಿಗೆ ತಿಳಿಯಬಾರದೆಂದೂ ಅವರಿಗೆ ಅಭೋ ಎನಿಸಬಾರದೆಂದೂ ಡಾಕ್ಟರ ರೂ ಹಾಗೂ ನರ್ಸರೆಲ್ಲ ಹೆಣಗಿದರು. [illegible] ಕತ್ತಲೆಯಲ್ಲಿ ಅಳುವಂತೆ

ಕೇಳಿತು. ಅಮೃತನು ಅತ್ತ ಧಾವಿಸುತ್ತ ಹೋಗಿ ನೋಡಿದನು. ತನ್ನ ಹೊರಸಿನ ಮೇಲೆ ಎದ್ದು ಕುಳಿತು ವೀಣಾ ಹೊಂಯ್ಯೆಂದು ಅಳುತ್ತಿದ್ದಾಳೆ. 'ಇದೇನು, ನಿನಗೇನಾಯಿತು ವೀಣಾ ?' ಅಮೃತ ಕೇಳಿದನು. ಅವಳ ಉತ್ತರವೆಂದರೆ ಇನ್ನಿಷ್ಟು ಬಿಕ್ಕಿ ಬಿಕ್ಕಿ ಅಳುವುದು. 'ಸುಮ್ಮನಿರು, ಉಳಿದವರಿಗೆ ತ್ರಾಸ ಕೊಡ ಬೇಡ' ಎಂದು ಗದ್ದರಿಸಿದನು. ಅವಳು ಸುಮ್ಮನಾದಂತೆ ಮಾಡಿ ಮತ್ತೆ ಜೋರು ಮಾಡಿದಳು. 'ಹೀಗೇಕೆ ? ಏನಾಗಿದೆ ನಿನಗೆ ? ನಿನ್ನ ಜಡ್ಡು ಕಡಿಮೆಯಾಗಿ ಹೋಯಿತೆಂದೇ ಅಳುವಿಯೋ ಏನು ?' ಇದಕ್ಕೆ 'ನನಗೇನಾಗಿಲ್ಲ' ಎಂದು ಮಾತ್ರ ಉತ್ತರ ದೊರೆಯಿತು. 'ತಿಳಿಯಿತು. ಆ ಹೆಂಗಸು ನಿನಗೇನಾದರೂ ಆಗಬೇಕೇ ವೀಣಾ ?' 'ನನಗೆ ಅವಳಾರೋ ಗೊತ್ತೇ ಇಲ್ಲ. ಇಲ್ಲಿ ಬಂದ ಮೇಲೇ ನೋಡಿದ್ದು.' ಅಳುದನಿಯಲ್ಲಿಯೇ ಈ ಮಾತು ತಡೆತಡೆದು ಬಂತು. 'ಮತ್ತ್ಯಾಕೆ ಅಳುವೆ ?' ನಿನಗೀಗ ಗುಣವಾಗಿದೆ. ಹೀಗೆಲ್ಲಾ ಹಚ್ಚಿಕೊಳ್ಳುವಂತಿದ್ದರೆ ಸುಮ್ಮನೆ ನಿನ್ನೂರಿಗೆ ಹೋಗಿ ನಿಮ್ಮ ತಾಯಿತಂದೆಗಳ ಹತ್ತಿರ ಇರು. ಇಲ್ಲಿ ಯಾಕೆ ಒದ್ದಾಡುವೆ ?' ಈ ಮಾತು ಕೇಳಿದೊಡನೆ ವೀಣಾ ಚಿಟ್ಟನೆ ಚೀರಿ 'ಮಾ ಬಾಪ ! ' ಎಂದೊರಲುತ್ತ ಹಾಸಿಗೆಯ ಮೇಲೆ ಬಿದ್ದುಬಿಟ್ಟಳು. ಬಳಿಯ ರೋಗಿಗಳೆಲ್ಲ ಕಣ್ತೆರದು ಪಿಳಿಪಿಳಿ ನೋಡಹತ್ತಿದರು. ಅಮೃತನು ಅವಳನ್ನೆಬ್ಬಿಸಿ ಮೈಮೇಲೆ ಕೈಯಾಡಿಸಿ ಕೆಲಹೊತ್ತು ಅಲ್ಲಿದ್ದು ಏನೂ ಮಾತಾಡದೆ ತಿರುಗಿ ಹೋದನು. ವೀಣೆ ಉಳಿದ ಇರುಳನ್ನು ನಿದ್ದೆಯಿಲ್ಲದೆ ಹೊರಳಾಟದಲ್ಲಿ ಕಳೆದಳು.

ಮರುದಿನ ಪ್ರಜ್ಞಾನಂದರು ಕಲಕತ್ತೆಯಿಂದ ಹೊರಟು ಬೇರೆಬೇರೆ ಕೇಂದ್ರಗಳನ್ನು ನೋಡುತ್ತ ಕಾಲೀಚರಣಪುರಕ್ಕೆ ಬಂದರು. ವೈದ್ಯಕೀಯ ವ್ಯವಸ್ಥೆ ಹೇಗೆ ನಡೆದಿದೆ ಎಂಬುದನ್ನೆಲ್ಲ ನೋಡಿಕೊಂಡರು. ಔಷಧದ ಕೊರತೆ ಅನ್ನಸಾಮಗ್ರಿಯ ಕೊರತೆ ಬಿಕ್ಕಟ್ಟಾದ ಪ್ರಶ್ನೆಯಾಗಿದೆಯೆಂದು ಕೆಲಸಗಾರರೆಲ್ಲ ಹೇಳಿದರು. ಧನ ಸಹಾಯ ಸಾಕಷ್ಟು ಆಗಿದ್ದರೂ ಹಣವನ್ನು ಬಿತ್ತಿ ಅನ್ನವನ್ನು ಔಷಧಿಯನ್ನು ಬೆಳೆದುಕೊಳ್ಳುವುದು ಸಾಧ್ಯವೇ ? ಪರಪ್ರಾಂತಗಳಿಂದ ಕಾಳುಕಡಿಯ ರೂಪದಲ್ಲಿಯೇ ನೆರವನ್ನು ಹೆಚ್ಚಾಗಿ ಪಡೆಯಬೇಕೆಂದು ಗೊತ್ತಾದ ಸಂಗತಿಯನ್ನು ಪ್ರಜ್ಞಾನಂದರು ಹೇಳಿದರು. ಗುಣ ಹೊಂದಿದವರನ್ನು ಅವರವರೂರಿಗೆ ಇನ್ನು ಕಳಿಸಬೇಕೆಂದೂ ಆಜ್ಞಾಪಿಸಿದರು. ಅಮೃತನಂಥ ತರುಣರು ತಮ್ಮ ಸುಖ ಸೌಕರ್ಯಗಳ ಪರಿವೆಯಿಲ್ಲದೆ ಮಾಡುತ್ತಿರುವ ಸೇವೆಯನ್ನು ಕಂಡು 'ಭಾರತದ ಭಾಗ್ಯ ತೆರೆಯಿತು' ಎಂದು ಹಿಗ್ಗಿ ಹೊಗಳಿದರು. ಅವರ ತೇಜಸ್ವಿಯಾದ ಮುಖ

ವನ್ನು ನೋಡುವುದು, ಅವರ ಕೂಡ ಇರುವುದು ಮಾತಾಡುವುದು ಎಂದರೆ ಅಮೃತನಿಗೆ ಅಮೃತವೃಷ್ಟಿಯೆ ಸರಿ. ತನ್ನ ದಿನದ ಕೆಲಸವು ಮುಗಿದೊಡನೆ ಅವರ ಹತ್ತಿರಅವನು ಧಾವಿಸಿ ಹೋಗುತ್ತಿದ್ದನು. ಬಡಬಗ್ಗರನ್ನು ಮಮತೆಯಿಂದ ಮಾತಾಡಿಸುವುದು, ಅಳುವ ಮಕ್ಕಳನ್ನು ಬಗಲಲ್ಲಿ ತಗೊಂಡು ರಮಿಸುವುದು ಇಂಥ ನೂರಾರು ಸಂಗತಿಗಳಲ್ಲಿ ವ್ಯಕ್ತವಾದ ಅವರ ಪ್ರೇಮಮಯ ವ್ಯಕ್ತಿತ್ವವು ಅವನೆದೆಯಲ್ಲಿ ಹೊಕ್ಕು ಅವನ ಆದರ್ಶವನ್ನು ನಿಚ್ಚಳಗೊಳಿಸುತ್ತಿತ್ತು. ಅವರು ಬಂದ ಮರುದಿನ ಅವನೂ ಬೇರೆ ಒಬ್ಬಿಬ್ಬ ತರುಣ ಡಾಕ್ಟರೂ ಕೂಡಿ ಕುಳಿತಾಗ ಅವರು ಮಾಡಿದ ಸೂಚನೆಗಳ ಚರ್ಚೆ ಮೊಲ್ಲಗೆದ್ದಿತು.

'ಗುಣ ಹೊಂದಿದವರನ್ನು ಮನೆಗೆ ಕಳಿಸೆಂದು ಸ್ವಾಮಿಜಿ ಹೇಳಿದರು. ಆದರೆ ಅವರಿಗೆ ಹೋಗಲು ಮನೆ ಎಲ್ಲಿದೆ ?' ಸುಧೀರ ಕೇಳಿದನು. ಸುಧೀರನು ಈ ತರುಣಮಂಡಳಿಯಲ್ಲಿ ಪ್ರಸಿದ್ಧ ಸಾಮ್ಯವಾದಿ. ಸೋವಿಯಟ್ ರಸಿಯದ ಪ್ರಶಂಸಕ. ಜನತೆಯ ಪಕ್ಷ ಹಿಡಿದು ಯಾವಾಗಲೂ ಮಾತಾಡುವವನೆಂದು ಅವನ ಖ್ಯಾತಿ.

'ಹೀಗೆಂದು ಕೊನೆಯವರೆಗೆ ಇಲ್ಲಿ ಧ್ವಜ ಊರಿದರೆ ಹೇಗೆ ? ಯಾರು ಅವರಿಗೆ ಹೊಟ್ಟೆಗೆ ಹಾಕುವರು ?' ಸುಧೀರನ ಮಿತ್ರ ಕೇದಾರ ಕೇಳಿದನು. ಅವನದು ವ್ಯಾವಹಾರಿಕ ದೃಷ್ಟಿ. ಹೀಗೆ ಇವರಿಬ್ಬರ ಸಂವಾದ ಬೆಳೆಯುತ್ತ ಹೊರಟಿರಲು ಅಮೃತನು ಸುಮ್ಮನೆ ಕೂಡಲಾರದೆ 'ನನ್ನದೊಂದು ಸೂಚನೆ ಯಿರುವದು. ಅದನ್ನು ಸ್ವಾಮಿಜಿಯವರಿಗೆ ತಿಳಿಸೋಣ' ಎಂದನು. 'ಅದೇನು?' ಉಳಿದಿಬ್ಬರೂ ಕುತೂಹಲದಿಂದ ಕೇಳಿದರು. 'ಗುಣ ಹೊಂದಿದ ಗಂಡಸು ಹೆಂಗಸರಿಗೆ ಚರ್ಕಾ ಕೊಟ್ಟು ಅವರ ಕಡೆಯಿಂದ ನೂಲಿಸಿ ನೂತಷ್ಟು ಕೂಲಿ ಕೊಡಬೇಕು. ಅಥವಾ ಅಷ್ಟು ಆಹಾರವನ್ನು ಅವರಿಗೆ ಕೊಡಬೇಕು.' ಸುಧೀರನು ಕೂಡಲೆ ತಿರಸ್ಕಾರದ ನಗೆನಕ್ಕು 'ನಮ್ಮ ಕೇಂದ್ರವನ್ನು ಗಾಂಧಿಯ ವರ್ಧಾ ಆಶ್ರಮ ಮಾಡುವ ಉಪದ್ವ್ಯಾಪ ಬೇಡ' ಎಂದು ಘೋಷಿಸಿಬಿಟ್ಟನು. 'ಅಮೃತ ಮಾಡಬೇಕೆಂದರೂ ಅದು ಆಗಲಾರದು. ಗುಣವಾದವರಿಗೆ ನೂಲುವ ತ್ರಾಣವಿರುವದೆಂದು ಅವನು ತಿಳಿದಿರುವನೇನು?' ಎಂದು ಕೇದಾರನು ಕೇಳಿದನು. ಇವರಿಬ್ಬರ ವಾದಕ್ಕೆ ಉತ್ತರಕೊಡುವ ಉತ್ಸಾಹದಲ್ಲಿ ಕಾವುಗೊಂಡು 'ಗಾಂಧಿಯ ಆಶ್ರಮವಾದರೇನು ತಪ್ಪಾಯಿತು ? ಅದು ಹಿಂದುಸ್ಥಾನದ ಒಂದು. ಪವಿತ್ರ ಕ್ಷೇತ್ರ. ಚರ್ಕಾದ ಧ್ವನಿಯೊಂದಿಗೆ ನಮ್ಮ ಪವಿತ್ರ ದೇಶಕ್ಕೆ ತಾರಕಮಂತ್ರ'.

ಎಂದು ಅಮೃತನು ಆವೇಶಯುಕ್ತ ಭಾಷಣವನ್ನು ಪ್ರಾರಂಭಿಸಿದನು. ಈ ಹೊಗಳಿಕೆಯನ್ನು ತಡೆಯಲಾರದೆ ಸುಧೀರನು 'ಸಾಕು ನಿನ್ನ ಚರ್ಕಾಪುರಾಣ. ಆ ಮಧ್ಯಯುಗದ ಅವಶೇಷವಾದ ಹಾಳು ಚರ್ಕಾದಲ್ಲಿ ನನಗೆ ಎಳ್ಳಷ್ಟೂ ವಿಶ್ವಾಸವಿಲ್ಲ' ಎಂದು ಇಂಗ್ಲಿಷಿನಲ್ಲಿ ಒದರಿಕೊಂಡನು.

'ಹಾಳು ಚರ್ಕಾ! ಹೀಗೆಂದವರೇ ಹಾಳಾಗುವರು! ಅಮೃತನು ದನಿಯೇರಿಸಿ ತಲೆತಿರುಗಿದವರಂತೆ ಮಾತನಾಡಹತ್ತಿದನು. ಪತ್ತಿರದ ಗುಡಿಸಲಲ್ಲಿ ಪ್ರಜ್ಞಾನಂದರು ಕೂತಿರುವುದರ ಧ್ಯಾಸವೇ ಅವನಿಗುಳಿಯಲಿಲ್ಲ. 'ಮಧ್ಯಯುಗದ ಅವಶೇಷವಂತೆ! ಸಧ್ಯದ ಯುಗದಲ್ಲಿ ಸಾವಿರಾರು ಜನಗಳಿಗೆ ಉದ್ಯೋಗವೊಂದನ್ನು ಕಲ್ಪಿಸಿಕೊಟ್ಟು ಅವರಿಗೆ ಹೊಟ್ಟೆಗೆ ಹಾಕಿದ್ದು ಚರ್ಕಾ ಅಲ್ಲವೇ? ಸ್ವಾವಲಂಬನದ ತತ್ವವನ್ನು, ಸ್ವದೇಶಿಯ ವ್ರತವನ್ನು ಕಲಿಸಿದ್ದು ಚರ್ಕಾ ಅಲ್ಲವೇ? ಖಾದಿಯೆ ಸ್ವರಾಜ್ಯದ ತಳಹದಿಯೆಂದೂ ಚರ್ಕಾದ ಚಕ್ರದಿಂದ ಪರಚಕ್ರವನ್ನು ಸದೆಬಡಿಯಬಹುದೆಂದೂ ಗಾಂಧಿಜಿಯವರು ಹೇಳಿದ್ದು ಸತ್ಯವಾಗಿಲ್ಲವೇ?' ಹೀಗೆ ಅಮೃತನ ವಾಗ್ಲಹರಿ ಸಾಗಿರಲು ಸುಧೀರ-ಕೇದಾರರು ಹೀಯಾಳಿಕೆಯ ಮುಗುಳ್ನಗೆಯಿಂದ ಅದನ್ನು ಕೇಳುತ್ತಿದ್ದರು. ಅಮೃತನನ್ನು ಇನ್ನಿಷ್ಟು ರೇಗಿಸುತ್ತಿದ್ದರು. ಅವನ ಮಾತನ್ನು ತಡೆದು ಸುಧೀರ ಹೇಳಿದನು: 'ತಿಳಿಯಿತು ಮಹಾಶಯ ನಿನ್ನ ಚರ್ಕಾಮಹಾತ್ಮ್ಯ. ಯಾರೋ ಗಾಂಧಿಸೂತ್ರ ಬರೆದಿರುವನಂತೆ. ಇನ್ನು ಮೇಲೆ ಚರ್ಕಾ ಪುರಾಣವೊಂದನ್ನು ಬರೆದು ಗುಡಿಗುಂಡಾರಗಳಲ್ಲಿ ಹೇಳಿಸುವದೊಂದುಳಿದಿದೆ! ಇಲ್ಲಿ ನೋಡು, ಅಮೃತ, ಚರ್ಕಾ ನಾಲ್ಕು ಜನರಿಗೆ ಹೊಟ್ಟೆಗೆ ಹಾಕಿದೆ, ದೇಶಕ್ಕೆ ಬಟ್ಟೆ ನೀಡಿದೆ. ಇದ ನ್ಯಾರು ಇಲ್ಲವೆನ್ನುತ್ತಾರೆ? ಹೀಗೆಂದು ಯಂತ್ರದ ಕೂಡ ಅದು ಹೇಗೆ ಹೋರಾಡಬಲ್ಲುದು? ರಾಕ್ಷಸನ ಕೂಡ ಕೂಸು ಕುಸ್ತಿ ಹಿಡಿಯಬಹುದೇ?'

'ರಾಕ್ಷಸ! ಹೌದು, ಅದಕ್ಕೇ ನಮಗೆ ಯಂತ್ರ ಬೇಡ ಎನ್ನುವುದು. ಅದು ರಾಕ್ಷಸನಂತೆ ಮನುಷ್ಯರನ್ನು ನುಂಗಲಿಕ್ಕೆ ಬಂದಿದೆ. ಈ ರಾಕ್ಷಸನನ್ನು ನಮ್ಮ ದೇಶದಿಂದ ಹೊರಗಟ್ಟಬೇಕು.'

'ಹೊರಗಟ್ಟುವುದು ಸಾಧ್ಯವೇ ಇಲ್ಲ. ಅಮೃತ, ಧಾವಿಸಿ ಬರುವ ಮಹಾಪೂರವನ್ನು ಹಿಂದಟ್ಟುವೆನೆಂದರೆ ಹುಚ್ಚುಮಾತು. ಅದಕ್ಕೆ ಬಹಳಾದರೆ ಒಡ್ಡು ಹಾಕಿ ನೀರು ಹಿಡಿದು ವಿಸ್ತಾರವಾದ ನೆಲಕ್ಕೆ ಉಣಿಸಿ ಭೂಮಿಯನ್ನು ಸ್ವರ್ಗವಾಗಿಸಬಹುದು. ಸಾಮ್ಯವಾದವಿದನ್ನೇ ಹೇಳುತ್ತದೆ. ಬಂಡವಾಳಗಾರರ ಕೈ

ಯಲ್ಲಿದ್ದ ಯಂತ್ರವನ್ನು ಸಂಪತ್ತಿಯನ್ನೂ ದುಡಿಮೆಗಾರರ ಸೊತ್ತಾಗಿ ಮಾಡ ಬೇಕು. ಅಂದರೆ ಶ್ರೀಮಂತರ ಬೊಕ್ಕಸದಲ್ಲಿ ಮಾತ್ರ ಹರಿದುಹೋಗುವ ಸಿರಿಯ ಪ್ರವಾಹವು ಕಾಲುವೆಗಳ ಮೂಲಕ ದುಡಿಯುವ ಕೂಲಿಕಾರರ ಮನೆ ಮನೆಗಳಲ್ಲಿ ಹರಿದು ಎಲ್ಲರಿಗೂ ಸಮಾನವಾದ ಸೌಖ್ಯವನ್ನು ಕೊಡುತ್ತದೆ. ಚರ್ಕಾದಿಂದ ಸ್ವರಾಜ್ಯ ಸಿಗುವುದಂತೂ ದೂರ ಉಳಿಯಿತು. ಸಿಗಬಹುದಾದ ಸ್ವರಾಜ್ಯ ಶ್ರೀಮಂತರ ಸ್ವಾಹಾರಾಜ್ಯವಾಗುತ್ತದೆ. ನಮಗೆ ಬೇಕಾದ್ದು ಬರೀ ಸ್ವರಾಜ್ಯವಲ್ಲ, ಸಾಮ್ಯರಾಜ್ಯ.'

'ಅಲ್ಲ, ರಾಮರಾಜ್ಯ. ಗಾಂಧಿಯವರು ಹೇಳುವ ರಾಮರಾಜ್ಯ ನಿಮ್ಮ ರಾಜ್ಯಕ್ಕಿಂತ ಹೆಚ್ಚಿನದು.' ಹೀಗೆ ಪಕ್ಷಪಾತದ ಆವೇಶದಿಂದ ಇಬ್ಬರೂ ಕೂಗುತ್ತಿ ರಲು ಕೇದಾರನು ಅಂದ: 'ಸಾಕುಮಾಡಿರಿ ಪಂಡಿತರೇ, ನಿಮ್ಮ ಎರಡೂ ರಾಜ್ಯ ಗಳಿಗೇ ಏನೇ ಆಗಲಿ, ಇಲ್ಲಿ ರೋಗಿಗಳ ರಾಜ್ಯವಿದೆ. ಗಂಟಲು ಹರಿಯುವಂತೆ ಒದರಿಕೊಂಡು ಅವರನ್ನು ಯಮರಾಜ್ಯಕ್ಕೆ ದಯಮಾಡಿ ಕಳಿಸಬೇಡಿರಿ!'

ಮೂವರೂ ನಕ್ಕರು. ಸನ್ನಿವೇಶದ ಕಾವು ತುಸು ಇಳಿಯಿತು. ಯಾವ ವಿಷಯದಿಂದ ವಾದ ಹೊರಟಿತೋ ಅದರ ನಿರ್ಣಯವಾಗಲಿಲ್ಲ. ಈ ಹೊತ್ತಿಗೆ ಪ್ರಜ್ಞಾನಂದರು ಅವರು ಕುಳಿತಲ್ಲಿ ಬಂದು ಅವರ ನಡುವೆ ಕೂತುಕೊಂಡರು. ಅವರು ಹತ್ತಿರದಲ್ಲಿಯೇ ಇದ್ದರೆಂಬ ಎಚ್ಚರ ಈಗ ಮೂವರಿಗೂ ಬಂದಿತು. ಮೋರೆ ಕೆಳಗೆ ಹಾಕಿದರು. 'ಇಂಥ ವಿನಯಶೀಲರನ್ನು ನಾನೆಲ್ಲಿಯೂ ನೋಡಿಲ್ಲ. ಎಷ್ಟು ಸದ್ದಿಲ್ಲದೆ ಶಾಂತವಾಗಿ ಕೂತಿದ್ದೀರಿ!' ಸ್ವಾಮೀಜಿಯವರ ಈ ಮಾತು ಮರ್ಮ ಭೇದಿಯಾಗಿತ್ತು. ಅದರ ಹುರುಳು ಎಲ್ಲರಿಗೂ ಗೊತ್ತಾಯಿತು. 'ವಾದದಜೋರು ಹೆಚ್ಚಾಯಿತು. ಸ್ವಾಮಿಜಿ, ಕ್ಷಮಿಸಬೇಕು' ಅಮೃತ ಆಡಿದನು. 'ಅದರಲ್ಲೇನು ತಪ್ಪು? ವಿರಾಮಕಾಲದಲ್ಲಿ ನಿಮ್ಮಂಥ ತರುಣರು ವಾದ ಹಾಕದಿದ್ದರೆ ಇನ್ನೇನು ಮಾಡಬೇಕು?' ಎಂದು ನಸುನಕ್ಕರು. 'ತಮಗೆಲ್ಲಾ ಕೇಳಿಸಿಯೇ ಬಿಟ್ಟಿದೆ. ನಮ್ಮ ಮಾತಿನಲ್ಲಿ ಯಾರದು ಸರಿ ನೀವು ಹೇಳಬೇಕು?' ಅಮೃತ ಕೇಳಿದನು. ಸುಧೀರನು 'ಹೌದು ಸ್ವಾಮಿಜಿ ನೀವೆ ಹೇಳಿರಿ' ಎಂದನು. 'ಯಾಕೆ ? ಯಾರದಾದರೂ ಒಬ್ಬರದೇ ಸರಿಯೆಂದು ಹೇಳಬೇಕೆ? ನೀವು ಇಬ್ಬರೂ ಹೇಗೆ ಬೇಕಾದವರೋ ಹಾಗೆ ಇಬ್ಬರಲ್ಲಿಯೂ ಸರಿಯೆಂಬುದು ಇರಬಹುದಲ್ಲ? ನಾನು ಈ ದೃಷ್ಟಿಯಿಂದ ಹೇಳ ಬಲ್ಲವನು. ಕೇಳುವಿರಾ?' 'ಆಗಲಿ' ಎಂದು ಮೂವರೂ ಗೋಣು ಹಾಕಿದರು. 'ನೋಡಿರಿ ಸರ್ವೇ ಜನಾಃ ಸುಖಿನೋ ಭವಂತು ಎಂಬಂತೆ ಎಲ್ಲ ಜನತೆ ಸುಖಿ

ಯಾಗಬೇಕೆಂದು ನಮ್ಮೆಲ್ಲರ ಧ್ಯೇಯ. ನಾಡಿನ ಮುಂದಾಳುಗಳದೂ ಅದೇ ಗುರಿ. ಆದರೆ ಅದನ್ನು ಹೇಗೆ ಸಾಧಿಸಬೇಕೆಂಬುದು ದೊಡ್ಡ ಪ್ರಶ್ನೆ. ಜಗತ್ತು ಹಾಗಾಗಬೇಕು, ಹೀಗಾಗಬೇಕು ಎಂಬ ಗಾಳಿಗೋಪುರವನ್ನು ಕಟ್ಟುವುದು ಸುಲಭ. ಆ ಗಾಳಿಗೋಪುರಗಳನ್ನು ಅಂಕುಡೊಂಕಾದ ಈ ನೆಲದ ಮೇಲೆ ನಿಲ್ಲಿಸುವುದು ಬಹಳ ಕಠಿಣ. ಶತಶತಮಾನಗಳ ಇರವಿನಿಂದ ಮನುಷ್ಯ ಜೀವನ ಒಂದು ಬಗೆಯ ಪ್ರಗತಿಯನ್ನೂ ಇನ್ನೊಂದು ಬಗೆಯ ದುರ್ಗತಿಯನ್ನೂ ಹೊಂದಿ ಚಲೋ ಕೆಟ್ಟ ಸಂಸ್ಕಾರಗಳ ಮುದ್ದೆಯಾಗಿ ಒಂದು ನೆಲೆಗೆ ಬಂದಿದೆ. ಅದನ್ನು ತಿದ್ದುವ ಪ್ರಯತ್ನ ಫಲಿಸಲಿಲ್ಲ. ತತ್ವ, ಧರ್ಮ, ರಾಜನೀತಿ ಮುಂತಾದ್ದರ ಸಾಹಸಕಥೆ ಈ ಜಗತ್ತಿನ ಪುಸ್ತಕದಲ್ಲಿ ಬರೆದಿರುವಂತೆ ಅವುಗಳ ಸೋಲಿನ ಕರುಣಕಥೆಯನ್ನೂ ಬರೆಯಲಾಗಿದೆ. ಮನುಷ್ಯನ ಆತ್ಮ ಅಜೇಯವಾಗಿ ಮೆರೆದಂತೆ ಅವನ ಮನಸ್ಸು ಸ್ವಾರ್ಥ-ದುರಾಸೆಗಳ ಬೆನ್ನುಹತ್ತಿ ಲೋಕಕಂಟಕವಾಗಿಯೂ ತೋರಿದೆ. ಇದನ್ನೆಲ್ಲ ಲಕ್ಷ್ಯಕ್ಕೆ ತಂದು ಮೊದಲನೆಯ ಸೂತ್ರವಾಗಿ ತಾವು ಇಟ್ಟುಕೊಳ್ಳಬೇಕಾದ್ದೆಂದರೆ ಜಗತ್ತಿನ ಉದ್ಧಾರಕ್ಕೆ ಒಂದು ಸಾಮಾನ್ಯ ತತ್ವವು ಧ್ಯೇಯರೂಪವಾಗಿ ಇರುವುದಾದರೂ ಅದನ್ನು ವ್ಯಕ್ತಿಗೆ ರಾಷ್ಟ್ರಕ್ಕೆ ಅನ್ವಯಿಸಿ ಅವರವರ ಉದ್ಧಾರ ಮಾಡುವಾಗ ಆಯಾವ್ಯಕ್ತಿಯ ರಾಷ್ಟ್ರದ ಸ್ವಭಾವ ಹಾಗೂ ಪರಂಪರೆಯ ಹಿನ್ನೆಲೆಯಲ್ಲಿ ಆ ಸಾಮಾನ್ಯ ತತ್ವವು ವಿಶಿಷ್ಟರೂಪವನ್ನು ತಾಳಬೇಕು; ಭಿನ್ನ ಭಿನ್ನ ಯೋಜನೆಗಳಿಗೆ ಜನ್ಮಕೊಡಬೇಕು. ಅಲ್ಲಲ್ಲಿಯ ಭೂಮಿಯ ಕಸುವೇನು, ಕಸವೇನು, ನೀರೇನು ಹವೆಯೇನು ಎಂಬುದನ್ನರಿತು ಮುನ್ನಡೆಯ ಬೀಜ ಬಿತ್ತಿ, ಶಾಂತಿ ಸೌಖ್ಯದ ಬೆಳೆ ಪಡೆಯಲು ಹವಣಿಸಬೇಕು. ಅಂಥದರಲ್ಲಿಯೂ ಮಿಡಿಚೆಗಳ ಉಪದ್ರವದಿಂದಲೂ ದುಡಿದವರ ದೋಷದಿಂದಲೂ ಅಪೂರ್ಣತೆ ಉಳಿಯಬಹುದು. ಆದರೆ ಪೂರ್ಣತೆಯ ದಾರಿಯಲ್ಲಿ ಅದು ಮುಂದಿಟ್ಟಹೆಜ್ಜೆಯಾದೀತು. ಸಾಮಾನ್ಯವಾಗಿ ಲೋಕವನ್ನೆಲ್ಲ ಕಣ್ಣಮುಂದಿಟ್ಟು ಯೋಚಿಸಿದರೆ ಮನುಷ್ಯನ ಲೋಭಕ್ಕೆ ಸ್ವಾರ್ಥಕ್ಕೆ ತಡೆಯುಂಟು ಮಾಡಿ ಎಲ್ಲರ ಕಲ್ಯಾಣವನ್ನು ಸಾಧಿಸಲು ಹೊಸ ಆರ್ಥಿಕ ಸಾಮಾಜಿಕ ಯೋಜನೆ ಬೇಕು. ಜೊತೆಗೆ ಹೊಸ ದೃಷ್ಟಿಯನ್ನು ನೆಲೆಗೊಳಿಸುವ ಶಿಕ್ಷಣ, ಸಂಸ್ಕೃತಿ ಬೇಕು. ಬಹಿರಂಗ-ಅಂತರಂಗ ಎರಡರಲ್ಲಿಯೂ ಏಕಕಾಲೀನವಾದ ಕ್ರಾಂತಿಯಾಗುವಂತೆ ಮಾಡುವದೇ ಪೂರ್ಣದೃಷ್ಟಿ. ಪ್ರಾಚೀನ ಕಾಲದಲ್ಲಿ ವರ್ಣಾಶ್ರಮಧರ್ಮದಿಂದ ಅಂಥ ಒಂದು ಸಮಾಜ ರಚನೆ ಮಾಡಲು ಹೆಣಗಿದರು. ಅದರ ತತ್ವಗಳಲ್ಲಿ ಸನಾತನ ಸತ್ಯವಿದೆ. ಆದರೆ ಅದಿಂದು ಕಳಚಿದ ಅರಮನೆ. ಅದರ ತಿರುಳನ್ನು ಹೀರಿ

ಹೊಸ ಬಾಳನ್ನು ಕಟ್ಟಬೇಕು. ಸಾಮ್ಯವಾದದಲ್ಲಿ ಬಹಿರಂಗ ಕ್ರಾಂತಿಯ ಆರ್ಥಿಕ ಸಾಮಾಜಿಕ ಯೋಜನೆಯಿದೆ. ಅದರ ಸಾರವನ್ನು ತೆಗೆದುಕೊಂಡು ಭಾರತದ ತಿರುಳೊಡನೆ ಬೆರೆಸಿ ನಮ್ಮ ನಾಡಿನಲ್ಲಿ ನಮ್ಮ ಪರಿಸ್ಥಿತಿಗೆ ಅನುಸರಿಸಿ ಹೊಸ ಸಮಾಜವನ್ನು ರಚಿಸಬೇಕು. ಗಾಂಧೀಜಿಯವರು ಪ್ರಾಚೀನ ಭಾರತದ ಸಾರಸಂಗ್ರಹವಾದ ಹೊಸ ಧರ್ಮದ ಸಂಕೇತವಾಗಿದ್ದಾರೆ. ಆದರೆ ಅವರ ಆ ಎತ್ತರ ಇಂದಿನ ಸರ್ವವ್ಯಾಪಿಯಾದ ನಾಗರಿಕತೆಯ ಕೆಳಮಟ್ಟಕ್ಕೆ ಹೆಚ್ಚಾಗುತ್ತದೆ. ಅಂತೇ ಎಷ್ಟೋ ಸಲ ಅವರ ಸತ್ಯ-ಅಹಿಂಸೆಯ ಆಭಾಸ ಅವರ ಕಣ್ಮುಂದೆ ನಡೆಯುತ್ತದೆ. ಅವರೇ ಕೆಲವು ಸಲ ಎಡವಿ ಮುಗ್ಗರಿಸಿದ್ದಾರೆ. ಯಂತ್ರವು ಲೋಕದಲ್ಲಿ ಬಂದಿದೆ, ಭಾರತಕ್ಕೂ ಬಂದಿದೆ. ಇದನ್ನು ಇಲ್ಲದಾಗಿಸುವುದಾಗಲಿ ಅಲ್ಲಗೆಳೆಯುವುದಾಗಲಿ ಅಸಾಧ್ಯ, ಅಸಮಂಜಸ. ಯಂತ್ರದೊಡನೆ ಲೋಭ, ಧನಸಂಚಯ, ಬಂಡವಾಳಗಾರಿಕೆ, ವರ್ಗಕಲಹ ತಲೆಯೆತ್ತಿವೆ. ಇವಕ್ಕೆ ಸಾಮ್ಯವಾದವೇ ಸರಿಯಾದ ಉತ್ತರ. ಆದರೆ ಸಮಾನಸಂಧಿ, ಸಮಾನ ಸೌಕರ್ಯ ಇವನ್ನು ಒದಗಿಸುವ ಭರದಲ್ಲಿ ಮನುಷ್ಯ ಯೋಗ್ಯತೆಯ, ಪ್ರಕೃತಿಯ ಮೂಲ ಭಿನ್ನತೆಗಳನ್ನು ಸಾಮ್ಯವಾದಿಗಳು ಮರೆಯಕೂಡದು. ಸಾಮಾಜಿಕ ಮತ್ತು ಆರ್ಥಿಕ ವೈಷಮ್ಯವನ್ನೂ ಅದರ ಅತಿರೇಕವನ್ನೂ ಹೋಗಲಾಡಿಸುವುದೇ ಭಾರತೀಯ ಸಾಮ್ಯವಾದದ ಉದ್ದೇಶವಾಗಿರಬೇಕೇ ಹೊರತು ನಿಷ್ಠುರವಾದ ಸ್ಥಿತಿಯಲ್ಲಿ ಯಾಂತ್ರಿಕವಾಗಿ ಸಾಮ್ಯವನ್ನು ಸ್ಥಾಪಿಸುವುದಾಗರಬಾರದು. ಮುಖ್ಯ ಉದ್ಯೋಗಗಳ ರಾಷ್ಟ್ರೀಕರಣವಾದರೂ ಸರಕಾರ ನಿಯಂತ್ರಿತವಾದ ರೀತಿಯಲ್ಲಿ ಕೆಲವು ಉದ್ಯೋಗಗಳ ಹುಟ್ಟು ಬೆಳವಣಿಗೆಯ ಸ್ವಾತಂತ್ರ್ಯವನ್ನು ವ್ಯಕ್ತಿಗಳಿಗೆ ಕೊಡಬೇಕು. ದುಡಿದು ಪಡೆಯುವ ಒಕ್ಕಲಿಗರು ಹೊಲಗಳ ಒಡೆಯರಾಗಬೇಕು. ಕೂಲಿಕಾರರು ಕೆಲಸಕ್ಕೆ ತಕ್ಕ ಸುಖ ಸೌಕರ್ಯಗಳನ್ನು ಪಡೆಯಬೇಕು. ಗಾಂಧಿಯವರ ಗ್ರಾಮರಾಜ್ಯದ ಸ್ವಾಯತ್ತತೆ ಹೊಸ ಯುಗದಲ್ಲಿ ಶುದ್ಧ ಸ್ವರೂಪದಲ್ಲಿ ಉಳಿಯಲಾರದು. ಜಗತ್ತಿನ ತುಂಬ ಆರ್ಥಿಕ ಜೀವನ ಅನ್ಯೋನ್ಯ ಸಂಬಂಧಿಯಾಗಿದೆ. ಇಂದಿನ ಪರತಂತ್ರ ಸ್ಥಿತಿಯಲ್ಲಿ ಚರ್ಕಾ ಮತ್ತು ಗ್ರಾಮೋದ್ಯೋಗಗಳ ಪ್ರಯೋಜನವನ್ನು ಯಾರು ಕಂಡಿಲ್ಲ? ಮುಂದೆ ಅವುಗಳ ಸ್ಥಾನವೇನೆಂಬುದನ್ನು ಆಯಾ ಪರಿಸ್ಥಿತಿಯಲ್ಲಿ ನಿರ್ಣಯಿಸಬೇಕು. ಯಂತ್ರದ ನಿರ್ಮೂಲನ ಅಥವಾ ಅತಿರೇಕ ಈ ಎರಡನ್ನೂ ತಪ್ಪಿಸಿ ಅದಕ್ಕೆ ಯೋಗ್ಯಸ್ಥಾನ ಕೊಡಬಲ್ಲ ಅರ್ಥಶಾಸ್ತ್ರ ನಮ್ಮಲ್ಲಿ ಹುಟ್ಟಬಹುದೆಂದು ನನ್ನ ನಂಬಿಗೆಯಿದೆ.'

ಸಂದರ್ಭದ ಭರದಲ್ಲಿ ಪ್ರಜ್ಞಾನಂದರು ದೊಡ್ಡ ವಿಷಯಕ್ಕೆ ತೆಕ್ಕೆಬಿದ್ದ ಕಾರಣದಿಂದ ಹೆಚ್ಚು ಮಾತಾಡಿದರು. ಮೂವರು ತರುಣರು ಸ್ತಬ್ಧವಾಗಿ ಕುಳಿತು ಬೆರಗುಗೊಂಡು ಕೇಳುತ್ತಿದ್ದರು. ಅವರ ಏಕಾಗ್ರ ಭಕ್ತಿಯಿಂದಲೂ ಸ್ವಾಮಿಜಿಯವರಿಗೆ ಹೆಚ್ಚು ಹೇಳುವ ಹುರುಪು ಬಂದಿರಬಹುದು. ಈ ಬೆಳೆಯುವ ಜೀವಗಳ ಕೈಯಲ್ಲಿ ನವಭಾರತದ ನಿರ್ಮಾಣವಿರುವುದೆಂದು ಭಾವಿಸಿ ಅವರು ತಮ್ಮ ವಿಚಾರದ ಬೀಜಗಳನ್ನು ಅಲ್ಲಿ ತೂರಿದರು. ಮಾತು ಮುಗಿದು ಒಂದು ಕ್ಷಣವಾದ ಮೇಲೆ 'ತಿಳಿಯಿತು. ಒಟ್ಟಿನ ಮೇಲೆ ಸ್ವಾಮಿಜಿಯವರು ನನ್ನ ಸಾಮ್ಯವಾದವನ್ನೇ ಎತ್ತಿ ಹಿಡಿದರು. ಇದು ನನ್ನ ಗೆಲವು' ಎಂದು ಸುಧೀರ ಉಬ್ಬಿ ಹೇಳಿದನು.

'ಆಗಿಹೋಯಿತು. ನಿನ್ನ ಸಾಮ್ಯವಾದವನ್ನಲ್ಲ ಅವರು ಹೇಳಿದ್ದು, ತಮ್ಮ ಸಾಮ್ಯವಾದವನ್ನು. ನಿನ್ನ ಹಾಗೆ ಚರ್ಕಾದ ಬಗ್ಗೆ ಅವರಿಗೆ ತಿರಸ್ಕಾರವಿಲ್ಲ. ಅಲ್ಲವೇನು ಸ್ವಾಮಿಜಿ?' ಅಮೃತ ಕೇಳಿದನು. ಇಬ್ಬರನ್ನೂ ನೋಡಿ ಸ್ವಾಮಿಜಿಯವರು ಮುಗುಳು ನಕ್ಕರು. ಕೊನೆಗೆ ಕೇದಾರನು 'ವಾದವೆಲ್ಲ ಆಯಿತು, ಹೊರಟ ವಿಷಯವೆಲ್ಲಿಯೋ ಹಾರಿ ಹೋಯಿತು.' ಎಂದು ಚೇಷ್ಟೆಮಾಡಿದನು. ಅದರ ಬಗ್ಗೆ ಕೆಲಹೊತ್ತು ಚರ್ಚೆ ನಡೆಯಿತು. ಸಂಪೂರ್ಣ ಗುಣಹೊಂದಿ ಹೋಗಲು ಮನೆ ಮಾರು ಇಲ್ಲದವರನ್ನು ಕೇಂದ್ರದಲ್ಲಿಯೆ ಕೆಲವು ಕಾಲ ಇಟ್ಟುಕೊಳ್ಳಬೇಕೆಂದು ಸಾಧ್ಯವಾದೊಡನೆ ಅವರನ್ನು ಅವರ ಊರುಗಳಿಗೆ ಕಳಿಸಿ ಅಲ್ಲಿ ಹೊಟ್ಟೆಪಾಡಿನ ಏರ್ಪಾಡು ಮಾಡಬೇಕೆಂದೂ ತೀರ್ಮಾನವಾಯಿತು. ಚರ್ಕಾ ಮುಂತಾದ ಉದ್ಯೋಗಗಳಲ್ಲಿ ತೊಡಗಿಸುವ ಹೊಣೆ ಹೊರುವುದೆಂದರೆ ಅದಕ್ಕೆ ಯೋಗ್ಯ ಕೆಲಸಗಾರರು ಬೇಕು. ಕೆಲಸಗಾರರ ಕೊರತೆ ಅಷ್ಟಿಷ್ಟಲ್ಲ ಎಂದು ಪ್ರಜ್ಞಾನಂದರು ತಿಳಿಸಿ ಹೇಳಲು ಅಮೃತನಿಗೆ ಸಮಾಧಾನವಾಯಿತು. ಅಂತೂ ಚರ್ಕಾದ ಗೃಹಪ್ರವೇಶ ತಪ್ಪಿತಲ್ಲ ಎಂದು ಸುಧೀರನು ಹಿಗ್ಗಿದನು. ಪ್ರಜ್ಞಾನಂದರು ಅಂದೇ ಕಲಕತ್ತೆಗೆ ಮರಳಿದರು.

ಈಗ ವೀಣೆ ಬೇಕಾದ ಹಾಗೆ ಓಡಾಡುತ್ತಿರುವಳು. ಪೌಷ್ಟಿಕದ ಹೊರತು ಅವಳಿಗೆ ಬೇರೆ ಔಷಧವಿಲ್ಲ. ಎರಡು ಹೊತ್ತು ಚೆನ್ನಾಗಿ ಊಟ ಮಾಡಿ ಅಲ್ಲಿಯೇ ಗುಡಿಸಲ ಸುತ್ತು ತಿರುಗುತ್ತಾಳೆ. ಬೇರೆ ಬೇರೆ ರೋಗಿಗಳ ಹತ್ತಿರ ಹೋಗಿ ಅವರ ಸುಖದುಃಖ ಕೇಳುತ್ತಾಳೆ. ನಡುನಡುವೆ ಏನನ್ನೋ ನೆನೆದು ಕೊರಳುಬ್ಬಿ ನಿಂತು ಬಯಲನ್ನು ನೋಡುತ್ತಾಳೆ. ಯಾರಿಗೆ ತನ್ನ ಗೋಳನ್ನು ತೋಡಿಕೊಳ್ಳಲಿ ಎಂದು ಬಗೆಯುತ್ತಾಳೆ. ಅಮೃತನ ಮೂರ್ತಿ ಕಣ್ಣ ಮುಂದೆ ಹಾಯುತ್ತದೆ. ಹೃದಯ ಅವನತ್ತ ಧಾವಿಸುತ್ತದೆ, ಅದೇಕೊ ತಿರುಗಿ ಬರುತ್ತದೆ. ಹೀಗಿರಲು ಒಮ್ಮೆ ತನ್ನ

ಸುತ್ತುಗಳನ್ನು ಮುಗಿಸಿ ಒಂದು ಸಂಜೆ ಅಮೃತ ತನ್ನ ಬಿಡಾರಕ್ಕೆ ಹೊರಟಿದ್ದ. ಆಗ ನಸುಗತ್ತಲಿಯಲ್ಲಿ ವೀಣೆ ಒಂದು ಗಿಡದಡಿಯಲ್ಲಿ ಕೂತಿದ್ದಳು. ಅಮೃತ ಹತ್ತಿರ ಬಂದು 'ಯಾರು ? ವೀಣೆಯೇನು ?' ಎಂದ.

'ಹೌದು' ಎಂದು ಎದ್ದು ನಿಂತಳು.

'ಯಾಕೆ ? ಎದ್ದು ನಿಲ್ಲಲು ನಾನೇನು ಸ್ವಾಮಿಜಿ ಅಲ್ಲ.'

'ಸ್ವಾಮಿಜಿ ಅಲ್ಲದಿದ್ದರೇನಾಯಿತು ? ನೀವು ನಮ್ಮ ಡಾಕ್ಟರು, ಜೀವ ದಾತರು.'

'ಓಹೋ. ವೀಣಾ, ನಿಮಗೆ ಜೀವದಾತರು ಔಷಧಗಳು. ನಾವಲ್ಲ.' ಹೀಗೆ ಮಾತು ಮುಂಬರಿಯಿತು. ವೀಣೆ ನಾಲಗೆ ತುದಿಯವರೆಗೆ ಬಂದ ಯಾವುದೋ ಮಾತನ್ನು ಹೇಳಬೇಕೆನ್ನುತ್ತಾಳೆ, ಹೇಳಲಾಗಲೊಲ್ಲದು. ಆ ಈ ಮಾತು ನಡೆದಿರಲು ಸುತ್ತೆಲ್ಲ ನೋಡುತ್ತಾಳೆ, ಕತ್ತಲೆ ಹೆಚ್ಚುತ್ತಿದೆ. ಅಲ್ಲಿ ಬೇರೆ ಯಾರೂ ಇಲ್ಲ. ಅಮೃತನೊಬ್ಬನೇ ಇದ್ದಾಗ ಮಾತಾಡಿಸುವ ಪ್ರಸಂಗ ಇದೇ ಮೊದಲನೆಯ ಸಲ ಸಿಕ್ಕಿದೆ. ಆದರೆ ಅದೆಂಥ ಏಕಾಂತ ಎಂಬ ಭಾವನೆ ಹೋಗಲಿಲ್ಲ. ಎರಡೂ ಕೈಯೆತ್ತಿ ಗಿಡದ ಎಳರೆಂಬೆಯನ್ನು ಅಮುಕಿದಳು. ಅಮೃತನಿಗೆ ಕತ್ತಲೆಯಲ್ಲಿಯೂ ಅವಳ ಏರಿಬರುವ ತಾರುಣ್ಯ ಕಂಡಿತು. ಕಣ್ಣು ಕೆಳಗೆ ಹಾಕಿದನು. ಅವಳೊಂದು ಹೂ ಕೊಯ್ದು ಕೈಯಲ್ಲಿ ಹಿಡಿದು ಮೂಸಿ ನೋಡಿ ಆಚೀಚೆ ತೂಗಿಸಹತ್ತಿದಳು. ಕಡೆಗೆ 'ಒಳ್ಳೇದು ಅಮೃತ್ ನಮಸ್ತೆ' ಎಂದು ಹೊರಟಳು.

'ಸರಿ. ನಮಸ್ತೆ. ಆದರೆ ಕೇಳಬೇಕೆಂದರೆ ಆಗಿದ್ದಿಲ್ಲ. ಮೊನ್ನೆ ರಾತ್ರಿ ನೀ ಅಷ್ಟು ಅತ್ತದ್ದು ಯಾಕೆ ? ನನಗೊಂದು ದೊಡ್ಡ ಗೂಢವಾಗಿದೆ.' ಅಮೃತ ಕೇಳಿದನು. ಅವಳಮೋರೆ ಸಪ್ಪಗಾಯಿತು. 'ನಿನಗೆ ನೋವಾಗುತ್ತಿದ್ದರೆ ಕೇಳುವುದಿಲ್ಲ.'

'ಹಾಗೇನೂ ಇಲ್ಲ. ನನಗೇನೊ ಆಯಿತು. ಅದಕ್ಕೆ.'

ಅಮೃತ ತಡೆಯಲಾರದೆ ನಕ್ಕನು. 'ನಿನಗೇನೋ ಆಯಿತೆಂಬುದು ನನಗೂ ತಿಳಿಯಿತು. ಏನಾಯಿತು ? ನಿನ್ನ ಬೇನೆ ಹೋಗಿಲ್ಲ, ಸಾವು ಬೆನ್ನಟ್ಟಿದೆ ಎಂದನಿಸಿತೇ ?'

'ಛೇ, ಸಾವು ಬೆನ್ನಟ್ಟದೆ ದೂರ ಹೋಯಿತು. ಅದೇ ಈಗಿನ ದುಃಖಕ್ಕೆ ಕಾರಣವಾಗಿದೆ.'

'ಅಂದರೆ ? ನನಗೆ ತಿಳಿಯಲಿಲ್ಲ. ನೀ ಸಾಯಬೇಕೆಂದು ಬಯಸಿದ್ದೆ ಏನು ? ಹಾಗಿದ್ದರೆ ಮೊದಲೇ ಹೇಳಬಾರದೇ ಮಹಾರಾಯಳೇ ? ಡಾಕ್ಟರರಿಗೆ ಖಾತ್ರಿ

ಯಾಗಿ ಬದುಕಿಸುವ ಔಷಧ ಗೊತ್ತಿರದಿದ್ದರೂ ಸಾಯಿಸುವ ಔಷಧ ಬೇಕಾದಷ್ಟು ಇರುತ್ತವೆ.'

'ಹೀಗೇನು ? ಈಗೇನಾಯಿತು ? ಸಾವಿನ ಗುಳಿಗೆ ಕೊಟ್ಟುಬಿಡಿರಿ ಅಲ್ಲ' ಎಂದು ವೀಣೆ ವಿಕಟವಾಗಿ ನಕ್ಕಳು.

'ಹುಚ್ಚೀ' ಎಂದು ಅಮೃತ ಛೀಗರೆದನು. 'ಹೋಗಲಿ, ನಿನ್ನ ತಾಯಿ ತಂದೆ ಬಹಳ ಬಡವರಾಗಿರುವರೇನು ? ಅವರ ಕಡೆಗೆ ಹೋಗೆಂದು ನಾ ಅಂದು ಹೇಳಿದರೆ ಹಾಗೇಕೆ ಚೀರಿದೆ ? ' ವೀಣೆ ಮುಖ ತಿರುವಿ ಸೆರಗಿನಿಂದ ಕಣ್ಣೊರಸಿ ಕೊಂಡು ಮತ್ತೆ ಅಮೃತನಿದಿರು ನೋಡಿದಳು. 'ತಿಳಿಯಿತು ವೀಣಾ. ನೀ ಹೇಳ ಬೇಕಾದ ಅಗತ್ಯವಿಲ್ಲ. ಇಲ್ಲಿಯೇ ಇದ್ದುಬಿಡು. ಸುಮ್ಮನೆ ದಿನಾಲು ಗೋಳಾಡ ಬೇಡ. ಆಯಿತೇ ? ನಾಸಿದ್ದೇನೆ. ನಿನಗೇನು ಬೇಕು ಮನಸ್ಸು ಬಿಚ್ಚಿ ನನಗೆ ಹೇಳು.' ಎನ್ನುತ್ತ ಅಮೃತ ತನ್ನ ಗುಡಿಸಲಕ್ಕೆ ಹೊರಟನು. ವೀಣೆ ಉಸಿರ್ಗರೆದು ಅದೆಷ್ಟೊ ಹೊತ್ತು ಸುತ್ತಿರುವ ಕತ್ತಲೆಯನ್ನೂ ಆಕಾಶದಲ್ಲಿ ಮಿನುಗಹತ್ತಿದ ಚಿಕ್ಕೆಗಳನ್ನೂ ಶೂನ್ಯಮನದಿಂದ ನೋಡುತ್ತ ಕುಳಿತು ತನ್ನ ಸ್ಥಳಕ್ಕೆ ಹೋದಳು.

ಮಾರ್ಚ ತಿಂಗಳ ಕೊನೆಯ ತಾರೀಖು. ಊರಿಂದ ಅಮೃತನಿಗೆ ಪತ್ರ ಬಂದಿದೆ. 'ನೀ ತಿರುಗಿ ಬರುವ ದಿವಸ ಸಮೀಪ ಬಂತು. ಎಲ್ಲರೂ ಹಾದಿ ನೋಡ ಹತ್ತಿರತೀವಿ. ಯಾವ ಗಾಡಿಗೆ ಬರತೀ ತಿಳಿಸು.' ಇದೇ ಮಾತನ್ನು ಶಂಭು ರಾಯರು ಮೂರು ನಾಲ್ಕು ಸಾರೆ ಬೇರೆ ಬೇರೆ ರೀತಿಯಲ್ಲಿ ಬರೆದಿದ್ದರು. ಅದ ನ್ನೋದಿದೊಡನೆ ಅವನ ಅಂತಃಕರಣ ಕಲಕಿತು. ನಾಳಿಂದ ನಾಳೆ ಯಾಕೆಹೋಗಿ ಬಿಡಬಾರದು ಎಂದೆನಿಸಿತು. ನನ್ನ ಸಲುವಾಗಿ ಅವರ ಕರುಳು ಸುಟ್ಟುಹೋಗು ತ್ತಿರುವದನ್ನು ಎಷ್ಟು ದಿನ ನೋಡಬೇಕು ? ಈ ಸಾರೆಯಂತೂ ಬರುವದಾಗಿ ಸ್ಪಷ್ಟ ತಿಳಿಸಿದ್ದು, ಹೋಗದಿದ್ದರೆ ಅವರಿಗೆ ಬಹಳ ನಿರಾಶೆಯಾಗುವದು. 'ಈಗೇನು ಮಾಡಲಿ?' ಎನ್ನುತ್ತ ತನ್ನ ಕೋಣೆಯಲ್ಲಿ ಆರಾಮಕುರ್ಚಿಯ ಮೇಲೆ ಬಿದ್ದುಕೊಂಡು ಯೋಚಿಸಿದನು. ಎಂಟು ಹತ್ತು ದಿನ ಹೋಗಿ ಭೆಟ್ಟಿಕೊಟ್ಟು ಮತ್ತೆ ಬರಬಹುದು ಎಂಬ ವಿಚಾರವೊಂದು ನಡುವೆ ಸುಳಿಯಿತು. ಕೂಡಲೆ ಅದು ಯೋಗ್ಯವೆಂದೆನಿಸಿ ತಟ್ಟನೆ ಎದ್ದು ಅತ್ತಿಂದಿತ್ತ ಅಲೆಯಹತ್ತಿದನು. ಸ್ವಾಮಿಜಿಯವರಿಗೆ ಏನು ತಿಳಿಸಬೇಕು, ಯಾವ ಸಾಮಾನು ಒಯ್ಯಬೇಕು ಎಂಬ ಎಣಿಕೆಗೆ ಮೊದಲಾಯಿತು. ಗಾಡಿ ಹತ್ತಿದ ಹಾಗೆ, ಊರಿಗೆ ಹೋಗಿ ನಿಲ್ದಾಣದಲ್ಲಿಯೆ ಅರಳುಮೊಗದ ಬಳಗವನ್ನೆಲ್ಲ ನೋಡಿದ ಹಾಗೆ ಚಿತ್ರ ಮೂಡಿ

ದವು. ತನ್ನಲ್ಲಿ ನಕ್ಕನು. ಆದರೆ ಆ ಚಿತ್ರಪಟ ಮುಂದರಿದಂತೆ ದೊಡ್ಡ ಭಯ ವೊಂದು ಹುಟ್ಟಿತು. ಎಂಟು ಹತ್ತು ದಿನಗಳಲ್ಲಿ ಮನೆಯಿಂದ ಬಿಡುಗಡೆದೊರೆಯು ಬಹುದೇ ಎಂದು. ತನಗಾಗಿ ದಾರಿ ಕಾದು ಕಾದು ಸಾಕಾಗಿದ್ದ ಅವರು ತಮ್ಮ ಮೋಹದ ಸೆರೆಯಲ್ಲಿ ತನ್ನ ಕಟ್ಟಿಹಾಕುವರು. ಇನ್ನೆಲ್ಲಿಗೂ ಹೋಗಗೊಡುವದಿಲ್ಲ ಎಂದು ಹಟ ತೊಡುವರು. ಹೊರಡುವ ಚಕ್ರ ಗಕ್ಕನೆ ನಿಂತಿತು. ಗುಡಿಸಲಿನ ಸಣ್ಣ ಕಿಟಕಿಯೊಳಗಿಂದ ರೋಗಿಗಳ ಕುಟೀರಗಳನ್ನೆಲ್ಲ ನೋಡುತ್ತ ನಿಂತನು. ಇವರೇ ನಮ್ಮ ಬಂಧುಬಳಗ, ಸೇವೆಯೆ ಹೆಚ್ಚಿನ ಧರ್ಮ ಎನ್ನುವಂತೆ ಭಾವಾವೇಶ ದಲ್ಲಿ ನಿರುಕಿಸುತ್ತಿರಲು ಆ ಕುಟೀರಗಳನ್ನೆಲ್ಲ ದಪದಪ ತುಳಿದು ಕೆಡವುತ್ತ ಶ್ವಾಸಿ ಸುತ್ತ ಕೂದಲ ಹರವಿಕೊಂಡು ಹೊರಟ ಅವನ ತಾಯಿಯ ಮೂರ್ತಿ ಸರ್‍ರನೆ ಹಾದುಹೋಯಿತು. ಇದೇನು ಅದ್ಭುತವೆಂದವನು ಕಣ್ಣು ಮುಚ್ಚಿದನು. ಅಲ್ಲಿಯೂ ಅದೇ ಮೂರ್ತಿ 'ಗೊತ್ತಾಯಿತು, ತಾಯಿಯ ಶಾಪವನ್ನು ಕಟ್ಟಿ ಕೊಳ್ಳಲಾರೆ, ಆದದ್ದಾಗಲಿ' ಎನ್ನುತ್ತ ಊರಿಗೆ ಹೊರಟು ಹೋಗಬೇಕೆಂದು ಹಂಬಲಿಸಿದನು. ಕಲಕತ್ತೆಗೆ ಹೋಗಿ ಸ್ವಾಮಿಜಿಯವರಿಗೆ ತನ್ನ ಪರಿಸ್ಥಿತಿ ಯನ್ನೆಲ್ಲ ತಿಳಿಸಿ ಹೇಳಿ ಅವರ ಅಪ್ಪಣೆ ಪಡೆಯಬೇಕೆಂದು ನಿರ್ಧರಿಸಿದಂತೆ ಮಾಡಿ ದನು. ಹೀಗೆಂದು ಟೇಬಲ ಹತ್ತಿರ ಬರುವುದಕ್ಕೆ ಮೇಲೆ ವಿವೇಕಾನಂದರ ಛಾಯಾಚಿತ್ರ, ಕೆಳಗೆ ಟೇಬಲ ಮೇಲೆ ಸ್ವಾಮಿಜಿಯವರ ಆಜ್ಞಾಪತ್ರ ಕಣ್ಣಿಗೆ ಬಿದ್ದವು. ಅವನ್ನು ಮೇಲೆ ಕೆಳಗೆ ಕಣ್ಣು ಹಾಯಿಸಿ ನೋಡುತ್ತ ಕಂಬದಂತೆ ನಿಂತುಕೊಂಡನು. 'ಸೇವಾವ್ರತವನ್ನು ಕೈಕೊಂಡ ಮೇಲೆ ಕೊನೆಯ ವರೆಗೆ ಪಾಲಿಸಬೇಕು. ರೋಗಿಗಳ ಸಂಖ್ಯೆ ಹೆಚ್ಚುತ್ತಿದೆ. ಯಾರೂ ತಮ್ಮ ಶುಶ್ರೂಷೆಯ ಜಾಗದಿಂದ ಕದಲಬಾರದು.' ಮೊನ್ನೆ ಸ್ವಾಮಿಜಿ ಬಂದಾಗ ಆಡಿದ ಈ ನುಡಿ ಗಳು ಕಿವಿಯಲ್ಲಿ ಕೇಳಹತ್ತಿದವು. ಕೆಲಹೊತ್ತು ಅಮೃತ ಯಾವುದೂ ಬಗೆ ಹರಿಯದೆ ಕಂಗಾಣದಾದನು. ಅಷ್ಟರಲ್ಲಿ ಆಳು ಬಂದು ಯಾವುದೋ ಕೇಸು ಜ್ವರ ಹೆಚ್ಚಾಗಿ ಗಾಬರಿಮಾಡಿದೆ ಎಂದು ಹೇಳಿದ. ಕೂಡಲೆ ತನ್ನ ಯೋಚನೆ ಯನ್ನು ಅಲ್ಲಿಯೆ ನಿಲ್ಲಿಸಿ ಅಮೃತ ಕೇಸಿದ್ದ ಕಡೆಗೆ ಧಾವಿಸಿದನು. ಸಮಯಕ್ಕೆ ಸರಿಯಾದ ಆರೈಕೆ ಮಾಡಿ ಬಂದನು. ಅದಾವುದೊ ತಣಿವು ತುಂಬಿ ಬಂದಿತು. ಸರಿ, ನನ್ನ ನಿಶ್ಚಿಯವಾಯಿತು, ಈಗ ಹೋಗಲಾರೆ ಎಂದುಕೊಂಡು ಮನೆಗೆ ಪತ್ರ ಬರೆಯಲು ಕುಳಿತನು. ತಾನು ನಿಶ್ಚಯಮಾಡಿದಂತೆ ಬರೆಯದೆ 'ಕೆಲಸ ಮುಗಿ ದೊಡನೆ ಸ್ವಲ್ಪವೂ ತಡಮಾಡದೆ ಬರುತ್ತೇನೆ' ಎಂದು ಸಾಮಾನ್ಯ ಆಶ್ವಾಸನರೂಪ

ವಾದ ಪತ್ರವನ್ನು ಬರೆಯಹತ್ತಿದನು. ಮನಸ್ಸಿನ ತೂಗಾಟ ಮಾಯ ವಾಯಿತು.

ಅಮೃತನು ಪತ್ರಬರೆದು ಮುಗಿಸಿ ಪಾಕೀಟಿನಲ್ಲಿ ಹಾಕಿ ಉಗುಳಿನಿಂದ ಅಂಟಿಸಹತ್ತಿದ್ದನು. ಅಷ್ಟರಲ್ಲಿ ಹಿಂದೆ ಬಾಗಿಲನ್ನು ಯಾರೋ ನೂಕಿದಂತಾಯಿತು. 'ಬಾ ಸುಧೀರ' ಎಂದನು, ಹಿಂದಿರುಗಿ ನೋಡದೆ.

ಬಂದ ವ್ಯಕ್ತಿ ಸುಧೀರನಲ್ಲ, ವೀಣೆ. ಅವಳು ನಗುವನ್ನು ತಡೆದು 'ಅಮೃತ್' ಎಂದಳು.

ಅಮೃತ ತಿರುಗಿ ನೋಡುತ್ತಾನೆ, ವೀಣೆ ಬಂದಿದ್ದಾಳೆ. ಅವನಿಗೆ ಆಶ್ಚರ್ಯ ವಾಯಿತು. ಅವನ ಬಿಡಾರದಲ್ಲಿ ಅವಳು ಕಾಲಿಟ್ಟಿದ್ದು ಇದೇ ಮೊದಲಬಾರಿ. ಬಹಳ ಸಂಕೋಚದ ಪ್ರಾಣಿಯೆಂದು ಅವನ ತಿಳಿವಳಿಕೆಯಾಗಿತ್ತು. ಅಂತೇ ಅವನ ಆಶ್ಚರ್ಯ ಇನ್ನೂ ಹೆಚ್ಚಾಯಿತು. 'ಎಲ, ವೀಣಾ. ನೀ ಯಾಕೆ ಬಂದಿ ? ನಾನೇ ಅಲ್ಲಿಗೆ ಬರುತಿದ್ದಿಲ್ಲವೇ ? ಏನು ಬೇಕಾಗಿತ್ತು ?' ಈ ಪ್ರಶ್ನಾವಳಿಗೆ ವೀಣೆ ಉತ್ತರಕೊಡದೆ ಆ ಕೋಣೆಯನ್ನು ಸುತ್ತೆಲ್ಲ ನೋಡಿದಳು. 'ಏನಾಗಿದೆ ನಿನಗೆ ? ಮಾತಾಡವೊಲ್ಲಿ ಯಾಕೆ ?'

'ಅಮೃತ್, ಅದಕ್ಕೇ ಬಂದದ್ದು. ಸ್ವಲ್ಪ ತಡೆಯಿರಿ. ನನ್ನ ಕ್ಷಮಿಸಿರಿ' ಎನ್ನುತ್ತ ಗುಡಿಸಲ ಬಾಗಿಲನ್ನು ನೂಕಿ ಮುಂದೆ ಮಾಡಿದಳು.

ಅಮೃತನದನ್ನು ನೋಡಿ 'ವೀಣಾ ಇದೇನು ? ಹೀಗೆ ಮಾಡಬೇಡ. ನಡೆ, ನಾನೇ ನೀನಿದ್ದಲ್ಲಿ ಬರತೇನೆ' ಎಂದು ನಾಲ್ಕು ಹೆಜ್ಜೆ ಇಟ್ಟನು. ಬಾಗಿಲ ವರೆಗೆ ಹೋಗಿ ಹಿನ್ನೋಡಿ 'ಹೂಂ ಹೊರಡು' ಎಂದು ಬಾಗಿಲ ತೆರೆಯಬೇಕೆನ್ನುವಷ್ಟರಲ್ಲಿ ವೀಣಾನ ಕಣ್ಣಲ್ಲಿ ದಳದಳ ನೀರು. ಕೂಡಲೆ ಅಮೃತನು ತಿರುಗಿ ಬಂದು 'ಯಾಕೆ, ಏನಾಯಿತು ?' ಎನ್ನಲು ತಡೆಯದಾಗಿ ಅವಳು ಅಮೃತನ ಹೊರಸಿನ ಮೇಲೆ ದೊಪ್ಪೆಂದು ಬಿದ್ದುಕೊಂಡಳು, ಹೊಂಯ್ಯೆಂದು ಅಳತೊಡಗಿದಳು. ಅಮೃತ ಗಾಬರಿಯಾದನು, ಅವಳ ಸಲುವಾಗಿ, ತನ್ನ ಸಲುವಾಗಿ. ಬೇನೆಯಿಂದ ಪಾರಾಗಿ ಬದುಕಿದ ಅವಳಿಗೆ ಈ ನಿಷ್ಕಾರಣವಾದ ಎದೆಗುಂದಿ ಎಲ್ಲಿ ಅಪಾಯಮಾಡುವುದೊ ಎಂಬ ಗಾಬರಿ. ತನ್ನ ಕೋಣೆಯಲ್ಲಿ ಒಬ್ಬಳೇ ಬಂದು ಹೀಗೆ ಮಾಡುತ್ತಿರುವಳಲ್ಲ ಎಂಬ ಗಾಬರಿ. ತನ್ನಮಿತ್ರರ ಕುಚೇಷ್ಟೆ ಈಗಾಗಲೆ ಸುರುವಾಗಿತ್ತು. ಅದಕ್ಕೆ ಇದು ಪುಟಕೊಡುವಂತಾಯಿತು. ಕುಹಕಿಗಳು ತನ್ನ ಹೆಸರನ್ನೂ ಕೆಡಿಸಬಹುದು. ಒಂದು ಕ್ಷಣದಲ್ಲಿ ಇಷ್ಟೆಲ್ಲ ಆಲೋಚಿಸಿ ಮೊದಲು

ಹೋಗಿ ಬಾಗಿಲ ತೆರೆದನು. ಅಲ್ಲಿಂದ ಹೊರಸಿನ ಹತ್ತಿರ ಬಂದು 'ವೀಣಾ, ಏಳು. ನಿನ್ನ ಜಾಗಕ್ಕೆ ನಡೆ. ಅಲ್ಲಿಯೇ ಮಾತಾಡೋಣ' ಎಂದು ಮೆಲ್ಲಗೆ ಸಲಿಗೆಯಿಂದ ಹೇಳಿದನು. ನಿಂತಂತೆ ತೋರಿದ ಮಳೆ ಮತ್ತೆ ಕಟ್ಟಿ ಕರೆದಂತೆ ಅವಳ ಅಳುವಿಕೆ ಜೋರಾಯಿತು. ತಿರುತಿರುಗಿ ಅವನು ಎಬ್ಬಿಸಹತ್ತಿದನು. 'ಅಲ್ಲಿಗೆ ನಾ ಬರಲಾರೆ. ಎಲ್ಲಿಯಾದರೂ ಹೋಗಿ ನಾ ಪ್ರಾಣ ಕೊಡತೀನಿ' ಎಂದು ಅವಳು ತಡೆತಡೆದು ಅಳುತ್ತಲೇ ಉತ್ತರ ಕೊಟ್ಟಳು.

'ಅಂಥದೇನಾಯಿತು ? ಯಾರಾದರೂ ಅಪಮಾನ ಮಾಡಿದರೇ ?'

'ಹೇಳುವೆ. ಮೊದಲು ಬಾಗಿಲ ಮುಂದೆಮಾಡಿರಿ.'

ಅಮೃತ ಮನಸ್ಸಿಲ್ಲದೆ ಆದದ್ದಾಗಲಿ ಎಂದು ಬಾಗಿಲನ್ನುನೂಕಿ ಬಂದನು. ಹೊರಸಿನಲ್ಲಿ ಎದ್ದು ಕೂತು ಕೂದಲನ್ನು ಸರಿಪಡಿಸಿಕೊಂಡು 'ಅಮೃತ್, ಏನು ಹೇಳಲಿ ? 'ನಿನಗೆ ಪೂರಾ ಗುಣವಾಯಿತು. ಇನ್ನು ನಿನ್ನ ಊರಿಗೆ ಮನೆಗೆ ಹೋಗು ' ಎಂದು ಗದ್ದರಿಸಿ ಹೇಳಿದರು.'

'ಯಾರು ? '

'ಡಾಕ್ಟರ ಕೇದಾರರು.'

'ಅದರಲ್ಲಿ ತಪ್ಪೇನು ? ಅದಕ್ಕೆ ಇಷ್ಟು ರಂಬಾಟವೇಕೆ ? ಊರಿಗೆ ಮನೆಗೆ ಹೋಗೆಂದರೆ ಯಾರಾದರೂ ಹಿಗ್ಗುವದಿಲ್ಲವೇ ? '

ವೀಣೆಯ ಮುಖ ನಿಸ್ತೇಜವಾಯಿತು. ಹುದುಗಿದ್ದ ಶೋಕವೆಲ್ಲ ಒಟ್ಟರಿಸಿ ಕೊಂಡು ಬಂದಿತು. 'ಅಮೃತ್, ಅದನ್ನೇ ನಿನಗೆ ಹೇಳಬೇಕೆಂದು ಇಷ್ಟುದಿನ ಹಾತೊರೆಯುತ್ತಿದ್ದೆ.'

'ಹೇಳು ಏನದು ಹೇಳು.'

'ಅಮೃತ್, ಅಮೃತ್. ನನಗೆ...ಊರಿಲ್ಲ...ಮನೆಯಿಲ್ಲ...' ಎನ್ನುತ್ತ ವೀಣೆ ತನ್ನಕೈಗಳಿಂದ ಕಣ್ಣುಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದಳು.'ಹಾ' ಎಂದು ಅಮೃತ ಹತ್ತಿರ ಹೋಗಿ ನಿಂತುಕೊಂಡನು. 'ನನಗೆ ಗೊತ್ತೇ ಇರಲಿಲ್ಲ. ಕ್ಷಮಿಸು ವೀಣಾ. ಊರಿಗೆ ಹೋಗೆಂದು ನಿನಗೆ ನಾನೇ ಮೊದಲು ತಿಳಿಯದೆ ಹೇಳಿದವನು. ಕೇದಾರನಿಗಾದರೂ ಏನು ಗೊತ್ತು ? .ನಡೆ ಅವನಲ್ಲಿಗೆ ಹೋಗಿ ನಾನೆಲ್ಲಾ ಹೇಳುವೆ.'

ವೀಣೆ ಅದಕ್ಕೆ ಉತ್ತರ ಕೊಡಲಿಲ್ಲ. 'ಏಳು ವೀಣಾ ಮನಸ್ಸಿಗೆ ಹಚ್ಚಿಕೊಳ್ಳಬೇಡ. ಗೊತ್ತಿಲ್ಲದೆ ಹೀಗೆ ಆಗುವವು. ಕೇದಾರನಿಗೆ ಹೇಳುವೆ.'

'ಕೇದಾರ ಸಾಧೀರ ಇಬ್ಬರೂ ಇಲ್ಲಲ್ಲ.

'ಅಂದರೇನು ?'

'ಹತ್ತಿರದ ಹಳ್ಳಿಗೆ ಅರ್ಜಂಟ ಕೇಸ ನೋಡಲು ಹೋದರು.'

'ಹೀಗೇನು ?' ಅಮೃತನು ಉದ್ಗಾರ ಉಸಿರೆಳೆದು ತನ್ನ ಕುರ್ಚಿಯಲ್ಲಿ ಕುಳಿತನು. ಗಾಬರಿಯ ಒಂದುಭಾಗ ತುಸು ಕಡಿಮೆಯಾಯಿತು.ಆದರೆ ವೀಣೆಯ ಜೀವನದ ಬಗ್ಗೆ ಅವನ ತವಕ ಹೆಚ್ಚಾಯಿತು. ಹೆಚ್ಚಿನ ಸಂಗತಿಗಳನ್ನು ಕೇಳ ಬೇಕೋ ಕೇಳಬಾರದೊ ಎರಡೂ ತಿಳಿಯದು. ಅವಳ ಆಗಿನ ಉದ್ವೇಗದಲ್ಲಿ ಕೇಳಿದರೆ ಅಕಾಲವರ್ಷವನ್ನು ಬರಮಾಡಿದಂತೆ. ಕೇಳದಿದ್ದರೆ ತನ್ನ ಮನಸ್ಸಿಗೆ ಸಮಾಧಾನವಿಲ್ಲ. ಬಹಳ ದಿವಸದಿಂದ ಅವಳ ಬಗ್ಗೆ ಅವನಲ್ಲಿ ಕನಿಕರ, ಆಸ್ಥೆ ಹುಟ್ಟಿವೆ. ಅವಳ ವಿಷಯ ಎಲ್ಲ ತಿಳಿದರೆ ಏನಾದರೂ ಅವಳ ವ್ಯವಸ್ಥೆ ಮಾಡಲು ಬಂದೀತು. ಕೆಲಹೊತ್ತು ಅವಳನ್ನು ನೋಡುತ್ತ ಸುಮ್ಮನೆ ಕುಳಿತನು. ಅವಳು ಹೊರಸಿನಿಂದೆದ್ದು ಅವನಿದಿರು ಬಂದು ಎರಡೂ ಕೈಬೆರಳಿನಿಂದ ಕೂದಲನ್ನು ನೇವರಿಸಿಕೊಂಡಳು. ಆದರೂ ಕೆಲವು ತಪ್ಪಿಸಿಕೊಂಡು ಹಣೆಯ ಮೇಲೆ ಲಾಸ್ಯವಾಡಹತ್ತಿದವು. ಸೆರಗನ್ನೆತ್ತಿಕೊಂಡು ಎದೆ ಮುಚ್ಚಿದಳು. ನೇಟಾಗಿ ಇದಿರು ನಿಂತ ಆ ಹದಿನೆಂಟು ವರ್ಷದ ಹದಿಹರೆಯದ ತರುಣಿಯನ್ನು ಅಮೃತ ನೋಡಿದನು. ದುಂಡಾದ ನಸುಗೆಂಪು ಮೋರೆಯಲ್ಲಿ ಕಣ್ಣು ಬಹಳ ಚಂಚಲವಾಗಿವೆ, ದೈನ್ಯದ ಮೂರ್ತಿಯಾಗಿವೆ. ಮೂಗು ಮೊಂಡಜಾತಿಯದಾದರೂ ಮೊಗಕ್ಕೆ ಕುಂದು ತರುವಂಥದ್ದಲ್ಲ. ಮುಂಬಂದ ಕೆಂದುಟಿ ಆಶಾತುರವಾದಂತೆ ತೋರುತ್ತದೆ. ನೋಡಿದೊಡನೆ ಅಮೃತನಿಗೆ ಪ್ರಾಯದ ಬಲೆಯೆಂದರೇನೆಂಬ ಅನುಭವವು ಮುತ್ತಿಬಂದಿತು. ಅದರಿಂದ ಬಿಡಿಸಿಕೊಳ್ಳುವಂತೆ ಅವನು ಮೇಲೆ ನೋಡಿದನು. ಎರಗಿ ಕ್ಷಮೆ ಬೇಡುವಂತೆ ವೀಣೆಯ ಪಾದದತ್ತ ನೋಡಿದನು. ಒಮ್ಮೆಲೆ 'ನೀವು ಅಂತಃಕರಣಿಗಳೆಂದು ನಾನು ತಿಳಿದಿದ್ದೆ, ಅಮೃತ್. ಈಗ ಕಲ್ಲೆದೆಯವರೆಂದು ಗೊತ್ತಾಯಿತು' ಎಂದು ವೀಣೆ ಗಟ್ಟಿಯಾಗಿ ಉದ್ಗಾರ ತೆಗೆದಳು. ಹೀಗೇಕೆ ಆಡುವಳೆಂದು ಅರಿಯದೆ ಅಮೃತ ಮೋರೆಗೆ ಗಂಟುಹಾಕಿದನು. ಆದರೂ ನಗೆಯ ಮೇಲೆ ಹೊರಳಿಸಿ'ಹೀಗೋ ? ಲಗೂನೆ ಗೊತ್ತಾಯಿತು,ವೀಣಾದೇವಿ' ಎಂದನು.

'ಹೂಂ ನಿಮಗೆಲ್ಲಾ ನಗೆಚಾಟಿಯಾಗಿದೆ. ನನ್ನ ದುಕ್ಕದ ಕರೆಗೆ ನೀವು ಉಕ್ಕಿನ ಎದೆ ಚಾಚುತ್ತೀರಿ.'

'ಹಾಗಲ್ಲ, ವೀಣಾ. ಹೇಗೆ ಕೇಳಬೇಕು ತಿಳಿಯದೆ ಸುಮ್ಮನಿದ್ದೇನೆ. ಕೇಳಬೇಕೆಂದು ಬಹಳ ಅಪೇಕ್ಷೆ ಇರುವದು.'

'ಇರುವದೇ? ಏನು ಕೇಳುವದು ಕೇಳಿರಿ' ಎನ್ನುತ್ತ ನೆಲದಮೇಲೆ ದೊಪ್ಪನೆ ಕುಳಿತಳು.

'ಕೇಳತೇನೆ. ಆದರೆ ನೀ ಮೊದಲು ಮೇಲೆ ಕೂಡು ಆ ಹೊರಸಿನ ಮೇಲೆ.'

ಅಮೃತನ ಆಗ್ರಹಕ್ಕೆ ಒಳಗಾಗಿ ವೀಣೆ ಎದ್ದು ಹೊರಸಿನ ಮೇಲೆ ಕುಳಿತಳು. 'ಅಲ್ಲ, ನೀನು ನನಗೆ ಊರಿಲ್ಲ, ಮನೆಯಿಲ್ಲ' ಎಂದು ಹೇಳಿದಿ. ಅಂದರೆ ನಿನ್ನ ತಾಯಿ ತಂದೆ ಸಣ್ಣಾಕೆಯಿರುವಾಗಲೇ ಹೋದರೆ ?'

'ಅಲ್ಲ, ಅಮೃತ, ದೊಡ್ಡಾಕೆಯಾದ ಮೇಲೆ ಮೊನ್ನೆ ಮೊನ್ನೆ ಹೋದರು. ಅದೇ ನನ್ನ ದುರಂತ.'

'ಮೊನ್ನೆ ಮೊನ್ನೆ ! ಅಂದರೆ ?'

'ನಿಮಗೆ ಹೇಳದೆ ಇನ್ಯಾರಿಗೆ ಹೇಳಲಿ, ಅಮೃತ್. ನನ್ನ ಕತೆಯೆಲ್ಲ ಕಂಬನಿಯ ಹೊಳೆ ಆಗಿದೆ. ಮಿದನಾಪುರದಲ್ಲಿ ನನ್ನ ತಂದೆ ಪ್ರಾಥಮಿಕ ಶಾಲೆಯಲ್ಲಿ ಮಾಸ್ತರಾಗಿದ್ದರು. ಆಪ್ತರ ಮನೆಯಲ್ಲಿಯ ಒಂದು ಮದುವೆಯ ಸಲುವಾಗಿ ಅಕ್ಟೋಬರ ತಿಂಗಳಲ್ಲಿ ಕೊಂತಾಯಿಗೆ ಮನೆಮಂದಿಯೆಲ್ಲ ಹೋಗಿದ್ದೆವು. ಆಗ ಆಕಸ್ಮಾತ್ತಾಗಿ ಬಂದ ನೆರೆಹಾವಳಿಯಲ್ಲಿ ಮನೆ ಕುಸಿದುಬಿದ್ದು ತಂದೆತಾಯಿ ತಮ್ಮ ತಂಗೆಂದಿರು ಎಲ್ಲರೂ ಒಂದು ಕ್ಷಣದಲ್ಲಿ ಮಹಾಕಾಳಿಗೆ ಆಹುತಿಯಾದರು. ಅಭಾಗಿಯಾದ ನಾನೊಬ್ಬಳು ಉಳಿದೆ.'

ಅಮೃತನು ಅವಾಕ್ಕಾದನು. 'ಎಂಥ ಅನಾಹುತ !' ಎಂದು ಕೂಗಿದನು. 'ನಂಬಲಾರೆ ವೀಣಾ' ಎಂದು ಮರುಗಿದನು.

'ಯಾರೂ ನಂಬಲಾರದ್ದನ್ನು ಮಾಡುವದೇ ದುರ್ದೈವ ಅಂಬೋದು, ಅಮೃತ್. ನಾನೊಬ್ಬಳು ಅವರ ಕೂಡ ಹೋಗಬಾರದೇ ?'

'ಅದೇಕೆ ಹೀಗೆನ್ನುವಿ ? ಇದ್ದವರು ಇರಬೇಕು.'

'ಇರಬಾರದೆಂದು ನನಗನಿಸುತ್ತದೆ. ನೆರೆ ಬಂದಾಗ ನಾನು ಮನೆಯ ಹೊರಗೆ ಅಂಗಳದಲ್ಲಿದ್ದೆ. ಗಾಳಿ ಬಿರುಸಾಗಲು ಏನೆಂದು ನೋಡಲು ಬೀದಿಗೆ ಹೋದೆ. ಅದರ ರಭಸಕ್ಕೆ ಅಲ್ಲಿಯೇ ಉರುಳಿದೆ. ಎದ್ದು ಹೋಗುವದಾಗಲಿಲ್ಲ. ಆಮೇಲೆ ನೀರು ಎಲ್ಲ ಕಡೆ ನುಗ್ಗಿತು. ಮಳೆ ಜೋರಾಯಿತು. ಅದರಲ್ಲಿ ನನ್ನ ಸ್ಮೃತಿ ತಪ್ಪಿತು. ನಾ ಎಲ್ಲಿ ಹೋದೆ, ಹೇಗೆ ಬದುಕಿದೆ ಎಂಬುದು ನನಗೆ ಗೊತ್ತಿಲ್ಲ. ಕೊಂತಾಯಿಯಲ್ಲಿ ಅನೇಕ ನಿರಾಶ್ರಿತರ ಜೊತೆಗೆ ಮಲಗಿದಾಗ ನನಗೆ ಎಚ್ಚರು ಯಾವಾಗೋ ಬಂದಿತು. ಮನೆಯವರೆಲ್ಲ ಅಲ್ಲಿರುವರೆಂಬ ಭ್ರಮೆಯಿಂದ

ಸುಳ್ಳೆ, ಹಿಗ್ಗಿದೆ. ಅವರ‍್ಯಾರೂ ಉಳಿದಿಲ್ಲವೆಂದು ಮುಂದೆತಿಳಿಯಲು, ಗೋಳಾಡಿದೆ. ಸಾವಿಗೆ ಔತಣ ಕೊಟ್ಟೆ. ಸಾಯಲಿಲ್ಲ. ಮಲೇರಿಯಾ ಜ್ವರ ಹತ್ತಿ ಜೀರ್ಣವಾದ ಮೇಲೆ ಇಲ್ಲಿಯ ಕೇಂದ್ರಕ್ಕೆ ಬಂದು ಬಿದ್ದೆ. ನಿಮ್ಮೆಲ್ಲರ ಆರೈಕೆಯಿಂದ ಗುಣವಾಯಿತೆಂದು ಆಗ ಹಿಗ್ಗಿದೆ. ಈಗ ಆ ಹಿಗ್ಗೂ ಕುಗ್ಗಿದೆ.'

ಅವಳ ಆ ಎದೆ ಬಿರಿಯುವ ಕತೆ ಕೇಳಿ ಅಮೃತನಿಗೆ ಅತ್ಯಂತ ಕಸಿವಿಸಿಯಾಯಿತು. ಕಣ್ಣಿಂದ ಕಂಬನಿ ಉರುಳಿದವು. 'ವೀಣಾ, ನೀನಿಷ್ಟು ಕಷ್ಟಪಟ್ಟವಳೆಂದು ನನಗೆ ಅನಿಸಿರಲಿಲ್ಲ.' ಅಮೃತನ ಕಸಿಕಸ ಈಗ ಇಮ್ಮಡಿಯಾಯಿತು.

'ಇನ್ನೂ ಬಹಳಿದೆ ಅಮೃತ್. ಹೇಳಿದರೆ ಮುಗಿಯದು.'

'ಅದೇನು ಹೇಳು ವೀಣಾ. ಈಗ ನನಗೆ ಆ ನಿನ್ನ ನಡೆನುಡಿಯ ಅರ್ಥವಾಯಿತು.'

'ಏನರ್ಥವೋ ಅನರ್ಥವೋ ! ನನ್ನ ಬಾಳೆಲ್ಲ ಹಾಳು ನೆಲವಾಯಿತು, ಅಮೃತ್. ನನ್ನವರೆಲ್ಲ ಕೈಬಿಟ್ಟು ಹೋದರು. ನನಗೆ ಅನ್ನ ನೀರು ಕೊಡುವವರಿಲ್ಲ. ಬಾ ಎಂದು ಪ್ರೀತಿಯಿಂದ ಕರೆಯುವವರಿಲ್ಲ. ಜಗತ್ತಿನ ಅರಣ್ಯದಲ್ಲಿ ನಾ ಒಬ್ಬಳೇ ಒಬ್ಬಳು...'. ವೀಣೆ ಕುತ್ತಿಗೆ ದಟ್ಟಿಸಿ ಬಂದು ಕಣ್ಣೆಲ್ಲ ಮಂಜಾಗಿ ಕೂತುಬಿಟ್ಟಳು. ಅಮೃತನು ಎದ್ದುಹೋಗಿ ಹತ್ತಿರ ನಿಂತು ಹೊರಸಿನ ಮೇಲೆ ತುಸು ಬಿಟ್ಟುಕುಳಿತು 'ವೀಣಾ,ಹಾಗೆಲ್ಲ ಮಾಡಬಾರದು. ಜಗತ್ತಿನ ಅರಣ್ಯದಲ್ಲಿ ಬರೀ ಉಸುಬಿಲ್ಲ. ಅಚ್ಚ ಹಸರೂ ಇದೆ. ನನಗೆ ನಿನಗಿಂತ ಸ್ವಲ್ಪ ಸಣ್ಣವಳಾದ ತಂಗಿ ಇದ್ದಾಳೆ. ಅವಳಂತೆ ನಿನ್ನನ್ನು ನಾ ನೋಡತೇನೆ. ಆಯ್ತೀ ? ಈಗ ಹೇಳುವದೇ ಬೇಡ, ಬಿಟ್ಟುಬಿಡು' ಎಂದು ಸಲಿಗೆಯಿಂದ ಆಡಿದನು. ಒಂದೆರಡು ನಿಮಿಷ ಯಾರೂ ಮಾತಾಡಲಿಲ್ಲ. ಅಮೃತನೇ ಮತ್ತೆ 'ಹೂ. ನಾ ಹೇಳಿದ್ದು ತಿಳಿಯಿತಲ್ಲ...ನಿನ್ನ ಜಾಗಕ್ಕೆ ಹೋಗಿನ್ನು. ಇನ್ನೊಮ್ಮೆ ಹೇಳೀಯಂತೆ' ಎಂದು ಎದ್ದು ನಿಂತನು. ವೀಣೆಯೂ ಎದ್ದಳು. ಬಾಗಿಲವರೆಗೆ ಭಾರವಾದ ಕಾಲೆಳೆಯುತ್ತ ಹೋಗಿ ಗಕ್ಕನೆ ನಿಂತಳು. ತಿರುಗಿ ಅಮೃತನನ್ನು ನೋಡಿದಳು. ಅವನು ತನ್ನ ಟೇಬಲ್ಲಿಗೆ ಬೆನ್ನಾನಿಸಿ ಹಿಂದೆ ಬಾಗಿ ನಿಂತಿದ್ದನು. ವೀಣೆ ತಿರುಗಿ ಅವನಿದ್ದಲ್ಲಿ ಬಂದು ಅವನ ಕುರ್ಚಿಯನ್ನೆಳೆದು ಕೂಡುತ್ತ 'ತಂಗಿ ನಿಮ್ಮ ಕುರ್ಚಿಯ ಮೇಲೆ ಕೂಡಬಹುದಲ್ಲವೇ ?' ಎಂದು ಬದಲಿಸಿದ ದನಿಯಿಂದ ಕೇಳಿದಳು. ಅಮೃತನು 'ಅವಶ್ಯ' ಎಂದು ಗೋಣುಹಾಕಿದನು.

'ನಿಮ್ಮ ಸಲಿಗೆಯ ಸ್ನೇಹದಿಂದ ನನ್ನ ಹೃದಯ ಹಗುರಾಗಿದೆ. ಜೇಕೆ

ಸಮಯ ದೊರೆಯಲಿಕ್ಕಿಲ್ಲ. ಈಗಳೆ ನನ್ನ ಕಥೆಯನ್ನು ಸ್ವಲ್ಪದರಲ್ಲಿ ಹೇಳಲೇ ?'

'ನಡುನಡುವೆ ನೆರೆಹಾವಳಿ ಆಗದಂತಿದ್ದರೆ ಮಾತ್ರ !' ಅಮೃತ ನಸುನಕ್ಕು ಹೇಳಿದನು.

'ನಾ ಹೇಳಲಾರೆ. ನೆರೆಹಾವಳಿಯಲ್ಲಿ ಮೈಹೊಕ್ಕ ನೀರೆಲ್ಲ ಕಣ್ಣಿಂದ ಹೊರ ಬೀಳಬೇಕಲ್ಲ!' ಇಬ್ಬರೂ ಕೂಡಿ ನಕ್ಕರು.

'ಅಮೃತ್, ನಾ ಹಾಗೆ ಅಳ್ಳೆದೆಯವಳೇನಲ್ಲ. ಬಡತನದ ಆವಿಗೆಯಲ್ಲಿ ಸುಟ್ಟು ಘಟ್ಟಿಯಾದವಳು. ನಮ್ಮ ತಂದೆಗೆ ಶಾಲೆಯ ಮಾಸ್ತರಿಕೆಯಿಂದ ಬರುವ ಇಪ್ಪತ್ತು ರೂಪಾಯಿಯಲ್ಲಿ ಈಗ ಇಪ್ಪತ್ತು ವರ್ಷ ಅವರ ಪ್ರಪಂಚ ನಡೆಯಿತು. ಯಾವಾಗಾದರೂ ಬಡತಿ ಸಿಕ್ಕರೆ ಅದರ ಕೂಡ ಆಗಾಗ ಕಡಿತವೂ ಬಂದು ಉತ್ಪನ್ನ ವಷ್ಟೇ ಆಗುತ್ತಿತ್ತು.'

'ಅದೇಕೆ ?'

'ಯಾಕೆಂದರೆ ? ನಮ್ಮ ತಂದೆ ಬಹಳ ಸ್ವತಂತ್ರ ವೃತ್ತಿಯವರು. ಹುಡುಗ ರಿಂದ ರಾಷ್ಟ್ರೀಯ ಉತ್ಸವ ಮಾಡಿಸುವರೆಂದೂ ಮೆರೆವಣಿಗೆ ತಗಸಿ ಸಭೆ ಮಾಡಿಸು ರೆಂದೂ ಯಾವಾಗಲೂ ಅವರ ಮೇಲೆ ಉಳಿದ ರಾಜನಿಷ್ಠ ಮಾಸ್ತರರ ಕಣ್ಣು. ಅದ ರಿಂದ ಕೆಟ್ಟ ಕೆಟ್ಟ ಊರುಗಳಿಗೆಲ್ಲ ವರ್ಗ ಮಾಡಿಸಿದರು. ಅಲ್ಲಿಯ ನರಕಯಾತನೆ, ಹೇಳಲಾಸಲ್ಲ. ನಾ ಹುಟ್ಟಿದಾಗಲೆ ಅವರಿಗೆ ನೌಕರಿಹತ್ತಿದ್ದು. ಚೊಚ್ಚಿಲ ಮಗಳಿಗೆ ವೀಣಾ ಎಂಬ ಮುದ್ದು ಹೆಸರನ್ನಿಟ್ಟು ನನ್ನ ಕಾಲಗುಣ ಉತ್ತಮವೆಂದು ತಾಯಿ ತಂದೆ ಇಬ್ಬರೂ ನನ್ನಮೇಲೆ ಬಹಳ ಅಕ್ಕರತೆ ಮಾಡಿದರು. ತಾವು ಒಪ್ಪತ್ತುಂಡು ನನಗೆ ಹಾಲುಣಿಸಿದರು. ತರತರದ ಸವಿತಿನಸುಗಳನ್ನು ನನಗೆ ತಂದುಕೊಟ್ಟರು. ಬೆಂಗಾಲಿ ಕಲಿಸಿ ದೊಡ್ಡವಳನ್ನು ಮಾಡಿದರು. ನನಗೆ ಇಂಗ್ಲಿಷ್ ಕಲಿಸಬೇ ಕೆಂದೂ ನನ್ನಿಂದ ಮನೆತನವನ್ನು ಮುಂದೆ ತರಬೇಕೆಂದೂ ಅವರ ಹವ್ಯಾಸ ವೆಷ್ಟು ! ಅದಕ್ಕಾಗಿ ಶಿಕ್ಷಣಖಾತೆಯ ಸಾಹೇಬರ ಕಾಲುಬಿದ್ದು ಅಂಗಲಾಚಿ ಮಿದ ನಾಪುರಕ್ಕೆ ವರ್ಗ ಮಾಡಿಸಿಕೊಂಡರು.'

'ಹಾಗಾದರೆ, ವೀಣಾ, ನೀ ಇಂಗ್ಲಿಷ್ ಕಲಿತಿರುವೆಯ ?'

'ಮತ್ತೆ ? ಮ್ಯಾಟ್ರಿಕ್ ಕ್ಲಾಸಿನಲ್ಲಿದ್ದೆ. ಈಗ ಮಾತ್ರ ಮರೆತಂತಾಗಿದೆ.'

'ಹೋಗಲಿ ಬಿಡು. ಅದನ್ನು ತಗೊಂಡೇನು ಮಾಡುವಿ ? ಹಿಂದೀ ನೆಟ್ಟಗೆ ಬರುವದಲ್ಲ.'

'ಕೆಲವಮಟ್ಟಿಗೆ ಅಮೃತ್, ಇಂಗ್ಲಿಷ್ ಕಲಿಯುವದಕ್ಕೆಂದು ಮಿದನಾಪುರಕ್ಕೆ

ಬಂದು ನಾವು ಕಷ್ಟನಷ್ಟವನ್ನು ಅಪ್ಪಿಕೊಂಡಂತಾಯಿತು, ನನ್ನ ಮೇಲೆ ನಾಲ್ಕು ಜನ ತಮ್ಮ ತಂಗೆಂದಿರು ಹುಟ್ಟಿದ್ದರು. ಸ್ವಲ್ಪ ಪಗಾರದಲ್ಲಿ ಎಲ್ಲರ ಹೊಟ್ಟೆ ಹೇಗೆ ಸಾಗಬೇಕು? ಅದರಲ್ಲಿ ಈ ಯುದ್ಧ ಬೇರೆ ಬಂದುಬಿಟ್ಟಿತು. ಆಯಿತು, ಅರೆಹೊಟ್ಟೆ ನಮ್ಮೆಲ್ಲರ ದಿನಚರಿಯಾಯಿತು. ಹರಕುಬಟ್ಟೆ ನಮ್ಮ ಹಣೆಬರಹವಾಯಿತು. ಅದನ್ನೇ ಹೊಲಿಹೊಲಿದು ಹಾಕುವುದು ನಮ್ಮ ನಿತ್ಯ ರೂಢಿಯಾಯಿತು. ಯಾರ್ಯಾರಿಗೊ ಪಾಠಹೇಳಿ ಅದರಿಂದ ಬಂದ ರಕಮನ್ನು ನನ್ನ ಪುಸ್ತಕ-ಫೀಗೆ ತಂದೆ ಕೊಡುತ್ತಿದ್ದರು. ಇದು ನನಗೆ ಸರಿತೋರದೆ ಒಂದೆರಡು ವರುಷ ಶಾಲೆ ಯನ್ನು ಬಿಟ್ಟು ಕುಳಿತೆ. ಆದರೆ ನಾನು ಕಲಿತು ಪಾಸಾಗಿ ಎಲ್ಲಿಯಾದರೂ ಚಾಕರಿ ಮಾಡಬಹುದು, ಮನೆಯ ತಾಪತ್ರಯವನ್ನು ಹಿಂಗಿಸಬಹುದು ಎಂಬ ವಿಚಾರ ದಿಂದ ಮತ್ತೆ ಶಾಲೆಗೆ ಹೋಗಹತ್ತಿದೆ. ಈ ರೀತಿ ಬೆಂಕಿಯಲ್ಲಿ ಹಾದು ಹಾದು ದಿನಗಳೆಯುವ ನಮಗೆ ಬೆಂಕಿಯೇ ತಂಪಿನ ತವರಾಯಿತು. ಇದ್ದದರಲ್ಲಿ ಸಮಾಧಾನ ಹಚ್ಚಿಕೊಂಡಿರಲು ಒಮ್ಮೆ ನಮ್ಮ ಮೇಲೆ ಆಕಾಶವೇ ಕಳಚಿಬಿದ್ದಿತು.

'ಅದೇನಾಯಿತು, ವೀಣಾ.' ಅಮೃತನು ಮುಂದೆ ಬಾಗಿ ಸಚಿಂತನಾಗಿ ಕೇಳಿದನು.

ವೀಣೆ ಒಂದು ನಿಮಿಷ ಕಣ್ಣುಮುಚ್ಚಿ ಕುಳಿತಳು. ಮೈಯೆಲ್ಲ ನಡುಗಿ ಕೂದಲು ಸೆಟೆದುನಿಂತವು. 'ಅದೊಂದು ಬರಸಿಡಿಲು, ಬರಬಾರದ ಸಿಡಿಲು. ಯುದ್ಧಮಾರಿ ತೂರಿದ ಭಯಂಕರ ಸಿಡಿಲು!'

'ಯುದ್ಧಮಾರಿ ? ಈಗ ನಡೆದ ಮಹಾಯುದ್ಧವೇ ?'

'ಹೌದು, ಅಮೃತ್. ಅದನ್ನು ನೆನಸಿದಂತೆ ನನ್ನ ಕಣ್ಣು ಕೆಂಪೇರುತ್ತವೆ, ರಕ್ತ ಜುಣಗುಡುತ್ತದೆ. ಭಯವೂ ಕೋಪವೂ ಕೂಡಿ ಮೂಡುತ್ತವೆ. ಹೀಗಾ ಯಿತು, ಒಂದುದಿನ ಮಿದನಾಪುರದಿಂದ ನಾಲ್ಕುಮೈಲಿನ ಮೇಲೆ ಒಂದು ಪಂತಿಗಾಗಿ ಶಾಲೆಯ ಹುಡುಗಿಯರಲ್ಲಿ ಒಬ್ಬ ಶಿಕ್ಷಕಿಯರೊಡನೆ ಹೋಗಿದ್ದೆವು. ಒಂದು ತೋಟದಲ್ಲಿ ಊಟವಾಯ್ತು, ಆಟಪಾಟವಾಯ್ತು. ಅತ್ಯಂತ ಸಂತೋಷದಲ್ಲಿ ಕಾಲಕಳೆದೆವು. ಸಂಜೆಯಾಯಿತು, ತಿರುಗಿ ಹೊರಟೆವು. ಕತ್ತಲೆಯಾಗುವುದರಲ್ಲಿ ಮನೆ ಸೇರಬೇಕೆಂದು ಎಲ್ಲರೂ ಸರಸರನೆ ನಡೆದರು. ನನ್ನ ದುರ್ದೈವದಿಂದ ನನಗೊಂದು ಮುಳ್ಳು ನಟ್ಟಿತು. ಅದರಿಂದ ತುಸು ಕುಂಟುತ್ತ ನಡೆದಿದ್ದೆ. ಉಳಿದವರು ಸ್ವಲ್ಪ ಮುಂದೆ ಇದ್ದರು. ನಾನೊಬ್ಬಳೇ ಹಿಂದೆ ಇದ್ದೆ. ಅರ್ಧಹಾದಿ ಸಾಗಿತು. 'ನಿನ್ನ ಜೊತೆಗೆ ನಾನಿರುವೆ ಎಂದು ಮಾಸ್ತರಿಣಿ ಹಿಂದು

ಳಿದರು. ಆದರೆ ನನಗೇನು ದುರ್ಬುದ್ಧಿ ಬಂದಿತ್ತೋ ಏನೋ, 'ಬೇಡ ನಾ ಸಾವಕಾಶ ಬರುವೆನೆಂದು ಅವರನ್ನೂ ಮುಂದೆ ಕಳಿಸಿದೆ. ಊರು ಇನ್ನೊಂದುಮೈಲಿತ್ತು ಆಗ ಒಂದು ಮೋಟರಕಾರು ಬಂತು. ಭಾರೀ ವೇಗದಲ್ಲಿ ಧೂಳಿಯೆಬ್ಬಿಸುತ್ತ ಹೊರಟಿತ್ತು. ನಾ ಬದಿಗೆ ಸರಿದೆ. ಅದು ಹೋಯಿತೆಂದು ಧೂಳಿಗೆ ಕಣ್ಣು ಮುಚ್ಚಿದೆ. ಅದು ಗಕ್ಕನೆ ಕಿರುಚುತ್ತ ನಿಂತಿತು. ಇಬ್ಬರು ಕೆಮ್ಮೋರೆಯವರು ಕುಳಿತಿದ್ದರು. ನಾ ಕಣ್ಣು ತೆರೆದು ನೋಡಿದೆ, ಕೈಮಾಡಿ ಕರೆದರು. ಯಾರನ್ನು ಕರೆಯುವರೋ ಎಂದು ನಾ ಹಿಂದೆ ನೋಡಿದೆ. ಅವರಿಬ್ಬರೂ ಹಾರಿಬಂದು ಅರೆನಿಮಿಷದಲ್ಲಿ ನನ್ನನ್ನೆತ್ತಿತಂದು ಹಿಂಭಾಗದಲ್ಲಿ ಒಗೆದು ಜೋರಿನಿಂದ ಮೋಟರುಬಿಟ್ಟರು.'

'ಏನು ಹೀಗಾಯಿತೇ ನಿನಗೆ ? ಎಂಥ ಭಯಂಕರ ಸಂಗತಿಯಿದು ?' ಅಮೃತ ತಪ್ತನಾಗಿ ಕೇಳಿದನು.

'ಆಯಿತು, ಅಮೃತ್. ಮಾಡುವದೇನು ? ಆಗ ನಾ ಚಿಟ್ಟನೆ ಚೀರಿದೆ, ಹೊತ್ತು ತರುವಾಗ ಅವರ ಕೈ ಕಡಿದೆ, ಒದ್ದಾಡಿದೆ. ಗಾಡಿಯಲ್ಲಿ ಹಾಕಿದ ಮೇಲೆ ಖಬರು ತಪ್ಪಿ ಹೋಯಿತು. ಮುಂದೆ ತಾಸಿನ ಮೇಲೆ ನನಗೆ ಎಚ್ಚರ ಬಂದರೂ ಕಣ್ಣು ತೆರೆಯಲಾಗಲಿಲ್ಲ. ಮೋಟರು ಭಯಂಕರ ವೇಗದಿಂದ ಎಲ್ಲಿಗೋ ಹೊರಟಿರುವುದು. ಮಧ್ಯರಾತ್ರಿಯ ವರೆಗೆ ಹಾಗೇ ಹೋಯಿತು. ಅಲ್ಲಿಂದ ಎತ್ತರದ ಮೇಲೆಇದ್ದ ಒಂದೇ ಒಂದು ಬಂಗಲೆಯೆದಿರು ನಿಂತಿತು. ನಾ ಒಂದೇ ಸಮನೆ ಅಳುತ್ತಿದ್ದೆ, ಹೊರಳಾಡುತ್ತಿದ್ದೆ. ಕೆಳಗೆ ಹಾರುವ ಪ್ರಯತ್ನಮಾಡುತ್ತಿದ್ದೆ. ಆಗ ಒಬ್ಬ ಸೋಲ್ಜರನು ನನ್ನ ಗಟ್ಟಿಹಿಡಿಯಲು ಹಿಂದೆ ಕುಳಿತನು. ಗಾಡಿ ನಿಂತ ಮೇಲೆ ಇಬ್ಬರೂ ಬಹಳ ಸಲಿಗೆಯಿಂದ 'ಅಳಬ್ಯಾಡ ಹುಡುಗಿ. ನಿನಗೇನು ಮಾಡುವುದಿಲ್ಲ ನಮ್ಮ ಜೋಡಿ ಇರು' ಎಂದು ಹರಮುರಕ ಹಿಂದಿಯಲ್ಲಿ ಆಡಹತ್ತಿದರು. 'ನನ್ನ ಊರಿಗೆ ತಾಯಿ ತಂದೆಯ ಹತ್ತಿರ ಕಳಿಸಿರಿ' ಎಂದು ನಾ ತಿರುತಿರುಗಿ ಅನ್ನುತ್ತ ಅತ್ತೇ ಅತ್ತೆನು. ಬಂಗಲೆಯ ಒಳಗೆ ಹೋಗಲಿಲ್ಲ. ದರದರ ಎಳೆಯುತ್ತ ಕರೆದೊಯ್ದು ಒಂದು ಖೋಲಿಯ ಮಂಚದ ಮೇಲೆ ಕೆಡವಿ ಬಾಗಿಲನ್ನು ಬಂದು ಮಾಡಿ ಹೊರಗೆ ಸಿಗರೇಟು ಸೇದುತ್ತ ಕುಳಿತರು. ನನ್ನ ಒದ್ದಾಟಕ್ಕೆ ಸೀಮೆಯೆ ಇಲ್ಲ. ತಂದೆ ತಾಯಿ ನನ್ನನ್ನೆಷ್ಟು ಹುಡುಕುತ್ತಿರಬಹುದು? ಅವರೆಲ್ಲಗಾಬರಿಯಾಗಿ ಎಲ್ಲಿ ಪ್ರಾಣಕೊಟ್ಟರೋ ಎಂದು ಹುಚ್ಚಿಯಂತೆ ಬಡಬಡಿಸುತ್ತ ನೆಲದ ಮೇಲೆ ಹೊರಳಾಡಿದೆ. ನನಗೆ ಇಂಗ್ಲಿಷು ಬರುವದಿಲ್ಲವೆಂಬ ದೃಢನಂಬಿಗೆಯಿಂದ ಅವರಿ

ಬ್ಬರೂ ಮಾತಾಡುತ್ತಿದ್ದರು. 'What a catch !' (ಎಂಥ ಪ್ರಾಪ್ತಿ!)ಎಂದೊಬ್ಬನೆಂದದಕ್ಕೆ 'Rather a young one' (ಆದರೂ ಚಿಕ್ಕದು) ಎಂದು ಇನ್ನೊಬ್ಬನ ಉತ್ತರ.

'ಹಾ ಹೀಗಾಡುತ್ತಿದ್ದರೇ? ರಾಕ್ಷಸರು. ಇಪ್ಪತ್ತನೆಯ ಶತಮಾನದ ರಾಕ್ಷಸರು. ಇವರನ್ನು ಕೊಂದು ಚೂರು ಚೂರು ಮಾಡಬೇಕು' ಅಮೃತನು ಭಾರತಭೀಮನ ಆವೇಶದಲ್ಲಿ ಆಡಿದನು.

'ನನಗೂ ಹಾಗೇ ಅನಿಸಿತು. ಆದರೆ ನನ್ನ ಕೈಯಲ್ಲೇನಿತ್ತು?ಕೆಲ ಹೊತ್ತಿನ ಮೇಲೆ ಬಾಗಿಲು ತೆಗೆದು 'ಸ್ವಲ್ಪ ವಿಶ್ರಾಂತಿಯಾಯಿತೇ, ಚಹಾ ಬ್ರೆಡ್ಡು ತಗೋ ತಿನ್ನು' ಎಂದು ತಂದಿಟ್ಟರು. ಅವನ್ನು ನಾನೂಕಿಬಿಟ್ಟೆ. ಆಗ 'ಬಹಳಹಟಮಾರಿ ಕಾಣುತ್ತಾಳೆ' ಎಂದೊಬ್ಬನೆಂದರೆ 'ನಾಳೆ ತಾನೇ ಹಾದಿಗೆ ಬರುತ್ತಾಳೆ' ಎಂದು ಇನ್ನೊಬ್ಬನಂದನು. ಮತ್ತೆ ಬಾಗಿಲ ಹಾಕಿ ಹೊರಗೆ ಹೋಗಿ ಸೆರೆಕುಡಿದು ಅಂಗಳದಲ್ಲಿ ಇಬ್ಬರೂ ಕುಣಿಯಹತ್ತಿದರು. ಇಂಗ್ಲಿಷ್ ಹಾಡುಗಳನ್ನು ದಪ್ಪದನಿಯಲ್ಲಿ ಹಾಡುತ್ತ ಒಬ್ಬರೊಬ್ಬರ ಕೈಹಿಡಿದು ಕಾಲೊಗೆಯುತ್ತ ಕುಣಿದರು. ಕಿಡಿಕಿಯ ಕನ್ನಡಿಯೊಳಗಿಂದ ನನಗೆಲ್ಲಾ ಕಾಣಿಸುತ್ತಿತ್ತು. ಕುಣಿತ ಜೋರಾದಂತೆ ಹ್ಯಾಟ ತೂರಿದರು, ಅದನ್ನು ಕಾಲುಬುಡಕ್ಕೆ ಹಾಕಿ ತುಳಿದರು. ಬರಬರುತ್ತ ಮೈಮೇಲಿನ ಕೋಟು-ಶರ್ಟಗಳನ್ನು ತೆಗೆದೊಗೆದರು. ನಾ ನೋಡಲಾರದೆ ನನ್ನ ಜೀವಕ್ಕೆ ಹತ್ತಿದುರಿಯಲ್ಲಿ ಘುರುಘಳಿಸಿ ಹೊರಳುತ್ತಿದ್ದೆ. ಕುಣಿತ ನಿಲ್ಲಲೇ ಇಲ್ಲ. ಮುಂದೆ ಏನು ಹೇಳಲಿ ಅಮೃತ್. ಮೈಮೇಲಿನ ಚಣ್ಣವನ್ನೂ ತೆಗೆದೊಗೆದು 'Come, Come little lassie' (ಬಾಬಾ ಹುಡುಗೆಯೆ) ಎಂದು ಉನ್ಮತ್ತರಂತೆ ಹಾಡಿ ಕುಣಿಯುತ್ತ ನನ್ನ ಕೋಣೆಯಿದಿರು ಬಂದರು. ತಪ್ಪಿ ನೋಡಿ ನಾನು ಕೆಟ್ಟದನಿಯಲ್ಲಿ ಚೀರಿಕೊಂಡು ನೆಲದ ಮೇಲೆ ಬಿದ್ದು ಬಿಟ್ಟೆ'

'ವೀಣಾ, ಎಂಥ ಗೋಳಿದು!'

'ಇನ್ನೂ ಮುಗಿಯಲಿಲ್ಲ, ಅಮೃತ್. ನಾ ಮುಂದೆ ನೀ ಮುಂದೆ ಎಂದು ತಂಟೆ ಮಾಡುತ್ತ ಬಾಗಿಲ ತೆಗೆದು ಒಳಗೆ ಬಂದರು. ನೆಲದ ಮೇಲೆ ಬಿದ್ದ ನನ್ನೆತ್ತಿ ಮಂಚದಲ್ಲಿ ಮಲಗಿಸಿದರು. ನನ್ನ ಮೈ ಕೈ ಮುಟ್ಟಹತ್ತಿದರು. ನಾನು ಬೇಡ ಎಂದು ಜೋರಾಗಿ ಸರಿಸಿದೆ, ಬಯ್ದೆ, ಕಡಿದೆ. ಕೊನೆಗೆ ಮುಖದ ಮೇಲೆ ಬಾಗಿ ತುಟಿಗೆ ಬಾಯಿ ತರಲು ನಾ ಮತ್ತೆ ಗಾಬರಿಯ ಪರಮಾವಧಿಯನ್ನು ಮುಟ್ಟಿ ಎಚ್ಚರು ತಪ್ಪಿ ಬಿದ್ದು ಬಿಟ್ಟೆ. ಬೆಳಗಿನ ವರೆಗೆ ನನಗೆ ಎಚ್ಚರಿಲ್ಲ.

ಬಿಸಿಲೇರಿದ ಮೇಲೆ ಸುಟ್ಟುಜೀವ ಸಾಯದೆ ಎದ್ದಿತು. ಅವರ್ಯಾರೂ ಇರಲಿಲ್ಲ. ಎದ್ದು ನೋಡಿದೆ. ತಲೆತಿರುಗಿ ಬೀಳುವಂತಾಗಿತ್ತು. ಹೊತ್ತೇರಿತು. ಯಾರ ಸದ್ದೂ ಇಲ್ಲ. ಮನುಷ್ಯರ ಸುಳಿವೇ ಇಲ್ಲ. ಕಿಡಿಕಿಯಿಂದ ಹಣಿಕಿ ನೋಡಿದೆ. ಬಾಗಿಲನ್ನು ಮುಚ್ಚಿ ಕೀಲಿ ಹಾಕಿದಂತೆ ಕಂಡಿತು. ಅವರೇನು ಅಲ್ಲಿಯೋ ಎಲ್ಲಾದರೂ ಮಲಗಿರುವರೋ ಹೊರಗೆ ಹೋಗಿರುವರೋ ಯಾವುದೂ ತಿಳಿಯದು. ಒದರಿ ನೋಡಿದೆ. ಯಾರೂ ಸುಳಿಯಲಿಲ್ಲ. ಬಾಗಿಲ ಮುರಿಯುವ ತ್ರಾಣವಿಲ್ಲ. ಹೀಗೆ ಬಿದ್ದುಕೊಂಡಿರಲು ಕಿಡಕಿಗೆ ಕಬ್ಬಿಣ ಸಳಿಯಿಲ್ಲವೆಂದು ಕಾಣಿಸಿತು. ಒಂದನ್ನು ತೆರೆದು ನೋಡಿದೆ. ಕೆಳಗೆ ಹನ್ನೆರಡು ಅಡಿಯಿತ್ತು. ಕೂಡಲೆ ಅದೆಲ್ಲಿಯ ಧೈರ್ಯ ಬಂದಿತೋ ಏನೊ, ಕಚ್ಚೆಬಿಗಿದು ಕಿಡಕಿಯಿಂದ ಕೆಳಗೆ ಹಾರಿಕೊಂಡೆ. ಮೊಣಕಾಲು ಕೆತ್ತಿ ರಕ್ತಬಂತು. ಅಲ್ಲಿಯೇ ಮಣ್ಣು ಹಚ್ಚಿದೆ. ಸುತ್ತು ನೋಡಿದೆ. ಯಾರೂ ಕಾಣಲಿಲ್ಲ. ಮೆಲ್ಲನೆ ಬಗ್ಗಿ ಬಂಗಲೆಯ ಹಿಂಭಾಗದಿಂದ ಹೊರನುಸುಳಿ ಬಂದು ಗಿಡಬಳ್ಳಿಗಳ ಜಾಡಿನಲ್ಲಿ ಸೇರಿಕೊಂಡೆ.'

'ನಿಜವಾದ ವೀರರಮಣಿಯಾದೆ ವೀಣಾ! ಇದ್ದರೆ ಹೀಗಿರಬೇಕು!' ಅಮೃತ ಮೆಚ್ಚಿದನು.

'ಆಪತ್ತು ಕಲಿಸಿದ ಧೈರ್ಯವದು, ಅಮೃತ್. ಹಾಗೇ ಅಡವಿಬಿದ್ದು ಹೋದೆ ಹೋದೆ. ಹೊಟ್ಟೆಯಲ್ಲಿ ಕಾಳು ನೀರಿಲ್ಲ, ತುತ್ತು ಅನ್ನವಿಲ್ಲ. ಅದು ಹೇಗೆ ನಡೆದನೊ ದೇವರಿಗೇ ಗೊತ್ತು. ಒಂದು ಹಳ್ಳಿಯಲ್ಲಿ ಒಬ್ಬ ಮುದುಕಿಗೆ ಕರುಣೆ ಹುಟ್ಟಿ ಮನೆಗೆ ಕರೆದಳು, ಗಂಜಿ ಕೊಟ್ಟಳು. ಎರಡು ದಿನ ಅವಳ ಮನೆಯಲ್ಲಿ ಮಲಗಿದೆ. ಮುಂದೆ ಅಲ್ಲಿಂದಿಲ್ಲಿಗೆ ನಡೆನಡೆದು ಮಿದನಾಪುರ ಹತ್ತಿರಕ್ಕೆ ಬಂದೆ. ದಾರಿಯ ಒಂದು ಗುಡಿಸಲಲ್ಲಿ ಕೂತಾಗ ಒಂದು ಮೋಟಾರು ಹಾದು ಹೋಯಿತು. ಅದೇ ದುಷ್ಟರಿಬ್ಬರೂ ಕಂಡಂತಾಯಿತು. ಮುಖ ಮುಚ್ಚಿಕೊಂಡು ಕೂತೆ. ನನ್ನ ಅವರು ಹುಡುಕುತ್ತಿರಬೇಕೆಂದು ತೋರಿತು. ಕೊನೆಗೆ ಕಾಳಿಯ ಅನುಗ್ರಹದಿಂದ ಒಂದು ಸಂಜೆ ಮನೆಗೆ ಬಂದರೆ ತಂದೆ-ತಾಯಿಗಳು ತಮ್ಮ ಕಣ್ಣನ್ನು ತಾವು ನಂಬಲಿಲ್ಲ. ಮನೆಯಲ್ಲಿ ಅದೆಷ್ಟು ಹಿಗ್ಗು! ಹುಡುಗರ ಹಾರಾಟವೇನು! ಊರವರೆಲ್ಲ ಭೆಟ್ಟಿಗೆ ಬರುವದೇನು! ತಾವು ಹುಡುಕಿ ಪೋಲಿಸರಿಗೆ ವರದಿಕೊಟ್ಟು ಚಿಂತೆಯಿಂದ ಸೋತು ಸುಣ್ಣಾದದ್ದನ್ನು ಮನೆ ಮಂದಿ ಹೇಳಿದರು. ನನ್ನ ಕತೆಯನ್ನು ಅವರಿಗೆ ಹೇಳಿದೆ.'

'ಅಂತೂ ಸುಖರೂಪವಾಗಿ ತಿರುಗಿ ಬಂದೆ. ಅವರೆಲ್ಲ ನೀಚರಿಗೆ ಶಾಸನ

ವಾಗಲಿಲ್ಲ. ನನ್ನ ರಕ್ತ ಕುದಿಯುತ್ತದೆ, ವೀಣಾ.'

'ನಿಮಗೇ ಇಷ್ಟಾದರೆ ನನಗೆ ಏನಾಗುತ್ತಿರಬೇಕು ನೋಡಿರಿ. ಅಂದು ಹುಟ್ಟಿದ ಘಾಬರಿ ನನ್ನ ಜನ್ಮಕ್ಕೆ ಹತ್ತಿದೆ. ನಮ್ಮ ದುರ್ದೈವ ಅಲ್ಲಿಗೆ ಮುಗಿಯ ಲಿಲ್ಲ. ಕೊಂತಾಯಿಯಲ್ಲಿ ಇನ್ನೂ ಹೆಚ್ಚಿನ ವಜ್ರಾಘಾತವಾಗಿ ಆ ನನ್ನ ಪ್ರೀತಿಯ ಬಳಗದ ಸಮಾಧಿ ಕಟ್ಟಿತು...'

ಇಲ್ಲಿಗೆ ವೀಣೆಯ ಮಾತು ನಿಂತಿತು. ಭೀಕರ ಚಿತ್ರವೊಂದು ಮೂಡಿ ಎದೆಯಲ್ಲಿ ಶೋಕಜ್ವಾಲೆಯನ್ನು ಹೊತ್ತಿಸಿತು. ಅಮೃತನಿಗೂ ಅದೇ ಚಿತ್ರ, ಅದೇ ಭಾಷ ಮೋಹರಿಸಿ ಬಂದವು. ಇಬ್ಬರೂ ಗೊಂಬೆಯಂತೆ ಕುಳಿತರು. ಕೊನೆಗೆ ನಿಟ್ಟುಸಿರೆಳೆದರು.

'ವೀಣಾ, ಆದದ್ದಾಯಿತು. ನನಗೂ ನಮ್ಮ ಮನೆಯಲ್ಲಿ ಬಡತನದ, ಬೇನೆಯ ನೂರಾರು ತಾಪತ್ರಯದ ಅನುಭವ ಬಂದಿರುವದು. ಆದರೆ ಮನುಷ್ಯ ನಿಗೆ ಇಷ್ಟು ದುಃಖ ಬರುವದೆಂದು ಈವರೆಗೆ ತಿಳಿದಿರಲಿಲ್ಲ. ನನಗೆಷ್ಟು ನೋವಾಗಿದೆ ಎಂದು ಹೇಳಲಿ?'

'ನನಗೆ ಗೊತ್ತಿಲ್ಲವೇ, ಅಮೃತ್. ಅಂತೇ ಎಲ್ಲವನ್ನೂ ನಿಮ್ಮೊಬ್ಬರ ಮುಂದೆ ನಾ ಹೇಳುವ ದಿಟ್ಟತನ ತೋರಿಸಿದೆ. ನಿಮಗೆ ನೋವುಂಟುಮಾಡಿದೆ ಎಂದು ನಾನೇ ಮರಗುತ್ತೇನೆ.?

'ಆದದ್ದನ್ನು ಅಳಿಸಲು ಬರುವದಿಲ್ಲ. ಇನ್ನು ಮುಂದಿನ ಹಾದಿ ಕಾಣ ಬೇಕು. ವೀಣಾ, ಸುಮ್ಮನೆ ಹೆದರಬೇಡ. ನಿನಗಾಗಿ ಮಿಡಿಯುವ ಹೃದಯ ಇಲ್ಲಿದೆ ಎಂದು ತಿಳಿ. ನಿಶ್ಚಿಂತಳಾಗಿ ಇರು. ನಿಮ್ಮ ತಂದೆಯ ಕನಸನ್ನು ನನಸಾಗಿ ಮಾಡಬೇಕೆಂದೇ ದೈವ ನಿನ್ನ ಬದುಕಿಸಿದೆ.'

'ಹೌದು. ಆದರೆ ಯಾರ ಸಲುವಾಗಿ? ಹೆತ್ತವರ ಸಮಾಧಿಯ ಮೇಲೆ ಕಂಬನಿಗರೆಯಬೇಕೆಂದೇ?'

'ಹಾಗಲ್ಲ. ನೀನು ಕಲಿ. ಮುಂದಾಗು. ಜನದ ಸೇವೆ ಮಾಡು. ಕೀರ್ತಿ ಗಳಿಸು. ಅದು ನಿನ್ನ ತಾಯಿತಂದೆಯ ಆತ್ಮಕ್ಕೆ ಶಾಂತಿ ಕೊಡುವದು.'

'ಇನ್ನೇನು ಕಲಿಯುವೆ! ಮುಂದಾಗುವೆ! ನನಗೆ ನಿಲ್ಲಲಿಕ್ಕೆ ತುಣುಕು ನೆಲವಿಲ್ಲ. ಈಗೆಲ್ಲಿರಬೇಕು ನಾನು?'

'ನಾನು ಹೇಳುವದಾದರೂ ಕೇಳು. ನಿನಗೆ ಅಣ್ಣನಿರಲಿಲ್ಲವಲ್ಲ. ಇಕಾ, ಇಲ್ಲಿ ನಾ ಇದ್ದೇನೆಂದು ತಿಳಿ. ನಿನಗಾಗಿ ಬೇಕಾದ್ದು ಮಾಡತೇನೆ. ಈಗಂತೂ ಈ

ಕೇಂದ್ರದಲ್ಲಿರು. ನರ್ಸಿನ ಕೆಲಸವನ್ನು ಕಲಿತೀಯಂತೆ. ನಿನ್ನ ಮಿತ್ರರಿಗೆ ಮತ್ತು ಸ್ವಾಮಿಜಿಯವರಿಗೆ ಹೇಳುವೆ. ಆಯಿತೇ ?'

. ವೀಣೆಯ ಹೃದಯ ಕೃತಜ್ಞತೆಯಿಂದ ತುಂಬಿಬಂತು. ಅಮೃತನ ಹತ್ತಿರ ಹೋಗಿ ಹೆಗಲ ಮೇಲೆ ಎರಡೂ ಕೈಯಿಟ್ಟಳು. ಏಕವಚನದ ಸಲಿಗೆಯಿಂದ ಆಡಿದಳು : 'ಅಮೃತ್, ಅಮೃತ್. ಈ ಅರಣ್ಯದಲ್ಲಿ ಅಚ್ಚ ಹಸರೂ ಇದೆ. ನೀ ಹೇಳಿದ್ದು ನಿಜ. ಇನ್ನು ನನಗೇನಾದರೂ ಹೆದರುವುದಿಲ್ಲ.' ಅಮೃತನವೈ ಪುಲಕಿತ ವಾಯಿತು. ತನ್ನ ಸಹಾನುಭೂತಿಯ ಹೊನಲಿನಲ್ಲಿ ಹೊಸ ಆಕರ್ಷಣೆಯ ಅಲೆ ಯೊಂದು ಸೇರಿದಂತೆ ಅನಿಸಿತು.ಆಗ ಅವನ್ನು ಮನದ ಮರೆಯಲ್ಲಿ ಹಿಸ್ಕೂಕಿದನು. ವೀಣೆ ಇಟ್ಟ ಕೈಗಳನ್ನು ತೆಗೆದು ಸರಿಸಿದನು. ಅವಳಿಗಂತೂ ಭಾವನಾಮಯವಾದ ಆಧಾರವೊಂದು ಬೇಕಾಗಿತ್ತು.ಅದೀಗ ದೊರಕಿತು. ಬೇರೆ ಬಯಕೆಗಳೂ ಅದರಲ್ಲಿ ಬೆರೆತಿವೆಯೆಂಬುದನ್ನು ಅವಳು ಪರೀಕ್ಷಿಸಿನೋಡಲಿಲ್ಲ. ಬದುಕಿನಲ್ಲಿ ಮತ್ತೆ ನಂಬಿಗೆ ಹುಟ್ಟಿ ತನ್ನ ಗುಡಿಸಲಿನೆಡೆಗೆ ಪ್ರಸನ್ನ ಮುಖದಿಂದ ಹೊರಟುಹೋದಳು.

ಎರಡು ಮೂರು ದಿನಗಳಾದಮೇಲೆ ಒಂದು ಸಮೀಪದ ಹಳ್ಳಿಗೆ ರೋಗಿಗಳ ಉಪಚಾರಕ್ಕಾಗಿ ಅಮೃತನಿಗೆ ಹೋಗುವ ಪಾಳಿ ಬಂದಿತು. ಇಳಿಹೊತ್ತಾಗಿತ್ತು ಅವನು ಹೊರಡುವುದನ್ನು ತಿಳಿದುಕೊಂಡು ವೀಣೆಯೂ ಬಂದು ಕೂಡಿದಳು. ಅವಳೊಡನೆ ನಾಲ್ಕು ಮಾತಾಡಿ ಕಳಿಸಬೇಕೆಂದು ಅಮೃತ ಬೀದಿಯ ಬದಿಗೆ ನಿಂತುಕೊಂಡನು 'ನಾನೂ ಜತೆಗೆ ಬರುವೆ'ನೆಂದು ಹಟತೊಟ್ಟಳು. ' ಸರಿ, ನರ್ಸಿನ ಕೆಲಸವನ್ನು ಬೇರೆ ಈಗ ಕಲಿಯುತ್ತಿರುವೆಯಲ್ಲವೇ? ಉಪಯೋಗ ಬೀಳ ಬಹುದು.ನಡೆ' ಎಂದು ಅಮೃತನು ಅವಳನ್ನು ಕರಕೊಂಡು ಹೊರಟನು. ದಾರಿ ಯಲ್ಲಿ ತನ್ನ ಊರುಮನೆಯ, ಆಪ್ತೇಷ್ಟರ ಪರಿಚಯವನ್ನು ಅವಳಿಗೆ ಮಾಡಿ ಕೊಟ್ಟನು. ತಿರುಗಿ ಬರಬೇಕೆಂಬ ಅವರ ಆತುರವನ್ನೂ ತಾನು ಇಷ್ಟರಲ್ಲಿ ಅಲ್ಲಿಗೆ ಹೋಗಬೇಕಾಗುತ್ತೆಂದೂ ಹೇಳಿದನು. ವೀಣೆಯಮೋರೆ ಸಣ್ಣದಾಯಿತು. 'ನೀ ಹೋದರೆ ನನ್ನ ಗತಿ?' ಎಂದನ್ನುವಂತೆ ಮುಖಮುದ್ರೆ ಸಾರಿತು. ' ನಾ ಎಲ್ಲಿ ಹೋಗಲು ಕೂತಿದ್ದೇನೆ?' ಎಂದು ಅಮೃತನು ನಿಶ್ಚಯಾತ್ಮಕವಾಗಿ ಹೇಳಿದನು. ಹೋಗಹೋಗುತ್ತ ಇದಿರಿಗೆ ಮೋಟರ ಸಪ್ಪಳ ಕೇಳಿ ಇಬ್ಬರೂ ಮಗ್ಗುಲಾದರು. ಸಾಲುಸಾಲಾಗಿ ದೆವ್ವನಂಥ ಮಿಲಿಟರಿ ಲಾರಿಗಳು ಕೆಮ್ಮೊಗದ ಸೈನಿಕರನ್ನು ಕೂಡಿಸಿಕೊಂಡು ಹೊರಟಿದ್ದವು. ವೀಣೆಯ ಎದೆ ಧಸಕ್ಕೆಂದಿತು. ಅಮೃತನ ಹತ್ತಿರ ಹತ್ತಿರ ಸರಿದಳು. ಲಾರಿಗಳ ಸಾಲು ಮುಗಿಯಲೇವೊಲ್ಲದು. 'ನಾ

ಯಾಕೆ ಬಂದಿದ್ದೇನು!' ಎಂದು ಹಳಹಳಿಸಹತ್ತಿದಳು. ನಾಲಿಗೆ ಒಣಗಿತು. ಮಾತು ಹೊರಡದಾದವು. ಅಮೃತನೆಷ್ಟು ಸಂತೈಸಿದರೂ ಬೇಗುದಿ ಹೋಗಲಿಲ್ಲ. ಕೊನೆಗೆಲ್ಲ ಮುಂದೆ ಹೋಗಿ ಕಣ್ಮರೆಯಾದವು. ಉಸ್ಸೆಂದು ಬೀದಿಯ ನಡುವಿಗೆ ಬಂದು ನಾಲ್ಕಾರು ಹೆಜ್ಜೆ ನಡೆಯುವಷ್ಟರಲ್ಲಿ ಕಾರೊಂದು ಬರಬೇಕೆ? ಅದರಲ್ಲಿ ಇಬ್ಬರೇ ಇಬ್ಬರು ಕೆಂಪು ಮುಖದವರಿರಬೇಕೆ? ನೋಡಿದೊಂದೇ ತಡ, ಚಿಟ್ಟೆಂದು ಚೀರಿ ವೀಣೆ ಅಮೃತನನ್ನು ಗಟ್ಟಿಯಾಗಿ ತಬ್ಬಿಕೊಂಡಳು. ಒಂದು ಕ್ಷಣ ಅವಳಿಗೆ ಅರಿವೇ ತಪ್ಪಿತು. ಅಮೃತನಿಗೂ ಇಲ್ಲದ ಗಾಬರಿ ಹುಟ್ಟಿತು. ಆದರೆ ಕಾರು ಹಿಂದೆ ಧೂಳಿ ಕಾರುತ್ತ, ಮುಂದೋಡಿತು. 'ಹೋಯಿತೇಳು ಮಾತಾಯಿ' ಎಂದು ಅಮೃತ ಹೇಳಿದ ಮೇಲೆ ವೀಣೆ ಹೆದ ಹೆದರುತ್ತ ಕಣ್ಣು ತೆರೆದಳು. ಈ ರೀತಿ ಆ ಹಳ್ಳಿಯ ಭೆಟ್ಟಿಯೊಂದು ಸಣ್ಣ ಪ್ರಕರಣವೇ ಆಯಿತು. ಅವೆರಡೂ ಹೃದಯುಗಳು ಕ್ರಮೇಣ ಹತ್ತಿರ ಹತ್ತಿರವಾದವು. ಒಳಗೆ ಹುದುಗಿದ ರತಿ ಮೇಲುನೆಲೆಗೆ ಬಾರ ದಿದ್ದರೂ ತನ್ನ ವಕ್ರ ವಿಲಾಸವನ್ನು ಅದು ತೋರದಿರಲಿಲ್ಲ. ಅಮೃತನಿಗೆ ಇದರ ಅರಿವು ಹೆಚ್ಚಾಗಿ ತಲೆದೋರಿತು. ಒಂದು ದಿನ ತನ್ನಷ್ಟಕ್ಕೆ ಕುಳಿತು ಬಹಳ ಹೊತ್ತಿನವರೆಗೆ ಅವನು ಆಲೋಚನೆಯಲ್ಲಿ ಮಗ್ನನಾದನು. ವೀಣೆಯ ಬಗ್ಗೆ ತನ್ನ ಸ್ನೇಹ-ಮರುಕ ಎಷ್ಟು ನಿರ್ಮಲವಾದರೂ ಅದು ಬೇರೆ ಕೋರಿಕೆಯಲ್ಲಿ ಅರಳುವ ಲಕ್ಷಣವಿರುವುದೆಂದರಿತನು. ವೀಣೆಯ ಇತ್ತೀಚೆಯ ನಡತೆ ಅವನ ಅನಿಸಿಕೆಯನ್ನು ಬಲಪಡಿಸಿತು. 'ಇದು ಸರಿಯಲ್ಲ. ಅವಳಿಗೆ ಸ್ಪಷ್ಟವಾಗಿ ಹೇಳಿಬಿಡಬೇಕು' ಎಂದನು. ಮುಂದೆ ಅವಳ ಕರುಣಾರ್ತ ಮುಖವನ್ನು ನೋಡಿದಾಗ, ಹಾಗೆ ಹೇಳಿ ದರೆ ಅವಳೆಷ್ಟು ನೋಯಬಹುದೆಂದು ಅನಿಸಿ ಸುಮ್ಮನಾಗುತ್ತಿದ್ದನು. ಅವಳು ಹೇಗೇ ತಿಳಿಯಲಿ, ಮುಂದೆ ತಿಳಿವಳಿಕೆ ಹುಟ್ಟೀತು, ತನ್ನ ಮಟ್ಟಿಗೆ ತಾನು ಇಲ್ಲದ ಜಾಲದಲ್ಲಿ ತೊಡಕಿಕೊಳ್ಳಬಾರದೆಂದು ನಿರ್ಧರಿಸಿ ಹಾಗೆ ನಡೆದನು. ಆದರೆ ವೀಣೆಯ ತಂತಿ ಮಿಡಿದಾಗ ಆಗಾಗ ಆಗುವ ಸಹ ಕಂಪನವನ್ನು ಯಾರು ತಡೆಯ ಬಲ್ಲರು?

ಏಪ್ರಿಲ್ ತಿಂಗಳು ಬಂದು ಏಳು ದಿನಗಳಾದವು. ಇಷ್ಟರೊಳಗೆ ಅಮೃತ ನಿಗೆ ಊರಿಂದ ಜರೂರು ಪತ್ರಗಳೆರಡು ಬಂದಿದ್ದವು. ಅವನ್ನು ಹಾಗೇ ಇಟ್ಟು ಕೊಂಡಿದ್ದನು. ಕೊನೆಯಲ್ಲಿ ಒಂದು ದಿನ ದೊಡ್ಡ ತಾರೇ ಬಂತು. ವಾರ್ಡಿನಲ್ಲಿ ತಿರುಗುವಾಗ ವೀಣೆಯೇ ಅದನ್ನು ತಂದು ಕೊಟ್ಟಳು. ಒಡೆದು ನೋಡಿದನು. ಓದಿದೊಡನೆ ಎದೆಯೊಡೆದು ಚೂರಾಯಿತು. 'ಏನು ಸುದ್ದಿ?' ವೀಣೆ ಎದೆ

ಕೇಂದ್ರದಲ್ಲಿರು. ನರ್ಸಿನ ಕೆಲಸವನ್ನು ಕಲಿತೀಯಂತೆ. ನಿನ್ನ ಮಿತ್ರರಿಗೆ ಮತ್ತು ಸ್ವಾಮಿಜಿಯವರಿಗೆ ಹೇಳುವೆ. ಆಯಿತೇ ?'

. ವೀಣೆಯ ಹೃದಯ ಕೃತಜ್ಞತೆಯಿಂದ ತುಂಬಿಬಂತು. ಅಮೃತನ ಹತ್ತಿರ ಹೋಗಿ ಹೆಗಲ ಮೇಲೆ ಎರಡೂ ಕೈಯಿಟ್ಟಳು. ಏಕವಚನದ ಸಲಿಗೆಯಿಂದ ಆಡಿದಳು : 'ಅಮೃತ್, ಅಮೃತ್. ಈ ಅರಣ್ಯದಲ್ಲಿ ಅಚ್ಚ ಹಸರೂ ಇದೆ. ನೀ ಹೇಳಿದ್ದು ನಿಜ. ಇನ್ನು ನನಗೇನಾದರೂ ಹೆದರುವುದಿಲ್ಲ.' ಅಮೃತನಮೈ ಪುಲಕಿತ ವಾಯಿತು. ತನ್ನ ಸಹಾನುಭೂತಿಯ ಹೊನಲಿನಲ್ಲಿ ಹೊಸ ಆಕರ್ಷಣೆಯ ಅಲೆ ಯೊಂದು ಸೇರಿದಂತೆ ಅನಿಸಿತು.ಆಗ ಅವನ್ನು ಮನದ ಮರೆಯಲ್ಲಿ ಹಿನ್ನೂಕಿದನು. ವೀಣೆ ಇಟ್ಟ ಕೈಗಳನ್ನು ತೆಗೆದು ಸರಿಸಿದನು. ಅವಳಿಗಂತೂ ಭಾವನಾಮಯವಾದ ಆಧಾರವೊಂದು ಬೇಕಾಗಿತ್ತು.ಅದೀಗ ದೊರಕಿತು. ಬೇರೆ ಬಯಕೆಗಳೂ ಅದರಲ್ಲಿ ಬೆರೆತಿವೆಯೆಂಬುದನ್ನು ಅವಳು ಪರೀಕ್ಷಿಸಿನೋಡಲಿಲ್ಲ. ಬದುಕಿನಲ್ಲಿ ಮತ್ತೆ ನಂಬಿಗೆ ಹುಟ್ಟಿ ತನ್ನ ಗುಡಿಸಲಿನೆಡೆಗೆ ಪ್ರಸನ್ನ ಮುಖದಿಂದ ಹೊರಟುಹೋದಳು.

ಎರಡು ಮೂರು ದಿನಗಳಾದಮೇಲೆ ಒಂದು ಸಮೀಪದ ಹಳ್ಳಿಗೆ ರೋಗಿಗಳ ಉಪಚಾರಕ್ಕಾಗಿ ಅಮೃತನಿಗೆ ಹೋಗುವ ಪಾಳಿ ಬಂದಿತು. ಇಳಿಹೊತ್ತಾಗಿತ್ತು ಅವನು ಹೊರಡುವುದನ್ನು ತಿಳಿದುಕೊಂಡು ವೀಣೆಯೂ ಬಂದು ಕೂಡಿದಳು. ಅವಳೊಡನೆ ನಾಲ್ಕು ಮಾತಾಡಿ ಕಳಿಸಬೇಕೆಂದು ಅಮೃತ ಬೀದಿಯ ಬದಿಗೆ ನಿಂತುಕೊಂಡನು 'ನಾನೂ ಜತೆಗೆ ಬರುವೆ'ನೆಂದು ಹಟತೊಟ್ಟಳು. 'ಸರಿ, ನರ್ಸಿನ ಕೆಲಸವನ್ನು ಬೇರೆ ಈಗ ಕಲಿಯುತ್ತಿರುವೆಯಲ್ಲವೇ? ಉಪಯೋಗ ಬೀಳ ಬಹುದು.ನಡೆ' ಎಂದು ಅಮೃತನು ಅವಳನ್ನು ಕರಕೊಂಡು ಹೊರಟನು. ದಾರಿ ಯಲ್ಲಿ ತನ್ನ ಊರುಮನೆಯ, ಆಪ್ತೇಷ್ಟರ ಪರಿಚಯವನ್ನು ಅವಳಿಗೆ ಮಾಡಿ ಕೊಟ್ಟನು. ತಿರುಗಿ ಬರಬೇಕೆಂಬ ಅವರ ಆತುರವನ್ನೂ ತಾನು ಇಷ್ಟರಲ್ಲಿ ಅಲ್ಲಿಗೆ ಹೋಗಬೇಕಾಗುತ್ತೆಂದೂ ಹೇಳಿದನು. ವೀಣೆಯಮೋರೆ ಸಣ್ಣದಾಯಿತು. 'ನೀ ಹೋದರೆ ನನ್ನ ಗತಿ?' ಎಂದನ್ನುವಂತೆ ಮುಖಮುದ್ರೆ ಸಾರಿತು. 'ನಾ ಎಲ್ಲಿ ಹೋಗಲು ಕೂತಿದ್ದೇನೆ?' ಎಂದು ಅಮೃತನು ನಿಶ್ಚಯಾತ್ಮಕವಾಗಿ ಹೇಳಿದನು. ಹೋಗಹೋಗುತ್ತ ಇದಿರಿಗೆ ಮೋಟರ ಸಪ್ಪಳ ಕೇಳಿ ಇಬ್ಬರೂ ಮಗ್ಗುಲಾದರು. ಸಾಲುಸಾಲಾಗಿ ದೆವ್ವನಂಥ ಮಿಲಿಟರಿ ಲಾರಿಗಳು ಕೆಮ್ಮೊಗದ ಸೈನಿಕರನ್ನು ಕೂಡಿಸಿಕೊಂಡು ಹೊರಟಿದ್ದವು. ವೀಣೆಯ ಎದೆ ಧಸಕ್ಕೆಂದಿತು. ಅಮೃತನ ಹತ್ತಿರ ಹತ್ತಿರ ಸರಿದಳು. ಲಾ:ರಿಗಳ ಸಾಲು ಮುಗಿಯಲೇವೊಲ್ಲದು. 'ನಾ

ಯಾಕೆ ಬಂದಿದ್ದೇನು!' ಎಂದು ಹಳಹಳಿಸಹತ್ತಿದಳು. ನಾಲಿಗೆ ಒಣಗಿತು. ಮಾತು ಹೊರಡದಾದವು. ಅಮೃತನೆಷ್ಟು ಸಂತೈಸಿದರೂ ಬೇಗುದಿ ಹೋಗಲಿಲ್ಲ ಕೊನೆಗೆಲ್ಲ ಮುಂದೆ ಹೋಗಿ ಕಣ್ಮರೆಯಾದವು. ಉಸ್ಸೆಂದು ಬೀದಿಯ ನಡುವಿಗೆ ಬಂದು ನಾಲ್ಕಾರು ಹೆಜ್ಜೆ ನಡೆಯುವಷ್ಟರಲ್ಲಿ ಕಾರೊಂದು ಬರಬೇಕೆ? ಅದರಲ್ಲಿ ಇಬ್ಬರೇ ಇಬ್ಬರು ಕೆಂಪು ಮುಖದವರಿರಬೇಕೆ? ನೋಡಿದೊಂದೇ ತಡ, ಚಿಟ್ಟೆಂದು ಚೀರಿ ವೀಣೆ ಅಮೃತನನ್ನು ಗಟ್ಟಿಯಾಗಿ ತಬ್ಬಿಕೊಂಡಳು. ಒಂದು ಕ್ಷಣ ಅವಳಿಗೆ ಅರಿವೇ ತಪ್ಪಿತು. ಅಮೃತನಿಗೂ ಇಲ್ಲದ ಗಾಬರಿ ಹುಟ್ಟಿತು. ಆದರೆ ಕಾರು ಹಿಂದೆ ಧೂಳಿ ಕಾರುತ್ತ, ಮುಂದೋಡಿತು. 'ಹೋಯಿತೇಳು ಮಾತಾಯಿ' ಎಂದು ಅಮೃತ ಹೇಳಿದ ಮೇಲೆ ವೀಣೆ ಹೆದ ಹೆದರುತ್ತ ಕಣ್ಣು ತೆರೆದಳು. ಈ ರೀತಿ ಆ ಹಳ್ಳಿಯ ಭೆಟ್ಟಿಯೊಂದು ಸಣ್ಣ ಪ್ರಕರಣವೇ ಆಯಿತು. ಅವೆರಡೂ ಹೃದಯಗಳು ಕ್ರಮೇಣ ಹತ್ತಿರ ಹತ್ತಿರವಾದವು. ಒಳಗೆ ಹುದುಗಿದ ರತಿ ಮೇಲುನೆಲೆಗೆ ಬಾರ ದಿದ್ದರೂ ತನ್ನ ವಕ್ರ ವಿಲಾಸವನ್ನು ಅದು ತೋರದಿರಲಿಲ್ಲ. ಅಮೃತನಿಗೆ ಇದರ ಅರಿವು ಹೆಚ್ಚಾಗಿ ತಲೆದೋರಿತು. ಒಂದು ದಿನ ತನ್ನಷ್ಟಕ್ಕೆ ಕುಳಿತು ಬಹಳ ಹೊತ್ತಿನವರೆಗೆ ಅವನು ಆಲೋಚನೆಯಲ್ಲಿ ಮಗ್ನನಾದನು. ವೀಣೆಯ ಬಗ್ಗೆ ತನ್ನ ಸ್ನೇಹ-ಮರುಕ ಎಷ್ಟು ನಿರ್ಮಲವಾದರೂ ಅದು ಬೇರೆ ಕೋರಿಕೆಯಲ್ಲಿ ಅರಳುವ ಲಕ್ಷಣವಿರುವುದೆಂದರಿತನು. ವೀಣೆಯ ಇತ್ತೀಚಿಯ ನಡತೆ ಅವನ ಅನಿಸಿಕೆಯನ್ನು ಬಲಪಡಿಸಿತು. 'ಇದು ಸರಿಯಲ್ಲ. ಅವಳಿಗೆ ಸ್ಪಷ್ಟವಾಗಿ ಹೇಳಿಬಿಡಬೇಕು' ಎಂದನು. ಮುಂದೆ ಅವಳ ಕರುಣಾರ್ತ ಮುಖವನ್ನು ನೋಡಿದಾಗ, ಹಾಗೆ ಹೇಳಿ ದರೆ ಅವಳೆಷ್ಟು ನೋಯಬಹುದೆಂದು ಅನಿಸಿ ಸುಮ್ಮನಾಗುತ್ತಿದ್ದನು. ಅವಳು ಹೇಗೇ ತಿಳಿಯಲಿ, ಮುಂದೆ ತಿಳಿವಳಿಕೆ ಹುಟ್ಟೀತು, ತನ್ನ ಮಟ್ಟಿಗೆ ತಾನು ಇಲ್ಲದ ಜಾಲದಲ್ಲಿ ತೊಡಕಿಕೊಳ್ಳಬಾರದೆಂದು ನಿರ್ಧರಿಸಿ ಹಾಗೆ ನಡೆದನು. ಆದರೆ ವೀಣೆಯ ತಂತಿ ಮಿಡಿದಾಗ ಆಗಾಗ ಆಗುವ ಸಹ ಕಂಪನವನ್ನು ಯಾರು ತಡೆಯ ಬಲ್ಲರು?

ಏಪ್ರಿಲ್ ತಿಂಗಳು ಬಂದು ಏಳು ದಿನಗಳಾದವು. ಇಷ್ಟರೊಳಗೆ ಅಮೃತ ನಿಗೆ ಊರಿಂದ ಜರೂರು ಪತ್ರಗಳೆರಡು ಬಂದಿದ್ದವು. ಅವನ್ನು ಹಾಗೇ ಇಟ್ಟು ಕೊಂಡಿದ್ದನು. ಕೊನೆಯಲ್ಲಿ ಒಂದು ದಿನ ದೊಡ್ಡ ತಾರೇ ಬಂತು. ವಾರ್ಡಿನಲ್ಲಿ ತಿರುಗುವಾಗ ವೀಣೆಯೇ ಅದನ್ನು ತಂದು ಕೊಟ್ಟಳು. ಒಡೆದು ನೋಡಿದನು. ಓದಿದೊಡನೆ ಎದೆಯೊಡೆದು ಚೂರಾಯಿತು. 'ಏನು ಸುದ್ದಿ?' ವೀಣೆ ಎದೆ

ಹಾರುತ್ತ ಕೇಳಿದಳು.

‘ ನನ್ನ ತಾಯಿತಂದೆ ಇಬ್ಬರೂ ಮೃತ್ಯುಶಯ್ಯೆಯಲ್ಲಿ ಅಂತೆ ! ವೀಣಾ, ನಾನೀವತ್ತೆ ಹೊರಡಬೇಕು ’ ಅಮೃತನು ತತ್‌ಕ್ಷಣ ತನ್ನ ಕೆಲಸವನ್ನು ಸುಧೀರನಿಗೆ ಒಪ್ಪಿಸಿ ಸ್ವಾಮಿಜಿಯವರಿಗೆ ಅವಸರವಸರವಾಗಿ ಕಾಗದ ಬರೆದು ಕ್ಷಮೆ ಕೇಳಿ ವೀಣೆಯ ನೆರವಿನಿಂದ ಸಾಮಾನು ಕಟ್ಟಿ, ದಾರಿಯಲ್ಲಿಯ ಬಸ್ಸೊಂದನ್ನು ಹಿಡಿದು ಸ್ಟೇಶನ್ನಿಗೆ ಹೊರಟನು. ಅವನ ಕೂಡ ಹಟ ತೊಟ್ಟು ವೀಣೆಯೂ ಕಳಿಸಲಿಕ್ಕೆ ಹೊರಟಳು. ಸ್ಟೇಷನ್ ತಲುಪಿದ ಕೂಡಲೇ ಅಲ್ಲಿಂದ ಊರಿಗೆ ತಾರು ಕೊಟ್ಟನು ‘ ಹೊರಟಿದ್ದೇನೆ ’ ಎಂದು. ಒಂಡೆರಡು ತಾಸಿನಲ್ಲಿ ಮುಂಬಯಿ ಮೇಲ್ ಇತ್ತು. ಪ್ಲ್ಯಾಟಫಾರ್ಮಿನ ಮೇಲಿದ್ದಾಗ ವೀಣೆಯೊಡನೆ ಅನೇಕ ಮಾತುಗಳಾದವು. ಧೈರ್ಯತಾಳಿ ಮಠದ ಕೇಂದ್ರದಲ್ಲಿಯೇ ಇರಬೇಕೆಂದು ಅವಳಿಗೆ ಹೇಳಿದನು. ವಾರಕ್ಕೊಮ್ಮೆ ಪತ್ರ ಬರೆಯೆಂದನು. ನೀನೂ ಬರೆಯಬೇಕೆಂದು ಅವಳು ತಿರುತಿರುಗಿ ಹೇಳಿದಳು. ‘ ಮತ್ತೆ ಅಚ್ಚಹಸರೆಲ್ಲ ಒಣಗಿಹೋದ ಅರಣ್ಯದಲ್ಲಿ ನಾನೊಬ್ಬಾಕೆಯೇ ಆದೆ ! ’ ಎಂದು ಕಣ್ಣೀರುತೆಗೆದು ಅತ್ತಳು. ‘ ಹಾಗೆನ್ನಬೇಡ. ವೀಣಾ, ನಾ ತಿರುಗಿ ಬರತೇನೆ ’ ಎಂದು ಅಮೃತನು ಭರವಸೆ ಕೊಟ್ಟನು. ಗಾಡಿ ಬಂದಿತು. ಅಮೃತನು ಒಳಕ್ಕೆ ಹೊಕ್ಕು ಬಾಗಿಲಲ್ಲಿ ನಿಂತನು. ವೀಣೆ ಗಟ್ಟಿಯಾಗಿ ಕೈಕುಲಕಿ ‘ನಮಸ್ತೆ ! ’ ಎಂದು ವಸ್ತ್ರದಿಂದ ಕಣ್ಣೊರಸಿಕೊಂಡಳು. ಗಾಡಿ ಸರಿಯಿತು. ಕಿಡಿಕಿಯಲ್ಲಿ ಅಮೃತನ ಮೋರೆ ಹಣಕಿತ್ತು. ವೀಣೆಯ ಕೈವಸ್ತ್ರ ಒಂದೇಸವನೆ ಅಲಗುತ್ತಿತ್ತು. ಕ್ಷಣಕ್ಷಣಕ್ಕೆ ಅಗಲುತ್ತಿದ್ದ ಹೃದಯಗಳು ಹೆಚ್ಚೆಚ್ಚು ಬೆರೆಯುತ್ತಿದ್ದವು !

## ೬. ಮರಳಿ ಉರಿಯಲ್ಲಿ

ಅಮೃತನು ಗಾಡಿಯ ಬಾಗಿಲಲ್ಲಿ ನಿಂತವನು ಅದೆಷ್ಟೊ ಹೊತ್ತು ಕದಲಲಿಲ್ಲ. ಕಿಡಕಿಯಲ್ಲಿ ಹೊರಚಾಚಿದ ಅರ್ಧ ಮೈಯನ್ನು ಹಾಗೇ ಇರಸಿಕೊಂಡು ನಿಲ್ದಾಣದ ಕಡೆಯನ್ನೂ ಸುತ್ತುಮುತ್ತಿನನೋಟವನ್ನೂ ಎವೆಯಿಕ್ಕದೆ ನೋಡುತ್ತಿದ್ದನು. ಏನೇನೋ ಚಿತ್ರಗಳು ನೆನಹುಗಳು ನುಗ್ಗಿ ಬಂದವು. ವೀಣೆಯ ಮರುಕದ ಮೂರ್ತಿ ಕಣ್ಣ ಮುಂದೆ ಸುಳಿಯಿತು. ಇನ್ನಿದೆಲ್ಲ ಹಳೆಯ ಮಾತಾಯಿತೆಂದೂ ಬಂಗಾಲಕ್ಕೆ ತಾನು ತಿರುಗಿ ಬರುವುದು ಅಸಂಭವವೆಂದು ತೋರಿತು. ಕೂಡಲೆ ಇನ್ನೊಮ್ಮೆ ಆಯುಷ್ಯದಲ್ಲಿ ಮರೆಯಲಾರದ ಸ್ವಾಮಿಯನ್ನವನು—

ಬಡವನು ಸಿಕ್ಕಾಗೊಮ್ಮೆ ಗಬಗಬ ತಿನ್ನುವಂತೆ—ಇದುರಿನ ದೃಶ್ಯವನ್ನು ಕಣ್ಣಲ್ಲಿ ತುಂಬಿಕೊಂಡನು. ತಟ್ಟನೆ ಹಿನ್ನೆಲೆಯಲ್ಲಿ ನುಗಿಸಿದ ಮನೆಯ ನೆನಪು ಮುಂಜಾರಿತು. ಅಪ್ಪ-ಅಪ್ಪ ಅವರ ಗತಿಯೇನಾಗಿರಬಹುದು ಎಂಬ ಯೋಚನೆಯಿಂದ ಕೊರಳುಬ್ಬಿ ಬಂತು. ಏನಾದರೂ ಅನಾಹುತವಾಗಿರಬಹುದೇ ಎನ್ನುವಷ್ಟರಲ್ಲಿ ಮನಸ್ಸುಹಾರಿ ನೇರವಾಗಿ ಮನೆಗೆ ಹೋಯಿತು. ಅಲ್ಲಿ ಸಣ್ಣ ಹುಡುಗರೆಲ್ಲ ಕುಳಿತು ಹೂಯ್ಯೆಂದು ಅಳುತ್ತಿರುವುದು ಕೇಳಿದಂತಾಯಿತು. 'ಅಯ್ಯೋ ಘಾತವಾಯಿತು !' ಎಂದು ತನ್ನಷ್ಟಕ್ಕೆ ಹಲಬುತ್ತ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡನು. ಆ ನೋಟವು ಮುಚ್ಚಿದ ಕಣ್ಣೆದಿರು ಇನ್ನಿಷ್ಟು ನಿಚ್ಚಳವಾಗಿ ಮೂಡಿತು. ಅದನ್ನು ನೋಡಲಾಗದೆ ಕಣ್ಣು ತೆರೆದು ಪೈದಿರುವ ಡಬ್ಬಿಯ ಒಳಭಾಗವನ್ನು ನೋಡಲೆಳಸಿದನು.ಅಸ್ಪಷ್ಟವೇದನೆ ಅವನನ್ನು ಹರಿದು ತಿನ್ನುತ್ತಿತ್ತು. ಆದರೆ ಅದನ್ನು ತೋರಗೊಡಬಾರದೆಂದು ಅವನು ಹವಣಿಸುತ್ತಿದ್ದನು. ಡಬ್ಬಿಯ ಎಲ್ಲ ಕಡೆ ಕಣ್ಣು ಹಾಯಿಸಿ ನೋಡಿದನು. ಕೂಡಲಿಕ್ಕೆ ಎಲ್ಲೆಲ್ಲಿಯೂ ಜಾಗ ಕಾಣಲಿಲ್ಲ. ಕೆಳಗೆ ಮೇಲೆ ಸಾಮಾನಿನ ಥೀಗು. ಜನರೆಲ್ಲಾ ರಿಕ್ಕಾಗಿ ಕೂತಿದ್ದಾರೆ. ಹಾದಾಡುವ ದಾರಿಯಲ್ಲಿಯೂ ಸಾಮಾನು. ಅದರ ಮೇಲೆ ಒಬ್ಬೊಬ್ಬರನ್ನು ಅಂಟಿ ನಿಂತ ಪ್ಯಾಸೆಂಜರರು. ಮೇಲೆ ಕೈಯಲ್ಲಿ ಕಟಿಗೆಯ ಟಿಪರಿ ಹಿಡಿದು ಬಾರಿಸುತ್ತ ಕಿಸರುಬಾಸರು ಹಾಡುತ್ತ ತಿರುಗುವ ತಿರುಕ ಹುಡುಗರು. ಹೆಣ್ಣು ಗಂಡು, ಜಾತಿಕೋತಿ ಯಾವ ಭೇದವಿಲ್ಲದೆ ಹಿಂದುಸ್ತಾನದ ಜನರು ಎಷ್ಟು ಹತ್ತಿಕೊಂಡು ಹೊಂದಿಕೊಂಡು ಇದ್ದಾರೆಂಬುದನ್ನು ನೋಡಬೇಕಾದರೆ ಯುದ್ಧ ಕಾಲದ ರೇಲ್ವೆ ಡಬ್ಬಿಗಳನ್ನು ಮಾತ್ರ ನೋಡಿದರೆ ಸಾಕು ! ಅಲ್ಲಲ್ಲಿ ಆಗಾಗ ದಂಗೆಗಳಾದರೇನು, ದೊಡ್ಡ ದೇಶದಲ್ಲಿ ಅವು ಅನಿವಾರ್ಯ. ಪ್ರಯಾಣ ಕಾಲವೇ ಹಿಂದೀಯರ ಅನ್ಯೋನ್ಯ ಭಾವದ ಒರೆಗಲ್ಲೆಂಬುದನ್ನು ಹಗಲು ರಾತ್ರಿ ತಿರುಗುವ ರೇಲ್ವೆ ಗಾಡಿಗಳಲ್ಲಿ ನೋಡಬೇಕು ! ಕೊನೆಗೆ ಅಮೃತನು ತನ್ನ ಹಾಸಿಗೆಯ ಸುರುಳಿಯನ್ನು ಬಾಗಿಲಿಗೆ ಆನಿಸಿಟ್ಟು ಅದರ ಮೇಲೆ ಕೂತುಕೊಂಡನು. ತರತರದ ಜನವನ್ನೂ ಅವರ ನುಡಿಯನ್ನೂ ಕೇಳುವ ಕುತೂಹಲಿಯಂತೆ ಅವನು ಮೇಲೆ ತೋರಿದರೂ ಅವನ ಲಕ್ಷ್ಯವೆಲ್ಲ ಊರು, ಮನೆಯತ್ತ ಸಾರಿತ್ತು. ತನ್ನನ್ನು ಸಾಕಿ ದೊಡ್ಡವನನ್ನಾಗಿ ಮಾಡಿ ತನ್ನಿಂದ ಸುಖ ಸಮಾಧಾನ ಪಡೆಯುವ ಮೊದಲೇ ತಂದೆ–ತಾಯಿ ಕೈಬಿಟ್ಟು ಹೋಗಿರಬಹುದೆ ? ಅಂಥ ಜಡ್ಡಾದರೂ ಏನಾಗಿರಬಹುದು ? ಊರಲ್ಲಿ ಪಿಡುಗೇನಾದರೂ ಸುರುವಾಗಿರುವುದೇ ? ಈ ಮೊದಲಾದ

ವಿಚಾರಗಳು ಬಾಣದಮೇಲೆ ಬಿಟ್ಟ ಬಾಣದಂತೆ ಬಂದು ತಿವಿದು ಅವನ ಮನಕ್ಕೆ ಗಾಯ ಮಾಡುತ್ತಿದ್ದವು. ಮರು ಕ್ಷಣದಲ್ಲಿ ಈಗೆಲ್ಲಾ ಗುಣವಾಗಿರಬೇಕು. ಸುಮ್ಮನೆ ನಾನು ಹೆದರುತ್ತಿದ್ದೇನೆ ಎಂಬ ಸಮಾಧಾನದ ಮಲಮನ್ನು ಆ ಗಾಯಕ್ಕೆ ತಗುಲಿಸುತ್ತಿದ್ದನು. ನಿಜವಾಗಿ ಆಗಬಾರದ್ದು ಆಗಿದ್ದರೆ ಪ್ರಪಂಚದ ಭಾರವೆಲ್ಲ ತನ್ನ ಮೇಲೆ ಆಕಾಶ ಕಡಿದು ಬಿದ್ದಂತೆ ಬೀಳುವುದಲ್ಲ ಎಂಬ ಎಣಿಕೆ ಹುಟ್ಟಲು ಮೊಗವನ್ನು ಕೆಳಗಿಳಿಸಿ ಕಂಗೆಟ್ಟು ಕೂಡುವನು. ಕೆಲವು ನಿಮಿಷಗಳಲ್ಲಿ ತನ್ನ ಧೈರ್ಯವಾದ, ಮನೋಧೈರ್ಯವೆಲ್ಲ ಹೋಯಿತು; ಬಂಗಾಲದ ವರೆಗೆ ಬಂದು ಕೈಕೊಂಡ ಸೇವಾವ್ರತದಿಂದ ತಾನು ಪಡೆದ ಗಟ್ಟಿತನ ಕರಗಿಹೋಯಿತೇ ಎಂಬ ಪ್ರಶ್ನೆ ಕೇಳುತ್ತ 'ಇಲ್ಲ, ಇಲ್ಲ. ಬಂದದ್ದು ಬರಲಿ. ಅದನ್ನು ಇದಿರಿಸತೇನೆ' ಎಂದು ಗುಣುಗುಣಿಸಿ ಮುಖವನ್ನು ಮೇಲೆತ್ತಿ ತುಟಿಗೆ ತುಟಿ ಹಚ್ಚಿ ಗದ್ದಕ್ಕೆ ಕೈಯಿಕ್ಕಿ ತನ್ನ ನಿಶ್ಚಯದ ಬಿರುಸನ್ನು ಸೂಚಿಸುವನು. ತಾನು ಕೂತ ಜಾಗದಿಂದ ಒಳ್ಳೆಯಸ್ಥಳಕ್ಕೆ ಬಢತಿ ದೊರೆಯಬೇಕಾದರೆ ರಾತ್ರಿಯೆಲ್ಲ ಸರಿಯಿತು. ತೂಕಡಿಕೆ, ಅರನಿದ್ದೆ, ಕನವರಿಕೆಗಳಲ್ಲಿ ರಾತ್ರಿ ಕಳೆದು ಅಂತೂಇಂತೂ ಮುಂಬಯಿಯನ್ನು ಸೇರಿದನು.

ತನ್ನೂರಿಗೆ ಯಾವಾಗ ಹೋದೇನು ಎಂಬ ಆತುರ ಊರು ಹತ್ತಿರ ಬಂದಂತೆ ಹೆಚ್ಚಿತು. ಆದರೆ ಮುಂಬಯಿಯಿಂದ ಹುಟುಗಿಯಕಡೆ ಹೊರಡಬೇಕಾದ ಗಾಡಿಗೆ ಇನ್ನೂ ನಾಲ್ಕೈದು ತಾಸಿತ್ತು. ಈ ಹೊತ್ತನ್ನು ಹೇಗೆ ಕಳೆಯಲಿ ಎಂದವನು ಬಗೆಯುತ್ತಿರುವಾಗ ಕೆಳಮನಿಯ ನೆನಪಾಯಿತು. ಅವನೀಗ ಇದ್ದರೂ ಇರಬಹುದು. ಅವನ ಕಡೆ ಹೋಗೋಣ ಎಂದು ಅಂದುಕೊಂಡನು. ಆದರೆ ಮರುಚಣದಲ್ಲಿ ಕೆಳಮನಿಯನ್ನು ಕಾಣಲು ಮನಸ್ಸೊಪ್ಪಲಿಲ್ಲ. ಇಬ್ಬರ ದೃಷ್ಟಿ ಬೇರೆಯೆಂದು ನಿಚ್ಚಳವಾಗಿದೆ. ಅಂದಮೇಲೆ ಅವನನ್ನು ಕಂಡು ಅವನ ನಗಚಾಟಿಕೆಗೆ ಗುರಿಯಾಗುವುದರಲ್ಲಿ ಏನು ಅರ್ಥ ಎಂದು ನಿರ್ಧಾರ ಮಾಡಿದಂತೆ ಮಾಡಿ, ತನ್ನ ಸಾಮಾನು ಸಹಿತ 'ವಿಟಿ' ಸ್ಟೇಶನ್ನಿನಲ್ಲಿ ತಿಕೀಟು ಕೊಟ್ಟು ಹೊರಬೀಳುವ ಜಾಗ ದಾಟಿ ಬಂದು, ಲೋಕಲ್ ಗಾಡಿಗಳ ವೇಳಾಪತ್ರಿಕೆಯನ್ನು ಹೊಸಬರಂತೆ ನೋಡುತ್ತ ನಿಂತನು. ಸ್ವಲ್ಪಹೊತ್ತು ಕೂಲಿಹುಡುಗರ ಉಪದ್ರವ ಮತ್ತು ಹಾಟೆಲ್ ಏಜೆಂಟರ ಪ್ರಭಾವಿಯಾದ ಪ್ರಚಾರದೊಡನೆ ಗುದ್ದಾಡುವುದರಲ್ಲಿ ಹೋಯಿತು. ಆಮೇಲೆ ಒಂದು ಕಡೆ ಹೋಗಿ ಬೆಂಚಿನ ಮೇಲೆ ಕುಳಿತನು. ಆಗಲೂ ಮನೆಯ ಚಿತ್ರವೇ ಮನದ ಮುಂದೆ. 'ಬೂಟು ಪಾಲೀಸ್' ಮಾಡುವ ಹುಡುಗನೊಬ್ಬನು

ಒಂದು ಗೊತ್ತುಮಾಡುವ ಮೊದಲು ಊಟಿಗೆ ಕೈಹಾಕಲು ಬಾಗಿದನು. 'ಕೂತ ಲ್ಲಿಯೇ ಮಾಡುವೆ, ಬೇಕಾದ್ದು ಕೊಡಿರಿ' ಎಂದು ಪೀಡಿಸಹತ್ತಿದನು. ಈ ಎಲ್ಲ ಕಾಟಕ್ಕೆ ಬೇಸತ್ತು ತನ್ನ ಕಾಲೇಜಿನ ಕಡೆಗೆ ಹೋಗಿ ಬರುವುದೇ ಒಳ್ಳೆಯದೆಂದು ನಿಶ್ಚಯಿಸಿ ಅಮೃತನು ಅಲ್ಲಿಂದ ಎದ್ದು ಹೊರಟನು. ಕೆಳಮನಿ ಬಹುಶಃ ತನ್ನ ಪರೀಕ್ಷೆ ತೀರಿಸಿಕೊಂಡು ಊರಿಗೆಹೋಗಿರಬಹುದು. ಹೋಗದೆ ಇದ್ದರೇನಾಯಿತು, ಅವನನ್ನು ಕಾಣಬಾರದಷ್ಟು ಮನಸ್ಸೇನೂ ಕೆಟ್ಟಿಲ್ಲ. ಹೀಗೆಂದು ವಿಕ್ಟೋರಿಯು ಮಾಡಿಕೊಂಡು ತನ್ನ ಸಾಮಾನುಸಹಿತ ಹಾಸ್ಟೆಲಿಗೆ ಹೋಗುವುದರಲ್ಲಿ ಕೆಳಮನಿ ಅತ್ಯಂತ ಖುಷಿಯಲ್ಲಿ ತನ್ನ ಕೋಣೆಯಲ್ಲಿದ್ದನು. ಮುನ್ನಾದಿನವೇ ಅವನ ಪರೀಕ್ಷೆ ಯೆಲ್ಲ ಮುಗಿದಿತ್ತು. ಪಾಸಾಗುವ ಖಾತ್ರಿಯೂ ಅವನಿಗಿತ್ತು. ಎರಡು ಮೂರು ದಿನವಿದ್ದು ಮಜಾಮಾಡಿ ತನ್ನ ಊರಿಗೆ ಹೋಗಬೇಕೆಂದು ಅವನು ನಿಂತಿದ್ದನು. ಆಕಸ್ಮಾತ್ತಾಗಿ ಅಮೃತನು ಬರಲು ಅವನು ಒಳ್ಳೇ ಹುರುಪಿನಿಂದ ಸ್ವಾಗತ ಮಾಡಿ ದನು. 'ಏನು ಪರೀಕ್ಷಾ ಮುಗಿದದ್ದು ಪಕ್ಕಾ ತಿಳಕೊಂಡು ಬಂದೇನಪ, ನಿರೂರ?' ಎಂದು ಅಣಕವಾಡಿದನು. ಅಮೃತನಿಂದ ಅವನ ಬರವಿನ ಕಾರಣ ತಿಳಿದ ಮೇಲೆ ಕೆಳಮನಿಯು ಅಣಕ ಹಿಂದೆ ಸರಿಯಿತು, ಆದರೆ ಮಾತಿನ ಸರಣಿ ಎಲ್ಲಿ ಹೋಗು ತ್ತದೆ? 'ನಿಮ್ಮ ಅವ್ವ ಅಪ್ಪಗ ಏನು ಘಾಡಿ ಆಗೇದೇಳೊ, ನೀ ಜಪ್ಪಂದರೂ ಬರ ವೊಲ್ಲಿ ಅಂತ ಹೇಳಿ ಜಡ್ಡಿನಬ್ಯಾಟ ಹೂಡಿ ತಾರ ಮಾಡಿದ್ದಾರು.' ಎಂದನು. ಅಮೃ ತನಿಗೆ ಈ ಮಾತು ಸತ್ಯವಂತೂ ತೋರಲೇ ಇಲ್ಲ. ಕೆಳಮನಿಯ ಹುಡುಗಾಟದ ಬುದ್ಧಿಯಬಗ್ಗೆ ಕೆಡುಕೆನಿಸಿತು. ಹೆಚ್ಚಿನೇನೂ ಆಡದೆ 'ಅವರು ಹಾಂಗೇನು ಮಾಡು ವವರಲ್ಲ' ಎಂದಿಷ್ಟೇ ಅಂದು ಮುಗಿಸಿದನು. ಇಬ್ಬರೂ ಹೋಗಿ ಊಟ ಮಾಡಿ ಬಂದರು. ಕೆಳಮನಿ ಪರೀಕ್ಷೆಯ ಸುದ್ದಿಯ ನೂರಾರು ವಿವರಗಳನ್ನು ತಾನು ತೇರ್ಗಡೆಯಾಗುವುದು ಖಾತ್ರಿಯೆಂಬ ಜಂಬದಿಂದ ಹೇಳಿದನು. ನಡುನಡುವೆ ಪಲ್ಲ ವಿಯಂತೆ 'ನೋಡು ನೀನೂ ಇಲ್ಲೇ ಇದ್ದಿಯೆಂದರೆ ಇಷ್ಟೊತ್ತಿಗೆ ಎಲ್ಲಾ ಮುಗಿದು ಹೋಗುತ್ತಿತ್ತು. ಏನ ದೇಶಸೇವಾನೊ ಏನೋ, ಸುಡಗಾಡ ಸಿದ್ದನ ಬೆನ್ನು ಹತ್ತಿ ದಂಗ' ಎಂದು ಜರೆದು ಆಡುತ್ತಿದ್ದನು. ಇದನ್ನೆಲ್ಲಾ ನಿರೀಕ್ಷಿಸಿಯೇ ಇದ್ದುದರಿಂದ ಅಮೃತನು ಅಚ್ಚರಿಗೊಂಡಲಿಲ್ಲ, ಕೆರಳಲೂ ಇಲ್ಲ. ಅವನೊಡನೆ ವಾದ ಹಾಕುವ ಮನಸ್ಸಿಲ್ಲದೆ ಸುಮ್ಮನೆ 'ಹೂ, ಹೌದು.' ಗಳಿಂದ ಮಾತು ಮುಗಿಸುತ್ತಿದ್ದನು. ಇಬ್ಬರೂ ಕೂಡಿ ಸ್ಟೇಶನ್ನಿಗೆ ಹೋದರು. ಮದ್ರಾಸ ಗಾಡಿಯಲ್ಲಿ ಅಮೃತ ಹೇಗೋ ಕೂಡುವ ಮಟ್ಟಿಗೆ ಜಾಗ ದೊರಕಿಸಿದನು. ಡಬ್ಬಿಯ ಹೊರಗೆ ಕೆಳಮನಿ ಮಾತಾ

ಡುತ್ತ ನಿಂತುಕೊಂಡನು. 'ಒಂದು ವರ್ಷಂತೂ ಬಾದಾತು. ಇನ್ನು ಮುಂದಿನ ವರುಷರs ಬಂದು ಅಭ್ಯಾಸಮಾಡಿ ಪರೀಕ್ಷಾಕ ಕೂಡಪ, ಮಿಸ್ಟರ ದೇಭ !' ಎಂದು ಉಪದೇಶ ಮಾಡಿದನು. 'ಆಗಲಿ ನೋಡತೀನಿ' ಎಂದಿಷ್ಟೆ ಅಮೃತನ ಉತ್ತರ. 'ನೋಡೋದೇನದ ಅದರಾಗ ? ನಾ ಹೇಳೋದು ಕೇಳು ಸಿರೂರ, ನಾ ಹೋಗಿ ನಮ್ಮೂರ ಹುಬ್ಬಳ್ಯಾಗ ದವಾಖಾನಿ ತಗೀತೀನಿ. ನೀ ಮುಂದಿನ ವರುಷ ಪಾಸಾಗಿ ಅಲ್ಲಿಗೇ ಬಂದಿಯೆಂದರ ಇಬ್ಬರೂ ಕೂಡಿ ಒಂದು ಹಾಸ್ಪಿಟಲಾ ತೆಗೆಯೋಣ. ನಮ್ಮಪ್ಪನ ಕಡಿಂದ ಬೇಕಾವಷ್ಟು ದುಡ್ಡು ಕೊಡಸತೀನಿ. ಈ ದರಿದ್ರ ದೇಶದಾಗ ಫ್ಲಡ್ಡು,ಫ್ಯಾಮಿನ್ನು ಇವೇನು ಹಗಲೆಲ್ಲ ಇರತಾವ,ಅದರ ಕಾಲಾಗ ನಿನ್ನ ಲುಕ್ಕಾನ ಮಾಡಿಕೋತಾರೇನೋ ಮಳ್ಳ' ಅಮೃತನಿಗೆ ಇನ್ನು ತಡೆಯುವುದು ಸಾಧ್ಯವಾಗ ಲಿಲ್ಲ. ಅವನ ಮುಖ ಗಂಭೀರವಾಯಿತು. ಮಾತು ನೆರೆಯಾಗಿ ನುಗ್ಗಲು ಸಿದ್ಧ ವಾಯಿತು. 'ಕೆಳಮನಿ, ಈ ದೇಶ ದರಿದ್ರ ಹೌದು. ಆದರೆ ಹೊಟ್ಟೆಗಿಲ್ಲದ ಅನ್ನ ದರಿದ್ರರಿಗಿಂತ ನಮ್ಮ ನಿಮ್ಮಂಥ ಹೃದಯದರಿದ್ರರಿಂದ ಅದು ಹೆಚ್ಚು ದರಿದ್ರ ಆಗಿದೆ. ನಾವು ನೀವು ಈ ರೀತಿ ಮಾತಾಡುತ್ತ ಹೋಗುವವರೆಗೆ ಅದರಲ್ಲಿ ಬರ ಗಾಲ, ನೆರೆಹಾವಳಿ, ನೂರಾರು ಯಾತನೆಗಳ ನರಕ ಶಾಶ್ವತವಾಗುವುದು. ನಿನ್ನಂಥ ತರುಣ ಡಾಕ್ಟರರು ಪಟ್ಟಣದಲ್ಲಿ ಇರುವುದಕ್ಕಿಂತ ಹಳ್ಳಿ ಹಳ್ಳಿಗೆ ಹೋಗಿ ದವಾಖಾನೆಗಳನ್ನು ತೆರೆಯಬೇಕು. ನಿಮ್ಮ ಶ್ರೀಮಂತಿಕೆಯನ್ನು ನಾಡಿನ ಸೇವೆಗೆ ಮೀಸಲಾಗಿಸಬೇಕು. ಆದರಿಂದ ನಿಮ್ಮ ಹೊಟ್ಟೆ ತುಂಬುವುದಲ್ಲದೆ ಜನರ ಸೇವೆ ಯೂ ಆಗುತ್ತದೆ' ಅಮೃತನ ಮಾತುಸಾಗಿದಂತೆ ಕೆಳಮನಿಯ ಮೋರೆಯ ಮೇಲೆ ತಿರಸ್ಕಾರದ ಮೆಲುನಗೆ ಮೂಡುತ್ತಿತ್ತು. 'ಹಳ್ಳಿ ? ಸುಡುಗಾಡು ಹಳ್ಳಿಗೆ ಹೋಗಿ ದವಾಖಾನೆ ತೆಗೆಯಲಿಕ್ಕಂತ ನಾವು ಮುಂಬಯಿತನಕ ಬಂದು ಸಾವಿರಾರು ರೂಪಾಯಿ ಹಾಳುಮಾಡಿ ಕಲಿತೆವೇನು? ಹಳ್ಳ್ಯಾಗ ಇರೋದಾದರ ಕುಂಟುಗಾ ಲಿನ ವೈದ್ಯ ಆಗಬಹುದಲ್ಲ.' ಕೆಳಮನಿಯ ಈ ಉತ್ತರದಿಂದ ಅಮೃತ ತುಂಬ ನೊಂದನು. ಅಷ್ಟರಲ್ಲಿ ಗಾರ್ಡನ ಸೀಟಿಯಾಯಿತು. ಗಾಡಿ ಹೊರಡಲನುವಾ ಯಿತು. ಹೆಚ್ಚೇನು ಮಾತಾಡದೆ ಅವನು 'ನಿನ್ನ ಮನಸ್ಸಿನಂತೆ ಆಗಲಿ' ಎಂದನು. ಇಬ್ಬರೂ ರೂಢಿವಶದಿಂದ ಕೈಕುಲುಕಿದರು. ಗಾಡಿ ಹೊರಟಿತು. ಅಮೃತ ಒಳಗೆ ಮುಖ ಹೊರಳಿಸಿ ನಿಟ್ಟುಸಿರೆಳೆದನು. ಕೆಳಮನಿ ಸಿಳ್ಳುಹಾಕುತ್ತ ಹೋದನು.

ಮರುದಿನ ಬೆಳಿಗ್ಗೆ ಹುಟಗಿಗೆ ಇಳಿದು ಅಮೃತನು ಗದಗಿನ ಗಾಡಿಯಲ್ಲಿ ಒಂದಿಷ್ಟು ಕಾಲುಚಾಚಿ ಕೂತುಕೊಂಡನು. ಬರುಬರು ರಾತ್ರಿ ಕೂತಲ್ಲಿಯ ತೂಕಡಿ

ಕೆಯು ಸಿದ್ಧೆಯಾಗಿತ್ತು. ಗಾಡಿಯಲ್ಲಿಯು ವಿಪರೀತ ಗದ್ದಲ, ಒದರಾಟ-ಬಡಿದಾಟ ಇದರ ಸಂಚಾರಿ ಸಂತೆಯಿಂದ ಯಾವಾಗ ಬಿಡುಗಡೆಯಾದೀತು ಎಂದು ಅನ್ನು ತ್ತಿದ್ದನು. ಇನ್ನೇನು ಸಂಜೆಯೊಳಗಾಗಿ ಬಾಗಿಲಕೋಟೆ ಸೇರುವದು ಎಂಬ ವಿಚಾರ ದಿಂದ ಹಗುರೆನಿಸಿತು. ಆದರೆ ಊರು ಹತ್ತಿರ ಬಂದಂತೆ ಅಲ್ಲಿಯ ಭೀಕರ ಚಿತ್ರ ಗಳು ಕಣ್ಮುಂದೆ ನಿಲ್ಲತೊಡಗಿದವು. ಗಾಬರಿಯಾದ ಚಿತ್ತಕ್ಕೆ ಅಮಂಗಲ ಕಲ್ಪನೆ ಗಳು ನುಗ್ಗಿ ಬಂದು ಇದೇ ಸತ್ಯ ಎಂದು ಸಾರುತ್ತ ನಿಲ್ಲುತ್ತವೆ. ಆ ಪ್ರಕಾರ ಏನೋ ಅನಾಹುತವಾಗಿದೆ, ತಂದೆತಾಯಿಯ ಮೋರೆಯನ್ನು ನೋಡುವ ಭಾಗ್ಯ ವಿಲ್ಲ ಎಂದೇ ಭೇನಿಸುತ್ತ ಅವನು ಕಣ್ಣು ಮುಚ್ಚಿ ಬಿದ್ದುಕೊಂಡನು. ಹುಟಗಿ ಯಿಂದ ಗಾಡಿ ಹೊರಟಿತು. ಡಬ್ಬಿಯಲ್ಲಿ ಕೇಳಹತ್ತಿದ ಕನ್ನಡ ಮಾತು ಅಮೃತನ ಕಿವಿಗೆ ಅಮೃತವರ್ಷದಷ್ಟೆ ಸವಿಯಾಗಿ ತೋರಿದವು. ಬಂಗಾಲದಲ್ಲಿದ್ದಾಗ ಒಬ್ಬಾನೊಬ್ಬರು ತನ್ನೊಡನೆ ಕನ್ನಡ ನುಡಿಯನ್ನು ಆಡುವವರಿಲ್ಲ. ತನ್ನ ಮನಸ್ಸಿನ ಕೂಡ ತಾನೇ ಆಡಬೇಕು ಎನ್ನುವ ಪರಿಸ್ಥಿತಿಯಿತ್ತು. ಮುಂಬಯಿ ಯಲ್ಲಿ ಕೆಳಮನಿಯ ಕೂಡ ಕನ್ನಡ ಮಾತಿಗೆ ಮೊದಲಾಯಿತು. ಆದರೆ ಅದು ಕಲಿತ ಯುವಕನ ಇಂಗ್ಲಿಷ್ ಮಿಶ್ರಿತ ಕನ್ನಡ. ಈಗ ಡಬ್ಬಿಯಲ್ಲಿ ಕೇಳುವುದೆಲ್ಲ ಹಳ್ಳಿಗರ, ವ್ಯಾಪಾರಿಗಳ ಅಚ್ಚ ಕನ್ನಡ. ಅದನ್ನು ಕೇಳುತ್ತ ಒರಗಿರುವುದರಲ್ಲಿ ಒಂದು ಬಗೆಯ ಸಮಾಧಾನವೆನಿಸಿತು. ಬಹಳ ದಿವಸದ ಮೇಲೆ ತವರು ಮನೆಗೆ ಬಂದ ಸೊಸೆಯೊಬ್ಬಳು ಎಲ್ಲ ಗುರುತಿನ ಜಾಗಗಳನ್ನು ನೋಡಿ ನೋಡಿ ನಲಿಯುವಂತೆ ತನ್ನ ಮನದುಮ್ಮಳವನ್ನು ಕೆಲಹೊತ್ತು ಮರೆಗೆ ಹಾಕಿ ಅವನು ನಲಿದನು. ಗಾಡಿ ಘಲ್ಲಿಸುತ್ತ ಜೋರಾಗಿ ಸಾಗಿರಲು ಎರಡು ದಿನದ ನಿದ್ದೆ ಒಟ್ಟುಗೂಡಿ ಬಂದಂತೆ ಆಗಿ ಮಲಗಿಬಿಟ್ಟನು. ವಿಜಾಪುರ ಸ್ಟೇಷನ್ನು ಬಂದಿತು. ಪ್ರತಿಯೊಂದು ಡಬ್ಬಿಯಲ್ಲಿ ಜನರು ಸಾಮಾನು ಸಹಿತ ಧುಮುಕಿದರು. ಕೂಗಾಟಕ್ಕೆ ಆರಂಭವಾಯಿತು. ಅಮೃತನ ಡಬ್ಬಿಯಲ್ಲಿ ನಾಲ್ಕಾರು ಜನ ಇಳಿದರೆ ಹತ್ತಿಪ್ಪತ್ತು ಜನ ಹತ್ತಿದರು. ಇನ್ನೂ ಕೆಲವರು ಹತ್ತುವ ಬೇತಿನಲ್ಲಿದ್ದರು. ಪ್ರಶಸ್ತನಾಗಿ ಒಬ್ಬ ಗುಜ್ಜರ ವ್ಯಾಪಾರಿ ಕೂತಿರಲು ಒಳಗೆ ಬಂದು ನಿಂತವರಲ್ಲಿ ಒಬ್ಬನು 'ಏ ಹಿರಿಯ, ಈಟ ಜಾಗಾ ಕೊಡು' ಎಂದು ಅವನ ಬಳಿ ಕೂಡಹೋದನು. ಅದಕ್ಕೆ ಅವನು 'ಇಲ್ಲಿ ಎಲ್ಲ್ಯದ ಜಾಗಾ? ಹೋಗು ಅತ್ತಾಕ ಮಲಗ್ಯಾನ ನೋಡು ಅವನ್ನೆಬ್ಬಿಸು' ಎಂದು ಹೊತ್ತು ಹಾಕಿ ದನು. ಎಲ್ಲರ ಕಣ್ಣು ಅಮೃತನ ಕಡೆ ಹೊರಳಿತು. ಅವನಿನ್ನೂ ನಿದ್ದೆಯ

ಭರದಲ್ಲಿದ್ದನು. ಅವನ ಹತ್ತಿರ ಹೋಗಿ ಮೈತಟ್ಟಿ 'ಏಳೇಳು, ಮಂದಿ ನಿಂತ ಕೊಂಡದ. ತಾ ಆರಾಮಾಗಿ ಬಿದ್ದುಕೊಂಡಾನ' ಎಂದು ನಿಂತವರ ಆ ಪ್ರತಿನಿಧಿ ಎಬ್ಬಿಸಿದನು. ಇದುರಿಗೆ ಕುಳಿತ ಒಬ್ಬ ಪ್ರವಾಸಿ ಸಹಾನುಭೂತಿಯ ತೋರಿಕೆ ಯಿಂದ 'ಈ ಹುಡುಗ ದೂರದಿಂದ ಬಂದಾನ ಕಾಣ್ತದ, ಮಲಗಲಿ ಬಿಡು' ಎಂದನು. 'ದೂರದಿಂದ ಬಂದರೇನಾತು ? ಮನಗಾಕ ಹೇಳೀತೇನು ? ನಾವೂ ರೊಕ್ಕ ಕೊಟ್ಟೇವಿ.' 'ಬರಾಬರಿ, ಮನಗೂದಿದ್ದರ ಸಾಹೇಬರ ಡಬ್ಯಾಗ ಚಾರ್ಜ ಜಾಸ್ತಿ ಕೊಟ್ಟು ಹೋಗನ್ನು.' ಹೀಗೆ ನಿಂತವರೆಲ್ಲ ಬಾಯಿಗೊಂದು ಆಡಿದರು. ಇನ್ನಿಷ್ಟು ಅಲುಗಾಡಿಸಲಾಗಿ ಅಮೃತ ಗಾಢನಿದ್ದೆಯಿಂದೆದ್ದು ಕುಳಿತು 'ಇಲ್ಲಿ ಕೂಡಿರಿ' ಎಂದನು. ಆ ಪ್ರತಿನಿಧಿ 'ಮತ್ತ ? ಕೂಡದಿದ್ದರ ಬಿಡತೀವಂತ ತಿಳದೀಯೇನು? ಹಗಲೊತ್ತು ಯಾಕ ಮನಗಿದ್ಯೊ ಕೊಮರಾಮ ?' ಎಂದು ಬಿರುಸಾಗಿ ಆಡಿದನು. ಅಮೃತನು ಕಣ್ಣುತಿಕ್ಕಿ ಹೊರಗೆ ಹಣಿಕಿ ಸ್ಟೇಷನ್ ಯಾವುದೆಂದು ನೋಡಿದನು. ವಿಜಾಪುರವೆಂದು ತಿಳಿಯಿತು. ತಟ್ಟನೆ ಅವನಿಗೆ ಆ ಗದ್ದಲ ಅರ್ಥವಾಯಿತು; ಆ ಮಾತಿನ ಅರ್ಥವೂ ಆಯಿತು. 'ಯಾಕೆ ಮಲಗಿದ್ದೆ ಹೇಳಲ್ಯಾ ? ನೀವೆಲ್ಲಾ ಬರತೀರಂತ ಗೊತ್ತಿತ್ತು. ಹುಟಗಿಯಿಂದ ನಿಮ್ಮ ದಸಿಂದ ಜಾಗಾ ಹಿಡಕೊಂಡು ಬರಲಿಕ್ಕೆ !' ಅಮೃತನು ಚೇಷ್ಟೆ ಮಾಡಿ ಹೇಳಿದನು. ಅನೇಕರ ಮೋರೆಯ ಮೇಲೆ ನಗೆ ಸುಳಿಯಿತು. ಆ ಗುಜ್ಜರ ವ್ಯಾಪಾರಿಗೆ ಮಾತು ಬಹಳ ಮಾರ್ಮಿಕವೆನಿಸಿತು. 'ಬಾಳ ಹುಶಾರ ಹುಡುಗ, ಭೇಶ್ ಮಾತಾಡಿದಿ' ಎಂದು ಅಮೃತನನ್ನು ಅಭಿನಂದಿಸಿದನು. ನಿಂತವರ ಪೈಕಿ ಇಬ್ಬರು ಮೂವರಿಗೆ ಕೂಡಲು ಸಿಕ್ಕಿತು. ಇನ್ನೂ ಹಲವರು ನಿಂತಿದ್ದರು. ಗಾರ್ಡನ ಸೀಟಿಯಾಯಿತು. ಗಾಡಿ ಬಿಡುವ ಹೊತ್ತಿಗೆ ಅದೇ ಡಬ್ಬಿಯಲ್ಲಿ ಒಂದು ಇಡೀ ಪ್ರಪಂಚವೇ ಒಳನುಗ್ಗಲು ಬಂತು. ಭಾಂಡಿಯ ಚೀಲ, ಬೀಸು ಕಲ್ಲು, ಹಳೆಯ ಟ್ರಂಕುಗಳು, ಹಾಸಿಗೆಯ ಸುರುಳಿ, ಕಸಬರಿಗೆ, ಕೂಸುಕುನ್ನಿ, ಹೆಂಗಸರು ಎಲ್ಲ ಕೂಡಿದ ದಾಳಿ ಬಂತು. ಒಂದರ ಮೇಲೊಂದು ಸಾಮಾನನ್ನು ಒಳಗೆ ಒಗೆಯ ಹತ್ತಿದ್ದಾರೆ. ಒಳಗಿನ ಜನರು ಜೋರಾಗಿ ವಿರೋಧ ಮಾಡು ತ್ತಿದ್ದಾರೆ. 'ನಮ್ಮ ಕಾಲಮ್ಯಾಲ ಒಗಿತೀ ? ನಮ್ಮ ಪ್ರಾಣ ತಗೋತಿ. ನೀ ಏನು ಮನಸ್ಯಾನೋ ದನಾನೊ' ಎಂಬ ಕೂಗುಗಳೆದ್ದುವು. 'ಹೊರಗೋಗಿ' ಎಂದೊಬ್ಬ ಒಳಗಿನವನು ಸೇನಾಪತಿಯ ಹಾಗೆ ಆಜ್ಞೆ ಮಾಡಿದನು. ಅದರಂತೆ ಟ್ರಂಕೊಂದನ್ನು ಎತ್ತಿ ಹೊರಗೊಗೆಯುವಷ್ಟರಲ್ಲಿ ಗಾಡಿ ಸರಿಯಿತು. ಕೂಸು-

ಕುನ್ನಿ ಸಾಮಾನಿನ ಜೋಡಿ ಒಳಗೆ ಜನರ ತೊಡೆಯ ಮೇಲೆ, ಅರ್ಧ ಹತ್ತಿದ ಹೆಂಗಸರು, ಹೊರಗೆ ನಿಂತ ಗಂಡಸರು ಈ ಸ್ಥಿತಿಯಲ್ಲಿ ಗಾಡಿ ಹೊರಡಲು 'ಏ ಬಿದ್ದು ಸಾಯತಾರೋ' ಎಂದು ಯಾರೋ ಕೂಗಿದರು. ದೊಡ್ಡ ಹಾಹಾಕಾರ ವೆದ್ದಿತು. ಗಾರ್ಡನು ಮತ್ತೆ ಸೀಟಿ ಹೊಡೆದು ಕೆಂಪು ನಿಶಾನೆ ತೋರಿಸಿ ಗಾಡಿ ಯನ್ನು ನಿಲ್ಲಿಸಿದನು ; ಆ ಡಬ್ಬಿಗೆ ಬಂದು 'ಕೆಳಗಿಳಿಯಿರಿ' ಎಂದು ಜಬರಿಸಿ ದನು. ಅವರು ಕಾಲುಕಾಲು ಬಿದ್ದರು. ಕೊನೆಗೆ ಸಾಮಾನಿನೊಂದಿಗೆ ಹೇಗೋ ಏನೊ ಮಾಡಿ ಆ ಸಂಸಾರವೆಲ್ಲ ಗಾಡಿಯೊಳಗೆ ಹೊಕ್ಕಿತು. ಆಮೇಲೆ ಗಾಡಿ ಮತ್ತೆ ಹೊರಟಿತು. ಈವರೆಗೆ ಎರಡು ವೈರಿಪಕ್ಷಗಳ ನಡುವೆ ಒಬ್ಬರು ಒಳಗೆ ಇನ್ನೊಬ್ಬರು ಹೊರಗೆ ಆಗಿ ನಡೆದ 'ಕೋಟೆಗಾಳಗ'ವೂ ಈಗ ಕೋಟೆಯೊಳ ಭಾಗದಲ್ಲಿಯೆ ನಡೆಯಿತು. ಯಾಕೆಂದರೆ ವೈರಿಗಳು ಕೋಟೆಯೊಳಗೆ ನುಗ್ಗಿ ಬಿಟ್ಟರು! ಬೈಗಳ ಶಸ್ತ್ರ ಮಸೆದು ಒಳಗಿನ ವೀರರು ಸಜ್ಜಾದರು. 'ನಾ ಸರಪಳಿ ಜಗ್ಗಿ ಗಾಡಿ ನಿಲ್ಲಿಸತೀನಿ' 'ಸೂಳೇಮಕ್ಕಳು ಮನೀನ ಕಿತಗೊಂಡು ಬಂದಾರ' 'ಇದೇನು ಮಾಲಗಾಡಿ ಆತಲ್ಲ' ಇವೇ ಆ ಆಯುಧಗಳು. ಕೂಡಲಿಕ್ಕಂತೂ ಅವರಿಗೆ ಜಾಗವೇ ಇಲ್ಲ. ನಿಂದಿರಲು ಸಹ ಯಾರೂ ಕೊಡವಲ್ಲರು. ಅದೇಕೆ, ಕನಿಕರದ ಮಾತು ಕೂಡ ಒಬ್ಬರ ಬಾಯಲ್ಲಿಲ್ಲ. ಇವರೇನು ಹತ್ತು ಜನ್ಮದ ವೈರಿಗಳೇ ಎನ್ನುವಷ್ಟು ಕ್ರೋಧಾವೇಶ. ಇದನ್ನೆಲ್ಲ ಅಮೃತ ನೋಡಿ ದಂಗು ಬಡಿದಂತಾದನು. ಕಸಿವಿಸಿಪಟ್ಟನು. ತಾ ಕುಳಿತ ಜಾಗದಿಂದೆದ್ದು ಅವರ ಪೈಕಿ ಹೆಂಗಸರಿಗೆ ಅಲ್ಲಿ ಕೂಡಿಸಲು ಹೇಳಿದನು. ಅನೇಕರಿಗೆ ಈ ಉದಾರತನದ ಅರ್ಥ ವಾಗಲಿಲ್ಲ. ಅವರಲ್ಲೊಬ್ಬನು 'ನೀ ಎಲ್ಲಾ ಭಾಳದಿಲ್ದಾರ ಮನಸ್ಯಾ ಇದ್ದೀಯಪ. ಇಲ್ಲಿ ನೋಡು ನಮ್ಮ ಕಾಲಮ್ಯಾಲೆ ಭಾಂಡೀಚೀಲ ಬೀಸುಕಲ್ಲು ಒಗದಾರ. ಇವನ್ನೇನು ನಿನ್ನ ತಲೀಮ್ಯಾಲ ಇಟಗೊಂಡ ನಿಂದರತೀಯೇನು? ನಿಂದರು' ಎಂದನು. ಇನ್ನೊಬ್ಬನು 'ನಮ್ಮ ತೊಡಿಮ್ಯಾಲ ಈ ಕೂಸಿನ್ನ ಕೊಟ್ಟಾರ, ಇದನ್ನಿಷ್ಟು ಬಗಲಾಗ ತಗೋ' ಎಂದನು. ಎಲ್ಲರೂ ನಕ್ಕರು. ಈ ಹೊಣೆ ಗೆಟ್ಟ ನಗೆಯಿಂದ ಅಮೃತನ ಎದೆಯಲ್ಲಿ ಅಲಗನ್ನು ತಿವಿದಂತಾಯಿತು. ಆದರೆ ಅವನೇನು ಅಳುಕಲಿಲ್ಲ. 'ಪ್ರಸಂಗ ಬಂದರೆ ಅದನ್ನೂ ಮಾಡತೀನಿ' ಎಂದಿಷ್ಟೇ ಉತ್ತರ ಕೊಟ್ಟು ಮೊದಲು ಆ ಹೆಂಗಸರನ್ನು ಕೂಡಿಸಿದನು. ಸಾಮಾನಿಡುವ ಫಳಿಯಲ್ಲಿ ಜಾಗವಿದ್ದಲ್ಲೆಲ್ಲ ಸಾಮಾನಿಡುವುದಕ್ಕೆ ಆ ಸಂಸಾರದ ಯಜಮಾನನಿಗೆ ನೆರವು ನೀಡಿ ಎಲ್ಲ ಸರಿಪಡಿಸಿದನು. ಯಜಮಾನನು ಅವನಿಗೆ ಕೃತಜ್ಞತೆಯ

ಮುಖಮುದ್ರೆಯನ್ನು ಬೀರಿದನು. 'ಅಂತೂ ಸಂವರಿಸಿದನರೆಪ.' 'ಅವಗ ಅವರಿಗೆ ನೆಂಟಸ್ತನ ಇರಬೇಕೇಳು' ಎಂದು ಸುಮ್ಮನೆ ಕೂತು ನೋಡುವ ಜನ ರಾಡಿದರು. ವೈರಿಪಕ್ಷದ ವಿರೋಧ ಗಾಡಿ ಮುಂದೆ ಸಾಗಿದಂತೆ ಕಡಿಮೆಯಾಗಿ ಗದ್ದಲವೆಲ್ಲ ಶಾಂತವಾಯಿತು. ಒಬ್ಬರಿಗೊಬ್ಬರು ಪರಿಚಿತರಂತೆ ಜೀವದ ಗೆಳೆಯ ರಂತೆ ಮಾತಾಡಹತ್ತಿದರು. ಎಲೆ-ತಂಬಾಕು, ಹರಟೆ ಸೊಂಪಾಗಿ ಸುರು ವಾದವು. 'ಯಾರೇನು ಕಡಿತನಕ ಸಂಸಾರ ಮಾಡೋದದ ಬಿಡು ಈ ಗಾಡ್ಯಾಗ' ಎಂಬ ವೇದಾಂತದ ಸಮಾರೋಪದಿಂದ ವಿರಸವೆಲ್ಲ ಕೊನೆಗೊಂಡಿತು. ಅಮೃತನು ಕೆಳಗಿಟ್ಟ ಹಾಸಿಗೆ ಸುರುಳಿಯ ಮೇಲೆ ಕುಳಿತು ಪ್ರಪಂಚಸಹಿತ ಬಂದ ಯಜಮಾನನ ಕೂಡ ಬಹಳ ಹೊತ್ತು ಆಡಿದನು. ಅವನೊಬ್ಬ ಕನ್ನಡ ಶಾಲೆಯ ಮಾಸ್ತರನೆಂದೂ ಕಾಳುಕಡಿಯ ದುರ್ಭಿಕ್ಷ ಬಂದ ಕಾರಣ ಕಡಿಮೆ ಪಗಾರದಲ್ಲಿ ವಿಜಾಪುರದಲ್ಲಿ ಪ್ರಪಂಚ ಮಾಡುವುದು ಅತಿ ದುಸ್ತರವಾಗಿ, ವಶೀಲಿ ಹಚ್ಚಿ ಒಂದು ಹಳ್ಳಿಗೆ ವರ್ಗಮಾಡಿಸಿಕೊಂಡು ಹೊರಟಿರುವನೆಂದೂ ತಿಳಿಯಿತು. ಅವನ ದುರ್ದಶೆಯನ್ನು ಕೇಳಿ ಎದೆಗರಗಿ ನಾಡಿನ ತುಂಬೆಲ್ಲ ಹರಡಿದ ಅವನಂಥ ಮಾಸ್ತರರ ಹಾಗೂ ಇತರ ಸಂಸಾರೊಂದಿರ ಸ್ಥಿತಿಯನ್ನು ನೆನೆದು ಅಮೃತನು ದಿಙ್ಮೂಢನಾಗಿ ಕುಳಿತನು.

ಗಾಡಿ ತನ್ನೆಲ್ಲ ಕಸುಸಿಂಟ ಕಾಲೆಳೆಯುತ್ತ ಸಾಗಿತು. ರಣರಣ ಬಿಸಿಲು, ಸುತ್ತೆಲ್ಲ ರುಕ್ಷಭೂಮಿ, ಕರೇ ನೆಲ ಭಣಗುಡುತ್ತಿದೆ. ಹಸಿರೆಂದರೆ ಅಲ್ಲೊಂದು ಇಲ್ಲೊಂದು ಜಾಲಿ, ಬೇವಿನ ಮರ ಮಾತ್ರ.ಹೊಲದಲ್ಲಿ ಬಿತ್ತಿ ಬೆಳೆದ ಚಿಹ್ನವಿಲ್ಲ. ದಂಟಿನ ಕೊಯ್ಲಿಲ್ಲ, ಮೇವಿನ ಗೂಡಿಲ್ಲ. ಬಿಸಿಲಲ್ಲಿ ಅಂಗಾತಾಗಿ ಒರಗಿಕೊಂಡು ಬಿಕ್ಷೆ ಬೇಡುತ್ತಿರುವ ತಿರುಕಿಯ ಎದೆಯಂತೆ ಬೆಳವಲದ ನೆಲ ತೆರವಾಗಿ ತೋರು ತ್ತಿತ್ತು. ಗಾಡಿಯ ಒಳಗೆ ಕಿಕ್ಕಿರಿದ ಸಂದಣಿಯಲ್ಲಿ ಜನಕ್ಕೆ ಉಸಿರುಕಟ್ಟಿದಂತಾ ಗಿದೆ. ಶಕೆ ತಾಳಲಾರದೆ ಎಲ್ಲರೂ ಉಶ್ಶೆಂಬ ಜಪಮಾಡುತ್ತಿದ್ದಾರೆ. ತಂತಮ್ಮ ಬಟ್ಟೆಯಿಂದ ಗಾಳಿ ಹಾಕಿಕೊಳ್ಳುತ್ತಿದ್ದಾರೆ.ಅಮೃತನ ಡಬ್ಬಿಯಲ್ಲಿ ಆ ಮಾಸ್ತರನ ಮಕ್ಕಳು ಸಾಕಷ್ಟು ಕಿಡಿಗೇಡಿಯಾಗಿದ್ದವು. ಕಿಡಿಕಿಯ ಹತ್ತಿರ ಕೂಡಬೇಕೆಂಬ ಅವುಗಳ ಹಟಕ್ಕಾಗಿ ಮಾಸ್ತರನಿಗೂ ಒಬ್ಬ ಪ್ರವಾಸಿಗೂ ನಿಷ್ಕಾರಣವಾಗಿ ಚಕ ಮಕಿಯಾಯಿತು. ಆಮೇಲೆ ಮಾಸ್ತರನ ಎರಡು ವರ್ಷದ ಮಗು ಕುಡಿಯಲಿಕ್ಕೆ ನೀರು ಬೇಕೆಂದು ಹಲುಬಹತ್ತಿತು. ಯಾರೂ ಮೊದಲು ಅದನ್ನು ಲಕ್ಷಿಸಲಿಲ್ಲ. ಅದರ ಹಲುಬು ಇನ್ನೂ ಜೋರಾಯಿತು. 'ಇಷ್ಟೆಲ್ಲಿ ನೀರ ಸಿಗತಾವ ? ಟೇಷನ್

ಬರಲಿ' ಎಂದು ತಾಯಿ ಸಮಾಧಾನ ಮಾಡುವ ಯತ್ನಮಾಡಿದಳು. ಅದು ಕೇಳ ಲಿಲ್ಲ. ಕೊನೆಗೆ ಸಿಟ್ಟಿಗೆದ್ದು ಒಂದೇಟು ಕೊಟ್ಟಳು.ಆಯಿತು, ಎಲ್ಲರ ಕಿವಿ ಹರಿಯು ವಂತೆ ಅದು ಹೊಯ್ಕೊಂಡು ಅಳಹತ್ತಿತು. 'ಯಾಕ ಅಳಸತೀರಿ, ಏನು ಗಂಟುಬಿದ್ದ ರಪ ನಮಗಿನರು' ಎಂದು ಮುಂತಾದ ಪುಷ್ಪಗಳು ಬೇರೆ ಬೇರೆ ದಿಕ್ಕಿನಿಂದ ಅವರ ಮೇಲೆ ಬೀಳಹತ್ತಿದವು. ಅಮೃತನಿಗೆ ಇದೆಲ್ಲ ನೋಡಿ ಸಂಕಟವಾಯ್ತು. 'ಯಾರರೆ ನಿಮ್ಮ ಹತ್ತರ ಒಂದಿಷ್ಟು ನೀರಿದ್ದರ ಕೊಡರೆಪ' ಎಂದು ಎದ್ದು ನಿಂತು ಅಪೀಲ್ ಮಾಡಿದನು. ಯಾರೂ ಮಾರುಗೊಡಲಿಲ್ಲ. ಸ್ವಲ್ಪ ಹೊತ್ತಿನ ಹಿಂದೆ ಗುಜ್ಜರ ವ್ಯಾಪಾರಿಯು ಒದ್ದೆ ಹಚ್ಚಿದ ತನ್ನ ತಿರುಗಣಿ ತಂಬಿಗೆಯಿಂದ ಸ್ವಲ್ಪ ನೀರುಕುಡಿದು ಕೆಳಗೆ ಇಟ್ಟದ್ದು ಅಮೃತ ನೋಡಿದ್ದನು. 'ನಿಮ್ಮ ತಂಬಿಗೆಯೊಳಗಿನ ನೀರು ಸ್ವಲ್ಪ ಕೊಡತೀರ್ಯಾ ಸೇಠಜಿ ?' ಎಂದು ವಿನಯದಿಂದ ಕೇಳಿದನು. ಅವನು 'ಅದ ರೊಳಗೇನಿಲ್ಲ' ಎನ್ನುವಂತೆ ದೂರಿಂದ ಸನ್ನೆಮಾಡಿದನು. 'ನೋಡಿರಿ ಸ್ವಲ್ಪ ಇರ ಬಹುದು.' ಅಮೃತನು ಗಂಟೇಬಿದ್ದನು. ಎರಡು ಮೂರು ಸಾರೆ ಕೇಳಿದ ಮೇಲೆ 'ಸ್ವಲ್ಪ ಅವಾಪ ನಮಗ ಬೇಕು' ಎಂದು ಅವನಿಂದ ಸೂತ್ರಬದ್ಧವಾದ ಉತ್ತರ ಬಂದಿತು, 'ಸೀತಿಮನಿಯೊಳಗೆ ನಿಮಗೆ ನಾನು ಕೃಷ್ಣಾನದಿಯ ನೀರು ತಂದು ಕೊಡತೀನಿ. ಈಗ ಕೂಸು ನೀರಡಸಿ ಸಾಯ್ತದ ಕೊಡಿರಿ' ಎನ್ನಲು ಮೋರೆ ಗಂಟುಹಾಕಿ ಜುಕ್ಕಜುಲುಮಿಯಿಂದ ತಾನೇ ತಂಬಿಗೆಯೆತ್ತಿ ಒಂದರ್ಧ ವಾಟಗ ನೀರನ್ನು ಅಳಿದು ಕೊಡುವವನಂತೆ ಹಾಕಿಕೊಟ್ಟನು. ಆಗ ಸಹಜವಾಗಿ ಹತ್ತಿರ ಕೂತ ಕುಚೋದ್ಯಗಾರನೊಬ್ಬನು ಹಣಿಕಿ ನೋಡಿ 'ತಂಬಿಗೆ ತುಂಬೇದಲ್ಲ ಸೇಠಜಿ !' ಎಂದು ಆಡಿದನು. ಎಲ್ಲರೂ ಸೇಠಜಿ ಬಹಳ ಪಕ್ಕಾ ಮನುಷ್ಯನೆಂಬಂತೆ ಸನ್ನೆ ಮಾಡಿ ನಕ್ಕರು. ಹೀಗೆ ನೀರಿನ ಸಣ್ಣ ಪ್ರಕರಣ ಮುಗಿಯಿತು. ಸೀತಿಮನಿ ಬಂದಿತು. ಅನೇಕರು ಇಳಿದು ನಳಕ್ಕೆ ಮುತ್ತಿಗೆ ಹಾಕಿ ಗಟಗಟ ನೀರು ಕುಡಿದು ಬಂದರು. ಗಾಡಿಯೂ ನೀರು ಕುಡಿಯಲು ಹತ್ತಾರು ಮಿನಿಟು ನಿಂತಿತು. ಬಾಳೆ ಹಣ್ಣಿನ ಬುಟ್ಟಿ ತಗೊಂಡು ಮಾರಾಡುತ್ತ ಒಬ್ಬ ಹೆಂಗಸು ಬಂದಳು. ಅಮೃತನಿಗೆ ಮುಂಜಾವಿನಿಂದ ಹೊಟ್ಟೆಗೆ ಏನೂ ಇರಲಿಲ್ಲ. ತೆಲಗಿ ಸ್ಟೇಶನ್ನಿನಲ್ಲಿ ಊಟ ಮಾಡಲು ಮನಸ್ಸು ಬರಲಿಲ್ಲ. ಊರಕಡೆ ಧ್ಯಾಸ ಅವನಿಗೆ ಹತ್ತಿಬಿಟ್ಟಿತ್ತು. ಇಲ್ಲಿ ಮಾತ್ರ ಬಾಳೆಹಣ್ಣಾದರೂ ತಿನ್ನಬೇಕೆಂದು ಅನಿಸಿತು. ಹೇಗೆಂದು ಕೇಳಿ ದನು. ಆಣೆಕ್ಕೆರಡೆಂದು ಹೇಳಿದಳು. 'ಅಣೆಕ್ಕೊ ದುಡ್ಡಿಗೊ' ಎಂದು ಕೇಳಿ ದನು. ಎಲ್ಲೀದರೀ ಎಪ್ಪ, ಕೆಟ್ಟ ಕಾಲ ಬಂತು. ಹಂಗ ನೋಡಿದರ ಅಣೆಕ್ಕ

ಒಂದು ಕೊಡಬೇಕು' ಎಂದವಳು ಸ್ವರ ಎಳೆದಳು. ಹಿಂಗs ? ಉಪಕಾರಾತು ಬಿಡು' ಎಂದು ಆಣೆಕೊಟ್ಟು ಹಣ್ಣು ತಗೊಂಡು ಒಣಗಿ ಅರ್ಧ ಕರ್‍ರಗಾದ ಒಂದು ಹಣ್ಣು ಸುಲಿದು ಹೇಗೋ ಬಾಯಿಯಲ್ಲಿ ಹಾಕಿಕೊಂಡನು. ಗಾಡಿ ಸೀತಿಮನಿ ಬಿಟ್ಟಿತು. ಇನ್ನೊಂದು ಹಣ್ಣು ನೋಡಿ ಅವನ ಹತ್ತಿರ ಕುಳಿತ ಒಕ್ಕಲಿಗನೊಬ್ಬನು 'ಹೆಂಗ ತಗೊಂಡಿರಿ ? ಆಣೆಕ್ಕೆಡ್ಡು ?' ಎಂದು ಆಶ್ಚರ್ಯ ಬಟ್ಟು 'ಎಂತಾ ದುಷ್ಕಾಳ ಬಂತರಿ ಎಪ್ಪ. ಕಾಳುಕಡಿ ಸಿಗದಂಗಾತು. ಹಣ್ಣಿ ನೈತ ತಿನ್ನಾಕಿಲ್ಲ. ಗಿಡದ ತೊಪ್ಪಲು ತಿಂದು ಬದುಕಬೇಕಾತು ಮನಸ್ಯಾ ಕುರಿ ಹಂಗ' ಎಂದು ಕಳವಳದಿಂದ ಆಡಿದನು. 'ಮತ್ತs ? ನಾವೆಲ್ಲ ನಮ್ಮ ದೇಶ ದಾಗ ಕುರಿಹಂಗ ಇದ್ದೀವಂತs ನಮ್ಮ ಗತಿ ಹಿಂಗಾಗೇದ' ಅಮೃತನು ತನ್ನ ರಾಷ್ಟ್ರೀಯ ಭಾಪಿನ ಭಾವನೆಯನ್ನು ಅವನ ಭಾಷೆಯಲ್ಲಿ ವ್ಯಕ್ತಗೊಳಿಸಿದನು. ಅವನು ಆ ಮಾತಿಗೆ ಬಹಳ ಮೆಚ್ಚಿ 'ಕರೇವರಿ ಎಪ್ಪ. ನೀವೆಂಬೂ ಮಾತ ಭಾಳ ಕರೇವರಿ' ಎಂದು ತಿರುತಿರುಗಿ ಕೊಂಡಾಡಿದನು. ಕುರಿತನವನ್ನು ಬಿಡಲಿಕ್ಕೆ ಆಗದ ನಮ್ಮ ಜನಕ್ಕೆ ಈಗ ಅದರ ಅರಿವಾದರೂ ಉಂಟಾಗಿದೆ ಎಂದು ಅಮೃತನು ತನ್ನಲ್ಲಿ ಎಂದುಕೊಂಡನು. ಈವರೆಗೆ ಸುಮ್ಮನಿದ್ದ ಮಾಸ್ತರನು ಬಾಯಿ ಬಿಚ್ಚಿ ದನು. 'ನೀವೆಲ್ಲಾ ಕುರಿ ಅಂತ ನಮ್ಮ ಮಂದಿನ್ನ ಬೈಯ್ಯತೀರಿ. ಪುಢಾರಿ ಮಂದೀನೂ ಲೆಕ್ಚರದಾಗ ಇದನ್ನs ಹೇಳತಾರ. ಏನರ ಮಾಡಬೇಕು ಹೇಳರಿ ? ಈಗ ವಿಜಾಪುರಕ್ಕೆ ಎಂದಿಲ್ಲದಂತಾ ಬರಗಾಲ ಬಂದುಬಿಟ್ಟದ. ಮಳಿ ಹೋತು, ಬೆಳಿ ಇಲ್ಲ. ತಿಲ್ಲಿಕ್ಕೆ ಜ್ವಾಳಿಲ್ಲ, ಕುಡೀಲಿಕ್ಕೆ ನೀರಿಲ್ಲ. ಕುರಿ ಹೋಗಿ ಹುಲಿ ಆದರ ಏನ ಆಗ್ತದ ಈಗ ? ಏನಾದರೂ ಹೊಟ್ಟೆಗಿಲ್ಲದ ಸಾಯೋದs ಅಲ್ಲ ?' ಎಂದು ತನ್ನ ಸ್ವಂತ ಬಾಳಿನ ಕಷ್ಟದಿಂದ ಹೊರಹೊಮ್ಮಿದ ಭಾವಗೀತೆಯಂತೆ ಮಾತಾಡಿ ದನು. 'ಅದ್ಯಾಕ ಸಾಯಬೇಕು ? ಕಾಳ ಸಿಗದಿದ್ದರ ಅಂಗಡಿಗೆ ಮುತ್ತಿಗೆ ಹಾಕಿ ಸುಲಕೊಂಡು ಬರಬೇಕು. ರೊಚ್ಚಿಗೆದ್ದ ಹುಲಿಯಂಥ ಮನಸ್ಯಾರು ಇನ್ನೇನು ಮಾಡತಾರ ?' ಅಮೃತ ಆವೇಶದಿಂದ ಉತ್ತರ ಕೊಟ್ಟನು. 'ಬರಾಬರಿ. ಮನ್ನೆ ಕೇಳಲಿಲ್ಲs, ಇಲಕಲ್ಲಾಗ ಕಾಳಿನ ಅಂಗಡಿಯೆಲ್ಲ ಲೂಟ ಮಾಡಿದರಂತ ಬಡ ಮಂದಿ !' ಅಲ್ಲಿಯೇ ಕುಳಿತ ಜರದ ರುಮಾಲು ಸುತ್ತಿದ ಮನುಷ್ಯನೊಬ್ಬನು ಬೆಂಬಲ ಕೊಟ್ಟನು. ಅವನೊಬ್ಬ ಖಣ ಮಾರುವ ವ್ಯಾಪಾರಿಯೆಂದು ಅವನ ಹತ್ತಿ ರದ ಗಂಟಿನಿಂದಲೂ ಅವನ ಮುಂಚಿನ ಮಾತಿನಿಂದಲೂ ಗೊತ್ತಾಗುವಂತಿತ್ತು. ಅಮೃತನು ಮಾಸ್ತರನ ಕಡೆ ತಿರುಗಿ 'ನೋಡಿರಿ ಮಾಸ್ತರ. ಹೀಗಾಗಳೆ ನಮ್ಮ

ಜೆಲ್ಲಾದಾಗ ಮಂದಿ ನಾ ಹೇಳಿದ್ದು ಮಾಡಲಿಕ್ಕೆ ಹತ್ಯಾರ. ಹಿಂಗ ಬಿಟ್ಟರ ಯಾವ ಸಾವಕಾರರ ಮನೀ ಅಂಗಡಿ ಸುರಕ್ಷಿತ ಉಳಿಯುವದಿಲ್ಲ. ಕ್ರಾಂತಿ ಆಗತದ ಕ್ರಾಂತಿ!' ಎಂದು ಭವಿಷ್ಯ ಹೇಳುವಂತೆ ಆಡಿದನು. ಹೀಗೆ ಹೊರಗೆ ಹೇಳುತ್ತಿದ್ದರೂ ಇದರಿಂದ ದಂಗೆಗಳೇಳಬಹುದೆಂದೂ ಗಾಂಧಿಯ ಅಹಿಂಸೆಯ ತತ್ವ ಎಲ್ಲಿಯೋ ಅಡಗಿ ಹೋಗಬಹುದೆಂದೂ ಅವನ ಒಳಮನವು ಅಳುಕಿತು. ಆದರೆ ಹೊಟ್ಟೆಯ ಸಂಕಟದ ಮುಂದೆ ಹಿಂಸೆ-ಅಹಿಂಸೆಯ ವಾದ ನಡೆಯಲಾರದು ಎಂದವನು ತನ್ನಷ್ಟಕ್ಕೆ ಅಂದುಕೊಂಡನು. ಅವನ ಮಾತು ಕೇಳಿದೊಡನೆ ಖಣದ ವ್ಯಾಪಾರಿ ಗುಜ್ಜರವನನ್ನು ಕುರಿತು 'ನೋಡಿರಿ ಸೇಠಜಿ, ನಿಮ್ಮ ಸುತ್ತು ಬಂತು ಬಡವರ ದಾಳಿ' ಎಂದ. ಅದರಿಂದ ಆ ಗುಜ್ಜರವನು ಏನೂ ಪರಿಣಾಮವಾಗದಂತೆ ನಿರ್ವಿಕಾರವಾಗಿ 'ನಮಗೇನು ಹೆದರಿಕೆ ಅದರದು ? ನಮ್ಮದು ಕಾಪಡದುಕಾನ ಐತಿ. ಬಡಮಂದಿ ನಮಗೇನು ಮಾಡತಾವ?' ಎನ್ನುತ್ತ ಬಾಯಿಯಲ್ಲಿ ತನ್ನ ಬೆಳ್ಳಿ ಡಬ್ಬಿಯಿಂದ ಸುವಾಸಿಕ ಅಡಿಕೆಪುಡಿಯನ್ನೆತ್ತಿ ಹಾಕಿಕೊಂಡನು. 'ನಮಗರ ಯಾ ತರ ಹೆದರಿಕೆ ಬಿಡಿರಿ! ಖಣ ತಗೊಂಡು ಊರೂರಿಗೆ ಹೋಗಿ ಮಾರಿ ಹೊಟ್ಟೀ ತುಂಬಿಕೊಳ್ಳತೀವಿ' ಎಂದು ಖಣದ ವ್ಯಾಪಾರಿಯೂ ತನ್ನ ನಿಶ್ಚಿಂತೆಯನ್ನು ವ್ಯಕ್ತಪಡಿಸಿದನು. ಅಮೃತನಿಗೆ ಅವರಿಬ್ಬರ ಸಂತುಷ್ಟಿಯನ್ನು ಕಂಡು ಅಚ್ಚರಿಯಾಯಿತು. 'ಈವತ್ತ ಹೊಟ್ಟೆಗೆ ನಾಕುತುತ್ತು ಕೂಳಿಲ್ಲ, ನಾಳೆ ಮೈಮ್ಯಾಲ ತುಣಕ ಅರಿವಿಲ್ಲ. ಹಿಂಗಾತಂದರ ನಿಮ್ಮದೆಲ್ಲಾ ಹಾರಾಟ ಗೊತ್ತಾಗತದ.' ಎಂದವರನ್ನು ಕೆಣಕಿದನು. ಅದಕ್ಕೆ ಸೇಠಜಿ ತೀರ ಠಣಠಣಿತವಾದ ಉತ್ತರ ಕೊಟ್ಟನು. 'ಅರವಿ ಕೊರತಿ ನಾವಿರೋತನಕ ಎಂದೂ ಆಗಾಣಿಲ್ಲ. ಬೇಡಿದಾಗ ಬೇಕಾದಟು ನಾವು ಕೊಡತೇವು' 'ಹೌದು, ನೀವು ಬೇಡಿದಷ್ಟು ರೂಪಾಯಿ ಮಾತ್ರ ತಂದು ಸುರವಬೇಕು' ಎಂದು ಮಾಸ್ತರರು ನಡುವೆ ವ್ಯಂಗ್ಯವಾಡಿದರು. ಡಬ್ಬಿಯೆಲ್ಲ ಖೊಳ್ಳೆಂದು ನಕ್ಕಿತು. 'ಛೀ ನಾವು ಹಂಗ ಮಾಡಾಕಿಲ್ಲ. ನಾಕ ಮಂದಿ ಏನ ಹೇಳತಾರ ವಾಜಮಿ ಧಾರಣಿಗೆ ಕೊಡತೇವ್. ಕಿರಾಣಿ ಅಂಗಡಿ ಬೇಪಾರಲೋಕ ಭಾಳ ಬೆರಕಿ ಇರತಾವ್. ಇದಿರಿಗೆ ಹೋಗಿ ಕೇಳಿದರೆ ನಮ್ಮಂಗಡಿಯೊಳಗ ಅಕ್ಕಿ ಇಲ್ಲ, ಜ್ವಾಳ ಇಲ್ಲ ಅಂತಾವ. ಮರೀಗೆ ಹೋಗಿಕ್ಯಾಸ ಭರಪೂರ ಪೈಸಾ ಕೊಟ್ಟರ ಚೀಲಗಟ್ಟಲೆ ಕೊಡತಾವ್.' ಖಣದ ವ್ಯಾಪಾರಿ 'ಅಗದಿ ಖರೇವು' ಎಂದು ಇದಕ್ಕೆ ತನ್ನ ಸಮ್ಮತಿಯನ್ನು ಸೂಚಿಸಿದನು. ಇತ್ತೀಚೆ ಆಗುತ್ತಿರುವ ಕಲ್ಪನಾತೀನ ಲಾಭದಿಂದ ಅವನ ಗಳಿಕೆ ಸಾವಿರದಿಂದ ಎಣಿಸು

ವಷ್ಟಾಗಿತ್ತು. ಸನಿಯದಲ್ಲಿ ಸ್ವತಂತ್ರವಾಗಿ ಕಪ್ಪಡದಂಗಡಿಯೊಂದನ್ನು ತೆರೆ ಯುವ ಮಹತ್ವಾಕಾಂಕ್ಷೆ ಅವನಲ್ಲಿ ತಲೆದೋರಿತ್ತು. ಅದಕ್ಕಾಗಿ ಸೇಡಜಿಯಂಥ ಶ್ರೀಮಂತ ವ್ಯಾಪಾರಿಗಳ ಸಹಾಯವು ಅವನಿಗೆ ಅವಶ್ಯವಾಗಿತ್ತು. ಅಂತೂ ಅವರಿಬ್ಬರೂ ಕೂಡಿ ಕಾಳಿನ ವ್ಯಾಪಾರವನ್ನು ಟೀಕಿಸುವುದರಲ್ಲಿ ಒಂದಾದರು. ಜನರು ಕಾಳಿಲ್ಲದೆ ಸಾಯುವಾಗ ಒಳಗೆ ಬಚ್ಚಿಟ್ಟು ಅವರು ಹೇಗೆ ಲಾಭದ ಆಶೆ ಯಿಂದ ಕಾಳಾಬಜಾರವನ್ನು ಮಾಡುತ್ತಿರುವರೆಂಬುದನ್ನು ಸೋದಾಹರಣವಾಗಿ ಅವರು ಹೇಳಿದರು. ಅಮೃತನಿಗೆ ಅದನ್ನು ಕೇಳಿ ಎದೆ ಬೆಂದು ಹೋಯಿತು. ಆದರೆ ಇವರೆಷ್ಟು ಮಟ್ಟಿಗೆ ಧರ್ಮರಾಜರು ಎಂಬ ಯೋಚನೆ ಅವನ ತಲೆಯಲ್ಲಿ ಸುಳಿಯುತ್ತಲೇ ಇತ್ತು. ಮಾಸ್ತರರು ಕೊನೆಗೆ ತಮ್ಮ ಅನುಭವಿಕ ದೃಷ್ಟಿಯಿಂದ ಕೊಂಕುಮಾತಾಡಿ ಅದನ್ನು ವ್ಯಕ್ತಪಡಿಸಿಯೇಬಿಟ್ಟರು. 'ತಿಳೀತು ಬಿಡಿರಿ ಸೇಡಜಿ. ಭಾಳೇನು ಫರಕಿಲ್ಲ. ಒಬ್ಬರು ನರಿಯಾದರ ಇನ್ನೊಬ್ಬರು ಹೆಗ್ಗಣ !' ಎಲ್ಲರೂ ನಕ್ಕರು. ಇಷ್ಟರಲ್ಲಿ ಕಡ್ಲಿಮಟ್ಟಿ ಸ್ಟೇಶನು ಬಂತು. ಮಾಸ್ತರರು ತಮ್ಮ ಪರಿವಾರ, ಸಾಮಾನು ಇಳಿಸಿಕೊಂಡು ಅಮೃತನಿಗೆ ಕೃತಜ್ಞತೆಯಿಂದ ನಮಸ್ಕಾರ ಮಾಡಿ ಹೊರಟುಹೋದರು.

ಗಾಡಿ ಕಡ್ಲಿಮಟ್ಟಿಯನ್ನು ಬಿಟ್ಟ ಕೂಡಲೆ ಇನ್ನು ಮುಂದಿನ ಸಿಲ್ಕನೆ ಬಾಗಿಲುಕೋಟೆಯೆಂದು ನೆನಸಿದಾಕ್ಷಣ ಅಮೃತನ ಎದೆ ಧಸಕ್ಕೆಂದಿತು. ತಡೆಹಿಡಿದ ಭಯಭೀತಿಗಳೂ ಯೋಚನೆಗಳೂ ಕೊಸರಿಕೊಂಡ ಕರುವಿನಂತೆ ಟುಣುಪುಣಿಸ ಹತ್ತಿದವು. ಅವನು ಅವನ್ನು ತಡೆಯುವ ಬದಲು ಇನ್ನಿಷ್ಟು ಅವಕ್ಕೆ ಇಂಬು ಕೊಟ್ಟನು. ಅವನ ಮುಖ ಗಂಭೀರವಾಯಿತು. ಮಾತು ನಿಂತುಹೋಯಿತು. ಹತ್ತಿರ ಕುಳಿತಿದ್ದ ರೈತನು ಏನೇನೋ ಅಡ್ಡ ಪ್ರಶ್ನೆಗಳನ್ನು ಕೇಳಿದರೂ ಅವನಿಂದ ಉತ್ತರ ದೊರೆಯಲಿಲ್ಲ. ಘಟಪ್ರಭಾ ನದಿ ಬಿಸಿಲಿನಲ್ಲಿ ಬೀಸಿದ ಕಠಾರಿಯಂತೆ ಹೊಳೆಯಿತು. ಬಾಗಿಲುಕೋಟೆ ಊರಿನ ಹೊರಭಾಗ ಕಾಣಹತ್ತಿತು. ಸ್ಟೇಶನು ಹತ್ತಿರ ಬಂದಂತೆ ಯಾರಾದರೂ ಅಲ್ಲಿಗೆ ಬಂದು ಅನಾಹುತದ ಸುದ್ದಿಯನ್ನು ಹೇಳಿ ಬಿಡುವರೇನೊ ಎಂಬ ಡವಡವಿಕೆ ಹೆಚ್ಚಾಯಿತು. ಗಾಡಿ ಸ್ಟೇಶನಿನಲ್ಲಿ ನಿಂತು ಗದ್ದಲದ ಬಾಯಿಗೆ ತುತ್ತಾಯಿತು. ಅದರಲ್ಲಿ ತನ್ನ ಗಂಟಿನೊಡನೆ ಕೆಳಗೆ ಇಳಿಯು ಲಿಕ್ಕೇ ಅವನಿಗೆ ಎರಡು ಮಿನಿಟು ಹಿಡಿಯಿತು. ಇಳಿದ ಮೇಲೆ ಅತ್ತಿತ್ತ ನೋಡುತ್ತ ತುಸು ನಿಂತನು. ಯಾರೂ ಗುರುತಿನವರು ಕಾಣಲಿಲ್ಲ. ಕಡೆಗೆ ಅಲ್ಲಿಂದ ನಡೆದು ನಿಲ್ದಾಣದ ಹೊರಗೆ ಬಂದಾಗ, ಜನಜಂಗುಳಿಯ ಕೇಸರಬಾಸರ

ಕೂಗಾಟವು ಕಲಮಲಗೊಂಡ ಅವನ ಎದೆಗೆ ಬರೆಯೆಳೆದಂತಾಯಿತು. ಒಬ್ಬ ಟಾಂಗಾದವನಂತೂ ಓಡಿ ಬಂದು ಇವನ ಸಾಮಾನುಗಳನ್ನು ಕಸಗೊಂಡು 'ಬರ್ರಿ ರಾವಸಾಬ, ನನ್ನ ಬಿಟ್ಟು ಎಲ್ಲಿಗೆ ಹೊಕ್ಕೀರಿ ? ' ಎಂದನು. 'ಹಿಂಗ್ಯಾಕ ಮಾಡತಿ ನಿಂದರು' ಎಂದು ಅವನೆಂದರೆ 'ಗುರ್ತಿಲ್ಲದವರ ಗತಿ ಹೀಗ್ಯಾಕ ಮಾಡತೀರಿ ರಾವಸಾಬ ? ಪರೀಕ್ಸಾ ಮುಗೀತೇನು ? ನಿಮ್ಮಪ್ಪವರು ಮುನಸಿಪಾಲಿಟಿ ನೌಕರಿ ಮಾಡಾಕ ಹತ್ತಿಂದ ನಿಮ್ಮನಿ ಬಾಡಿಗಿ ನಾ ಮಾಡತೀನು. ನೀವು ಈಟು ಹುಡುಗ ಇದ್ದಾಗ ನಿಮ್ಮನ್ನ ಟಾಂಗಾದಾಗ ತಿರಗ್ಯಾಡಸೀನಿ' ಎಂದು ಮುಂತಾಗಿ ಲೆಕ್ಚರು ನಡೆಸಿದನು. ಅವನನ್ನು ನಿರುಕಿಸಿ ನೋಡಿ 'ನೀ ನಬೀಸಾ ಅಲ್ಲs !' ಎಂದು ಅಮೃತನು ಗುರುತು ಹಿಡಿದು ಟಾಂಗಾದಲ್ಲಿ ಕೂತುಕೊಂಡನು. ಅವನಿಂದಾದರೂ ಮನೆಯ ಸುದ್ದಿ ತಿಳಿಯಬಹುದೆಂಬ ನಿರೀಕ್ಷೆ ಅವನಲ್ಲಿ ಹುಟ್ಟಿತು. 'ಏ ನಬೀಸಾ, ನಮ್ಮ ಮನ್ಯಾಗ ಎಲ್ಲಾರು ಚೇಸಿದ್ದಾರೇನೊ ?' 'ಚೇಸಿದ್ದಾರ ಬಿಡಿರಿ. ಯಾರಿಗೇನಾಗೇತಿ' ಎಂದು ಮುಂಗಾಲುಪುಟಿಗೆಯ ಮರುಸವಾಲಿನಿಂದ ಅವನು ಉತ್ತರ ಕೊಟ್ಟನು. ಏನೇ ಆಗಲಿ ಕೆಟ್ಟ ಸುದ್ದಿಯಂತೂ ಇಲ್ಲವೆಂದು ಅವನು ಉಸಿರ್ಗರೆದು ಅಮೃತನು ಕಿಲ್ಲೆಯ ಸಂದಿಯಲ್ಲಿದ್ದ ತಮ್ಮ ಮನೆಗೆ ಎಷ್ಟೋ ಧೈರ್ಯದಿಂದ ಬಂದು ಮುಟ್ಟಿದನು. ಟಾಂಗಾದ ಸಪ್ಪಳ ಕೇಳಿ ಅವನ ತಂಗಿ ತಮ್ಮಂದಿರು ಹೊರಗೆ ಬಂದು ಅಣ್ಣ ಬಂದನೆಂದು ಕುಣಿದಾಡಿದರು. ಇಳಿದ ಕೂಡಲೆ 'ಅವ್ವ-ಅಪ್ಪಗ ಹೆಂಗದ ?' ಎಂದವನು ಕೇಳಲಾಗಿ 'ಈಗ ಕಡಿಮಿ ಆಗೇದ' ಎಂಬ ಉತ್ತರ ಬಂದಿತು. ಅವನ ಮೋರೆ ಒಮ್ಮೆಲೆ ಅರಳಿತು. 'ನಾ ಹೇಳಿದ್ದಿಲ್ಲೇನರಿ ?' ಎಂದು ಖುಷಿಯನ್ನು ಬೇಡುವ ಗರ್ಭಿತಸ್ವರದಿಂದ ನಬೀಸಾ ಆಡಿದನು. ಅವನಿಗೆ ಒಂದು ರೂಪಾಯಿ ಕೊಟ್ಟು ಅವನ ಸಲಾಮು ತಗೊಂಡು ಮನೆಯೊಳಗೆ ಹೋದನು. ಎರಡು ಕಡೆಗೆ ಅವನ ಕೈಗೆ ಜೋತು ಬಿದ್ದ ಚಿಕ್ಕ ಮರಿಗಳು 'ಅಣ್ಣ ಬಂದ !' ಎಂದು ಒಂದೇಸವನೆ ಕೂಗುತ್ತ ಚೀರಾಡುತ್ತ ನಡೆದವು.

ಒಳಗೆ ಹೋದೊಡನೆ ನಡುಮನೆಯ ಹಾಸಿಗೆಯ ಮೇಲೆ ಮಲಗಿದ ತಂದೆಯವರಿಗೆ ಬಾಗಿದನು. ಶಂಭುರಾಯರು ಮುಸುಕು ತೆಗೆದು ಅವನನ್ನು ಪಿಳಿಪಿಳಿ ನೋಡುತ್ತ 'ಖರೇವಂದರ ಬಂದ್ಯಾ? ಬಾ ಅಮೃತಾ. ಇಲ್ಲಿ ಬಾ' ಎಂದು ಎರಡೂ ಕೈಯಿಂದ ಅವನನ್ನು ಹತ್ತಿರ ಎಳೆದುಕೊಂಡು ತಬ್ಬಿಕೊಂಡರು. ಕಣ್ಣಲ್ಲಿ ನೀರು ಧಾರೆಯಾಗಿ ಹರಿಯಿತು. ಕೆಲ ಹೊತ್ತು ಕೊರಳು ದಟ್ಟೈಸಿ ಮಾತೇ ಹೊರಡಲಿಲ್ಲ. ಅಮೃತನೇ ಅವರ ತೆಕ್ಕೆಯಿಂದ ಮೆಲ್ಲನೆ ಬಿಡಿಸಿಕೊಂಡೇಳಲು, 'ಇನ್ನು ಬೇಕಾ

ದಂಥ ಬ್ಯಾನಿರಲಿ, ನಾ ಹೋದರೂ ಚಿಂತಿಲ್ಲ!' ಎಂದು ತಡವರಿಸುತ್ತ ಶಂಭುರಾಯರಾಡಿದರು. ಮಗ ಬಂದನೆಂದು ಅಡರಾಸಿ ಪಾರ್ವತಿಬಾಯಿ ಅಡಿಗೆಮನೆಯಿಂದ ಓಡಿ ಬಂದಳು. ಅಮೃತ ಅವಳಿಗೂ ಬಾಗಿ ನಮಸ್ಕಾರ ಮಾಡಿದನು. 'ಉದಂಡ ಆಯುಷ್ಯವಂತನಾಗು' ಎಂದು ಆಶೀರ್ವದಿಸಿದಳು. ಅಣ್ಣ ಬಂದನೆಂದು ಹುಡುಗರ ಕೇಕೆಯಂತೂ ಒಂದೇ ಸವನೆ ನಡೆಯಿತು. ನೆರೆಹೊರೆಯ ವಾರಿಗೆಯವರನ್ನು ಕರೆದು ತೋರಿಸುವುದು, ಅಮೃತನ ಸಾಮಾನೆಲ್ಲ ಕೈ ಮುಟ್ಟಿ ನೋಡುವುದು— ಹೀಗೆ ಮನೆತುಂಬ ಸಂಭ್ರಮವೇ ಸಂಭ್ರಮವಾಯಿತು. 'ಏನು ಜಡ್ಡಾಗಿತ್ತು? ಈಗ ಹೆಂಗದ?' ಎಂದು ಅಮೃತನು ಕೇಳಲು ಪಾರ್ವತಿಬಾಯಿ ಹತ್ತಿರ ಕೂಡಿಸಿಕೊಂಡು ನಡೆದ ಸಂಗತಿಯನ್ನೆಲ್ಲ ಹೇಳಿದಳು. ಬರಗಾಲದ ಮೂಲಕ ಸೋವಿಯೆಂದು ಸೆಜ್ಜೆಯನ್ನೇ ತಂದು ತಿನ್ನುತ್ತಿರಲು ಅದರ ಪರಿಣಾಮವಾಗಿ ಇಬ್ಬರಿಗೂ ಜೋರಾಗಿ ಮಾರಿಕಾ ಬೇನೆ ಬಂದು ಒಂದು ದಿವಸದಲ್ಲಿ ಗಾಬರಿಮಾಡಿಸಿತೆಂದೂ ಆಮೇಲೆ ಗಂಗಾಧರನ ಪ್ರಯತ್ನದಿಂದ ಡಾಕ್ಟರರೊಬ್ಬರು ಬಂದು ಔಷಧ ಕೊಟ್ಟ ಮೇಲೆ ಬದುಕಿದ್ದು ಪುನರ್ಜನ್ಮವಾಯಿತೆಂದೂ ಇನ್ನೂ ನಿತ್ರಾಣ ಬಹಳಿರುವದೆಂದೂ ತಿಳಿಯಿತು. ಹೇಳಿದ್ದು ಕೇಳುತ್ತಿದ್ದ ಶಂಭುರಾಯರು, 'ಏನು ಕೇಳತೀ ಅಮೃತ ನಮ್ಮ ಕಥೀ, ಒಂದು ಮಾರಿಕಾನs, ಒಂದು ಬಡತನಾನs! ನೀ ಅವಿಚಾರದಿಂದ ಬಂಗಾಲಕ್ಕೆ ಹೋದಿ. ಇಲ್ಲಿ ಮನ್ಯಾಗ ಮರಿಬಂಗಾಲಾಗೇದ' ತಮ್ಮ ನಿರ್ವಿಣ್ಣವಾದ ದನಿಯಲ್ಲಿ ಇಷ್ಟು ದಿವಸ ಹುದುಗಿಸಿಟ್ಟ ರೋಷವನ್ನೆಲ್ಲ ಶಂಭುರಾಯರು ಹೊರಗೆಡವಿದರು. ಸ್ವಲ್ಪ ತಡೆದು ಒಳ್ಳೆ ಗಂಭೀರವಾಗಿ ಮನೆಯ ಜಂತಿಯನ್ನು ನೋಡಹತ್ತಿದರು. ಇನ್ನಿಷ್ಟು ಮಾತಾಡಿ ದಣಿವು ಮಾಡಿಕೊಳ್ಳುವರೆಂದು ಪಾರ್ವತಿಬಾಯಿ'ಔಷಧ ತೆಗೆದುಕೊಳ್ಳುವ ಹೊತ್ತಾಯಿತು. ಸುಂದರಾ, ಆ ಬಾಟ್ಲ ತಗೊ' ಎಂದು ವಿಷಯ ಬದಲಿಸಿದಳು. ಅದಕ್ಕೆ ಶಂಭುರಾಯರು 'ಬ್ಯಾಡಿನ್ನ ಆ ಔಷಧ. ಹೋಗು ಅಮೃತ, ಡಾಕ್ಟರರನ್ನು ಕರೆದುಕೊಂಡು ಬಾ. ಆ ಕಾಲರಾ ಬ್ಯಾನಿ ತಗೊಂಡು ಬಾ ಅಂತ ಹೇಳು. ಅಂದರೆ ನಾಳಿಗೆ ನಿಕಾಲ್!' ಎನ್ನುತ್ತ ಒಣ ನಗೆಯೊಂದನ್ನು ನಕ್ಕರು. 'ಹೀಂಗ್ಯಾಕೆ ಅಡತೀರಿ ಅಪ್ಪ? ಔಷಧ ತಗೊಳ್ಳಿರಿ' ಎಂದು ಅಮೃತನೆಂದರೆ 'ಹಿಂಗ್ಯಾಕಂದರ ನಾ ಹೋಗಬೀಡತೀನಿ. ಅಲ್ಲಿಂದ (ಎಲ್ಲರ ಕಡೆ ನೋಟ ಹೊರಳಿಸಿ) ಇವರ್‍ನೆಲ್ಲಾ ಕಟ್ಟಿಕೊಂಡು ನೀ ಬಂಗಾಲಕ್ಕೊ ಪಂಜಾಬಕ್ಕೊ ಎಲ್ಲಿ ಹೋಗಬೇಕಂತೀ ಅಲ್ಲಿ ಹೋಗಬಿಡು, ನಿನ್ನ ದೇಶಸೇವಾ ಮಾಡಲಿಕ್ಕೆ!' ಎಂದು ಎರಡೂ ಕೈಗಳನ್ನು ಕೆಳಗೆ ಚೆಲ್ಲಿ ಉಸಿರುಗರೆದರು.

ಅಮೃತನಿಗೆ ಕಣ್ಣು ತುಂಬಿ ಬಂದಿತು. ಏನೂ ಮಾತಾಡುವುದಾಗಲಿಲ್ಲ. 'ದಿನ ಬೆಳಗಾದರ ಇದೇ ರೀತಿ ಬಡಬಡಸತಾರ ನೋಡಪ, ಅಮೃತ. ಕೇಳಿ ಕೇಳಿ ನನ್ನ ಜೀವಕ್ಕ ಕಸೋಸಿ ಆಗಿ ಇವರ ಕಣ್ಣು ಮುಂದೆ ನನ್ನ ಕರಕೊಂಡು ಹೋಗೆಂದು ದೇವರಿಗೆ ದಿನಾ ಬೇಡಿಕೋತೀನಿ!' ಎಂದು ಪಾರ್ವತಿಬಾಯಿ ಸೆರಗಿನಿಂದ ಕಣ್ಣೊತ್ತಿಕೊಂಡರು. ಹುಡುಗರೆಲ್ಲ ಕೂಗಾಟ ನಿಲ್ಲಿಸಿ ಆ ದೃಶ್ಯದ ಅರ್ಥವಾಗದೆ ಅಲ್ಲಲ್ಲಿ ಗೊಂಬೆಯಂತೆ ನಿಸ್ತೇಜವಾಗಿ ನಿಂತುಕೊಂಡವು. ಸುಂದರಾ ಔಷಧದ ಬಾಟ್ಲಿಯನ್ನು ಕೈಯಲ್ಲಿ ಹಿಡಿದುಕೊಂಡು ಬೆಪ್ಪಾಗಿ ನಿಂತಳು. ಮೂಕಶೋಕ ಮನೆಯನ್ನೆಲ್ಲ ಮುತ್ತಿಕೊಂಡುಬಂದಿತು.

ಮೂರು ನಾಲ್ಕು ದಿನದಲ್ಲಿ ಶಂಭುರಾಯರು ಮನೆಯಲ್ಲಿ ಮೆಲ್ಲಗೆ ತಿರುಗಾಡ ಹತ್ತಿದರು. ಮಗ ತಿರುಗಿ ಮನೆಗೆ ಬಂದದ್ದೇ ಅವರಿಗೆ ಗುಣಕಾರಿಯಾದ ಔಷಧವಾಯ್ತು. ಅವರಿಗಾಗಿ ಪಾರ್ವತೀಬಾಯಿ ಮಗ್ಗುಲ ಮನೆಯಿಂದ ಸಣ್ಣಕ್ಕಿಯನ್ನು ಕಡ ತಂದು ಪಥ್ಯದಡಿಗೆ ಮಾಡಿ ಹಾಕುತ್ತಿದ್ದಳು. ಅಮೃತನು ಬಂದ ಕ್ಷಣದಿಂದ ಹಗಲಿರುಳು ಅವರ ಶುಶ್ರೂಷೆಯಲ್ಲಿ ತೊಡಗಿದನು. ಹೊರಗಿನ ಜಗತ್ತಿನ ಹಾಹಾಕಾರವನ್ನೂ ತೊಳಲಾಟವನ್ನೂ ಮರೆತಂತಾಗಿ ಶಂಭುರಾಯರು ಬೇಗನೆ ಚೇತರಿಸಿಕೊಂಡರು. ಆದರೆ ಹೆಚ್ಚೆಚ್ಚು ಆರಾಮೆನಿಸಿದಂತೆ ಆಗಾಗ ಮುಂದಿನ ಯೋಚನೆ ಬರುತ್ತಿದ್ದವು. ಮೋಡ ಕವಿದು ಬಿರುಗಾಳಿ ಹೊರಗೆ ಬೀಸುತ್ತಿರಲು, ಕಿಡಿಕಿ ಬಾಗಿಲು ಮುಚ್ಚಿ ಒಳಗೆ ಬೆಚ್ಚಗೆ ಕೂತಿರುವಾಗ ಹಾಯಾಗಿರುವದಾದರೂ ಕೆಲ ಹೊತ್ತಿನ ಮೇಲೆ ಮನೆಯ ಹೊರಗೆ ಬೀಳಬೇಕಾದ ಸಮಯದಲ್ಲಿ, ಗಾಳಿಯ ಕೂಡ ಗುದ್ದಾಡಬೇಕೆಂಬ ಘನಚಿಂತೆ ಮೂಡುವುದಿಲ್ಲವೆ? ಹೀಗೆ ಅವರ ಮನಸ್ಥಿತಿಯಾಗಿತ್ತು. ಅಮೃತನು ತನಗೆ ಸವಡು ಸಿಕ್ಕಾಗ ಊರಲ್ಲಿಯ ತನ್ನ ಮಿತ್ರರನ್ನು ಕಂಡು ಬಂದನು. ಅವರಿಗೆಲ್ಲ ತನ್ನ ರೋಮಾಂಚಕಾರಿ ಅನುಭವಗಳನ್ನು ಹೇಳಿದನು. ಹಿರಿಯರುಕೆಲವರು ಸಹ ಅವನ ಸಾಹಸದ ಕಥೆಯನ್ನು ಕುತೂಹಲದಿಂದ ಕೇಳಿ 'ಊರಿಗೆ ಹೆಸರು ತಂದ ಹುಡುಗ!' ಎಂದು ಮೆಚ್ಚಿದರೂ ಇವರೇ ಅವನ ವಿಷಯಕ್ಕೆ ಹಿಂದೆ ವ್ಯವಹಾರಶೂನ್ಯನೆಂದು ವಿಧಾನ ಮಾಡಲು ಹಿಂದೆ ಮುಂದೆ ನೋಡಿರಲಿಲ್ಲ. ಅವನ ಜೀವದ ಗೆಳೆಯ ಗಂಗಾಧರನಂತೂ ಅವನ ಜೊತೆಗೇ ಹೆಚ್ಚಾಗಿ ಇರುತ್ತಿದ್ದನು. ತನ್ನ ಮನೆತನಕ್ಕೆ ತಾನಿಲ್ಲದಾಗ ಸಹಾಯ ಮಾಡಿದ್ದಕ್ಕಾಗಿ ಅಮೃತನು ಅವನನ್ನು ಬಾಯ್ತುಂಬ ಹೊಗಳಿದನು.

ಆಮೇಲೆ ವೀಣೆಯಿಂದ ಅವನಿಗೆ ಹಿಂದಿಯಲ್ಲಿ ಬರೆದ ಪತ್ರ ಬಂದಿತು.

ಅವನ ತಾಯ್ತಂದೆಯ ಆರೋಗ್ಯದ ವಿಷಯ ಕೇಳಿದ್ದಳು. ಅವನ ಪತ್ರ ಮೊದಲು ಬಂದೀತೆಂದು ಹಾದೀ ನೋಡಿ ಬಾರದೆ ಅತ್ಯಂತ ವ್ಯಥೆ ಪಟ್ಟುಬರೆ ದಿದ್ದಳು. ಪತ್ರವೆಲ್ಲ ವಿರಹಭಾವದ ಮೂರ್ತಿಯಾದ ಮಾತಿನಿಂದ ತುಂಬಿತ್ತು. ಅದನ್ನೋದಿದ ಕೂಡಲೆ ಅಮೃತನಿಗೂ ಬಹಳ ಕಡುಕೆನಿಸಿತು. ತಾನೇಕೆ ಬಂದೊಡನೆ ಬರೆಯಲಿಲ್ಲ? ಎಂದು ತನ್ನ ತಾ ಹಳಿದನು. ಅದೇ ದಿನ ತಾನೂ ಹಿಂದಿಯಲ್ಲಿ ಒಂದು ದೊಡ್ಡ ಪತ್ರ ಬರೆದು ಎಲ್ಲ ವಿಷಯ ತಿಳಿಸಿದನು. ತಾನೇ ಒಯ್ದು ಅಂಚೆಪೆಟ್ಟಿಗೆಯ ಬಾಯಲ್ಲಿ ಹಾಕಿದನು. ಆದರೆ ತಿರುಗಿ ಮನೆಗೆ ಬರು ವಾಗ ತಿರುತಿರುಗಿ ಆಲೋಚನೆ ತಲೆದೋರುತ್ತಿತ್ತು. ಈ ರೀತಿ ವೀಣೆಯ ಕೂಡ ಪತ್ರಲೇಖನವನ್ನು ನಡಸಿದರೆ ಯೋಗ್ಯವಾದೀತೆ? ಮನೆಯಜನರಿಗೂ ಇತರರಿಗೂ ತುಸು ಗೊತ್ತಾದರೆ ಸಾಕು, ವಿಪರೀತ ಕಲ್ಪನೆಯ ಜಾಳಿಗೆಗಳನ್ನು ರಚಿಸಿ ಎಲ್ಲ ಕಡೆ ಹರಡುವರು. ಇನ್ನು ಮೇಲೆ ಅವಳೆಲ್ಲಿ? ತಾನೆಲ್ಲಿ? ಇಲ್ಲದ ಸಮಸ್ಯೆ ಯೊಂದನ್ನು ಯಾಕೆ ಹುಟ್ಟಿಸಿಕೊಳ್ಳಬೇಕು? ಸರಿ, ಹಾಗಾದರೆ ಮುಂದಿನ ಪತ್ರ ಬರೆಯುವಂತಿಲ್ಲ. ಅಥವಾ ಅದನ್ನೇ ಕಡೆಯ ಪತ್ರ ಮಾಡಿ ಹಾಗೆ ಅವಳಿಗೆ ತಿಳಿಸಿಬಿಡಬೇಕು.

ಈ ನಿಶ್ಚಯ ಮಾಡಿ ನಾಲ್ಕು ಹೆಜ್ಜೆ ಹೋಗುವುದರಲ್ಲಿ ಅವಳ ಆ ಕನಿ ಕರದ ಕಣ್ಣೋಟ ಬಂಗಾಲದಿಂದ ಹಾರಿ ಬಂದು ಮುಂದೆ ಸುಳಿಯಿತು. ತಬ್ಬಲಿ ಯಾದ ಅವಳ ಬಾಳಿನ ಕತೆ ನೆನವಿನ ಗವಿಯಿಂದೆದ್ದು ಬಂದಿತು. ಅವಳಿಗೆ ಮರುಕ ತೋರಿ ಜೊತೆಯಾಗಿ ಕಳೆದ ದಿನಗಳ ಚಿತ್ರ ತೇಲಿತು. ಮನೆಯ ಹತ್ತಿರ ಬರಲು, ಅವನ ಮೊದಲಿನ ನಿಶ್ಚಯ ಸಡಿಲಿಹೋಗಿತ್ತು. ಹೊಸ ನಿಶ್ಚಯ ವೇನೆಂಬುದು ಆಗಿರಲಿಲ್ಲ. ಯಾವಾಗಾದರೊಮ್ಮೆ ಪತ್ರ ಬರೆದು ತನ್ನ ಸಹಾನು ಭೂತಿಯನ್ನು ಅವಳಿಗೆ ತೋರಿಸಲು ಯಾರ ಭಯ? ಎಂಬ ಪ್ರಶ್ನೆ ಕೇಳುತ್ತ ಅವನು ಮನೆ ಹೊಕ್ಕನು.

ಎಪ್ರಿಲ ತಿಂಗಳ ಕೊನೆಯ ವಾರದಲ್ಲಿ ಶಂಭುರಾಯರು ಪೂರ್ಣ ಗುಣ ಹೊಂದಿ ತಮ್ಮ ಮುನಿಸಿಪಾಲಿಟಿಯ ಕೆಲಸದ ಮೇಲೆ ಹಾಜರಾದರು. ಕೆಲಸ ಸಾಗಿತ್ತು. ಕೈಯಲ್ಲಿ ಮಾತ್ರ ಕಾಸಿಲ್ಲ. ಮನೆಯ ಡಬ್ಬಿಗಳೆಲ್ಲ ಖಾಲಿಯಾಗಿವೆ. ಡಾಕ್ಟರ ಬಿಲ್ಲು ಗುಡ್ಡದಷ್ಟಾಗಿದೆ. ನೆರೆಹೊರೆಯವರಿಂದ ಪಡೆದ ಕಾಳಿನ ಹಾಗೂ ರೂಪಾಯಿಯ ಕಡ ಕೂತಿದೆ. ಮಗನೇನೂ ಮನೆಗೆ ಬಂದ. ಆದರೆ ಅವನೇನು ಗಳಿಸಾಳಲ್ಲ. ಕುಳಿತು ತಿನ್ನುವವರ ಸಂಖ್ಯೆ ಹಿಂದಿಗಿಂತ ಹೆಚ್ಚಾಯಿತಿಷ್ಟೆ.

ಮೊದಲನೇ ತಾರೀಖಿನ ವರೆಗೆ ಗತಿಯೇನು ? ಮತ್ತೆ ಸಾಲ! ಹತ್ತು ಜನ್ಮದಲ್ಲಿ ಎಂದು ಮುಟ್ಟಿಸಲು ಬಾರದ ಸಾಲ! ಈ ವಿಚಾರ ಬಂದೊಡನೆ ಅವರು ತಮ್ಮ ಮೇಜಿನ ಮುಂದೆ ಕೈಯಲ್ಲಿ ಟಾಕು ಹಿಡಿದು ಹುಚ್ಚು ಹಿಡಿದಂತಾಗಿ ಸುಮ್ಮನೆ ಕೂತುಬಿಡುತ್ತಿದ್ದರು. ಚೀಫ ಆಫೀಸರು ಕೂಗಿ ಕರೆದದ್ದೂ ಅವರಿಗೆ ಕೇಳಿಸು ತ್ತಿರಲಿಲ್ಲ. ಒಂದು ದಿನ ಸಂಜೆ ಮನೆಗೆ ಹೋಗಲೊಲ್ಲದೆ ಸ್ಟೇಶನ್ ದಾರಿಗುಂಟ ಹೋಗಿ ಅದರ ಹತ್ತಿರವಿದ್ದ ಹಣಮಪ್ಪನ ಸಣ್ಣ ಗುಡಿಯ ಮುಂದೆ ಅಂಗಾತಾಗಿ ಮಲಗಿಬಿಟ್ಟರು. ದೇವರ ಮುಂದೆ ಸತ್ಯಾಗ್ರಹವನ್ನು ಹೂಡಿದಂತೆ ಆಯ್ತು. ಕತ್ತಲೆಯಾಯ್ತು. ಅವರೇನು ಕದಲಲಿಲ್ಲ. ಹಣಮಪ್ಪನೇನು ಹಣದಪ್ಪನೆ ? ಗಾಳಿಯಲ್ಲಿ ನಿದ್ದೆ ಮಾತ್ರ ಬರುವಂತೆ ಮಾಡಿದನು. ಅಷ್ಟೇ ಜೀವಕ್ಕೆ ಹಗುರು. ರಾತ್ರಿ ಹತ್ತಕ್ಕೆ ಎದ್ದು ಮನೆಗೆ ಕಾಲೆಳೆಯುತ್ತ ಹೋದರು.ಅಮೃತನು ಊರೆಲ್ಲ ಹುಡುಕಿ ಸಾಕಾಗಿ ಆದೇ ಬಂದಿದ್ದನು. ಅವರೂ ಬಂದರು. ಪಾರ್ವತಿಬಾಯಿ ಅತ್ತತ್ತು ಅಳ್ಳೀಕಾಯಿ ಆಗಿದ್ದಳು. 'ಹಿಂಗ್ಯಾರ ಮಾಡತೀರ ನೀವು? ಮುತ್ತಿ ನಂಥ ಮಗ ಮನಿಗೆ ಬಂದಾನ.' ಎಂದು ಒದರಾಡುವ, ಆದರೂ ಶೋಕದ ದನಿ ಯಲ್ಲಿ ಆಡಿದಳು. ಶಂಭುರಾಯರು ಕೋಟು ತೆಗೆಯುತ್ತ 'ಹೌದು, ಮುತ್ತಿ ನಂಥ ಮಗ ಬಂದಾನ ನಿಸ್ಮೆಲ್ಲರ ಹೊಟ್ಟೆಗೆ ಈ ಮುತ್ತಿನ ಉಪಯೋಗ ಏನು? ನಮ್ಮ ಸಂಕಟ ನಮಗ, ನಿನಗೇನದ ? ' ಎಂದು ಜಬರಿಸಿಕೊಂಡರು. 'ಎಲ್ಲಾ ತಿಳೀತು. ನಾ ಎಲ್ಲಾ ನೋಡಿಕೊತೀನಿ. ನೀವ್ಯಾಕ ಅಳದಕ್ಕಿ ಪಾರಾಣ ಹೇಳತೀರಿ? ಪಗಾರ ಬರೂತನಕ ನಾ ಹೆಂಗಾರ ಬೇಜಮಿ ಮಾಡತೀನಿ. ನೀವು ನಿಶ್ಚಿಂತ ಇಲ್ರಿ' ಎಂದು ವೀರಗೃಹಿಣಿಯಂತೆ ಆಶ್ವಾಸನ ಕೊಟ್ಟಳು. ದೇವಿ ಕೊಟ್ಟ ವರದಂತೆ ಅದು ಶಂಭುರಾಯರಿಗೆ ಎಂದಿಲ್ಲದ ಸಮಾಧಾನ ಕೊಟ್ಟಿತು. ಆದರೆ ಈ ಸಂವಾದವನ್ನು ಕೇಳಿ ಅಮೃತನು ತಾನೇನು ಮಾತಾಡದಿದ್ದರೂ ಒಳ ಒಳಗೆ ಬಲು ಕೊರಗಿದನು. ತಾನೊಬ್ಬ ನಿರುಪಯೊಗಿ ವಸ್ತುವಾಗಿ ಇಲ್ಲಿದ್ದ ವನು ಎಂಬುದು ಅವನ ಮನದಲ್ಲಿ ಕೊರೆದಂತಾಯಿತು. ನಾಳೆನಿಂದ ಕೂಲಿ ಯನ್ನಾದರೂ ಮಾಡಿ ಮನೆಗೆ ತಂದು ಹಾಕಬೇಕು ಎಂಬ ಆವೇಶ ಹೊಕ್ಕಿತು. ಅದರಿಂದ ತಲೆತುಂಬ ವಿಚಾರದ ಹುಳಗಳೆದ್ದವು. ಅವುಗಳ ಗುಂಜಾರವದಲ್ಲಿ ನಿದ್ದೆ ರಾತ್ರಿಯೆಲ್ಲ ಕೈಬಿಟ್ಟು ಜಾರಿ ಹೋಯಿತು.

ಮರುದಿನ ಅಮೃತನೆಲ್ಲಿಗೂ ಕೆಲಸದಬೆನ್ನುಹತ್ತಿ ಹೋಗಲಿಲ್ಲ.ಆದರೆ ಮನೆ ಯಲ್ಲಿ ಪ್ರತಿದಿನ ತಾಪತ್ರಯವೆಷ್ಟು ಹೆಚ್ಚಿದೆ ಎಂಬುದರ ಅರಿವು ಉಂಟಾಯಿತು.

ನಾಲ್ಕು ಪಟ್ಟು ಎನ್ನುವ ಸ್ಥಿತಿಯಿತ್ತು. ಯಾರಿಗೆ ಕೊಡಬೇಕು? ಅಂದಿನ ಮಧ್ಯಾಹ್ನವು' ನಿರ್ಣಯ ಮಾಡಿತು. ಆ ವಾರಕ್ಕೆ ಜರೂರಾಗಿ ಬೇಕಾದ ಕಾಳು ಕಡಿ ಮುಂತಾದ ಸಾಮಾನು ತರಲಾಯಿತು. ಅದರಿಂದ ಪ್ರಪಂಚ ಸಾಗಿತ್ತು. ಸಾಲ ಕೊಟ್ಟವರು ಕೇಳುವ ವರೆಗೆ ಏನೂ ಮಾಡುವಂತಿಲ್ಲ. ಇಷ್ಟು ಮೀರಿ ಕೇಳಿದರೆ ಮುಂದೆ ಹಾಕುವಯತ್ನ ಮಾಡುವುದು. ದೀನಮುಖದಿಂದ ಪ್ರಪಂಚದ ಅಡಚಣೆಯ ನಿವೇದನ ಮಾಡಿ ಪಾರಾಗುವುದು. ಅಂಥದರಲ್ಲಿಯೂ ಗಟ್ಟಿಗರಾದ 'ಮಾರವಾಡಿ'ಗಳು ಗಂಟುಬಿದ್ದರೆ ಹತ್ತರಲ್ಲಿ ಒಂದು ಪಾಲು ಕೊಟ್ಟು ನಾಲ್ಕು ದಿನಕ್ಕೆ ಉಳಿದದ್ದು ಕೊಡತೇನೆ ಎಂದು ಹೇಳಿ ಕಳಿಸುವುದು. ಇದು ನೋಡಲಿಕ್ಕೆ ವಂಚನೆಯ ದಾರಿ. ಶಂಭುರಾಯರೇನು ಸ್ವಭಾವದಿಂದ ವಂಚಕರಲ್ಲ. ಆದರೆ ದುಷ್ಕಾಳದ ಸಂಸಾರ ಈ ಬುದ್ಧಿಯನ್ನು ಕಲಿಸಿತು.

ಎರಡು ಮೂರು ದಿನಗಳಲ್ಲಿ ಅಕ್ಷತೃತೀಯೆಯ ಹಬ್ಬ ಬಂತು. ಹೋಳಿಗೆ ಮಾಡಬೇಕೆಂದು ಪಾರ್ವತೀಬಾಯಿಗೆ ಅಪೇಕ್ಷೆ. ಹಬ್ಬ ದೊಡ್ಡದು. ಮನೆಯಲ್ಲಿ ಗೌರಿ ಕೂತಿದ್ದಾಳೆ. ಅಲ್ಲದೆ ಮಗನು ಬಂದಿದ್ದಾನೆ. ಆದರೆ ಮನಸ್ಸಿನಲ್ಲಿ ನುಂಡಿಗೆ ಮಾಡಿ ತಿನ್ನುವಂತಿರುವುದೇ? ಮನೆಯಲ್ಲಿ ಗೋದಿಯಿಲ್ಲ, ತರಿಸುವ ಯೋಗ್ಯತೆಯಿಲ್ಲ. ಶಂಭುರಾಯರ ಮುಂದೆ ವಿಷಯ ತೆಗೆದರೆ ತಂದುಕೊಡ ಬಹುದು, ಆದರೆ ತಲೆ ಕೆಡಿಸಿಕೊಳ್ಳುತ್ತಾರೆ. ಅದೇ ಓಣಿಯಲ್ಲಿ ಅವಳ ಗೆಳತಿ ಯಾದ ರಾಧಾಬಾಯಿಯ ಮನೆಯಿತ್ತು. ಅವರು ಒಳ್ಳೇ ಶ್ರೀಮಂತರು. ಅವರಲ್ಲಿ ಏನು ಕಡಿಮೆ? ಅವರ ಹೊಲದಿಂದ ಬಂದ ಜೋಳ, ಗೋದಿ ಬೇಕಾದ ಷ್ಟಿತ್ತು. ಅದಕ್ಕಾಗಿ ಸುಂದರಾನನ್ನು ಗೋಧಿ ಅಥವಾ ಕಣಕ ಎರಡರಲ್ಲಿ ಒಂದನ್ನು ತರುವುದಕ್ಕೆ ಯಾರಿಗೂ ತಿಳಿಯದಂತೆ ಅವರ ಮನೆಗೆ ಮುಂಜಾನೆ ಕಳಿಸಿದಳು. ಅವಳು ಹೋಗಿ ಅರ್ಧ ಗಂಟೆಯಲ್ಲಿ ತಿರುಗಿ ಬಂದಳು. ಆದರೆ ಅಡಿಗೆ ಮನೆಯಲ್ಲಿ ಹೋದವಳೇ ತೆರವಾಗಿ ತಂದ ಪಾತ್ರೆಯನ್ನು ಅವ್ವನ ಮುಂದಿಟ್ಟು ದೊಪ್ಪನೆ ನೆಲಕ್ಕೆ ಕುಳಿತು ಹೊಯ್ಕೆಂದು ಅಳಹತ್ತಿದಳು. ಪಾರ್ವತೀಬಾಯಿ ಗಾಬರಿಯಾಗಿ 'ಹಿಂಗ್ಯಾಕ ಅಳತೀಯೆ?' ಎಂದಳು. ಅದಕ್ಕೆ ಉತ್ತರವೆಂದರೆ ಇನ್ನೂ ಎತ್ತರದ ದನಿಯಲ್ಲಿ ಅಳುವುದು. ಅಲ್ಲಿಯೆ ಬಚ್ಚಲಮನೆಯಲ್ಲಿ ಮೋರೆ ತೊಳೆಯುತ್ತಿದ್ದ ಅಮೃತನು ಓಡಿ ಬಂದು 'ಏನಾ ಯಿತು?' ಎಂದು ಸುಂದರಾನ ಹತ್ತಿರ ಕುಳಿತು ತಲೆಯ ಮೇಲೆ ಕೈಯಾಡಿಸಿ ಕೇಳಿದರೆ ಮಾತೇ ಇಲ್ಲ. 'ಯಾರೇನು ಅಂದರು, ಹೊಡೆದರು, ಏನಾತು,

ಸಕ್ಕರಿತೀರಿದೆ, ಚಿಮಣಿ ಎಣ್ಣೆ ಇಲ್ಲ, ಕಾಳುಕಡಿಯ ಡಬ್ಬಿತೆರವಾದವು ಎಂಬುದೇ ಎದ್ದೊಡನೆ ಮನೆಯಲ್ಲಿ ಕೇಳಿಬರುವ ಸಂಗೀತದ ನಿರಂತರಶ್ರುತಿಯಾಗಿತ್ತು. ಸುಧಾರಿಸಿದ ಭಿಕ್ಷುಕರಂತೆ ಅವರಿವರಿಗೆ ಬಾಯಿ ತೆರೆದು ತನ್ನ ತಾಯಿ ಬೇಕಾಗಿದ್ದ ಸಾಮಾನೆಲ್ಲ ತರಿಸುವುದು ನೋಡಿ ಅವನಿಗೆ ವಿಚಿತ್ರ ಸಂಕಟವಾಗುತ್ತಿತ್ತು. ಜಿಲ್ಹೆಯ ಎಲ್ಲ ಕಡೆ ಪಸರಿಸಿದ ಬರಗಾಲದ ಭಯಾನಕ ಸುದ್ದಿಗಳನ್ನು ಕೇಳುವುದರ ಜೊತೆಗೆ ಮನೆಯಲ್ಲಿ ಪ್ರತಿಕ್ಷಣವೂ ಕಾಣುತ್ತಿರುವ ನೋಟವು ತಾಳವಾಯಿತು. ಅನೇಕಕಡೆ ಹಳ್ಳಿಗಳಲ್ಲಿ ಬರಗಾಲ ಸಮಿತಿಯುವರು ಅನ್ನ ಛತ್ರಗಳನ್ನು ತೆರೆದಿದ್ದಾರೆ. ಅದೇಕೆ ಬಾಗಿಲಕೋಟೆಯಲ್ಲಿಯೇ ಒಂದಿದೆ. ಆದರೆ ಅಲ್ಲಿ ಹೋಗಲು ಸಾಧ್ಯವೇ ? ಸ್ವಾಭಿಮಾನ ಅಡ್ಡಿಯಾಗುತ್ತದೆ. ತಮ್ಮಂಥ ಸಾವಿರಾರು ಕುಟುಂಬಗಳ ನಿತ್ಯ ಯಾತನೆಯ ಘೋರ ಚಿತ್ರ ಅವನ ಕಣ್ಣೆದಿರು ಕಟ್ಟಿದಂತಾಯಿತು. ಆ ಕ್ಷಣದ ಆವೇಗದಲ್ಲಿ ತನ್ನಷ್ಟಕ್ಕೆ ಏನೇನೋ ಅಂದುಕೊಂಡನು. ಈ ಲೋಕದಲ್ಲಿ ಶ್ರೀಮಂತರಾಗಿ ಬದುಕಬಹುದು,ಬಡವರಾಗಿ ಸಾಯಬಹುದು.ಆದರೆ ಈ ನಡುವಿನವರಾಗಿ ಸಾಯದೆಯೂ ಬದುಕದೆಯೂ ಸತ್ತಂತಿರುವ ಬದುಕು ಬೇಡ, ಬೇಡ ! ತಾನು ಪರೀಕ್ಷೆ ಮುಗಿಸಿ ಬಂದು ಡಾಕ್ಟರ ಆಗಿದ್ದರೆ ತನ್ನ ಮನೆತನದ ಭಾಗ್ಯ ತೆರೆಯುತ್ತಿತ್ತು. ಈ ಯಾತಾಯಾತವೆಲ್ಲ ಇಲ್ಲದಾಗುತ್ತಿತ್ತು. ತಾನು ಪರೀಕ್ಷೆಗೆ ಕೂಡದೆ ಹುಚ್ಚು ಆವೇಶದಿಂದ ಬಂಗಾಲಕ್ಕೆ ಹೋದದ್ದು ಈಗೊಂದು ನಿಮಿಷ ಅವನಿಗೆ ತುಂಬ ಮೂರ್ಖತವೆಂದು ತೋರಿತು. ಮನೆ ಗೆದ್ದು ಮಾರು ಗೆದಿಯಬೇಕು ಎಂಬುದು ಸುಳ್ಳಲ್ಲ. ಮನೆಯಲ್ಲಿ ತನ್ನವರು ಹೊಟ್ಟೆಗಾಗಿ ಸಂಕಟಪಡುತ್ತಿರುವಾಗ ಅದನ್ನು ಲಕ್ಷಿಸದೆ ಹೆರವರ ದುಃಖ ಕಳೆಯಲು ದೇಶಾಂತರಕ್ಕೆ ಹೋದರೆ ಏನು ಬಂತು ? ಇದೆಂಥ ದೇಶಸೇವೆ! ತನ್ನವರನ್ನು ಕಾಲಲ್ಲಿ ತುಳಿದು ದೇವರ ತೇರನ್ನು ಎಳೆದಂತೆ ! ಹೀಗೆಭಾವನಾವಶವಾಗಿ ಅವನು ಅಂದುಕೊಳ್ಳುತ್ತಿರಲು ಒಂದುದೊಡ್ಡ ನಿರ್ಧಾರವು ಅವನ ಮನದ ಆಳದಿಂದ ಭೂಕಂಪದಿಂದ ಮೇಲೆದ್ದು ಕಡಲಲ್ಲಿಒಮ್ಮೆಲೆ ತೋರುವ ದ್ವೀಪದಂತೆ ನುಗ್ಗಿ ಬಂದಿತು. ಅದೆಂದರೆ ಇನ್ನು ಮನೆಯ ಉದ್ಧಾರ ಮೊದಲು; ತನ್ನವರಿಗೆ ಅನ್ನ ಸಿಗುವಂತಾದ ಮೇಲೆ ಅಲ್ಲಿಂದ ದೇಶಸೇವೆ. ಈ ನಿರ್ಧಾರದಿಂದ ಅಂದಿನ ಪ್ರಶ್ನೆಯೇನೂ ಬಗೆಹರಿಯುವಂತಿರಲಿಲ್ಲವಾದರೂ ಒಂದು ದೃಢವಾದ ನಿರ್ಧಾರಕ್ಕೆ ಬಂದೆನಲ್ಲ ಎಂಬ ಸಮಾಧಾನವು ಅವನಲ್ಲಿ ತೋರಿತು.

ಮೇ ಒಂದನೆಯ ತಾರೀಖು ಬಂತು. ಪಗಾರವಾಯಿತು. ಅದು ಒಂದು ಪಟ್ಟಾದರೆ ಕೊಡಬೇಕಾದ ಸಾಲ, ಬಿಲ್ಲು, ಕೊಳ್ಳಬೇಕಾದ ಸಾಮಾನು ಇವು

ನಾಲ್ಕು ಪಟ್ಟು ಎನ್ನುವ ಸ್ಥಿತಿಯಿತ್ತು. ಯಾರಿಗೆ ಕೊಡಬೇಕು? ಅಂದಿನ ಮಧ್ಯಾಹ್ನವು' ನಿರ್ಣಯ ಮಾಡಿತು. ಆ ವಾರಕ್ಕೆ ಜರೂರಾಗಿ ಬೇಕಾದ ಕಾಳು ಕಡಿ ಮುಂತಾದ ಸಾಮಾನು ತರಲಾಯಿತು. ಅದರಿಂದ ಪ್ರಪಂಚ ಸಾಗಿತ್ತು. ಸಾಲ ಕೊಟ್ಟವರು ಕೇಳುವ ವರೆಗೆ ಏನೂ ಮಾಡುವಂತಿಲ್ಲ. ಇಷ್ಟೂ ಮೀರಿ ಕೇಳಿದರೆ ಮುಂದೆ ಹಾಕುವಯತ್ನ ಮಾಡುವುದು. ದೀನಮುಖದಿಂದ ಪ್ರಪಂಚದ ಅಡಚಣೆಯ ನಿವೇದನ ಮಾಡಿ ಪಾರಾಗುವುದು. ಅಂಥದರಲ್ಲಿಯೂ ಗಟ್ಟಿಗರಾದ 'ಮಾರವಾಡಿ'ಗಳು ಗಂಟುಬಿದ್ದರೆ ಹತ್ತರಲ್ಲಿ ಒಂದು ಪಾಲು ಕೊಟ್ಟು ನಾಲ್ಕು ದಿನಕ್ಕೆ ಉಳಿದದ್ದು ಕೊಡತೇನೆ ಎಂದು ಹೇಳಿ ಕಳಿಸುವುದು. ಇದು ನೋಡಲಿಕ್ಕೆ ವಂಚನೆಯ ದಾರಿ. ಶಂಭುರಾಯರೇನು ಸ್ವಭಾವದಿಂದ ವಂಚಕರಲ್ಲ. ಆದರೆ ದುಷ್ಕಾಳದ ಸಂಸಾರ ಈ ಬುದ್ಧಿಯನ್ನು ಕಲಿಸಿತು.

ಎರಡು ಮೂರು ದಿನಗಳಲ್ಲಿ ಅಕ್ಷತೃತೀಯೆಯ ಹಬ್ಬ ಬಂತು. ಹೋಳಿಗೆ ಮಾಡಬೇಕೆಂದು ಪಾರ್ವತೀಬಾಯಿಗೆ ಅಪೇಕ್ಷೆ. ಹಬ್ಬ ದೊಡ್ಡದು. ಮನೆಯಲ್ಲಿ ಗೌರಿ ಕೂತಿದ್ದಾಳೆ. ಅಲ್ಲದೆ ಮಗನು ಬಂದಿದ್ದಾನೆ. ಆದರೆ ಮನಸ್ಸಿನಲ್ಲಿ ಮಂಡಿಗೆ ಮಾಡಿ ತಿನ್ನುವಂತಿರುವುದೇ? ಮನೆಯಲ್ಲಿ ಗೋದಿಯಿಲ್ಲ, ತರಿಸುವ ಯೋಗ್ಯತೆಯಿಲ್ಲ. ಶಂಭುರಾಯರ ಮುಂದೆ ವಿಷಯ ತೆಗೆದರೆ ತಂದುಕೊಡ ಬಹುದು, ಆದರೆ ತಲೆ ಕೆಡಿಸಿಕೊಳ್ಳುತ್ತಾರೆ. ಅದೇ ಓಣಿಯಲ್ಲಿ ಅವಳ ಗೆಳತಿ ಯಾದ ರಾಧಾಬಾಯಿಯ ಮನೆಯಿತ್ತು. ಅವರು ಒಳ್ಳೇ ಶ್ರೀಮಂತರು. ಅವರಲ್ಲಿ ಏನು ಕಡಿಮೆ? ಅವರ ಹೊಲದಿಂದ ಬಂದ ಜೋಳ, ಗೋದಿ ಬೇಕಾದ ಷ್ಟಿತ್ತು. ಅದಕ್ಕಾಗಿ ಸುಂದರಾನನ್ನು ಗೋಧಿ ಅಥವಾ ಕಣಕ ಎರಡರಲ್ಲಿ ಒಂದನ್ನು ತರುವುದಕ್ಕೆ ಯಾರಿಗೂ ತಿಳಿಯದಂತೆ ಅವರ ಮನೆಗೆ ಮುಂಜಾನೆ ಕಳಿಸಿದಳು. ಅವಳು ಹೋಗಿ ಅರ್ಧ ಗಂಟೆಯಲ್ಲಿ ತಿರುಗಿ ಬಂದಳು. ಆದರೆ ಅಡಿಗೆ ಮನೆಯಲ್ಲಿ ಹೋದವಳೇ ತೆರವಾಗಿ ತಂದ ಪಾತ್ರೆಯನ್ನು ಅವ್ವನ ಮುಂದಿಟ್ಟು ದೊಪ್ಪನೆ ನೆಲಕ್ಕೆ ಕುಳಿತು ಹೊಯ್ಕೊಂದು ಅಳಹತ್ತಿದಳು. ಪಾರ್ವತೀಬಾಯಿ ಗಾಬರಿಯಾಗಿ 'ಹಿಂಗ್ಯಾಕ ಅಳತೀಯೆ?' ಎಂದಳು. ಅದಕ್ಕೆ ಉತ್ತರವೆಂದರೆ ಇನ್ನೂ ಎತ್ತರದ ದನಿಯಲ್ಲಿ ಅಳುವುದು. ಅಲ್ಲಿಯೆ ಬಚ್ಚಲಮನೆಯಲ್ಲಿ ಮೋರೆ ತೊಳೆಯುತ್ತಿದ್ದ ಅಮೃತನು ಓಡಿ ಬಂದು 'ಏನಾ ಯಿತು?' ಎಂದು ಸುಂದರಾನ ಹತ್ತಿರ ಕುಳಿತು ತಲೆಯ ಮೇಲೆ ಕೈಯಾಡಿಸಿ ಕೇಳಿದರೆ ಮಾತೇ ಇಲ್ಲ. 'ಯಾರೇನು ಅಂದರ್‍ಯ, ಹೊಡೆದರ್‍ಯ, ಏನಾತ್ಯ,

ಸಕ್ಕರಿ ತೀರಿದೆ, ಚಿಮಣಿ ಎಣ್ಣೆ ಇಲ್ಲ, ಕಾಳುಕಡಿಯ ಡಬ್ಬಿ ತೆರವಾದವು ಎಂಬುದೇ ಎದ್ದೊಡನೆ ಮನೆಯಲ್ಲಿ ಕೇಳಿಬರುವ ಸಂಗೀತದ ನಿರಂತರಶ್ರುತಿಯಾಗಿತ್ತು. ಸುಧಾರಿಸಿದ ಭಿಕ್ಷುಕರಂತೆ ಅವರಿವರಿಗೆ ಬಾಯಿ ತೆರೆದು ತನ್ನ ತಾಯಿ ಬೇಕಾಗಿದ್ದ ಸಾಮಾನೆಲ್ಲ ತರಿಸುವುದು ನೋಡಿ ಅವನಿಗೆ ವಿಚಿತ್ರ ಸಂಕಟವಾಗುತ್ತಿತ್ತು. ಜಿಲ್ಹೆಯ ಎಲ್ಲ ಕಡೆ ಪಸರಿಸಿದ ಬರಗಾಲದ ಭಯಾನಕ ಸುದ್ದಿಗಳನ್ನು ಕೇಳುವುದರ ಜೊತೆಗೆ ಮನೆಯಲ್ಲಿ ಪ್ರತಿಕ್ಷಣವೂ ಕಾಣುತ್ತಿರುವ ನೋಟವು ತಾಳದಾಯಿತು. ಅನೇಕಕಡೆ ಹಳ್ಳಿಗಳಲ್ಲಿ ಬರಗಾಲ ಸಮಿತಿಯವರು ಅನ್ನ ಛತ್ರಗಳನ್ನು ತೆರೆದಿದ್ದಾರೆ. ಅದೇಕೆ ಬಾಗಿಲಕೋಟೆಯಲ್ಲಿಯೇ ಒಂದಿದೆ. ಆದರೆ ಅಲ್ಲಿ ಹೋಗಲು ಸಾಧ್ಯವೇ ? ಸ್ವಾಭಿಮಾನ ಅಡ್ಡಿಯಾಗುತ್ತದೆ. ತಮ್ಮಂಥ ಸಾವಿರಾರು ಕುಟುಂಬಗಳ ನಿತ್ಯ ಯಾತನೆಯ ಘೋರ ಚಿತ್ರ ಅವನ ಕಣ್ಣೆದಿರು ಕಟ್ಟಿದಂತಾಯಿತು. ಆ ಕ್ಷಣದ ಆವೇಗದಲ್ಲಿ ತನ್ನಷ್ಟಕ್ಕೆ ಏನೇನೋ ಅಂದುಕೊಂಡನು. ಈ ಲೋಕದಲ್ಲಿ ಶ್ರೀಮಂತರಾಗಿ ಬದುಕಬಹುದು, ಬಡವರಾಗಿ ಸಾಯಬಹುದು. ಆದರೆ ಈ ನಡುವಿನವರಾಗಿ ಸಾಯದೆಯೂ ಬದುಕದೆಯೂ ಸತ್ತಂತಿರುವ ಬದುಕು ಬೇಡ, ಬೇಡ ! ತಾನು ಪರೀಕ್ಷೆ ಮುಗಿಸಿ ಬಂದು ಡಾಕ್ಟರ ಆಗಿದ್ದರೆ ತನ್ನ ಮನೆತನದ ಭಾಗ್ಯ ತೆರೆಯುತ್ತಿತ್ತು. ಈ ಯಾತಾಯಾತವೆಲ್ಲ ಇಲ್ಲದಾಗುತ್ತಿತ್ತು. ತಾನು ಪರೀಕ್ಷೆಗೆ ಕೂಡದೆ ಹುಚ್ಚು ಆವೇಶದಿಂದ ಬಂಗಾಲಕ್ಕೆ ಹೋದದ್ದು ಈಗೊಂದು ನಿಮಿಷ ಅವನಿಗೆ ತುಂಬ ಮೂರ್ಖತವೆಂದು ತೋರಿತು. ಮನೆ ಗೆದ್ದು ಮಾರು ಗೆದಿಯಬೇಕು ಎಂಬುದು ಸುಳ್ಳಲ್ಲ. ಮನೆಯಲ್ಲಿ ತನ್ನವರು ಹೊಟ್ಟೆಗಾಗಿ ಸಂಕಟಪಡುತ್ತಿರುವಾಗ ಅದನ್ನು ಲಕ್ಷಿಸದೆ ಹೆರವರ ದುಃಖ ಕಳೆಯಲು ದೇಶಾಂತರಕ್ಕೆ ಹೋದರೆ ಏನು ಬಂತು ? ಇದೆಂಥ ದೇಶಸೇವೆ! ತನ್ನವರನ್ನು ಕಾಲಲ್ಲಿ ತುಳಿದು ದೇವರ ತೇರನ್ನು ಎಳೆದಂತೆ ! ಹೀಗೆಭಾವನಾವಶವಾಗಿ ಅವನು ಅಂದುಕೊಳ್ಳುತ್ತಿರಲು ಒಂದುದೊಡ್ಡ ನಿರ್ಧಾರವು ಅವನ ಮನದ ಆಳದಿಂದ ಭೂಕಂಪದಿಂದ ಮೇಲೆದ್ದು ಕಡಲಲ್ಲಿಒಮ್ಮೆಲೆ ತೋರುವ ದ್ವೀಪದಂತೆ ನುಗ್ಗಿ ಬಂದಿತು. ಅದೆಂದರೆ ಇನ್ನು ಮನೆಯ ಉದ್ಧಾರ ಮೊದಲು; ತನ್ನವರಿಗೆ ಅನ್ನ ಸಿಗುವಂತಾದ ಮೇಲೆ ಅಲ್ಲಿಂದ ದೇಶಸೇವೆ. ಈ ನಿರ್ಧಾರದಿಂದ ಅಂದಿನ ಪ್ರಶ್ನೆಯೇನೂ ಬಗೆಹರಿಯುವಂತಿರಲಿಲ್ಲವಾದರೂ ಒಂದು ದೃಢವಾದ ನಿರ್ಧಾರಕ್ಕೆ ಬಂದೆನಲ್ಲ ಎಂಬ ಸಮಾಧಾನವು ಅವನಲ್ಲಿ ತೋರಿತು.

ಮೇ ಒಂದನೆಯ ತಾರೀಖು ಬಂತು. ಪಗಾರವಾಯಿತು. ಅದು ಒಂದು ಪಟ್ಟಾದರೆ ಕೊಡಬೇಕಾದ ಸಾಲ, ಬಿಲ್ಲು, ಕೊಳ್ಳಬೇಕಾದ ಸಾಮಾನು ಇವು

ಸುಂದರಾ ?' 'ಏನಿಲ್ಲ' ಎಂದು ಮತ್ತೆ ಜೋರಾಗಿ ಅಳುವಳು. ಅದನ್ನು ಕೇಳಿ ಪಡಸಾಲೆಯಿಂದ ಶಂಭುರಾಯರು ಒಳಬಂದರು. ಅವರಿಗೆ ಲಕ್ಷಣ ತಿಳಿಯಿತು. 'ಗೊತ್ತಾತು. ಆಕಿನ್ನೇನು ಕೇಳತಿ ? ಯಾರ ಮನಿಗೋ ಏನೋ ತರಲಿಕ್ಕೆ ಕಳಿಸಿದ್ದಿ ಕಾಣಸ್ತದ. ಅವರು ಕೊಡದ ಬೈಯ್ದು ಕಳಿಸ್ಯಾರ' ತಿಳಿಯಬಾರದೆಂದು ತಾನು ಮಾಡಿದ್ದೊಂದು, ಈಗ ಎಲ್ಲರಿಗೂ ತಿಳಿಯುವಂತೆ ಆದದ್ದೊಂದು ಎಂದು ಪಾರ್ವತಿಬಾಯಿ ತನ್ನನ್ನೆ ಹಳಿದುಕೊಂಡಳು. ಶಂಭು ರಾಯರು ದನಿಯೇರಿಸಿ 'ಏನರ ತರಲಿಕ್ಕೆ ಕಳಿಸಿದ್ದಿ ಆಕಿನ್ನ? ನಿನಗೆ ನೂರು ಭ್ಯಾರೆ ಹೇಳೀನಿ. ಮಂದೀ ಮನೀಗೆ ಭಿಕ್ಷಾ ಬೇಡಲಿಕ್ಕೆ ಕಳಿಸಬ್ಯಾಡ ಅಂತ. ನಮಗ ದೇವರು ಕೊಟ್ಟ ಚಟ್ನಿ-ಭಕ್ಕರಿ ತಿಂದು ಇರಲಿಕ್ಕೆ ಬರುವದಿಲ್ಲೇನು ?' ಎಂದು ಮುಂತಾಗಿ ಒದರಾಡಿದರು. ಅದಕ್ಕೆ ಪಾರ್ವತಿಬಾಯಿ 'ಈವತ್ತ ಅಕ್ಷತೃತೀಯಾ...ದೊಡ್ಡ ಹಬ್ಬ.' ಎಂದು ಅರೆಮಾತಾಡಿರಲು, 'ಹೌದು, ಅಕ್ಷತೃತಿಯಾ...ದೊಡ್ಡ ಹಬ್ಬ...ಯಾರಿಗೆ? ಶ್ರೀಮಂತರಿಗೆ. ನಮಗೆ ಬಕ್ಕರಿ ತಿಂದು ಬದುಕೋದೇ ದೊಡ್ಡ ಹಬ್ಬ...ಅದು ಸಿಗದಿದ್ದರ ಕೆರಿ ಬಾವಿ ಪಾಲಾಗಿ ಹೋಗೂದು ಇನ್ನೂ ದೊಡ್ಡ ಹಬ್ಬ' ಎಂದು ಶಂಭುರಾಯರು ಅತಿ ಉದ್ವೇಗದಿಂದ ಆಡಹತ್ತಿದರು. 'ಹಿಂಗ್ಯಾಕ ವಾಗತ್ಯದ ಮಾತ ಆಡತೀರಿ ಹಬ್ಬದ ದಿವಸ ? ಮುದಕರಾದರೂ ನಿಮಗ ತಿಳಿಯೂದಿಲ್ಲ' ಎಂದು ಪಾರ್ವತಿ ಬಾಯಿ ತಡೆಯಲು ಯತ್ನಿಸಿದಳು. ಇಷ್ಟರಲ್ಲಿ ಸುಂದರಾನ ಅಳುವಿಕೆಯು ಸ್ವಲ್ಪ ಕಡಿಮೆ ಆಗಿತ್ತು. ಅಮೃತನಿಗೆ ನಡೆದದ್ದು ನೋಡಿ ಕೇಳಿ ಹೊಟ್ಟೆ ಯಲ್ಲಿ ತ್ರಿಶೂಲ ತಿವಿದಂತಾಗಿದ್ದರೂ ನುಂಗಿಕೊಂಡು ಸುಂದರಾನ ಬೆನ್ನ ಮೇಲೆ ಕೈಯಾಡಿಸುತ್ತ ಸಮಾಧಾನ ಮಾಡುತ್ತ ಕೂತಿದ್ದನು. ಆಮೇಲೆ ಎಷ್ಟೋ ಹೊತ್ತಿನ ಮೇಲೆ ಅವಳು ಹೇಳಿದಳು. ಆ ರಾಧಾಬಾಯಿ ಅಂದ ರಂತೆ ; 'ಏನs ನಿಮ್ಮವ್ವನ ಗುರುತದಂತ ಏನು ದಿನಬೆಳಗಾದರ ಕೇಳಲಿಕ್ಕೆ ಬರ ತೀರಿ ? ನಾಚಿಕಂಬೋದು ಅದನೋ ಇಲ್ಲೊ ? ಹಿಂದಿನ ಕಡ ಇನ್ನೂ ಹಂಗ ಕೂತದ. ಮಂದೀ ಮನಿ ಕಡ ತಗೊಂಡ ಸಂಸಾರ ಮಾಡತಾರೋ ಏನೋ ನಿಮ್ಮ ಅವ್ವ ಅಪ್ಪ ? ನಮ್ಮನ್ಯಾಗೊ ನಿನ್ನೆಗೆ ಗೋದಿ ಎಲ್ಲಾ ತೀರ್‍ಯಾವ. ಈವತ್ತ ಹಬ್ಬಕ್ಕ ಇನ್ನ ಮ್ಯಾಲ ತರಸಬೇಕು. ಇಲ್ಲಂತ ಹೇಳು ನಿಮ್ಮವ್ವಗ' ಎಂದು. ಇಷ್ಟೇ ಅಲ್ಲ, ಸಣ್ಣ ಮೋರೆ ಮಾಡಿ ಸುಂದರಾ ಹೊರಡಲು, ಅವರ ಮನೆಗೆ ಬಂದ ಸೋದರತ್ತೆಯೊಬ್ಬಳು ಬತ್ತಿ ಹೊಸೆಯುತ್ತ ಕೂತವಳು 'ಈ

ಹುಡುಗಿ ಏನ ಮರದಂಗೆ ಬೆಳೆದು ಅಸ್ಸೈ ಆಗೇದs! ಇನ್ನೂ ಇದರ ಮದವೀನs ಮಾಡಿಲ್ಲೇನ!' ಎಂದು ಕೇಳಿದ್ದಕ್ಕೆ 'ಎಲ್ಲೀ ಮದವಿ? ಇದೇನು ಗಂಡನ್ನ ಕಾಣ್ತದ? ಕೂಳಿಗೆ ದಿಕ್ಕಿಲ್ಲ, ಮದುವಿ ಏನು ಮಾಡ್ತಾರ ಸುಡುಗಾಡ;' ಎಂದು ರಾಧಾಬಾಯಿ ಉತ್ತರ ಕೊಟ್ಟಳಂತೆ. ಇದನ್ನು ಹೇಳಿದೊಡನೆ ಮತ್ತೊಮ್ಮೆ ಸುಂದರಾನ ಕಣ್ಣು ತೇವವಾಯಿತು. ಪಾರ್ವತಿಬಾಯಿಯೂ ಅಳುಮೋರೆ ಮಾಡಿ 'ಹಿಂಗಂದಳು ಆಕಿ? ಶ್ರೀಮಂತಿಕಿ ಸೊಕ್ಕು ಬಂದದ!' ಎಂದು ಆಡಿದಳು. ಶಂಭುರಾಯರು, ಅಮೃತ ಇಬ್ಬರೂ ತಪ್ತರಾದರು. ಅವರ ಪೌರುಷ ದಿವ್ಮೊಂದು ಜಾಗೃತವಾಯಿತು. ಆದರೆ ಮಾಡುವರೇನು? ಆ ರಾಧಾಬಾಯಿಗೆ ನಾಲ್ಕು ಬಯ್ದರು. 'ಇನ್ನೊಮ್ಮೆ ಅವರ ಮನಿಗೆ ಕಾಲ ಹಾಕಬ್ಯಾಡರಿ' ಎಂದು ಇಬ್ಬರಿಗೂ ತಾಕೀದು ಮಾಡಿದರು. 'ಈವತ್ತು ಭಕ್ಕರಿ ಮಾಡಿ ಹಬ್ಬಮಾಡು ಅವ್ವ. ಬಡಗಾಲದಅಕ್ಷತೃತೀಯಾ ಇದು. ದೇವರಂಬೂವವ ಇದ್ದರ ಅವಗಿದು ಗೊತ್ತಾಗಲಿ' ಅಮೃತ ಗುಡುಗು ಹಾಕಿದನು. 'ಅದ್ಯಾಕ? ಈಗ ಹೋಗಿ ಒಂದು ರೂಪಾಯಿ ಗೋದಿ ತಂದುಕೊಡತೀನಿ. ಇಷ್ಟೇನು ಗತಿ ಗೇಡಾಗಿಲ್ಲ ನಾವು!' ಎಂದು ಶಂಭುರಾಯರು ಅಭಯವಿತ್ತರು. ಈ ಎಲ್ಲ ಘಟನೆ ಯಿಂದ ಅಮೃತನ ಮೊನ್ನಿನ ನಿರ್ಧಾರ ಇನ್ನಿಷ್ಟು ಬಲವತ್ತರವಾಯ್ತು. ಜೀವನದ ಸಮಸ್ಯೆಯಲ್ಲದೆ ಸುಂದರಾನಮದುವೆಯ ಸಮಸ್ಯೆಯೂ ಅವನ ವಿಚಾರಚಕ್ರದಲ್ಲಿ ವೇಗದಿಂದ ತಿರುಗ ಹತ್ತಿತು.

ಅಂದು ರಾತ್ರಿ ಊಟವಾದ ಮೇಲೆ ಅದೆಷ್ಟೊ ಹೊತ್ತು ಅಮೃತನ ತಾಯಿ ತಂದೆಯ ಕೂಡ ಮನೆತನದ ವಿಷಯ ಮಾತನಾಡುತ್ತ ಕೂತಿದ್ದನು. ಸುಂದರಾ ಸಹಿತ ಎಲ್ಲ ಹುಡುಗರು ನಿದ್ದೆ ಹೋಗಿದ್ದರು. ಈ ಮನೆಯಲ್ಲಿ ಸೇರಿದ ಬಡತನದ ಭೂತವನ್ನು ಹೊರಗೆಹಾಕಿ ಹೆತ್ತವರಿಗೂ ಒಡಹುಟ್ಟಿದವರಿಗೂ ಸುಖಸಮಾಧಾನ ವನ್ನು ಉಂಟುಮಾಡುವುದೇ ಇನ್ನು ತನ್ನ ಕೇವಲ ಕರ್ತವ್ಯವೆಂಬುದನ್ನು ನಿಚ್ಚಳ ವಾಗಿ ಅರಿತು ಅಂಥ ಕಳಕಳಿಯಿಂದ ಎಲ್ಲ ವಿಷಯಗಳನ್ನು ಹಿರಿಯರಿಂದ ತಿಳಿದು ಕೊಂಡನು. ಅದನ್ನು ನೋಡಿ ಇಬ್ಬರಿಗೂ ಅದೆಂಥ ಹಿಗ್ಗು! 'ನೀ ಮನಸಿನ ಮ್ಯಾಲ ತಗೊಂಡರ, ಅಮೃತ, ಏನ ಹೇಳಲಿ, ಬಂಗಾರದ ಮನಿ ಕಟ್ಟಬಹುದು!' ಎಂದರು ಶಂಭುರಾಯರು. 'ನೀ ಕಲಿಯೋದು ಮುಗಿಸಿ ಡಾಕ್ಟರ ಆಗಿ ಬಂದರ ನಮ್ಮ ಮನ್ಯಾಗಲಕ್ಷ್ಮಿ ಬಂದು ಕುಣೀತಾಳ' ಎಂದಳು ಪಾರ್ವತೀಬಾಯಿ. ಸರಿ ಯಾದ ಸಮಯ ನೋಡಿ ಇಬ್ಬರೂ ಅವನನ್ನು ಹುರಿದುಂಬಿಸಿದರು. ಇತ್ತೀಚೆ

ಅವನ ದೃಷ್ಟಿಯಲ್ಲಿಯೂ ಪ್ರಪಂಚವೇ ಪರಮಾರ್ಥವಾಗಿತ್ತು. ಬಂಗಾಲಕ್ಕೆ ತಾ ಹೋಗಿ ಮಾಡಿದ ಕೆಲಸದ ಬಗ್ಗೆ ಅವನಲ್ಲಿ ಹೆಮ್ಮೆಯೇನೂ ಕಡಿಮೆಯಾಗಿರಲಿಲ್ಲ. ಅದರ ಬಗ್ಗೆ ಹಳಹಳಿಯೂ ಇರಲಿಲ್ಲ. ಆದರೆ ಇನ್ನು ಮುಂದೆ ಮನೆತನದ ಒಳಿತೇ ತನ್ನ ಹೆಗ್ಗುರಿಯೆಂದು ಅವನು ಗೊತ್ತುಮಾಡಿದ್ದನು. ಪ್ರತಿದಿನವೂ ಮನೆಯಲ್ಲಿ ನಡೆಯುತ್ತಿರುವ ದುರಂತ ದೃಶ್ಯದಿಂದ ಅವನು ಅತಿಶಯವಾಗಿ ಕಳವಳಗೊಂಡಿದ್ದನು. ಅದರಿಂದ ಅವನ ಹೊಸಸಂಕಲ್ಪಕ್ಕೆ ಭಾವನೆಯ ಕಾಲ ಬಂದಿತ್ತು. ಯಾವ ತಾಯಿತಂದೆ ತನ್ನ ಸಲುವಾಗಿ ಬೇಕಾದ ತ್ಯಾಗ ಮಾಡಿ ಗಂಧಕೊರಡಿನಂತೆ ಜೀವ ತೆಯ್ದರೋ ಅವರಿಗೆ ಮುಪ್ಪಿನ ಕಾಲದಲ್ಲಿ ಒಂದಿಷ್ಟು ಸುಖಶಾಂತಿಯ ಪ್ರತಿಫಲವನ್ನು ಕೊಡದಿದ್ದರೆ ಹುಟ್ಟಿದ್ದರ ಸಾರ್ಥಕವೇನು? ಅವರು ತನಗೆ ಮಾಡಿದಂತೆ ತಾನು ತಂಗಿತಮ್ಮಂದಿರಿಗೆ ಮಾಡಬೇಡವೇ? ಬೀಳಲಿದ್ದ ಈ ಮನೆಗೆ ಆಧಾರವಾದ ತಾನೇ ಜಾರಿ ಹೋದರೆ ಗತಿಯೇನು? ಈ ಸ್ವಾರ್ಥಕ್ಕಿಂತ ಹೆಚ್ಚಿನ ಪರಮಾರ್ಥ ಈಗ ಯಾವುದು? ಬಂಗಾಲವೇನು, ತನ್ನ ಜಿಲ್ಹೆಯಾದ ವಿಜಾಪುರವೇನು, ಇವುಗಳಲ್ಲಿ ರೋಗ-ದಾರಿದ್ರ್ಯ ಬೂತಾಟಿಕೆ ನಡಸಿವೆಯಾದರೂ ಅವನ್ನು ಹೊಡೆದೋಡಿಸುವ ಮೊದಲು ತನ್ನ ಮನೆಯಲ್ಲಿಯ 'ಬಂಗಾಲ'ವನ್ನೂ 'ವಿಜಾಪುರ'ವನ್ನೂ ಹೊರಗಟ್ಟಬೇಡವೇ? ಹೊರ ಜಗತ್ತಿನ ಸೇವೆಗೆ ಸಂನ್ಯಾಸಿಗಳೂ ದೇಶಭಕ್ತರೂ ಇದ್ದಾರೆ. ತನ್ನ ಮನೆಯ ವ್ಯವಸ್ಥೆಗೆ ತನ್ನ ಹೊರತು ಯಾರಿದ್ದಾರೆ? ಈ ಬಗೆಯ ಭಾವಮಂಥನದಿಂದ ಅವನ ಹೊಸ ನಿರ್ಧಾರವು ತಲೆಯೆತ್ತಿತು. 'ಅಪ್ಪ ನೀವು ಹೇಳಿದಂಗ ಮಾಡತೀನಿ. ಇನ್ನು ಮ್ಯಾಲೆ ಮೊದಲಿನ್ಹಂಗ ಅಭ್ಯಾಸ ಸುರುವು ಮಾಡಿ ಜೂನ ತಿಂಗಳಲ್ಲಿ ಕಾಲೇಜಿಗೆ ಹೋಗತೀನಿ. ಬರುವ ವರ್ಷ ಪರೀಕ್ಷಾಕ್ಕ ಕೂತು ಪಾಸಾಗಿ ಬರತೀನಿ. ಆತಿಲ್ಲೊ?' ಎಂದು ಅವನಾಡಿದ ಮಾತು ಅವರಿಬ್ಬರಿಗೂ ಯಥಾರ್ಥ ಅಮೃತ ಸಿಂಚನವೇ ಆಯ್ತು. 'ಈವತ್ತು ಖರೇ ಹಬ್ಬ! ನನ್ನ ಹೊಟ್ಟೆ ತುಂಬಿ ಹೋತು.' ಪಾರ್ವತೀಬಾಯಿ ಹರ್ಷನಿರ್ಭರಳಾದಳು. 'ಅಷ್ಟುಮಾಡಪ, ಅಮೃತ. ಜಗತ್ತಿನಚಿಂತೆ ತಗೊಂಡೇನು ಮಾಡೋದು? ನಮ್ಮದು ನಾವು ಮೊದಲು ನೋಡಿಕೊಳ್ಳಬೇಕು' ಎಂದರು ಶಂಭುರಾಯರು. ಹಿಂದಿನ ಕೋಪತಾಪಗಳು ಒಂದು ನಿಮಿಷದಲ್ಲಿ ಗಾಳಿಯಲ್ಲಿ ಕರಗಿಹೋದವು. ಸುಖಸ್ವಪ್ನದಲ್ಲಿ ಮೂವರು ವಿಹರಿಸಿದರು. ಕೆಲವು ನಿಮಿಷಗಳಾದಮೇಲೆ ಅಮೃತ ನಂದನು: 'ಕಾಲೇಜಿಗರs ಹೋಗಲಿಕ್ಕೆ ಬೇಕು, ಆದರೆ ಖರ್ಚಿನ ವ್ಯವಸ್ಥಾ ಏನು? ನಿಮ್ಮದು ನಿಮಗ ಪ್ರಪಂಚದ ಭಾರರಗಡಾಗೇದ. ಈಗ ಇದನ್ನು ಕೇಳೋ

ದಂದರ ನನಗೆ ನಾಚಿಕೆ ಬರತದ.' ಶಂಭುರಾಯರು ಕೂಡಲೇ ಉತ್ತರಿಸಿದರು; ಅದರ ಕಾಳಜೀ ನೀ ಮಾಡಬೇಡ. ನೀ ಕಲೀತೀನಿ ಅಂದರೆ ನಾ ನನ್ನ ಜೀವ ಒತ್ತಿಯಿಟ್ಟು ದುಡ್ಡು ತರತೀನಿ ಆತಿಲ್ಲೊ? ನಿನಕಿಂತ ನಮಗ ಹೆಚ್ಚಿನ ಆಸ್ತಿ ಯಾವದು? ಇನ್ನೊಂದು ಹೊಲ ಮಾರೂಣ.ಒಂದು ಮೂರುಸಾವಿರ ಬಂದೂವಂದರ ಒಂದು ಸಾವಿರ ನಿನ್ನ ಖರ್ಚಿಗಾಗ್ತದ. ಎರಡು ಸಾವಿರ ಸುಂದರಾನ ಮದಿವಿಗೆ ಆಗ್ತದ.'

'ಹೊಲ ಯಾಕೆ ಮಾರುವದು; ಮತ್ತೇನಾದರೂ ಮಾಡಲಿಕ್ಕೆ ಬರುವುದಿಲ್ಲೇನು ?' ಎಂದು ಪಾರ್ವತಿಬಾಯಿ ಆಕ್ಷೇಪವೆತ್ತಿದಳು. ಆದರೆ ಬೇರೆ ಹಾದಿಯನ್ನು ಸೂಚಿಸಲಾಗದೆ ಸುಮ್ಮನಾದಳು. ಸುಂದರಾನ ಮದುವೆಯೆಂಬ ಮಾತು ಬಂದೊಡನೆ ಅಮೃತನಲ್ಲಿ ಹೊಣೆಗಾರಿಕೆಯ ಬುದ್ಧಿ ಜಾಗೃತವಾಯಿತು. 'ಇಲ್ಲಿಗೆ ಬಂದ ಹಿಡಿದು ನನಗೂ ಅದರ ಕಾಳಜಿ ಹತ್ತೇದ. ನಾ ಕಾಲೇಜಕ್ಕ ತಿರುಗಿ ಹೋಗುವದರೊಳಗಾಗಿ ಮದಿವಿ ಮಾಡಿಬಿಡೋಣ' ಈ ವಿಷಯ ಬಂದೊಡನೆ ಪಾರ್ವತಿಬಾಯಿಯ ಕೊರಗಿನ ಕವನ ಹೊರಬಿದ್ದಿತು. 'ಏನ ಹೇಳಲಿ ಅಮೃತ. ಸುಂದರಾನ ಲಗ್ನದ ಚಿಂತೆ ಮಾಡಿ ಮಾಡಿ ನನಗ ಸಿದ್ದಿ ಹತ್ತದಂಗಾಗೇದ. ಆಕಿನ್ನ ನೋಡಿದ ಘಳಿಗ್ಗೆ ನನ್ನ ಹೊಟ್ಟ್ಯಾಗ ಕಸೋಸಿ ಆಗತದ. ಆಕಿ ಮುಂದ ಅಂದರ ಭಾಳ ಸೂಕ್ಷ್ಮ ಹುಡುಗಿ, ಎಲ್ಲಿ ಹಚಿಗೊಂಡು ಜೀವಕ್ಕ ಏನಾರ ಮಾಡಕೋತಾಳೊ ಅಂತ ನುಂಗಿಕೋತೀನಿ. ಓಣ್ಯಾಗಿನ ಮಂದೆಲ್ಲ 'ಅಯ್ಯ, ಮೈನೆರೆದು ಎಷ್ಟು ವರ್ಷಾತು, ಕಚ್ಚಿ ಇಲ್ಲದ ಇನ್ನು ಎಷ್ಟು ದಿನ ಇರತದೋ ಏನೋ ಈ ಹುಡಗಿ! ಒಬ್ಬ ಮುದಕಗರ ಕೊಟ್ಟುಬಿಡಬಾರದ!'ಅಂತ ಥರಥರದಿಂದ ಆಡತಾರ. ಎಲ್ಲಾ್ಯರೆ ಕಳಿಸಿದೆ ಅಂದರ ಕೆಳಗ ಮಾರಿ ಹಕ್ಕೊಂಡು ಹೋಗಿ ಬರ್ತದ. ಭಾಳ ತಿಳಿವಳಿಕಿ ಹುಡುಗಿ...ಅಮೃತಾ, ಅವರಿಗಂತೂ ಮುಂಜಾನಿಯಿಂದ ಸಂಜಿತನಕ ಕೆಲಸ. ನೀನss ನೋಡಿ ಗೊತ್ತು ಮಾಡಪ. ಆಕೀ ಮದವಿ ಎಂದಾರೆ ಕಂಡೀನಿಲ್ಲೊ ಅನ್ನೂಹಂಗ ಆಗೇದ.' 'ಯಾಕss ನಾ ಏನು ಸುಮ್ಮನೆ ಕೂತೀನಂತ ತಿಳದೀಯೇನು ? ಹತ್ತು ಕಡೆ ನೋಡಿದಿವಿ. ಎಲ್ಲ್ಯೂ ಕೂಡಿಬರವಲ್ಲದು. ನಾ ಅರ ಏನು ಮಾಡಲಿ ?' ಎಂದು ಕೆರಳಿದ ಸ್ವಾಭಿಮಾನದಿಂದ ಶಂಭುರಾಯರು ಅಂದರು. ನಾ ಇಷ್ಟು ಪ್ರಯತ್ನ ಮಾಡತೀನಿ, ಅಪ್ಪ. ವಿಜಾಪುರದಾಗ ನನ್ನ ಗುರುತಿನ ಒಬ್ಬ ಹುಡುಗ ಇದ್ದಾನ. ಸ್ವಲ್ಪ ಉತ್ಪನ್ನ ಅದ. ಬಿ.ಎ. ಆಗಿ ಸಾಲಿಯೊಳಗ ಮಾಸ್ತರ ಆಗ್ಯಾನ. ಸ್ವಭಾವದಿಂದ ಗರೀಬ ಇದ್ದಾನೆ. ಅಲ್ಲಿಗೆ ಹೋಗಿ ಕೇಳಿ ಬರಲೇನು?' ಎಂದು ಅಮೃತ ಕೇಳಲು ಇಬ್ಬರೂ ಕೂಡಲೆ

ಒಪ್ಪಿಗೆ ಕೊಟ್ಟರು. ಮರುದಿನವೇ ಅಮೃತನು ವಿಜಾಪುರಕ್ಕೆ ತೆರಳಿದನು.

ವಿಜಾಪುರಕ್ಕೆ ಹೋದ ಮೇಲೆ ಪದ್ಧತಿಯಂತೆ ತನ್ನ ಆ ಗುರುತಿನ ವರದ ಗೋತ್ರ ನಕ್ಷತ್ರಗಳನ್ನು ತಿಳಿದುಕೊಂಡು ತನ್ನ ತಂಗಿಯದರೊಂದಿಗೆ ಜೋಯಿಸ ರಿಂದ ಕೂಡಿಸಿ ನೋಡಿದನು. ಬಹಳಷ್ಟುಗುಣಗಳು ಕೂಡುವವೆಂದು ತಿಳಿಯಿತು. ಇನ್ನು ಮುಂದಿನ ಹೆಜ್ಜೆ ಇಡಲು ಅಡ್ಡಿಯಿಲ್ಲವೆಂದು ತಿರುಗಾಟಕ್ಕೆಂದು ಅವನನ್ನು ಕರೆದು ಒಂದು ಏಕಾಂತಕ್ಕೆ ಹೋಗಿ ಅಲ್ಲಿ ಮಾತಿಗೆ ಮೊದಲು ಮಾಡಿದನು. ತನ್ನ ಬಂಗಾಲದ ಅನುಭವಮಾಲಿಕೆಯನ್ನು ವರ್ಣಿಸಿ ತಿರುಗಿ ಬಂದದ್ದರ ಕಾರಣ ಹೇಳಿ ಆತ್ಮೀಯವಾಗಿ ತನ್ನ ಮನೆತನದ ಸುಖದುಃಖವನ್ನು ತೋಡಿಕೊಂಡನು. ಚಿದಂಬರನು—ಇದು ಆ ಗೆಳೆಯನ ಹೆಸರು—ಎಲ್ಲವನ್ನು ಆಸ್ಥೆಯಿಂದ ಕೇಳಿ ಅಮೃತನ ಸಾಹಸವನ್ನು ಮೆಚ್ಚಿದನು. ಮುಂದೆ ಮಾತಿನ ಓಘದಲ್ಲಿ ಅಮೃತನು ತನ್ನ ತಂಗಿಯ ಸುದ್ದಿ ತೆಗೆದನು. 'ಅವಳ ಮದುವೆಯಾಗುವದಿದೆ,ಅದೊಂದು ನಮಗೆ ದೊಡ್ಡ ಚಿಂತೆ ಆಗಿದೆ' ಎನ್ನಲು 'ನಾ ಹುಡುಕಿ ಕೊಡಲು ನಿನಗೆ ಸಹಾಯ ಮಾಡತೀನಿ'ಎಂದು ಚಿದಂಬರನಂದನು. ಅದರಿಂದ ಅಮೃತನ ಮುಖ ಹಿಗ್ಗಿತು. ಆದರೆ ಒಳಗೆ ಮನಸ್ಸು ಅಳುಕಿತು. ಸಹಾಯ ಮಾಡತೀನಿ ಎಂದದ್ದು ಸಂತೋಷದ ವಿಷಯವಾದರೂ ಅದರಿಂದ ಅವನಿಗೇ ಕೇಳುವ ಪರಿಸ್ಥಿತಿ ಇರುವುದೋ ಇಲ್ಲವೋ ಎಂಬ ಪ್ರಶ್ನೆ ಹುಟ್ಟಿತು. ಸ್ವಲ್ಪ ಹೊತ್ತು ತಡೆದು ಬೇರೆ ಮಾತಾಡಿ ಕೊನೆಗೆ 'ನಿನ್ನ ಮದುವೆ ಇನ್ನೂ ಆಗಬೇಕಲ್ಲವೇ ?' ಎಂದನು. 'ಹೌದು. ಆದರೆ ಈಗೆಲ್ಲಿಯ ಮದುವೆ, ಸಿರೂರ. ನೌಕರಿ ಹತ್ತಿ ಈಗೊಂದು ವರ್ಷವಾಯಿತು.' ಈ ಹೌದಿನಲ್ಲಿ ಅವನ 'ಇಲ್ಲ'ವೂ ಅಡಕವಾಗಿತ್ತು. ಆದರೂ ಅಮೃತ ಸಲಿಗೆಯ ಬಲದಿಂದ 'ನೀನೇ ನಮ್ಮ ಬೀಗನೇಕೆ ಆಗಬಾರದು?'ಎಂದು ನೇರವಾಗಿ ಕೇಳಿದನು. ಚಿದಂಬರನಿಗೆ ಈ ಪ್ರಶ್ನೆಯೆಂದರೆ ಒಮ್ಮೆಲೆ ಗಾಳಿ ಬೀಸಿ ನುಗಿಸಿದಂತಾಯ್ತು. ಆದರೆ ಅವನೇನು ತಪ್ಪು ತಿಳಿಯಲಿಲ್ಲ. ಅವನು ತನ್ನನ್ನು ಅವಲಂಬಿಸಿ ಮನೆಯಲ್ಲಿ ೭–೮ ಜನರಿರುವದನ್ನೂ ತನ್ನ ಮಾಸ್ತರಿಕೆಗೆ ಸ್ಥಿರತೆ ಬರುವವರೆಗೆ ಮದುವಿಯ ವಿಚಾರ ಅಶಕ್ಯವೆಂದೂ ಸ್ಪಷ್ಟವಾಗಿ ಹೇಳಿಬಿಟ್ಟನು. 'ಹುಡುಗಿಯನ್ನು ನೋಡು, ಗೊತ್ತು ಮಾಡೋಣ. ಆಮೇಲೆ ಮಾಡಿಕೊಳ್ಳ ಬಹುದು' ಎಂದು ಮೂರು ನಾಲ್ಕು ರೀತಿಯಿಂದ ಅಮೃತನು ಮನವೊಲಿಸಲು ಹವಣಿಸಿದನು. ಆದರೆ ಅದು ಕೈಗೂಡಲಿಲ್ಲ. ಹೀಗಾಗಿ ಅವನಿಗೆ ತುಂಬ ನಿರಾಶೆ ಯಾಯಿತು. ಆದರೆ ಚಿದಂಬರನನ್ನು ಅವನು ದೂಷಿಸಲಿಲ್ಲ. ಹೆಚ್ಚು ಕಡಿಮೆ

ತನ್ನಂತೆ ಅವನ ಪರಿಸ್ಥಿತಿ ಇರುವಾಗ ತನ್ನನ್ನೆ ಮದುವೆಗೆ ಯಾರಾದರೂ ಕೇಳಿದರೆ ಚಿದಂಬರ ಕೊಟ್ಟ ಉತ್ತರವನ್ನೇ ತಾನೂ ಕೊಡುತ್ತಿದ್ದನು. ಇಬ್ಬರೂ ಎದ್ದು ತಿರುಗಿ ನಡೆದರು. ದಾರಿಯಲ್ಲೇ ತನ್ನ ಕೆಲಸ ಆಗಲಿಲ್ಲೆಂದು ಮನೆಯಲ್ಲಿ ಹೇಳ ಬೇಕಾಯಿತೆಂಬ ಹಳಹಳಿ, ಜೊತೆಗೆ ಈ ಮದುವೆಯ ಕೂಟಪ್ರಶ್ನೆ ಹೆಣ್ಣಿನ ದೃಷ್ಟಿ ಯಿಂದ ಒಂದು ತರ, ಗಂಡಿನ ದೃಷ್ಟಿಯಿಂದ ಇನ್ನೊಂದು ತರ ಆಗಿದ್ದರ ವಿವಂಚನೆ ಇದರಲ್ಲಿ ಅಮೃತ ಮುಳುಗೇಳುತ್ತಿದ್ದನು.

ಮರುದಿನ ಮಧ್ಯಾಹ್ನ ಒಣಗಿದ ಮೋರೆಯಿಂದ ಊರಿಗೆ ಹೊರಡ ಬೇಕೆಂದು ಅಮೃತ ಗೊತ್ತುಮಾಡಿದನು. ಮತ್ತೆಲ್ಲಿಯಾದರೂ ವರಗಳಿದ್ದರೆ ತಿಳಿಸಬೇಕೆಂದು ತನ್ನ ಮಿತ್ರರಿಗೂ ಆಪ್ತೇಷ್ಟರಿಗೂ ಹೇಳಿದನು. ಚಿದಂಬರನನ್ನು ಕಂಡ ದಿನ ರಾತ್ರಿ ಅವನಿಗನಿಸಿತು : ಇಲ್ಲಿಯವರೆಗೆ ಬಂದು ಜನಾರ್ದನರಾಯ ರನ್ನು ಕಾಣದೆ ಹೋಗಬೇಕೆ ? ಎಂದು. ಜನಾರ್ದನರಾಯರೆಂದರೆ ರಾಷ್ಟ್ರೀಯ ಸಭೆಯ ಏಕನಿಷ್ಠ ಸೇವಕರು. ಉತ್ತಮ ಪ್ರತಿಯ ಕೆಲಸಗಾರರು. ೧೯೨೧ರ ಕಾಲದಿಂದ ಸ್ವಾತಂತ್ರ್ಯದ ಚಳವಳಿಯಲ್ಲಿ ಧುಮುಕಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿ ಖಾದಿ-ಗ್ರಾಮೋದ್ಯೋಗಗಳ ಪ್ರಸಾರಕ್ಕೆ ಟೊಂಕಕಟ್ಟಿ ನಿಂತವರು. ವಿಜಾಪುರ ಜಿಲ್ಹೆಯಲ್ಲಿ 'ಜನತಾ ಜನಾರ್ದನ' ಎಂದು ಅವರಿಗೆ ಮೆಚ್ಚಿಗೆಯ ಹೆಸರು ಬಿದ್ದಿದೆ. ಸ್ಥಾನ-ಮಾನ, ಕೀರ್ತಿ ಇವ್ಯಾವೂ ಅವರನ್ನು ಸೆಳೆಯುತ್ತಿರ ಲಿಲ್ಲ. ಬಡಜನಕ್ಕೆ ಹೊಟ್ಟೆತುಂಬ ಅನ್ನ, ಮೈತುಂಬ ಅರಿವೆ ದೊರೆಯುವಂತೆ ಹಗಲಿರುಳು ಹೆಣಗುವುದೇ ಅವರು ಕೈಕೊಂಡ ವ್ರತವಾಗಿತ್ತು. ಈಗ ವಿಜಾಪುರ ಬರಗಾಲ ಸಮಿತಿಗೆ ಕಾರ್ಯದರ್ಶಿಗಳಾಗಿ ತಮ್ಮ ಅನಾರೋಗ್ಯವನ್ನು ಲೆಕ್ಕಿಸದೆ ಅವರು ದುಡಿಯುತ್ತಿರುವರು. ನಾಡ ತಾಯಿಯ ಗುಡಿಯಲ್ಲಿ ಹಚ್ಚಿದ ಊದಿನ ಕಡ್ಡಿಯಂತೆ ಉರಿದು ಸುತ್ತೆಲ್ಲ ನರುಗಂಪು ಬೀರುತ್ತಿರುವ ಈ ವ್ಯಕ್ತಿಯನ್ನು ಅಮೃತನು ಅನೇಕ ವರ್ಷದಿಂದ ಬಲ್ಲನು. ಅವನ ವಿಷಯವೂ ಅವರಿಗೆ ಗೊತ್ತಿತ್ತು. ಅಮೃತನು ರಾಷ್ಟ್ರೀಯ ಪ್ರವೃತ್ತಿಯಿಂದ ವಿದ್ಯಾರ್ಥಿಗಳಲ್ಲಿ ಕೆಲಸ ಮಾಡುತ್ತಿರುವುದನ್ನು ಅವರು ಅರಿತಿದ್ದರು. ಈಗ ಅವರ ಹತ್ತಿರ ಹೋಗಿ ತನ್ನ ಭಕ್ತಿಪೂರ್ವಕ ವಂದನೆಗಳನ್ನು ಸಲ್ಲಿಸಬೇಕೆಂದು ಅವನಿಗೆ ಒತ್ತಾಸೆ ಹುಟ್ಟಿತು. ಬೆಳಗಿನಲ್ಲಿ ಎದ್ದು ಅವರ ಕಡೆ ಹೊರಡಬೇಕೆನ್ನುವಷ್ಟರಲ್ಲಿ ಅವರೂ ಅವನಿಗೆ ಬಾ ಎಂದು ಹೇಳಿಕಳಿಸಬೇಕೆ ? ಅವನು ಬಂದದ್ದು ತಿಳಿದು ಭೆಟ್ಟಿಯಾಗಿ ಹೋಗಲು ಹೇಳಿಕಳಿಸಿದ್ದರು. ಅವರಿದ್ದಲ್ಲಿ ಹೋಗಿ ಅಮೃತನು ಕಂಡೊಡನೆ ಕೈಮುಗಿದು

ನಿಂತನು. 'ಇಷ್ಟ್ಯಾಕ ಉಪಚಾರೋ ಅಮೃತ! ಬಾ ಇಲ್ಲಿ ಹತೀಲೆ ಕೂಡ ಬಾ' ಎಂದು ಕರೆದು ಬೆನ್ನು ತಟ್ಟಿ ಹತ್ತಿರ ಕೂಡಿಸಿಕೊಂಡರು. ಮೊದಲು ಕ್ಷೇಮಸಮಾಚಾರದ ಮಾತುಗಳಾದವು. ಸ್ವಾಭಾವಿಕವಾಗಿ ಅವನ ಬಂಗಾಲದ ಸಾಹಸಕಥೆಯ ಪ್ರಸ್ತಾಪ ಬಂದಿತು. ಜನಾರ್ದನರಾಯರಿಗೆ ಅಲ್ಲಿ ಅವನು ಹೋದದ್ದು ಗೊತ್ತಿತ್ತು, ಮನಸ್ಸಿನಲ್ಲಿಯೇ ಅವನಿಗೆ ಭಲೆ ಎಂದಿದ್ದರು. ಈಗ ಅವನ ಬಾಯಿಂದಲೆ ಎಲ್ಲ ಕೇಳಿ ಹೆರಿಹಿರಿ ಹಿಗ್ಗಿದರು. 'ನಿನ್ನಂಥ ತರುಣರು ಬೇಕು ನಮ್ಮ ದುರ್ದೈವಿ ಕರ್ನಾಟಕಕ್ಕೆ!' ಎಂದು ಉದ್ಗಾರ ತೆಗೆದರು. 'ಈಗೇನು ಮಾಡತೀ? ಎಂದು ಕೇಳಿದರು. 'ಮನೆಯಲ್ಲಿ ಬಂದು ಕೂತೀನಿ' ಎಂದು ಅಮೃತನು ತನ್ನ ಮನೆತನದ ಸ್ಥಿತಿಗತಿಗಳನ್ನು ಬಿಚ್ಚುಮನಸ್ಸಿನಿಂದ ಸ್ವಲ್ಪದರಲ್ಲಿ ಹೇಳಿದನು. ಅವರು ಮರುಗಿದರು. 'ಇದೇ ನಮ್ಮೆಲ್ಲರ ಕಾಲ್ತೊಡಕು. ಇದನ್ನು ಕತ್ತರಿಸಿ ಮುಂದೆ ಹಾರಬೇಕು!' ಎಂದು ಹುರಿಗೊಂಡು ಆಡಿದರು. 'ಮುಂದೆ ಹಾರಿದರೆ ಆಳವಾದ ಕೊಳ್ಳವಿರುವದು. ಅದರಲ್ಲಿ ನಾನಲ್ಲದೆ ನಮ್ಮ ಮನೆಯ ಜನವೆಲ್ಲ ಬೀಳುವರು!' ಎಂದು ಅಮೃತನು ವಿಷಾದದಿಂದ ಹೇಳಿದನು. 'ಬಿದ್ದರೂ ಚಿಂತೆಯಿಲ್ಲ. ನಾವು ಬಿದ್ದರೆ ನಾಡು ಏಳುವದು, ಅಮೃತ. ಇದರಂಥ ಕಾಲ ಇನ್ನೊಂದು ಬರಲಿಕ್ಕಿಲ್ಲ. ಹಿಂದಿನ ಕಾಲದಲ್ಲಿ ಮೋಕ್ಷ ಸಿಗಲಿ ಎಂದು ಮೂಗು ಹಿಡಿದು ಕೂತು ತಪಸ್ಸು ಮಾಡುತ್ತಿದ್ದರು. ಈವತ್ತು ನಮ್ಮ ನಾಡಿಗೂ ನಮಗೂ ಮೋಕ್ಷ ದೊರೆಯಬೇಕಾದರೆ ದೇಶಸೇವೆ, ಜನಸೇವೆ ಮಾಡಬೇಕು. ಇದೇ ಇಂದಿನ ತಪಶ್ಚರ್ಯ.' ಜನಾರ್ದನರಾಯರ ಮಾತಿನಲ್ಲಿ ಆವೇಶಯುಕ್ತವಾದ ಭಾಷಣಕಾರನ ಆರ್ಭಟೆಯಿರಲಿಲ್ಲ. ಕವಿಯ ಕಲ್ಪನಾಪ್ರಪಂಚವಿರಲಿಲ್ಲ. ದೇಶಕ್ಕಾಗಿ ದುಡಿದು ದುಡಿದು ಹಣ್ಣಾದ ಜೀವದ ಕೂಗಿತ್ತು. ಅಂತೇ ಅದಕ್ಕೆ ಅಷ್ಟು ಬೆಲೆಯಿತ್ತು.

'ನೀವು ಹೇಳುವುದು ಸುಳ್ಳಲ್ಲ' ಅಮೃತನು ಪುಲಕಿತನಾಗಿ ಆಡಿದನು.

ಕೆಲನಿಮಿಷಗಳು ಮೌನದಲ್ಲಿ ಹೋದವು. 'ತಮ್ಮ ಪ್ರಕೃತಿ ಈಗ ಇನ್ನೂ ಅಷ್ಟು ಸುಧಾರಿಸಿಲ್ಲ ಎಂದು ಕೇಳಿದೆ. ತ್ರಾಸವಾಗುತ್ತಿದ್ದರೆ ನಾ ಹೋಗಲೆ?'

'ಯಾಕೆ? ಇಷ್ಟು ಬೇಗ ಪಾರಾಗಬೇಕಂತೀಯೇನು? ನಿನಗೆ ಬಹಳ ಹೇಳುವದಿದೆ. ನನ್ನ ಪ್ರಕೃತಿಯ ವಿಷಯಕ್ಕೆ ಅಲ್ಲ. ನೋಡು ಅಮೃತ, ಈ ದೇಹ ಕೆಟ್ಟ ರಸ್ತೆಯ ಮೇಲೆ ಹೊಡದು ಹೊಡದು ನುಗ್ಗಾದ ಖಟಾರ ಮೋಟರದಂತೆ ಆಗಿರತದೆ. ಇನ್ನ ಇದೇನು ಛಲೋ ದುರಸ್ತ ಆಗುವ ಆಶೆ ಇಲ್ಲ. ಯಂತ್ರ ಪೂರಾ

ನಿಲ್ಲುವ ತನಕ ಜನದ ಸೇವಾ ಮಾಡಬೇಕು. ಇದೇ ನನ್ನ ಧ್ಯೇಯ.'

'ಅದೆಲ್ಲಾ ಸರಿ. ಆದರೆ ಇನ್ನೂ ಕೆಲಸಮಾಡುವಷ್ಟು ತ್ರಾಣ ನಿಮ್ಮಲ್ಲಿಲ್ಲದಾಗ ಈ ಬರಗಾಲ ಸಮಿತಿಯ ಕೆಲಸಕ್ಕೆ ನಿಂತುಬಿಟ್ಟಿರಲ್ಲ!'

'ಹೌದಪ.ಬರಗಾಲ ಒಂದು ನಿಂದರಬೇಕಲ್ಲ,ನನಗೆ ತ್ರಾಣಬರುವವರೆಗೆ! ಹೊಟ್ಟೆಗಿಲ್ಲದೆ ಒದ್ದಾಡುವ ಜನರನ್ನು ಒಂದೇ ತುತ್ತಿನಲ್ಲಿ ನುಂಗಲಿಕ್ಕೆ ಬಂದ ಯಮರಾಯ ಒಂದು ತಡೆಯಬೇಕಲ್ಲ? ಅಷ್ಟೆಲ್ಲಾ ನನ್ನ ಜಿಲ್ಹೆಯಜನರು ಅಂದರೆ ದೇಶದ ಪ್ರಾಣವಾಗಿದ್ದ ಹಳ್ಳಿಯ ಬಂಧುಗಳ ಪ್ರಾಣ ಹಾರಿಹೋಗುವುದಕ್ಕಿಂತ ನನ್ನೊಬ್ಬನ ಪ್ರಾಣ ಹೋಗತಿದ್ದರೆ ಹೋಗಲಿ. ಸೇವೆಗಾಗಿ ಹುಟ್ಟಬಂದ ಜೀವ ಸೇವೆಯಲ್ಲಿಯೇ ಸವೆದು ಹೋದಂತಾಗುವುದು.'

ಅಮೃತನಿಗೆ ಈ ತೇಜಸ್ವಿಯಾದಮಾತುಗಳಿಂದ ಕ್ಷಣಕ್ಷಣವೂ ಉತ್ಸಾಹವು ಉಕ್ಕೇರುತ್ತಿತ್ತು. 'ಸಮಿತಿಯ ಕೆಲಸ ಈಗ ಹೇಗೆ ನಡೆದಿದೆ?'

'ಅದೇ ನಿನಗೆ ಹೇಳಬೇಕಾದದ್ದು, ಅಮೃತ. ಬರಗಾಲ ಸಮಿತಿಯೆಂದ ಮೇಲೆ ಕೆಲಸಗಾರರಿಂದಲೇ ಮೊದಲು ಬರಗಾಲ ಸುರುವಾಗಿದೆ! ಅಂತೇ ನನ್ನ ದೇಹಸ್ಥಿತಿ ಏನೇ ಇದ್ದರೂ ಲಕ್ಷ್ಯಕ್ಕೆ ತಾರದೆ ನಾನು ಹೊಣೆ ಹೊತ್ತು ನಿಂತಿದ್ದೇನೆ. ರಾಷ್ಟ್ರೀಯ ಕೆಲಸಗಾರರನ್ನು ಜೇಲಿನಿಂದ ಹೊರಗೆ ಬರಮಾಡಿಕೊಂಡಿದ್ದೇವೆ. ಪರ ಪ್ರಾಂತದಿಂದ ದಶದಿಕ್ಕುಗಳಿಂದ ಧನಸಹಾಯ ಸೂರೆಯಾಗಿ ಬರುತ್ತಿದೆ. ಮುಂಬಯಿಯಿಂದ,ಬಂಗಾಲದಿಂದ ಅನುಭವಿಕ ಕಾರ್ಯಕರ್ತರು ಬಂದಿದ್ದಾರೆ. ಜಿಲ್ಹೆಯ ತುಂಬ ತಿರುಗಾಡಿ ನಮಗೆನೆರವನ್ನು ನೀಡುತ್ತಿದ್ದಾರೆ.ರಾಮಕೃಷ್ಣಮಠದ ಸಂನ್ಯಾಸಿಗಳು ಬಂದು ತಮ್ಮ ಶಿಷ್ಯರ ಕೂಡ ಕಾಳು ಮಾರುವ ಕೆಲಸವನ್ನು ಕೂಡ ಮಾಡಲು ಸಿದ್ಧರಾಗಿದ್ದಾರೆ. ಆದರೆ ಕರ್ನಾಟಕದ ಕೆಲಸಗಾರರೆಲ್ಲಿದ್ದಾರೆ? ಅನುಭವಿಕರು ಜೇಲಿನಲ್ಲಿ.ಉಳಿದವರು ತಂತಮ್ಮ ಪ್ರಪಂಚದ ಜೇಲಿನಲ್ಲಿ! ಶಾಲೆ-ಕಾಲೇಜಿನ ತರುಣರು ಈ ಸೂಟಿಯಲ್ಲಿ ಆದರೂ ಕೆಲಸಕ್ಕೆ ಮುಂದೆ ಬರಬೇಕೆಂದು ಅಂಗಲಾಚಿ ಕರೆದೆ. ವಿಜಾಪುರ ಜಿಲ್ಲೆಯ ಯುವಕರಿಗೆ ಮೊರೆಯಿಟ್ಟೆ. ಯಾರೂ ಬರಲಿಲ್ಲ. ಎಲ್ಲರೂ ತಮ್ಮ ಚೈನಿ,ತಮ್ಮ ಡಿಗ್ರಿ,ತಮ್ಮ ನೌಕರಿ, ತಮ್ಮ ಅಡಬಣಿ ಇದರಲ್ಲಿ ಗರ್ಕಾಗಿದ್ದಾರೆ. ಇಂಥ ಜಿಲ್ಹೆಗೆ ನಿರಂತರ ಬರಗಾಲ ಬರದಿದ್ದರೆ ಇನ್ನೇನು ಬರಬೇಕು?' ಜನಾರ್ಧನರಾಯರು ಸಾಮಾನ್ಯವಾಗಿ ಶಾಂತವೃತ್ತಿಯವರು. ಆದರೆ ಈ ಮಾತುಗಳ ಕಿಡಿ ಸೂಸುವಾಗ ಅವರ ಮುಖ ಕಾದು ಕೆಂಪೇರಿತು. ಅಮೃತನಿಗೆ ಭಯ ಹುಟ್ಟಿತು—ಅವರ ಸ್ವಾತ್ತಿಕ ಸಂತಾಪದ ಜ್ವಾಲೆ ತನಗೆಲ್ಲಿತಾಕು

ನದೋ ಎಂದು. ಅವರು ಮಾತಾಡಿ ತುಸು ತಡೆದಿರಲು' ನೀವು ಹೇಳಿದಂತೆ ನಮ್ಮ ಜಿಲ್ಹೆಯ ತರುಣರಿಗೆ ಇದು ನಾಚಿಕೆಯ ಮಾತು !' ಎಂದು ಬೆಂಬಲ ಕೊಟ್ಟನು. ಅಮೃತ, ಸುದೈವದಿಂದ ಕೆಲಸ ಈಗ ವ್ಯವಸ್ಥಿತವಾಗಿ ನಡೆದಿದೆ. ಸಾವನ್ನು ಜಿಲ್ಹೆಯಿಂದ ಹೊರಗಟ್ಟಿದ್ದೇವೆ. ಅನೇಕ ಕಡೆಗೆ ಅನ್ನ ಛತ್ರ, ದನಗಳ ಛತ್ರ, ಮೇವಿನ ಕೊಟ್ಟಿಗೆ, ಹೀಗೆ, ತರತರದ ಕೆಲಸಗಳು ನಡೆದಿವೆ. ಸರಕಾರದಿಂದ ಬರಗಾಲದ ಕಾಮಗಾರಿಕೆಗಳೂ ಸಾಗಿವೆ. ಆದರೂ ನಡೆದ ಕೆಲಸವನ್ನು ದಿನಾಲು ಕಣ್ಣಿಟ್ಟು ನೋಡುವವರು ಬೇಕು. ಪ್ರಸಂಗ ಬಂದಾಗ ಸ್ವಂತ ದುಡಿಯುವವರು ಬೇಕು. ಸಾವು ತಪ್ಪಿತೆಂದು ಜನ ಚೆನ್ನಾಗಿ ಬದುಕುವರೆಂದು ತಿಳಿಯುವಂತಿಲ್ಲ. ತಾಲೂಕಿಗೊಬ್ಬರಂತೆ ಮೇಲ್ವಿಚಾರಕರನ್ನು ನೇಮಿಸಲಾಗಿದೆ. ಅವರಿಗೆ ಸಹಕಾರ ನೀಡುವವರು ಬೇಕಾಗಿದ್ದಾರೆ.'

ಈ ಮಾತಿಗೆಬಂದೊಡನೆ ಜನಾರ್ದನರಾಯರ ಅಪೇಕ್ಷೆ ಏನಿರಬೇಕೆಂಬುದು ಅಮೃತನಿಗೆ ನಿಚ್ಚಳವಾಗತೊಡಗಿತು.ಆಗ ತಾನುಹಿಂಜರಿದರೆ ಎಂಥಹೇಡಿಯಾಗಿ ತೋರೇನು ಎಂಬ ಎದೆಗುದಿ ಹುಟ್ಟಿತು. ಎರಡು ದಿನದ ರಾತ್ರಿಯ ಹೊತ್ತು ತಾಯಿ-ತಂದೆಯ ಇದಿರು ಆಡಿದ ಮಾತು, ಮಾಡಿದ ನಿಶ್ಚಯ ಅವನ ಕಿವಿಯಲ್ಲಿ ಕಟ್ಟಿದವು. ಅವನೇನೂ ಮಾತಾಡಲಿಲ್ಲ. ' ಯಾಕೆ ಸುಮ್ಮನೆ ಕೂತಿ ? ನಿನ್ನ ಸುತ್ತು ಬಂತೆಂದು ಹೆದರಿದಿ ಹೌದಲ್ಲೊ ? ನನಗೆ ಗೊತ್ತು, ಅಮೃತ. ಕನ್ನಡ ತರುಣರು ಹರಟೆ ಹೊಡೆಯಲಿಕ್ಕೆ ಶೂರರು.ಕೆಲಸದ ಮಾತು ಬಂದರೆ ಆಯಿತು. ಅವರ ಮುಂದೆ ಉತ್ತರ-ಕುಮಾರನೇನು ನಿಲ್ಲುವನು ? ' ಅಮೃತನಿಗೆ ಬಹಳ ನಾಚಿಕೆಯಾಯಿತು. 'ನಿನ್ನ ಗುಣ ನನಗೆ ಗೊತ್ತಿದೆ, ಅಮೃತ. ಈಗ ನಾ ಹೇಳಿದ್ದು ನಿನ್ನ ಟೀಕೆ ಅಲ್ಲ. ನಮ್ಮ ಹುಡುಗರ ಸ್ವಭಾವ ಹೇಳಿದೆ. ಇಲ್ಲಿ ನೋಡು, ಬಾಗಿಲುಕೋಟೆ ತಾಲೂಕಿನಲ್ಲಿ ನೀ ಕೆಲವು ದಿನ ಕೆಲಸ ಮಾಡತೀಯ ?'

' ನೀವು ಹೇಳಿದರೆ ಮಾಡತೀನಿ.' ಎಂದು ಒಮ್ಮೆಲೆ ಅಮೃತ ಅಂದು ಬಿಟ್ಟನು. ಆದರೆ ಮನದ ಹಿನ್ನೆಲೆಯಲ್ಲಿ ದೊಡ್ಡ ತುಮುಲ ನಡೆಯಿತು. ಹೀಗೆ ತತ್‌ಕ್ಷಣ ಒಪ್ಪಬಾರದೆಂದು ಒಂದು ಮನದಭಾಗ ಜೋರಾಗಿ ಪ್ರತಿಭಟಿಸುತ್ತಿತ್ತು ಇನ್ನೊಂದು ಭಾಗ ಒಪ್ಪಿದರೆ ತಪ್ಪೇನು ಎಂದು ಹೋರಾಡುತ್ತಿತ್ತು. ತನ್ನ ಪರಿಸ್ಥಿತಿ ಜನಾರ್ದನರಾಯರಿಗೆ ಗೊತ್ತಿದ್ದ ಕಾರಣ, ಅವರೇ ತನ್ನ ಆ ಕೆಲಸದಿಂದ ಮುಕ್ತಮಾಡಬಹುದು ಎಂದು ಕೊನೆಗೆ ಯೋಚಿಸಿದನು.

'ನೀವು ಹೇಳಿದರೆ ಅಂದರೇನು ಅಮೃತ! ಈಗ ಹೇಳಿದವರಾರು?'

'ಅದು ಸರಿ, ಆದರೆ ನನ್ನ ಅನುವು ಆಪತ್ತು ನಿಮಗೆ ಗೊತ್ತಿರುವದು. ಅದನ್ನೆಲ್ಲ ವಿಚಾರಿಸಿ ನೀವು ಹೇಳಿದರೆ ನಾ ಸಿದ್ಧನಿರುವೆನು.'

'ಅದನ್ನೆಲ್ಲಾ ನಾ ನೋಡುತ್ತಾ ಕೂಡುವುದಿಲ್ಲ, ಅಮೃತ. ನೋಡುವ ದಿವಸಗಳಲ್ಲ ಇವು. ಇಷ್ಟಾಗಿ ಒಂದೆರಡು ತಿಂಗಳು ಕೆಲಸ ಮಾಡಿ ಮುಂದೆ ನೀ ಕಾಲೇಜಿಗೆ ಹೋಗುವದಿದ್ದರೆ ಹೋಗೀಯಂತೆ' ಈ ಸೂಚನೆಯಲ್ಲಿ ಅಮೃತನಿಗೆ ಅರ್ಥವಿದೆ ಎಂದು ಅನಿಸಿತು. ಆದರೆ ಮನೆಯಲ್ಲಿ ತಾಯಿತಂದೆ ಇಷ್ಟಕ್ಕೂ ಒಪ್ಪ ಲಾರರೆಂದು ಅವರಿಗೆ ತಿಳಿಹೇಳಿದನು. 'ಒಪ್ಪಿಸುವ ಪ್ರಯತ್ನ ಮಾಡು; ಒಪ್ಪ ದಿದ್ದರೆ ನಿನ್ನಿಷ್ಟಕ್ಕೆ ನೀ ಹೊರಡು.' ಹೀಗೆ ಕೆಲಹೊತ್ತು ಸಂಭಾಷಣೆ ನಡೆಯಿತು.

ಬಾಗಿಲುಕೋಟೆಗೆ ಹೋಗಿ ನಾಲ್ಕು ದಿನದಲ್ಲಿ ತನ್ನ ನಿರ್ಣಯವನ್ನು ತಿಳಿಸುವೆನೆಂದೂ ತನಗೂ ಅವರ ಕೈಕೆಳಗೆ ಜನಸೇವೆ ಮಾಡುವ ಹಂಬಲವಿರುವು ದೆಂದೂ ಹೇಳಿ ಅಮೃತನು ನಮಸ್ಕರಿಸಿ ತಾನಿಳಿದಲ್ಲಿ ಹೋದನು. ಅಂದೇ ಮಧ್ಯಾಹ್ನ ಗಾಡಿಗೆ ಊರಿಗೆ ಹೊರಟನು. ಗಾಡಿಯ ತೂಗಾಟ ಅವನ ವಿಚಾರ ಗಳ ತಾಕಲಾಟ ಇದರಲ್ಲಿ ಮನಸ್ಸಿಗೆ ನೆಮ್ಮದಿಯೆ ಇರಲಿಲ್ಲ. 'ತಂಗಿಗೆ ವರ ನೋಡಲಿಕ್ಕೆ ಬಂದೆ. ವರನಂತೂ ಗೊತ್ತಾಗಲಿಲ್ಲ. ಹೊಸ ಸಮಸ್ಯೆಯೊಂದನ್ನು ಕರೆತಂದೆ' ಎನ್ನುತ್ತ ಅಂದು ಸಂಜೆ ಮನೆಯನ್ನು ಸೇರಿದನು.

ವಿಜಾಪುರಕ್ಕೆ ಹೋದ ಕೆಲಸವಾಗಲಿಲ್ಲವೆಂದು ತಿಳಿದು ಮನೆಯಲ್ಲಿ ಎಲ್ಲರೂ ಕುಗ್ಗಿದರು. ಅದರಲ್ಲಿ ಸುಂದರನಿಗೆ ಉಂಟಾದ ನಿರಾಶೆ ಅಷ್ಟಿಷ್ಟಲ್ಲ. ಯಾರ ಮುಂದೆ ಆಡದಿದ್ದರೂ ತನಗಾಗಿ ಒಬ್ಬ 'ಭೊಲೋ' ವರನನ್ನು ಗೊತ್ತುಮಾಡಿ ಕೊಂಡು ಬರಲಿಕ್ಕೆ ಅಣ್ಣನು ಹೋಗಿರುವನೆಂದು ಎರಡು ಮೂರುದಿನ ಸಂತಸದ ತೆರೆಯ ಮೇಲೆ ತೇಲುತ್ತಿದ್ದಳು. ಮದುವೆಯಾದವರ ಉಬ್ಬಿನಿಂದ ತಿರುಗಿದಳು. ತಾಯಿ ಹೇಳಿದ ಕೆಲಸಗಳನ್ನು ಉಮೇದಿಯಿಂದ ಮಾಡಿದಳು. ಆದರೆ ಎಲ್ಲವೂ ಶೇಖಮಹಮ್ಮದನ ಹಗಲುಗನಸಾಗಿ ಒಡೆದುಹೋಯಿತು. ತನ್ನೊಳಗೆ ಕುದಿ ಯುತ್ತ ಸಣ್ಣ ಮೋರೆ ಮಾಡಿಕೊಂಡಳು. ಅಮೃತನಿಗೆ ಇದು ಗೊತ್ತಾಗಿ ಸಮಾ ಧಾನ ಮಾಡಬೇಕೆಂದು ಹಾತೊರೆದನು. ಆದರೆ ಅದಕ್ಕೂ ಅವಳಿಗೆ ನಾಚಿಕೆ. ಮದುವೆಯೆನ್ನುವುದೆಂದರೆ ಸಮಾಜದಲ್ಲಿ ನಾಚಿಕೆಯ ವಿಷಯವಾಗಿರುವಾಗ ಅವಳ ನಡತೆಯೆಲ್ಲ ಸಹಜವೆ. ಅಮೃತನಿಗೆ ತಾನು ವಿಜಾಪುರದಿಂದ ಕರೆತಂದ ಇನ್ನೊಂದು ಸಮಸ್ಯೆ ತಲೆ ತಿನ್ನತೊಡಗಿತು. ಅದರಲ್ಲಿ ಅವನೀಗ ಮನಸ್ಸು

ಮುಳುಗಿಸಿ ಹೊರಗಿನ ಪರಿವೆಯಿಲ್ಲದೆ ಮೂಲೆ ಹಿಡಿದು ಕೂಡಹತ್ತಿದನು. ವಿಜಾಪುರಕ್ಕೆ ತಾನು ಹೋದ ಉದ್ದೇಶ ಕೈಗೂಡಲಿಲ್ಲವೆಂದು ಅವನು ಮನಸ್ಸಿಗೆ ಹಚ್ಚಿಕೊಂಡಿರಬಹುದೆಂದು ತಂದೆತಾಯಿ ಇಬ್ಬರ ಕಲ್ಪನೆ. 'ಅದನ್ಯಾಕ ಅಷ್ಟು ಹಚಿಗೋತಿ? ದೈವದಾಗ ಇದ್ದದ್ದು ಆಗ್ತದ. ನಿನ್ನ ಪುಸ್ತಕ ತೆಗೋ ನೀ ಓದಿಕೋತ ಕೂಡು' ಎಂದು ಶಂಭುರಾಯರು ಮೇಲಿಂದ ಮೇಲೆ ಹೇಳುತ್ತಿದ್ದರು. ಅವರ ಹೇಳಿಕೆಯಿಂದಲೇ ಅವನ ಒಳದೋಟಿ ಇನ್ನೂ ಹೆಚ್ಚಾಗಿ ನಡೆಯುತ್ತಿತ್ತು. ಅವರಿಗೆ ಹೇಳಲಾರ, ತಾನಾಗಿ ಬಗೆಹರಿಸಲಾರ—ಈ ಸ್ಥಿತಿಯಾಯಿತು. ಜನಾರ್ದನರಾಯರ ಸಂದೇಶವೆಂದರೆ ಜನತೆಯ ಸಂದೇಶ. ಅದನ್ನು ಕೇಳಬೇಕೆ? ಮನೆತನದ ಕರೆಯನ್ನು ಕೇಳಬೇಕೆ ? ಒಂದೆರಡು ತಿಂಗಳ ಮಟ್ಟಿಗೆ ಕರೆದಿದ್ದಾರೆ. ಅಂದಮೇಲೆ ಇದರಲ್ಲಿ ತೊಡಕೇನು ? ಮನೆಯಲ್ಲಿ ಹೇಳಿದರೆ ಒಪ್ಪಬಹುದು ಎಂದೊಮ್ಮೆ ತೋರುತ್ತಿತ್ತು. ಆದರೆ ಒಂದೆರಡು ತಿಂಗಳೆಂದು ಹೇಳಿ ಮುಂದೆ ಅದರಲ್ಲಿಯೇ ತೊಡಗಬಹುದೆಂಬ ಅವರ ಹೆದರಿಕೆಯನ್ನು ಹೇಗೆ ಕಳೆಯಬೇಕು? ತನ್ನ ಸಲುವಾಗಿ ಅವರು ಬಹಳ ಭಯಗ್ರಸ್ತರಾಗಿದ್ದಾರೆ. ತನ್ನನ್ನೇ ನಂಬಿಕೊಂಡು ಕಾಲ ಹಾಕುತ್ತಿದ್ದಾರೆ. ಕೆಲವು ದಿನದ ಹಿಂದೆ ಸ್ಪಷ್ಟವಾಗಿ ಅವರಿಗೆ ವಚನ ಕೊಟ್ಟ ತಾನು ಈಗ ವಿಷಯವನ್ನು ತೆಗೆಯುವುದಾದರೂ ಹೇಗೆ ? ಈ ಬಗ್ಗೆಯಾಗಿ ಅವನು ಯೋಚಿಸಿಯೇ ಯೋಚಿಸಿದನು. ಅವನಿಗೆ ಊಟ ಸವಿ ಹತ್ತಲಿಲ್ಲ. ನಿದ್ದೆ ಹಾರಿಹೋಯಿತು. ಆದರೆ ಕೊನೆಗೆ ಒಂದು ನಿರ್ಣಯಕ್ಕೆ ಬಂದನು. ಅವರಿಗೆಲ್ಲವನ್ನೂ ಹೇಳಬೇಕು ; ತನ್ನ ಅಪೇಕ್ಷೆಯನ್ನು ತಿಳಿಸಬೇಕು. ಪರೀಕ್ಷೆಗೆ ಅಡ್ಡಿಯಾಗದಂತೆ ಸ್ವಲ್ಪ ದಿವಸದ ವರೆಗೆ ಮಾತ್ರ ಬರಗಾಲ ಸಮಿತಿಯ ಕೆಲಸ ಮಾಡುವೆನೆಂದು ನಿಚ್ಚಳಗೊಳಿಸಬೇಕು. ಇದಕ್ಕೆ ಅವರು ಒಪ್ಪಿದರೆ ಜನಾರ್ದನರಾಯರಿಗೆ ಹಾಗೆ ಬರೆದು ತಿಳಿಸಬೇಕು, ಇಲ್ಲದಿದ್ದರೆ ಇಲ್ಲ.

ಒಂದು ರಾತ್ರಿ ಊಟ ಉಡಿಗೆಯಾದ ಮೇಲೆ ಮೂವರೂ ಮಾತಾಡುತ್ತ ಕೂತಿದ್ದರು. 'ಸುಂದರಾನ ಮದುವೀದು ನೀ ಅಷ್ಟು ಯಾಕೆ ಹಚಿಗೊಂಡೀ? ಮತ್ತೆಲ್ಯಾರ ವರ ನೋಡಿದರಾಯಿತು.' ಎಂದು ಶಂಭುರಾಯರನ್ನಲು 'ಅಕೀದಲ್ಲ ತನ್ನ ಮದಿವೀ ಚಿಂತಿ ಹತ್ತಿದ್ದೀತು ಅವಗ, ಅದ್ಹೆಂಗ ಹೇಳತಾನ ?' ಎಂದು ಪಾರ್ವತಿಬಾಯಿ ಅಂದಳು. 'ಹಿಂಗೇನು!' ಎಂದು ಶಂಭುರಾಯರು ಮುಗುಳ್ನಕ್ಕು 'ಅದಕ್ಕೇನು ತಡ ? ನಾಳೆ ಬೆಳಗಾದರ ನೂರು ಕನ್ಯಾ ಮನೀ ಮುಂದ ಬರತಾವ ಈಗ್ಯ ಮಾಡುವುದಿಲ್ಲ ಅಂತ ನಾವು ಹೇಳೀವಂತ ಮಂದಿ ಉಸಾಬರಿ ಮಾಡಿಲ್ಲ.

ಆಕಿ ಅಂಬೂದು ಖರೇ ಏನು ಅಮೃತ?' ಎಂದು ಕೇಳಿದರು. ಇದೊಂದು ಮೂರನೆಯ ಸಮಸ್ಯೆ ತಲೆಯೆತ್ತಿತೆಂದು ಏನು ಹೇಳಬೇಕು ತಿಳಿಯದೆ ಅಮೃತನು ಮೋರೆ ಗಂಟುಹಾಕಿ ಕುಳಿತನು. ಹಿರಿಯರು ಮೌನವೇ ಸಂಪೂರ್ಣ ಸಮ್ಮತಿಯ ಗುರುತೆಂದು ಭಾವಿಸಿ ತಮ್ಮೊಳಗೆ ತಮ್ಮ ಕಡೆ ವಿಚಾರಣೆಗೆಂದು ಬಂದ ಹುಡುಗಿ ಯರ ಗುಣದೋಷ ವಿಮರ್ಶೆಯನ್ನು ನಡೆಸಿದರು. ಅದನ್ನೆಲ್ಲ ಕೇಳುತ್ತಿರುವಂತೆ ಅಮೃತನಿಗೆ ಚಮತ್ಕಾರವಾದ ನಗೆ, ವಿಚಿತ್ರವಾದ ನೋವು ಎರಡೂ ಒಂದೇ ಕಾಲಕ್ಕೆ ಉಂಟಾದವು. ಇನ್ನು ಸುಮ್ಮನೆ ಬಾಯಿ ಹೊಲಕೊಂಡು ಕೂಡಬಾರ ದೆಂದು ಇಬ್ಬರ ಮುಂದೆ ತನ್ನ ಹೃದ್ಗತವನ್ನು ತಿಳಿಸಿಬಿಟ್ಟನು. ವಿಜಾಪುರದಲ್ಲಿ ಜನಾರ್ದನರಾಯರು ಮಾತಾಡಿದ್ದರ ಸಾರಾಂಶವನ್ನು ಹೇಳಿ ತಾನದಕ್ಕೆ ಇನ್ನೂ ಹೂಗೊಟ್ಟಿಲ್ಲವೆಂದೂ ಮನೆಯಲ್ಲಿ ವಿಚಾರಿಸಿ ತಿಳಿಸುವೆನೆಂದಿರುವೆನೆಂದೂ ಅರುಹಿ ದನು. ಶಂಭುರಾಯರ ಮೋರೆ ಒಮ್ಮೆಲೆ ಗಂಟಿಕ್ಕಿಕೊಂಡಿತು. ಅವರ ಸಂತಾಪ ಉಕ್ಕೇರಿತು. 'ನೋಡಿದ್ಯಾ, ನಿನ್ನ ಮಗ ಮದಿವೀ ವಿಚಾರ ಮಾಡತಾನಂತ ಅಂತಿದ್ದಿ. ಕೇಳವನ ಮುತ್ತಿನಂಥಾ ಮಾತು! ಅವ ನಮ್ಮನ್ನ ನಡುನೀರಾಗ ಒಯ್ದು ಮುಳುಗಿಸಿ ಹೋಗಬೇಕಂತಾನ ದೇಶಸೇವಾಕ್ಕ. ಅವೊಬ್ಬವ ಜನಾರ್ದ ನರಾಯ ತನ್ನ ಮನಿಮಾರು, ಹೆಂಡಿರು ಮಕ್ಕಳನ್ನು ಗೂತ್ತಿಗೆ ಹಚ್ಚಿ ಸಂನ್ಯಾಸಿ ಆಗಿ ಕೂತಾನ. ಮಂದೀ ಹುಡುಗರ್‍ನ ಇಷ್ಟು ತನ್ನಂಗ ಮಾಡಿ ಅವರ ಸಂಸಾರ ಮೂರಾಬಟ್ಟಿ ಮಾಡಬೇಕಂತಾನ. ಬರಗಾಲಂತ! ಸಮಿತಿ ಅಂತ! ನಮ್ಮನ್ಯಾಗಿನ ಬರಗಾಲಾ ಯಾರು ನೋಡತಾರ? ಬರತಾನೇನು ಆ ಜನತಾ ಜನಾರ್ದನ ನಮ್ಮ ಹೊಟ್ಟೆಗೆ ಹಾಕಲಿಕ್ಕೆ?' ಹೀಗೆ ಒದರಾಡಹತ್ತಿದರು. ಅಮೃತನು ಮೇಲಿಂದ ಬೀಳುವ ಬೆಂಕಿಯ ಮಳೆಯನ್ನು ಸಹನೆಯಿಂದ ತಾಳುತ್ತಿರುವಂತೆ ಕೆಳಗೆ ಮೋರೆ ಹಾಕಿ ಕೂತು ಕೇಳುತ್ತಿದ್ದನು. ಪಾರ್ವತೀಬಾಯಿಯೇ ನಡುವೆ ಬಾಯಿ ಹಾಕಿ ಗಂಡನನ್ನು ತಡೆದಳು. 'ಹಿಂಗ್ಯಾಕ ಒದರಾಡತೀರಿ ಅವನ ಮ್ಯಾಲೆ? ಅವ ಅರ ಎಲ್ಲಿ ಹೋಗತೀನಿ ಅಂತ ಅಂತಾನ? ನೀವು ಹೋಗಂದರ ಹೋಗತಾನ. ಅಂಥಾದೆಲ್ಲ ಇಲ್ಲದ ಉಸಾಬರಿ ಬ್ಯಾಡೋ ಅಮೃತ. ನಾ ಹೇಳ ತೀನಿ ಕೇಳು. ಈ ಚಳವಳಿ ಮಂದ್ಯಾಗ ಹೋದೆಂದರ—ಬಿಸಿಲಿಲ್ಲ, ಮಳಿಯಿಲ್ಲ. ಊರೂರು ಪಿರಿಪಿರಿ ತಿರಗಬೇಕು, ಸಿಕ್ಕದ್ದು ತಿನಬೇಕು. ಮನ್ನೆಮನ್ನೆ ದೂರಬ್ಯಾರೆ ಹೋಗಿ ಸೊರಗಿ ಖಡ್ಡಿ ಆಗಿ ಬಂದೀದಿ. ಅದರಾಗ ಮತ್ತ ಜೇಲಿಗೆ ಒಯ್ದರಂದರ ನಮ್ಮನ್ಯಾರ ಕೇಳತಾರ?' ಎಂದು ಕಣ್ತುಂಬ ನೀರು ತಂದು ಅಳಹತ್ತಿದಳು.

'ಕೆಳಗಿನ ಓಣ್ಯಾಗ ಆ ತುಂಗಾನ ಹುಡುಗನ್ನ ಹಿಡಕೊಂಡ ಹೋಗ್ಯಾರ. ಆಕೀ ಪಾಡು ನಾಯಿಕಿಂತ ಅತ್ತತ್ತ ಆಗೇದ. ಬ್ಯಾಡ ಅಮೃತ, ಈ ದೇಶಸೇವಾದ ಹುಚ್ಚು.'

ರಾತ್ರಿ ಏರಿದಂತೆ ಹೀಗೆ ಮಾತಿನ ಕಾವು ಏರುತ್ತ ಹೋಯಿತು. ಚಳವಳಿ, ಜೇಲು ಇವಕ್ಕೇನು ಈ ಕೆಲಸದ ಸಂಬಂಧವಿಲ್ಲವೆಂದೂ ಸರಕಾರೀ ಅಧಿಕಾರಿಗಳೂ ಇದಕ್ಕೆ ನೆರವಾಗುತ್ತಿರುವರೆಂದೂ ಅಮೃತನು ತಾಯಿಗೆ ತಿಳಿಸಿ ಹೇಳುವ ಯತ್ನ ಮಾಡಿದನು. ಒಂದುತಿಂಗಳಾದರೂ ತನ್ನನ್ನು ಹೋಗಗೊಡಬೇಕೆಂದೂಕಾಲೇಜು ಸುರುವಾಗುವ ಹೊತ್ತಿಗೆ ತಪ್ಪದೆ ಮುಂಬಯಿಗೆ ಹೋಗಿ ಬೇರೆಯಾವುದರಲ್ಲಿಯೂ ಮನಸ್ಸು ಹಾಕದೆ ಅಭ್ಯಾಸ ಮಾಡುವೆನೆಂದೂ ತಂದೆಯವರಿಗೆ ಭರವಸೆಕೊಟ್ಟನು. ಅದು ಯಾವುದರಿಂದಲೂ ಅವರು ಸಮಾಧಾನ ಹೊಂದಲಿಲ್ಲ. ಇಷ್ಟೇ ಯಾಕೆ, 'ನೀ ಒಮ್ಮೆ ಗೊತ್ತುಮಾಡಿ ಹೇಳಿಬಿಡು. ಬಂಗಾಲ, ವಿಜಾಪುರ ಅದು ಇದು ಅನಕೋತ ನೀ ದೇಶ ಸೇವಾದ ಬೆನ್ನು ಹತ್ತುವವನೋ, ಏನು ನಾನು ಹೇಳಿದಂತೆ ಕೇಳಿಕೋತ ಇರುವವನೋ?' ಎಂದು ಶಂಭುರಾಯರು ಅಂತಿಮ ಪ್ರಶ್ನೆಯನ್ನೇ ಹಾಕಿದರು. ಅಮೃತನಿಗಿನ್ನು ಹೆಚ್ಚು ಮಾತಾಡಿ ಪ್ರಯೋಜನವಿಲ್ಲ ಎಂದನಿಸಿತು. ಅವರು ಪಡುತ್ತಿರುವ ಕಷ್ಟಪರಂಪರೆ ಆ ಮಾತನ್ನು ಆಡಿಸುತ್ತದೆ ಎಂಬುದನ್ನು ಅವನು ತಿಳಿದಿದ್ದನು. ಮನೆಯ ಬಗ್ಗೆ ತನ್ನ ಕರ್ತವ್ಯ ಹೆಚ್ಚಿನದೆಂಬುದೂ ಅವನಿಗೆ ಗೊತ್ತಿತ್ತು. ಕೊನೆಗೆ ಒಂದು ನಿಡಿದಾದ ಉಸಿರೆಳೆದುಬಿಟ್ಟು 'ನೀವು ಹೇಳಿದಂತೆ ಕೇಳತೀನಿ. ಅವರಿಗೆ ಸಾಧ್ಯವಿಲ್ಲ ಎಂದು ನಾಳಿಗೆ ತಿಳಸತೀನಿ' ಎಂದು ಈ ಪ್ರಕರಣದ ಮೇಲೆ ತೆರೆ ಜಗ್ಗಿದನು. ಎಲ್ಲರೂ ಮಲಗಿಕೊಂಡರು. ಅಮೃತನಿಗೆ ನಿದ್ದೆ ಬಂದು ಬಂದು ಹೋಯಿತು. ಅವನ ಮನದ ಗ್ರೀನ್ ರೂಮಿನಲ್ಲಿ ಮುಗಿದ ಪ್ರಕರಣದ ಪ್ರತಿಕ್ರಿಯೆಗಳು ತರತರದ ಕನಸಾಗಿ ಮೂಡಿ ಮುಳುಗುತ್ತಿದ್ದುವು. ಹೊರಗೆ ನಿರ್ಧಾರ, ಒಳಗೆ ತೊಳಲಾಟ ಎಂಬಂತಾಗಿ ಬೆಳಗಾಗ ಎದ್ದನು.

ಅವನು ಸ್ನಾನಮಾಡಿಕೊಂಡು ಪತ್ರ ಬರೆಯುವ ಸಲುವಾಗಿ ಕಾರ್ಡು ತರಬೇಕೆಂದು ಅಂಚೆಮನೆಗೆ ಹೊರಟನು. ತಿರುಗಿ ಬರುವಾಗ ದಾರಿಯಲ್ಲಿ ಅಲ್ಲಿಯ ಪ್ರಸಿದ್ಧ ಕಾಂಗ್ರೆಸ್ ಕಾರ್ಯಕರ್ತರೊಬ್ಬರು ಭೆಟ್ಟಿಯಾದರು. ಆ ತಾಲೂಕಿಗೆ ಬರಗಾಲ ಸಮಿತಿಯ ಮೇಲ್ವಿಚಾರಕರೆಂದು ಅವರನ್ನು ನೇಮಿಸಲಾಗಿತ್ತು. ಅವರು ತಮಗೆ ಜನಾರ್ಧನರಾಯರು ಪತ್ರ ಬಂದಿರುವದೆಂದು ಹೇಳಿ 'ನಿಮ್ಮದು ನಿಶ್ಚಯ ವಾಯಿತೇನು ?' ಎಂದು ಕೇಳಿದರು. ನಿಶ್ಚಯವೇನೊ ಒಂದು ತರಹವಾಗಿ

ಆಗಿತ್ತು. ಆದರೆ ಅದನ್ನು ಅವರ ಮುಂದೆ ಹೇಗೆ ಹೇಳಬೇಕು ? ಇನ್ನೂ ಆಗಿಲ್ಲ' ಎಂದನು. 'ಆದ ಕೂಡಲೇ ನನಗೆ ಬಂದು ಭೆಟ್ಟಿಯಾಗು. ಕೆಲಸದ ಮಾಹಿತಿ ಕೊಡತೇನೆ. ಸಾಕಷ್ಟು ಕೆಲಸಗಾರರಿಲ್ಲದೆ ಬಹಳ ಫಜೀತಿ ನಡೆದಿರುವದು.ಒಂದು ತಿಂಗಳಾದರೂ ನಿನ್ನಂಥವರು ಬರಬೇಕು, ಅಮೃತ'. ಎಂದವರು ಕಳಕಳಿಯಿಂದ ಹೇಳಿದರು. ಅವರಿದಿರು ತನ್ನ ಅಡಚಣೆಗಳ ಪುರಾಣವನ್ನು ಅಮೃತನು ಬಿಚ್ಚಲಿಲ್ಲ. 'ಒಳ್ಳೇದು' ಎಂದಿಷ್ಟೇ ಆಡಿ ಮನೆಗೆ ಹೋದನು. ಜನಾರ್ದನರಾಯರಿಗೆ ಬರೆಯ ಬೇಕೆಂದ ಪತ್ರವನ್ನು ಬರೆಯಲಿಲ್ಲ. ಕಾರ್ಡು ಕಿಸೆಯಲ್ಲಿಯೆ ಉಳಿಯಿತು:ಮನೋ ರಂಗದಲ್ಲಿ ಎರಡನೆಯ ಮಹಾಯುದ್ಧಕ್ಕೆ ಆರಂಭವಾಯ್ತು.ಮನೆಯವರ ಸಮ್ಮತಿ ದೊರೆಯಲಿ ದೊರೆಯದಿರಲಿ, ಒಂದು ತಿಂಗಳ ಕೆಲಸಕ್ಕೆ ಯಾಕೆ ಒಪ್ಪಬಾರದು ? ಅವರು ಇಲ್ಲದ ಭಯವನ್ನು ತಾಳಿದರೆ ತಾಳಲಿ, ನಾನಂತೂ ಬರುವ ವರ್ಷ ಪರೀಕ್ಷೆಗೆ ಕೂಡುವುದಾಗಿ ನಿಶ್ಚಯಿಸಿದ್ದೇನೆ. ಆದರೆ ಅವರ ಸಂಮತಿ ಪಡೆಯದೆ ಸಮಿತಿಯ ಕೆಲಸಕ್ಕೆ ಹೋದರೆ ಪರೀಕ್ಷೆಯ ಖರ್ಚಿನ ವಿಚಾರವೇನು? ಅವಿಧೇಯ ನಾದ ಮಗನಿಗೆ ತಂದೆ ಹಣ ಕೊಡುವನೇ ? ಕೊಡದಿದ್ದರೆ ಇಲ್ಲ; ಎಲ್ಲಿಯಾದರೂ ಅರೆಹೊತ್ತು ಕೆಲಸ ಹಿಡಿದು ಅಭ್ಯಾಸಮಾಡಬಹುದು. ಮನಸ್ಸಿಗೆ ಒಪ್ಪಿಗೆಯಾದ ಒಳ್ಳೆಯ ಕಾರ್ಯವನ್ನು ಬಿಟ್ಟುಬಿಡುವುದೇ ಇವರ ಮಾತು ಕೇಳಿ ? ಇವರು ಹೇಳಿ ದಂತೆ ಕೇಳಲಿಕ್ಕೆ ನಾನು ಕೂಲಿಯಾಳೇ ?

ಈ ರೀತಿ ಅಮೃತನು ಬೆಟ್ಟದೆರೆಗಳ ಮೇಲೆ ಆಚೀಚೆ ತೂಗುತ್ತ ಹೊರಟ ಹಡಗದಂತೆ ಇರಲು, ಸಂಜೆ ಹೊತ್ತು ಅವನ ಹೆಸರಿನಲ್ಲಿ ಒಂದು ಪಾಕೀಟಿನ ಪತ್ರ ಬಂದಿತು. ಜನಾರ್ಧನರಾಯರು ನೆನಪು ಮಾಡುವುದಕ್ಕೆಂದು ಎಲ್ಲಿ ಪತ್ರ ಬರೆದಿರು ವರೋ ಎಂದು ಅವನ ಎದೆ ಹಾರಹತ್ತಿತು. ಒಡೆದು ನೋಡಿದನು. ಅದು ಯಾರ ಪತ್ರವೂ ಅಲ್ಲ. ಅದರಲ್ಲಿ ಪತ್ರದ ಬರವಣಿಗೆಯೇ ಇರಲಿಲ್ಲ. ಎರಡೂ ಮಗ್ಗಲಲ್ಲಿ ಬರೆದ ಒಂದು ಕವಿತೆ ಮಾತ್ರ ಇತ್ತು. ಅದರ ತುದಿಗೆ 'ಪ್ರಸಾದ' ಎಂಬ ಹೆಸರಿತ್ತು. ಹಿಂದೆ ಪ್ರಸಾದನ ಮೊದಲ ಕವಿತೆ, ಯಾರದೆಂಬುದು ತಿಳಿಯದೆ ದೊಡ್ಡ ಗೂಢವಾಗಿ ಅವನಿಗೆ ಕಾಲೀಚರಣಪುರದಲ್ಲಿದ್ದಾಗ ಬಂದು ತಲುಪಿತ್ತು. ಅದರಿಂದ ಅವನು ಹೊಸ ಚೈತನ್ಯದಾಯಕ ಶಕ್ತಿಯನ್ನು ಪಡೆದಿದ್ದನು. ಇಂದು ಬಂದಿರುವ ಈ ಕವಿತೆ ಯಾವುದು ಎಂದು ಅತ್ಯಂತ ಕುತೂಹಲದಿಂದ ಓದತೊಡ ಗಿದನು. ಅದು ಹೀಗಿತ್ತು :

## ಸೆರೆಮನೆ

ಸೆರೆಮನೆಗೆ ಬಂದೆ, ಅರಮನೆಗೆ ಬಂದ ಹಾಗೆ
ಕೈಬೇಡಿಯೆಂಬ ವಸ್ತ್ರ ಖಣಖಣಿಸಿ ತೂಗೆ
ಸಮವಸ್ತ್ರದಾಳುಗಳು ಹಿಂದು ಮುಂದಿರಲು
ಬಿಡುಗಡೆಯ ನಾಡಿನರಸು ನಾ ನಡುವೆ ಇರಲು
ಮಾಡು ಇಲ್ಲದಿರೆ ಮಡಿಯೆಂಬ ನುಡಿಯು ಗುಡುಗು
ಬಗೆಯ ಬಂಧನವ ತರಿದೊಗೆದು ನಾವು ಕ್ಷಣದಿ
ಮುಕ್ತ ಭಾರತದ ಮೊದಲ ಪ್ರಜೆಯಾಗಿ ಮುದದಿ
ಭಯವೆಲ್ಲ ದೂರ ಗಾಳಿಯಲ್ಲಿ ತೂರಿ ಹಾರಿ
'ಹೊರಟ್ಹೋಗು' ಎಂದು ಪರರಾಳುವಿಕೆಗೆ ಸಾರಿ
ಹೊಸತಿನುದಯಕ್ಕೆ ಹಳೆಯ ಕೊಳೆ ತೊಳೆಯುವಂತೆ
ನವಸೃಷ್ಟಿಗಾಗಿ ಪ್ರಳಯವಿಳೆ ತುಳಿಯುವಂತೆ
ಕಂಬಿಯನು ಕಿತ್ತಿ ಸಿಲ್ಕನೆಯ ಬೂದಿ ಮಾಡಿ
ಗಾಡಿಗಳ ನೆಲಕೆ ಹೊರಳಿಸುತ ಆಟವಾಡಿ
ಹೊರ ಒಳದ ದಾಸ್ಯ ಚಿಹ್ನಗಳ ತೊಡೆದು ನಾವು
ಬಿಡುಗಣ್ಣರಾಗಿ ನಿಂದಿಹೆವು, ಬರಲಿ ಸಾವು.
ಸೆರೆಮನೆಯು ಇದುವೆ ? ನಿನಗೆ ತಿಳಿಯದೆ ಮರುಳೆ ?
ಮುಕ್ತಭಾರತದ ವೀರರ್ಧಾಸರೆಯ ನೆರಳೆ ।
ಹೊರಗೆಂಥ ಭವಣೆ ! ಬರಗಾಲ ಮಸಣಿ ಮತ್ತೆ
ನೂರಾರು ಗಸಣೆ ಜೀವ ಜೀವವನು ಸುತ್ತೆ
ಯಾರೊ ಹೇಳುವರು ಅಲ್ಲಿ ಮನೆಯಲ್ಲಿ ಶೋಕ
ನೆಲೆಯೂರಿ ನಿಂತು ನವೆಸುತಿದೆ ಆಪ್ತಲೋಕ
ತಾಯಿ ಬಾಣತಿಗೆ ಕ್ಷಯವಂತೆ ಅಕಟ ತಂದೆ
ಸಾವು ಹಾಸಿನಲಿ ತಾನೊರಗಿ ಜನದ ಮುಂದೆ
ನನ್ನ ಶಪಿಸುವನು ಬಾ ಎಂದು ಬರಿದೆ ಕೂಗಿ
ತಮ್ಮದಿರು ತಿರಿಯುತಿಹರು ಮನೆಮನೆಗೆ ಹೋಗಿ
ಗೋಳಾಟಕೆಣೆಯೆ ? ಮನೆಯೆದ್ದು ಕರೆಯುತಿಹುದು
ನಾಡ ಕರೆ ಅದಕು ಹಿರಿದಾಗಿ ಮೊರೆಯುತಿಹುದು

ಭಾರತದ ತಾಯೆ ! ಬಿಡುಗಡೆಯ ಹೋಮದಲ್ಲಿ
ಎಲ್ಲವನು ನೀಡಿ ನಿಂದಿಹೆವು ಪ್ರೇಮದಲ್ಲಿ
ಹೋಮದುರಿಯಿಂದ ನೀನೆದ್ದು ಮೊಗವ ತೋರಿ
ಹರಸೇಳು ತಾಯೆ ನಮ್ಮಲ್ಲಿ ನೋಟವೂರಿ.

—ಪ್ರಸಾದ

ಈ ಕವಿತೆಯನ್ನು ಓದುತ್ತಿರುವಂತೆ ಓಜಸ್ವಿಯಾದ ಪ್ರಸಾದಪೂರ್ಣವಾದ ಭಾವನಾಲಹರಿಗಳು ಅಮೃತನನ್ನು ಸ್ಫೂರ್ತಿಯ ಕಾರಂಜಿಯ ತುಷಾರಗಳಂತೆ ಸಿಂಪಡಿಸಿದುವು. ತ್ಯಾಗದ, ದೇಶಪ್ರೇಮದ ಒಂದು ಎತ್ತರದ ಮಟ್ಟಕ್ಕೆ ಆ ಕವಿತೆ ಅವನನ್ನು ಒಯ್ದು ನಿಲ್ಲಿಸಿತು. ಹಿಂದೆ ಕವಿತೆಯನ್ನು ಕಳಿಸಿದ ಪ್ರಸಾದನೇ ಇವ ನೆಂಬುದು ಅವನಿಗೆ ಸುಸ್ಪಷ್ಟವಾಯಿತು. 'ಸೆರೆಮನೆಯೆಂಬುದನರಮನೆಯಾಗಿಸಿ' ಎಂಥ ಕವಿ ಈಗ 'ಸೆರೆಮನೆಗೆ ಬಂದೆ ಅರಮನೆಗೆ ಬಂದ ಹಾಗೆ' ಎಂದು ಸಡಗರ ದಿಂದ ಸೆರೆಮನೆಯ ಸೇರಿದ್ದಾನೆ.ಸ್ವಾನುಭವದಿಂದ ಕವಿತೆ ತುಂಬಿ ತುಳುಕುತ್ತದೆ. ಯಾರಿದನ್ನು ಬರೆಯುತ್ತಿರುವರು ? ನನಗೆ ಯಾಕೆ ಕಳಿಸುತ್ತಿರುವರು? ಅದೆಷ್ಟೋ ಹೊತ್ತು ಅವನು ಊಹಿಸಲು ಹೆಣಗಿದನು. ಮಂಜು ಸರಿಯಲೇ ಇಲ್ಲ. ಎಂಥ ಹೊತ್ತಿನಲ್ಲಿ ಈ ಕವಿತೆ ದೇವದೂತನಂತೆ ನನ್ನ ಬಳಿ ಬಂದಿತಲ್ಲ, ಎಂದವನು ತಿರು ತಿರುಗಿ ಓದಿಕೊಂಡನು. ಕವಿಯ ರಾಷ್ಟ್ರಪ್ರೇಮದಿಂದ ಅವನ ಎದೆಯುಬ್ಬಿತು. ಅವನು ಪಡುವ ಯಾತನೆಯಿಂದ ಕರುಳು ಹಿಡಿದಂತಾಯಿತು. ಅವನ ಮನೆಯಲ್ಲಿ ಎಂಥ ಗೋಳಾಟ ! ನನ್ನ ಮನೆಯ ಅಡಚಣೆ ಅವರ ಮುಂದೆ ಯಾವ ಗಿಡದ ತೊಪ್ಪಲು ! ಅದೆಲ್ಲವನ್ನೂ ಹೇಗೆ ವಜ್ರಮನದಿಂದ ಅವನು ಇದಿರಿಸುತ್ತಿರು ವನು ! ಆದೇ ನಾನು...?

ಸಂಜೆಯಾಯಿತು. ತಿರುಗಾಡಲಿಕ್ಕೆಂದು ಅಮೃತನು ದೂರ ದೂರ ಹೋದನು. ಪ್ರಪಂಚದ ನೋವು ಸಾವುಗಳಿಂದ ದೂರ ಬಂದಂತಾಗಿ ಒಂದು ದಿನ್ನೆಯನ್ನೇರಿ ಕುಳಿತನು. ತನ್ನೊಡನೆ ತಂದ ಪ್ರಸಾದನ ಆ ಕವನವನ್ನು ಮತ್ತೆ ಓದಿದನು. ಮೈಯೆಲ್ಲ ನವಿರೆದ್ದು ತಲೆದೂಗಿದನು. ಕವಿತೆಯ ಕೆಲವು ಸಾಲುಗ ಳನ್ನು ಆರಿಸಿ ತನ್ನಷ್ಟಕ್ಕೆ ಗುಣಗುಣಿಸಿ ತನ್ನ ಹೃದಯದಾಳದಲ್ಲಿ ಚೈತನ್ಯದ ಝರಿಗಳಂತೆ ಅವನ್ನು ಇಳಿಬಿಟ್ಟನು. ಯಾರೋ ತನಗಾಗಿಯೇ ತನ್ನ ಭಾವವನ್ನು ವ್ಯಕ್ತಮಾಡುವದಕ್ಕಾಗಿಯೇ ಇದನ್ನು ಬರೆದಿದ್ದಾರೆ ಎಂದು ಅವನಿಗೆ ಮನವರಿಕೆ ಯಾಯಿತು. ಉತ್ಸಾಹದಿಂದ ಎದ್ದು ಹೊರಟನು.

ರಾತ್ರಿ ತನ್ನ ನಿಶ್ಚಯವನ್ನು ಮನೆಯಲ್ಲಿ ಹೇಳಿದನು. ಶಂಭುರಾಯರು ತಪ್ತರಾದರು. ಆದರೆ ಮಾತಾಡಲಿಲ್ಲ. ಪಾರ್ವತಿಬಾಯಿ ಕಂಬನಿದುಂಬಿ ಕುಳಿತಳು. 'ಒಂದೆರಡು ತಿಂಗಳು ಮಾತ್ರ' ಎಂದವನು ಬೇಡಿಕೊಂಡನು. ಮೂಕ ಅಸಮ್ಮತಿ ಮನೆಯ ತುಂಬ ವ್ಯಾಪಿಸಿದಂತೆ ತೋರಿತು.

ಮರುದಿನ ಜನಾರ್ದನರಾಯರಿಗೆ ಕಾಗದ ಬರೆದು ತಿಳಿಸಿದನು. ತಾಲೂಕಿನ ಮೇಲ್ವಿಚಾರಕರನ್ನು ಕಂಡು ತನ್ನ ಕೆಲಸಕ್ಕೆ ಮೊದಲು ಮಾಡಿದನು.

## ೭. ಗುಳೇಕಾರರು

'ಏ, ದ್ಯಾಮವ್ವಗೋಳ! ಗಸಗಸ ನಡೀರಿ ಈಟು. ನಿಮಗೇನು ಧಾಡಿ ಆಗೇತಿ ?'

ಇದಕ್ಕೆ ಆ ಹತ್ತು ಹದಿನೈದು ಜನ ಹೆಂಗಸರು ಒಣಗಿ ಸಂಡಿಗೆಯಾದ ಮೋರೆಯಿಂದ ಎತ್ತಿ ಎತ್ತಿ ನಾಲ್ಕು ವೇಗದ ಹೆಜ್ಜೆಗಳನ್ನಿಟ್ಟರು. ಮತ್ತೆ ಗತಿ ಮಂದವಾಯಿತು. ಒಬ್ಬಿಬ್ಬರು ಉಸ್ಸೆಂದು ಕೆಳಗೆ ದಾರಿಯ ಮೇಲೆ ತಲೆಗೆ ಕೈ ಹಚ್ಚಿ ಕೂತುಬಿಟ್ಟರು. ಉಳಿದವರು ಅವರ ಸುತ್ತು ನಿಂತರು. ಅವರನ್ನು ಬಾಗಿಲಕೋಟಿ ಸ್ಟೇಶನ್ನಿನಿಂದ ಮಾಮಲೆದಾರ ಕಚೇರಿಗೆ ಕರಕೊಂಡು ಹೊರಟ ನಾಲ್ಕು ಜನ ಪೋಲೀಸರ ಪಿತ್ತ ತಲೆಗೇರಿತು.

'ಏ, ಲಗಾವ್ ಇಸ್ಕಿ ಮಾಕ!' ಎಂದನೊಬ್ಬ.

'ಏ, ಸೋಗಲಾಡಿ ಸೂಳಿಮಕ್ಕಳ! ಗಡಗಡ ನಡೀತೀರೊ, ಏನ್ ಬೇಕೋ! ಲಾಠಿಯೇಟು ?' ಎಂದನು ಇನ್ನೊಬ್ಬ.

'ಏನು ಕೂತೀರಿ ರಸ್ತೆದಾಗ, ಏಳೇಳರಿ. ಕಚೇರಿಗೆ ಹೋಗಿ ಬೀಳರಿ ಬೇಕಾದಟು ಹೊತ್ತು!' ಇದು ಮಗದೊಬ್ಬನ ಹುಕುಮು. ಹೆಂಗಸರೆಲ್ಲ ಕಕ್ಕಾವಿಕ್ಕಿಯಾಗಿ ಪೋಲೀಸರನ್ನು ನೋಡಿದರು. ಒಣಗಿದ ತುಟಿಯ ಮೇಲೆ ನಿರ್ದ್ರವವಾದ ನಾಲಿಗೆಯಾಡಿಸುತ್ತ ಮೆಲ್ಲಗೆ ನಡೆದರು. ಸುಮಾರು ಪ್ರತಿಯೊಬ್ಬರ ಬಗಲಲ್ಲಿ ಒಂದೊಂದು ಕೂಸಿತ್ತು. ಒಂದು ತಿಂಗಳಿಂದ ಮೂರು ವರ್ಷದವರೆಗಿನ ಮಗುಗಳಿದ್ದವು. ಐದಾರು ವರ್ಷದ ಕೆಲ ಹುಡುಗ ಹುಡುಗಿಯರು ಅವರೊಡನೆ ನಡೆದಿದ್ದರು. ಪೋಲೀಸರ ಕೈಯಲ್ಲಿ ಸಿಕ್ಕದ್ದಕ್ಕಾಗಿ ಎಲ್ಲರಿಗೂ ವಿಪರೀತ ಗಾಬರಿ. ತಮಗೇನು ಮಾಡುವರೋ ಎಂದು ಎದೆಗುದಿ. ಹೇಗೋ ಒದ್ದಾಡುತ್ತ ಅರ್ಧ ಹಾದಿ ಹೋದರು. ಅಷ್ಟಕ್ಕೆ ರಗಡಾಗಿಹೋಯಿತು, ಅವರು ಮತ್ತೆ ನಿಂತರು.

ಒಬ್ಬಳಂತೂ ಒಂದು ತಿಂಗಳ ಬಾಣಂತಿ. 'ಅವ್ವಯ್ಯ, ಸಾಸತ್ತನರೆ!' ಎಂದು ನೆಲದ ಮೇಲೆ ತನ್ನ ಕೂಸಿನ ಖಬರಿಲ್ಲದೆ ಧೊಪ್ಪನೆ ಬಿದ್ದುಬಿಟ್ಟಳು. ಉಳಿದ ಹೆಂಗಸರು ಆಕೆಯ ಸುತ್ತು ಮುಕುರಿ ಕೂಸನ್ನು ಒಬ್ಬರು ಕರಕೊಂಡರು; ಅವಳನ್ನೊಬ್ಬರು ತೊಡೆಯ ಮೇಲೆ ಮಲಗಿಸಿ ಗಾಳಿ ಹಾಕಿದರು. ಪೋಲೀಸರ ಅಬ್ಬರವೂ ಕಡಿಮೆಯಾಗಿ 'ಏನಾತು?' ಎಂದು ಕೇಳುತ್ತ ಬಂದರು. ಹತ್ತಿರದ ಮನೆಯಿಂದ ಅವರಲ್ಲಿ ಒಬ್ಬರು ಓಡುತ್ತ ಹೋಗಿ ನೀರು ತಂದು ತಲೆಗೆ ನೀರು ಬಡಿದರು. ಸ್ವಲ್ಪ ಹೊತ್ತಿನ ಮೇಲೆ ಅವಳಿಗೆ ಎಚ್ಚರ ಬಂತು. ಎದ್ದು ಕೂಡಲು, ಕುಡಿಯಲಿಕ್ಕೆ ನೀರು ಕೊಟ್ಟರು. ಆದರೆ ನಡೆಯುವುದಾಗಲಿಲ್ಲ. ನಿರುಪಾಯ ವಾಗಿ ಪೋಲೀಸರು ತಂಬಾಕು ಸೇದುತ್ತ ಅಲ್ಲಿಯೇ ಕೆಲಹೊತ್ತು ಕೂಡಬೇಕಾ ಯಿತು. ಅವರಲ್ಲಿ ಒಬ್ಬನು ಆ ಹೆಂಗಸಿನ ಹತ್ತಿರ ಬಂದು 'ಆಕೇನು ಸೀಕದಾ ಳೇನು?' ಎಂದು ಕೇಳಿದನು.

ಆಕೆಯ ಕೂಸನ್ನು ಎತ್ತಿಕೊಂಡ ಹೆಂಗಸು ಹೇಳಿದಳು: 'ಒಂದು ತಿಂಗಳ ಬಾಣಂತ್ಯೋ ಎಪ್ಪ! ಗದಗಿನೂರಾಗ ಅಂದಾನಪ್ಪನವರ ವಖಾರ ದಾಗ ಹಡದಳು. ಆ ಪುಣ್ಯಾತಮಗ ಸಿವ ನೂರು ವರ್ಸ ಆಯುಶ್ಯಾಕೊಡಲಿ. ಅವನ ಅನ್ನ ಉಂಡು ಬಾಣಂತನ ಮಾಡಿಕ್ಯಾಸ ಕರಕೊಂಡು ಬಂದೇವು. ಮೂರು ದಿನ ಆತು, ದಾರಿ ನಡದು ನಡದು ಹೊಟ್ಯಾಗ ಏನೂ ಇಲ್ಲ.'

'ನಿಮುಗ ಯಾರಿಗೂ ಏನು ಇಲ್ಲ ಮೂರು ದಿನ?'

'ಯಾರಿಗೂ ಇಲ್ಲ. ಸುಳ್ಯಾಕ ಹೇಳೋಣೊ ಯಪ್ಪ?'

'ಹಾಗಾರ ನಡದಿರಿ ಹ್ಯಾಗಬೆ?'

'ದಾರ್‍ಯಾಗ ಸಿಕ್ಕಲೆ ಗಟಗಟ ನೀರು ಕುಡಿದೆವು, ಮುಂದಾಕ ನಡೆದೇವು.'

'ಇನ್ನ ಮುಂದೇನ ಮಾಡತೀರಿ?'

'ಮುಂಧ ಸಿವನ್ಯ ಗತಿ? ನಮ್ಮೂರಿಗೆ ಹೋಕ್ಯಾಕ್ಯಸ ಅಲ್ಲೇ ಸಾಯ್ತಿವಿ.'

ಆ ಪೋಲೀಸನ ಕಲ್ಲೆದೆಯೂ ಕರಗಿತು. 'ಕುಂಡರ್‍ರಿ, ಕುಂಡರ್‍ರಿ, ಈಟ ಬಿಟ್ಟು ಹೋಗಾಣಂತ' ಎಂದು ಅವರಿಗೆ ಕೂಡಿಸುತ್ತ ಸ್ವಲ್ಪ ದೂರ ಕುಳಿತು ತನ್ನ ಜೊತೆಗಾರರ ಹತ್ತಿರ ಹೋಗಿ 'ಇವರು ಗುಳೇಕಾರ ಹೆಂಗಸರು. ಪಾಪ ಮೂರು ದಿನ ಹೊಟ್ಯಾಗ ಏನೂ ಇಲ್ಲಂತ!' ಎಂದು ಕನಿಕರದಿಂದ ಹೇಳಿದನು. ಅವರೂ ಮರುಕ ತೋರಿದರು. ಇದಕ್ಕೂ ಹೆಚ್ಚು ಅವರಾದರೂ ಏನು ಮಾಡ ಬಲ್ಲರು? ಒಂದೈದು ಮಿನಿಟು ಆ ಹೆಂಗಸರಿಗೆ ವಿಶ್ರಾಂತಿ ಕೊಟ್ಟರು ಮಾತ್ರ.

ಅಷ್ಟೇ ದೊಡ್ಡ ಉಪಕಾರವಾಯಿತು. ಕೊನೆಗೆ ಅವರನ್ನು ಕರಕೊಂಡು ಬಂದು ಮಾಮಲೇದಾರ ಕಚೇರಿಯ ಒಳಗಡೆ ಬಯಲಿನಲ್ಲಿ ಕೂಡಿಸಲಾಯಿತು. ತಮ್ಮ ಡ್ಯೂಟಿಯೆಂದು ನಾಲ್ಕುದಿಕ್ಕಿಗೆ ನಾಲ್ವರು ಪೋಲೀಸರು ನಿಂತರು. ಆದರೆ ಮೂರು ದಿನದಿಂದ ಹೊಟ್ಟೆಯಲ್ಲಿ ತುಣುಕ ರೊಟ್ಟೆ ಇಲ್ಲದ ಆ ಅಬಲೆಯರು ಓಡಿ ಹೋಗ ಲಾರರೆಂದು ಅವರಿಗೆ ಗೊತ್ತಿತ್ತು. ಮಾಮುಲೆದಾರರಿಗೆ ಹೋಗಿ ವರದಿ ಮಾಡಿ ದರು. ಆಗೊಂದು ದೊಡ್ಡ ಚಹಾಪಾರ್ಟಿ ವ್ಹರಾಂಡದಲ್ಲಿ ನಡೆದಿತ್ತು. ಸಿರಸ್ತೆದಾರ ರಿಗೆ ವರ್ಗವಾದ್ದರಿಂದ ಕಚೇರಿಯವರೆಲ್ಲ ಕೂಡಿ ಅವರಿಗೆ ಪಾರ್ಟಿ ಕೊಟ್ಟಿದ್ದರು. ಜೋಡಿಸಿದ ಟೇಬಲ್ಲಿನ ಸುತ್ತು ಖುರ್ಚಿಗಳಿವೆ. ಟೇಬಲ್ಲಿನ ಮೇಲೆ ಸಿರ, ಬಾಳೀ ಹಣ್ಣು, ಚೂಡಾ, ಸೇವು ಇವು ತುಂಬಿದ ಪ್ಲೇಟುಗಳಿವೆ. ಎಲ್ಲರೂ ಮನದಣಿ ತಿನ್ನುತ್ತಿದ್ದಾರೆ. ಹರಟೆ, ಚೇಷ್ಟೆ, ಖೊಳ್ಳೆಂಬ ನಗೆ ಏರಿಕೆಯಲ್ಲಿವೆ. ಚಹದಕಪ್ಪು ಬಸಿಗಳನ್ನು ತಂದು ಇಡುತ್ತಿದ್ದಾರೆ. ಮಾಮುಲೆದಾರರಿಗೆ ವರದಿ ಕೊಟ್ಟ ಮೇಲೆ ಸಹಜವಾದ ಅಲಕ್ಷದಿಂದ 'ಕೂಡಸು ಅನಕ ಅಲ್ಲೆ ಬಯಲಾಗ!' ಎಂದು ಹೇಳಿ ಕಳಿಸಿದರು. ಕೂತ ಆ ಕೈದಿಗಳಿಗೆ ಚಹಾ ಪಾರ್ಟಿಯ ದೃಶ್ಯವೆಲ್ಲ ಕಾಣಿಸುತ್ತಿದೆ. ಕಣ್ಣಿನಿಂದ ನೋಡಿ ಹೊಟ್ಟೆತುಂಬುತ್ತಿದ್ದರೆ ಅವರು ನೋಡಿ ನೋಡಿ ತಣಿದವರೆಂದೇ ಹೇಳಬೇಕು. ಆದರೆ ಅದು ಅವರ ಹೊಟ್ಟೆಯ ಸಂಕಟವನ್ನು ಹೆಚ್ಚು ಮಾಡಿತು. ಸಣ್ಣ ಹುಡುಗರು 'ಎವ್ವ, ನನಗ ಹಸವು. ನನಗ ಬಾಳೀಹಣ್ಣು.'ಎಂದು ಚಹಾ ಪಾರ್ಟಿಯ ಜಾಗದತ್ತ ನೋಡಿ ಬೊಟ್ಟು ಮಾಡಿ ಕೇಳಹತ್ತಿದವು. 'ಸುಮ್ಮಾಕ ಕುಂಡ್ರು' ಎಂದು ಹೇಳಿ ಹೇಳಿ ತಾಯಂದಿರಿಗೆ ಸಾಕಾಯಿತು. ಮೊಲೆಗೂಸು ಗಳಂತೂ ಒರ್ರೆಂದು ಒದರಹತ್ತಿದವು. ಜೋಲುಬಿದ್ದ ಮೊಲೆಯನ್ನು ಜಗ್ಗುತ್ತಿ ದ್ದವು. ಸಂಜೆಯಾಗತೊಡಗಿತು. ತಿನಿಸು-ಚಹವಾದ ಮೇಲೆ ಮೂರು ನಾಲ್ಕು ಭಾಷಣಗಳಾಗಿ ಪಾರ್ಟಿ ಮುಗಿಯಿತು. ಪ್ಲೇಟುಗಳಲ್ಲಿ ಉಳಿದ ಪದಾರ್ಥಗಳನ್ನು ಸಿಪಾಯಿ ಮಂದಿ ತಮಗೆಂದು ತಗೊಂಡು ಹೋದರು. ಟೇಬಲ್ ಕೆಳಗೆ ಬಿದ್ದ ಚೂಡಾ ಸೇವುಗಳನ್ನೂ ಬಾಳೆಹಣ್ಣಿನ ಸಿಪ್ಪೆಗಳನ್ನೂ ಎತ್ತಿ ಕಟ್ಟೆಯ ಕೆಳಗೆ ಒಗೆ ದರು.ಅದನ್ನು ನೋಡುವುದೊಂದೇ ತಡ ಆ ಅರಬೆತ್ತಲೆಯಾದ ಹುಡುಗ ಹುಡು ಗಿಯರು ಓಡುತ್ತ ಹೋಗಿ ಅವನ್ನಾರಿಸಿ ತಿನ್ನಹತ್ತಿದರು. ಪೋಲೀಸರು ಜಬರಿಸಿ ಕರೆದರೂ ಅವರೇನು ಕೇಳಲಿಲ್ಲ. ಮಣ್ಣುಗೂಡಿದ ಚೂಡಾಸೇವನ್ನು ರುಚಿಮಾಡಿ ತಿಂದರು. ಬಾಳೆಹಣ್ಣಿನ ಸಿಪ್ಪೆಯನ್ನೂ ಗೀರಿ ಗೀರಿ ಸವಿದರು. ಬಕಾಸುರನು ಮತ್ತೊಮ್ಮೆ ಅವತಾರ ಮಾಡಿದಂತೆ ಆಯಿತು. ಆದರೆ ಅವನಿಗೆ ಈಗ ಸಿಕ್ಕಿದ್ದು

ಬಂಡಿಯನ್ನವಲ್ಲ, ತಿಂದೊಗೆದ ಎಂಜಲ! ಮಾಮಲೇದಾರರು ಎಲ್ಲ ಮುಗಿದ ಮೇಲೆ ಸಾವಕಾಶ ಬಂದು ಕಟ್ಟೆಯ ಹತ್ತಿರ ಐಟಿನಿಂದ ನಿಂತು 'ಅವರ್ನ ಕರಿ ಇಲ್ಲೆ' ಎಂದರು. ಪೋಲೀಸರು ಅವರನ್ನು ತಂದು ಮುಂದೆ ನಿಲ್ಲಿಸಿ ತಾವು ಸಲಾಮ್ ಮಾಡಿದರು.

'ಯಾವೂರವ್ರು ನೀವು ?' ಎಂದು ಮಾಮಲೇದಾರರು ಮೊದಲನೆಯ ಪ್ರಶ್ನೆಯನ್ನು ತಮ್ಮ ಪದ್ಧತಿಯ ಪ್ರಕಾರ ಕೇಳಿದರು. ಯಾರಿಂದಲೂ ಉತ್ತರ ಬರಲಿಲ್ಲ. ಹೆಂಗಸರಿಗೆ ಅಲ್ಲಿ ನಿಂತದ್ದೇ ಸಾಕುಸಾಕಾಗಿತ್ತು. ಆಯುಷ್ಯದಲ್ಲಿ ಹೀಗೆ ಪೋಲೀಸರ ಕೈಗೆ ಸಿಕ್ಕು ಕಚೇರಿಗೆ ಅವರು ಬಂದದ್ದು ಇದೇ ಮೊದಲನೆಯ ಬಾರಿ. ತಮ್ಮೂರಲ್ಲಿ ದುಡಿದು ತಿಂದು ಮಾನದಿಂದ ಬದುಕಿದವರನ್ನು ಬರಗಾಲ ಈ ಗತಿಗೆ ತಂದಿತ್ತು. ಮತ್ತೆ ಅದೇ ಪ್ರಶ್ನೆ ಕೇಳಿದರು. ಅದಕ್ಕೂ ಉತ್ತರವಿಲ್ಲ. ಗಾಬರಿಯಿಂದ ಹೆಂಗಸರೊಬ್ಬರೊಬ್ಬರ ಮುಖ ನೋಡಿದರು. ಮಾತನಾಡುವುದಕ್ಕೆ ನಾಚಿಕೆ, ಯಾರು ಹೇಳಬೇಕೆಂಬ ಅನಿರ್ಧಾರ. ಕಡೆಗೆ ಪೋಲೀಸನು ಗದ್ದರಿಸಿದ ಮೇಲೆ ಸಣ್ಣದನಿಯಲ್ಲಿ 'ಸಿರೂರಾವರಿ.' ಎಂಬ ಉತ್ತರ ಆ ಗುಂಪಿನಲ್ಲಿ ಯಾರಿಂದಲೋ ಬಂತು. ಆದರೂ ಮಾಮಲೇದಾರರಿಗೆ ಅರ್ಥವಾಗಲಿಲ್ಲ. 'ಸಿರೂರವರು' ಎಂದು ಅವರಿಗೆ ಹತ್ತಿರ ನಿಂತ ಕಾರಕೂನರು ಬಿಡಿಸಿ ಹೇಳಿದರು. ಹೀಗೆ ನಡೆದ ಪ್ರಶ್ನೋತ್ತರದಲ್ಲಿ ಅವರು ಸಿರೂರಿಂದ ಆರೇಳು ತಿಂಗಳ ಹಿಂದೆ ಗುಳೇ ಹೋದವರೆಂದೂ ಈಗ ತಿರುಗಿ ಬಂದಿರುವರೆಂದೂ ತಿಳಿಯಿತು. 'ಇವರ್ನ್ಯಾಕ ಹಿಡಕೊಂಡು ಬಂದಿರಿ?' ಎಂದು ಪೋಲೀಸರನ್ನು ಕೇಳಲಾಗಿ, ಟಿಕೀಟಿಲ್ಲದೆ ಪ್ರವಾಸ ಮಾಡುತ್ತಿದ್ದರೆಂದೂ ಕಟಗೇರಿಯಲ್ಲಿ ಇಳಿಸಿ ಇಲ್ಲಿಗೆ ಕರೆದುಕೊಂಡು ಬಂದೆವು. ಎಂದು ಹೇಳಿದರು. ಆಗ ಮಾಮಲೇದಾರರು ಕುಹಕ ನಗೆಯಿಂದ 'ಈ ಸೂಳೀ ಮಕ್ಕಳು ಹೊಟ್ಟೆಗಿಲ್ಲದೆ ಗುಳೇಕ್ಕ ಹೋಗಿ ಮ್ಯಾಲೆ ರೇಲ್ವೆದಾಗ ರೊಕ್ಕ ಇಲ್ಲದ್ಹ ಪ್ರವಾಸ ಮಾಡಬೇಕಂತಾರ! ನೋಡಿದಿರಾ ಚೈನಿ? ನಿಮಗ ನಡಕೋತ ಬರಲಿಕ್ಕೆ ಏನು ಧಾಡಿ ಆಗಿತ್ತು?' ಎಂದು ಕೇಳಿದರು. ಗದಗಿನಿಂದ ತಾವು ಆಲೂರವರೆಗೆ ನಡೆದು ಬಂದು ಮುಂಪೆ ಎರಡು ಮೂರು ದಿನ ಉಪವಾಸವಿದ್ದ ಕಾರಣ ನಡೆಯಲಾರದೆ ಆಲೂರಿಂದ ಗಾಡಿಹತ್ತಿದೆವೆಂದು ಅವರಲ್ಲಿ ಒಬ್ಬಳು ಹೆದಹೆದರುತ್ತ ಹೇಳಿದಳು. 'ಎರಡು ಮೂರು ದಿನ ಹೊಟ್ಟೆಗಿಲ್ಲ ನಿಮಗ? ಸುಳ್ಳು ಹೇಳತೀರಿ? ಹೊಟ್ಟೆಗಿಲ್ಲದಿದ್ದರ ಹಿಂಗ ನಿಮಗ ಸ್ಟೇಶನ್‌ದಿಂದ ಒಂದು ಮೈಲು ನಡೆದು ಬರಲಿಕ್ಕೆ ಬರತಿತ್ತೇನು?' ಎಂದು ತನ್ನ ಮೇಲಾದ ಬುದ್ಧಿವಂತಿಕೆಯನ್ನು ತೋರಿಸಿ

ದರು. ಸುತ್ತುನಿಂತವರೆಲ್ಲ ಮಾಮಲೇದಾರರ ಮಾತಿನ ಚಾತುರ್ಯಕ್ಕೆ ಮೆಚ್ಚಿ ದರು. ಕರಕೊಂಡು ಬಂದ ಪೋಲೀಸರಿಗೆ ನಿಜಸ್ಥಿತಿ ತಿಳಿದಿತ್ತು. ಆದರೆ ಅವರಿಗೆ ಹೇಳುವ ಧೈರ್ಯವೆಲ್ಲಿ? ಕಡೆಗೆ ಮಾಮಲೇದಾರರು ಆಜ್ಞಾಪಿಸಿದರು: 'ಹೋಗಲಿ ಹಾಳಾಗಿ. ಬಿಟ್ಟು ಬಿಡಿರಿ ಇವರ್ನ. ಇವರ್ನ ಲಾಕಪ್‌ದಾಗ ಹಾಕಿ ಹೊಟ್ಟಿಗ್ಯಾರ ಹಾಕಬೇಕು?' ಮುಂದೆ ತಮ್ಮ ಆಫೀಸಿನಲ್ಲಿ ಹೋಗಿ ಕುಳಿತ ಮೇಲೆ ಅವರ ಅಂತರಾತ್ಮ ಜಾಗೃತವಾಯಿತು. ಅಧಿಕಾರದ ಆವೇಶ ತುಸು ಇಳಿ ಯಿತು. ಜಿಲ್ಹೆಯೆಲ್ಲ ಬರಗಾಲದ ಬೀಡಾಗಿದೆ. ಅವರಾದರೂ ಮಾಡಬೇಕೇನು? ಏನಾದರೂ ಅವರ ವ್ಯವಸ್ಥೆ ಆಗಬೇಕೆಂದು ಅಂದುಕೊಂಡು ಅಲ್ಲಿಯ ಬರಗಾಲ ಸಮಿತಿಯ ಮೇಲ್ವಿಚಾರಕರಿಗೆ ನಡೆದ ಸಂಗತಿ ತಿಳಿಸುವ ಕಾಗದ ಬರೆದು ಹೇಳಿ ಕಳಿಸಿದರು. ಆವರೆಗೆ ಆ ಹೆಂಗಸರಿಗೆ ಅಲ್ಲಿಯೇ ಕೂಡಿಸಿಕೊಂಡು ಕುಳಿತರು.

ತಾಲೂಕಿನ ಮೇಲ್ವಿಚಾರಕರಾದ ಕಲ್ಯಾಣಿಯವರು ಊರಲ್ಲಿ ಇರಲಿಲ್ಲ. ಹಳ್ಳಿಯಲ್ಲಿಯ ಬರಗಾಲಕಾಮಗಾರಿ ಪರೀಕ್ಷಣೆಗೆಂದು ಹೋಗಿದ್ದರು. ಮಾಮಲೇ ದಾರರಿಂದ ಚೀಟಿ ಬಂದಾಗ ಅಮೃತನು ಅಲ್ಲಿ ಇದ್ದನು. ಅವನು ಕೂಡಲೆ ಸಾಯಕಲ್ಲೇರಿ ಕಚೇರಿಗೆ ಬಂದನು. ಎಲ್ಲ ಪರಿಸ್ಥಿತಿ ಗೊತ್ತಾಯಿತು. ಆ ಹೆಂಗ ಸರನ್ನು ಹುಡುಗರನ್ನು ನೋಡಿ ಅವನೆದೆ ಕರಗಿ ನೀರಾಯಿತು. 'ನೀವು ಇಷ್ಟು ಹೊತ್ತು ಇವರಿಗೆ ತಿನ್ನಲಿಕ್ಕೆ ಏನೂ ಕೊಡದೇ ಕೂಡಿಸಿದ್ದೀರಲ್ಲ, ದಯೆ ಮಾಯೆ ಅಂಬುದಿಲ್ಲವೇ?' ಎಂದು ಮಾಮಲೇದಾರರನ್ನು ಕುರಿತು ಸಂತಾಪಿಸಿ ಆಡಲು ಅವನು ಹಿಂದೆ ಮುಂದೆ ನೋಡಲಿಲ್ಲ. ಇಷ್ಟಾಗುವುದರಲ್ಲಿ ಒದರಿ ಒದರಿ ಎಳೆ ಗೂಸುಗಳು ಗೋಣು ಚೆಲ್ಲಿ ಮಲಗಿಬಿಟ್ಟಿದ್ದವು. ಹೆಂಗಸರೂ ದೊಡ್ಡ ಹುಡು ಗರೂ ಪ್ರಾಣಾಚಾರವಾಗಿ ನೆಲದ ಮೇಲೆ ಉರುಳಿದ್ದರು. ಉಸಿರಾಡಿಸುತ್ತಿದ್ದ ರೆಂಬುದು ಮಾತ್ರ ಅವು ಹೆಣವಲ್ಲ ಎಂಬುದಕ್ಕೇ ಗುರುತಾಗಿತ್ತು. ಉಳಿದೆಲ್ಲ ಹೆಣದ ಲಕ್ಷಣವೇ. ಆ ಮೋರೆಯ ನಿಸ್ತೇಜ, ಮೈಸುಕ್ಕು ಸೊರಗು ಇದನ್ನು ನೋಡಲಾಸಲ್ಲ. ತತ್‌ಕ್ಷಣ ಅಮೃತನು ಅನ್ನಛತ್ರದ ಜಾಗಕ್ಕೆ ಹೋಗಿ ಅಲ್ಲಿಂದ ಆ ಹೆಂಗಸರಿಗೆ ಸಾಲುವಷ್ಟು ಆಹಾರವನ್ನೂ ಕೂಸುಕುನ್ನಿಗೆ ಹಾಲನ್ನೂ ಮೂರು ನಾಲ್ಕು ಜನ ಕೆಲಸಗಾರರ ಕೂಡ ತೆಗೆದುಕೊಂಡು ಧಾವಿಸಿ ಬಂದನು.

ಇಷ್ಟಕ್ಕೆ ಒಂದು ತಾಸು ರಾತ್ರಿಯಾಯಿತು. ಮಾಮಲೇದಾರರು ಮನೆಗೆ ಹೋಗಿಬಿಟ್ಟಿದ್ದರು. ಅಲ್ಲಿಂದ ಸಿಪಾಯಿಗಳ ಸಹಾಯದಿಂದ ನೀರು ನಿಡಿಯನ್ನು ತರಿಸಿ ಕಚೇರಿಯ ದೀಪದ ಮಿಣುಕು ಬೆಳಕಿನಲ್ಲಿ ಆ ಹೆಂಗಸರಿಗೆ ಊಟದ ಸಿದ್ಧತೆ

ಮಾಡಿದನು. ಅವರೆಲ್ಲರನ್ನು ಎಬ್ಬಿಸುವುದೇ ದೊಡ್ಡ ಪ್ರಯಾಸವಾಯಿತು. ಮತ್ತೆಲ್ಲಿ ತಮ್ಮನ್ನು ಒಯ್ಯುವರೋ ಏನು ಮಾಡುವರೋ ಎಂಬ ಹೆದರಿಕೆ ಅವರಿಗೆ. ಕೂಸಿಗೆ ಹಾಲು ಹಾಕಿದರು. ತಾವು, ಹುಡುಗರೂ ಹೋದಷ್ಟು ಉಂಡು ತಂಬಿಗೆಗಟ್ಟಲೆ ನೀರನ್ನು ಕುಡಿದರು. ಸಿದ್ದೆಗಣ್ಣಿನಲ್ಲಿ ಯಾವುದೋ ಲೋಕಕ್ಕೆ ಯಾರೋ ಕರೆದೊಯ್ದು ಉಣಿಸಿದಂತೆ ಆಯ್ತು. ಇಷ್ಟೆಲ್ಲ ಯಾಕೆ 'ಸರಬರಾಯಿ' ನಡೆದಿದೆ ಎಂಬುದನ್ನು ತಿಳಿದುಕೊಳ್ಳುವಷ್ಟು ಎಚ್ಚರವೇ ಇರಲಿಲ್ಲ. ಊಟವಾದ ಮೇಲೆ ಅಲ್ಲಿಂದ ಅವರನ್ನು ಬೇರೆ ಕಡೆ ಒಯ್ಯುವುದು ಸಾಧ್ಯವೇ ಇರಲಿಲ್ಲ. ಅಲ್ಲಿಯೇ ಮಲಗಿಸಲಾಯಿತು. ಮರುದಿನ ಬೆಳಿಗ್ಗೆ ಅನ್ನಛತ್ರಕ್ಕೆ ಕರೆದುಕೊಂಡು ಹೋದನು. ಛತ್ರ ಹಾಗೆ ನೋಡಿದರೆ ಹುಡುಗರು, ಮುದುಕರಿಗೂ ಅಂಗಹೀನರಿಗೂ ಆಹಾರ ಒದಗಿಸಲು ಹೊರಟದ್ದು. ಆದರೆ ನಿರಾಶ್ರಿತರಿಗೆ ಸಹ ನಡುವೆ ಅಲ್ಲಿ ಆಶ್ರಯ ಕೊಡಬೇಕಾಗುತ್ತಿತ್ತು. ಒಂದೆರಡು ತಿಂಗಳ ಹಿಂದೆ ಅರ್ಧಕ್ಕಿಂತ ಹೆಚ್ಚು ಜನ ಸಶಕ್ತರು ಅಲ್ಲಿ ಊಟಮಾಡುತ್ತಿದ್ದರು. ಕೈಕಾಲು ಗಟ್ಟಿಯಿದ್ದವರು ನಿರುದ್ಯೋಗದ ಮೂಲಕ ಹೊಟ್ಟೆಗಿಲ್ಲದೆ ಬಳಲುತ್ತ ಅನ್ನಛತ್ರಗಳ ಆಶ್ರಯಹೊಂದುತ್ತಿರುವುದು ಜಿಲ್ಹೆಯ ಎಲ್ಲ ಕಡೆ ನಡೆದಿತ್ತು. ಅದಕ್ಕೆ ಬಾಗಿಲುಕೋಟೆ ಅಪವಾದವಾಗಿರಲಿಲ್ಲ. ಆದರೆ ಎಷ್ಟುದಿನಗಳವರೆಗೆ ಆ ನಿರಾಶ್ರಿತ ಹೆಂಗಸರನ್ನು ಅಲ್ಲಿ ಹಾಗೇ ಊಟ ಹಾಕುತ್ತ ಇರಗೊಡಬಹುದು? ಅವರೂ ತನ್ನೂರಾದ ಸಿರೂರವರೆಂಬುದು ಅವನು ತಿಳಿದಿದ್ದ ಕಾರಣ ಅಲ್ಲಿಗೆ ಕಳಿಸಿಬಿಟ್ಟರಾಯಿತು ಎಂದವನಿಗೆ ವಿಚಾರ ಬಂದಿತು. ಅದರಿಂದ ಕಾಟ ತಪ್ಪಿಸಿಕೊಂಡ ಹಾಗೆ ಆಗಬಹುದು. ಆದರೆ ಅಲ್ಲಿ ಅವರ ಗತಿಯೇನು ? ತಮ್ಮೂರಲ್ಲಿ ಏನೂ ಸಿಗಲಾರದೆಂದೇ ಅವರು ಗುಳೆಕಟ್ಟಿಕೊಂಡು ಹೋಗಿದ್ದರು. ಈಗಂತೂ ಅಲ್ಲಿಯ ಸ್ಥಿತಿ ಹೆಚ್ಚು ಭಯಾನಕವಾಗಿರಬೇಕು. ಸಿರೂರ ಹತ್ತಿರದಲ್ಲಿಯ ಬರಗಾಲ ಕಾಮಗಾರಿಗೆ ಅವರನ್ನು ಹಚ್ಚಬಹುದು ಎಂದುಕೊಂಡನು. ಕಲ್ಯಾಣಿಯವರು ಒಂದೆರಡು ದಿನದಲ್ಲಿ ತಿರುಗಿ ಬರತಾರೆ, ಆಮೇಲೆ ಗೊತ್ತುಮಾಡೋಣ ಎಂದು ತಾತ್ಪೂರ್ತಿಕವಾಗಿ ಅವರಿಗೆ ಅಲ್ಲಿ ಇರಹೇಳಿದನು. ಅವನು ತಮ್ಮಬಗ್ಗೆ ಇಷ್ಟು ಹಚಿಗೊಂಡು ಮಾಡುತ್ತಿರುವುದನ್ನು ನೋಡಿ ಆ ಎಲ್ಲ ಹೆಂಗಳೆಯರಿಗೆ ಉಪಕಾರ ಭಾವನೆ ಉಕ್ಕಿ ಬಂದಿತು. ಗದಗಿನ ಅಂದಾನೆಪ್ಪನವರ ನೆನಪಾಯಿತು. ಎರಡನೆಯ ದಿನಸಂಜೆ ಅನ್ನುತನು ಅವರಿಗೆ ಎಲ್ಲ ವ್ಯವಸ್ಥೆ ಸರಿಯಾಗಿ ನಡೆದಿರುವದೋ ಹೇಗೆಂದು ನೋಡಲು ಬಂದವನು ಅವರನ್ನೇ ಕೇಳಿದನು. 'ಎಪ್ಪ, ಅದೆಂತಾಮಾತು. ನಮಗೇಟೇಟೂ ಕಮ್ಮಿಆಗಿಲ್ಲೊಮಾರಾಯ!

ನಿನ್ನ ಹೊಟ್ಟೆ ತಣ್ಣಗಾಗಲಿ. ದೇವರು ಬಂದಂಗ ಬಂದು ನಮ್ಮನ್ನ ಬದುಕಿಸಿದಿ.' ಎಂದು ಕೊಂಡಾಡಿ ಹರಸಿದರು.

ಅವರಲ್ಲಿ ಒಬ್ಬ ದಿಟ್ಟೆಯಾದವಳು ಕುತೂಹಲದಿಂದ 'ನಿನ್ನ ಹೆಸರೇನೊ ಯಪ್ಪ ? ಹಗಲಿ ರಾತ್ರಿ ಹಾಡಿ ಹರಸತೇವಿ!' ಎಂದಳು. ಅಮೃತನು ಅದಕ್ಕೆ 'ನನ್ನ ಹೆಸರು ತಗೊಂಡೇನು ಮಾಡತೀ ? ದೇಶದ ಒಳ್ಳೇ ಮಂದೆಲ್ಲಾ ಕೂಡಿ ಬಡಮಂದಿಗೆ ಅನ್ನ ಹಾಕಲಿಕ್ಕಿ ಇದನ್ನ ತಗದಾರ. ಅವರ್ನ ಹಾಡಿ ಹರಸರಿ' ಎಂದು ಹೇಳಿದರೂ ಕೂಡ ಅವರು ಬಿಡಲಿಲ್ಲ. 'ನಾ ನಿಮ್ಮ ಸಿರೂರವನೇ' ಎಂದು ಅವನು ಕೊನೆಗೆ ಹೇಳಿದನು. 'ಸಿರೂರವನೂ' ಎಂದು ದನಿಯೆಳೆಯುತ್ತ ಬಾಯಿಗೆ ಬೊಟ್ಟಿಟ್ಟು ಮೋರೆಯನ್ನು ಇಷ್ಟಗಲ ಮಾಡಿ ಆ ಹೆಂಗಸು ತನ್ನ ಹರ್ಷಪೂರ್ಣ ವಾದ ಆಶ್ಚರ್ಯವನ್ನು ಸೂಚಿಸಿದಳು.ಎಲ್ಲ ಹೆಂಗಸರಿಗೆ ಅವನ ಬಗ್ಗೆ ತಮ್ಮತನದ ಅರಿವುಂಟಾಯಿತು. ಹೆಚ್ಚು ಮಾಹಿತಿ ಕೇಳಿದರು. 'ತಿಳೀತ ಬಿಡು. ಶಂಬಪ್ಪನ ಮಗ ಹೌದಲ್ಲೊ ?' ಎಂದವಳು ಗುರುತು ಹಿಡಿದಳು. 'ನಮ್ಮ ಯಜಮಾನ ನಿಮ್ಮ ಹೊಲ ಮಾಡತಿದ್ದ, ಬಾರೀಕಾಲ ನಿಮ್ಮ ಮನಿಗೆ ಬರುತಿದ್ದಿವಿ. ಆಗ ಈಟ ಇದ್ದವ ಈಗ ಏಟು ದೊಡ್ಡಾವ ಆಗಿದೆಲ್ಲೊ ಅಮೃತಪ್ಪ !' ಎಂದು ಆಡಿದಳು. ಉಳಿದವರಿಗೆಲ್ಲ ಅವನು ಅಮೃತಪ್ಪನೆಂದು ಗೊತ್ತಾಯಿತು. ತನ್ನ ಯಜಮಾನ ಹತ್ತು ವರ್ಷದಹಿಂದೆ ಚಳಿಜ್ವರ ಬಂದು ಹೋದನೆಂದೂ ಆಮೇಲೆ ಬೇರೆಯವರಿಗೆ ಶಂಭುರಾಯರು ಹೊಲಗಳನ್ನು ಸಾಗುಮಾಡಲು ಕೊಟ್ಟರೆಂದೂ ಹಿಂದಿನದೆಲ್ಲ ನೆನಪಾಗಿ ಇಂದಿನ ದುಗುಡ ಒತ್ತಿಬಂದು ಕಂಬನಿದುಂಬಿ ಕುಳಿತಳು. ಅಮೃತನ ಹೃದಯ ಕಲಕಿತು. ಆ ಹೆಂಗಸಿನ ಬಗ್ಗೆ, ಉಳಿದೆಲ್ಲರ ಬಗ್ಗೆ ಕನಿಕರ-ಕುತೂಹಲ ಅವನಲ್ಲಿ ಹೆಚ್ಚಾದವು. ಅಲ್ಲಿಯೇ ಇವರ ಇದಿರು ಕೂತುಕೊಂಡು ಅವರ ಸ್ಥಿತಿಗತಿ ಗಳನ್ನು ಕೇಳತೊಡಗಿದನು. ಅವರೂ ತಮ್ಮಮನೆಯ ಹುಡುಗನ ಮುಂದೆ ಹೇಳು ವಂತೆ ಮನಸ್ಸು ಬಿಚ್ಚಿ ಹೇಳಿದರು. 'ನೀವು ಗುಳೇ ಯಾಕೆ ಹೋದಿರಿ ? ಎಲ್ಲೆಲ್ಲಿಗೆ ಹೋದಿರಿ ? ಅಲ್ಲಿ ದಗದ ಇತ್ತೇನು ?' ಎಂದು ಮೊದಲಾಗಿ ಇವನು ಕೇಳಿದ್ದಕ್ಕೆ ಆಗಳೆ ಮಾತಾಡಿದ ಹಿರಿಯ ಹೆಂಗಸೇ ಎಲ್ಲರ ವತಿಯಿಂದ ಹೇಳಿದಳು. ಉಳಿದ ವರು ನಡುನಡುವೆ ಒಂದೊಂದು ಉದ್ಗಾರವನ್ನೊ ಮಾತನ್ನೊ ಸೇರಿಸುತ್ತಿದ್ದರು. ಅವಳು ಹೇಳುವದೆಲ್ಲ ಕಣ್ಣೀರಿನ ರಾಮಾಯಣ. ಅದನ್ನು ಕೇಳುವದಕ್ಕೂ ಎದೆ ಗಾರಿಕೆ ಬೇಕು. ಅಮೃತನೆಷ್ಟೋ ಧೈರ್ಯ ಸಂಪಾದನೆ ಮಾಡಿದ್ದರೂ ಅದರ ಸಂಗ್ರಹ ಸಾಲಲಿಲ್ಲ. ಕೇಳುತ್ತಿದ್ದಂತೆ ಕಣ್ಣಿನಿಂದ ದಳದಳ ನೀರು ಉದುರಿದವು.

ಅವಳು ಹೇಳಿದ್ದು ಹೀಗೆ :

'ಅಮೃತಪ್ಪ,ಏನ ಹೇಳಲಿ ನಮ್ಮ ಗೋಳು ? ಮಾನಮ್ಮಿ ಹೋತು,ದೀವ ಳಿಗೆ ಬಂತು, ಮಳಿ ಸುದ್ದಿ ಇಲ್ಲದಂಗಾತು. ಮನ್ಯಾಗಿನ ಓಟೊ ಕಾಳು ಕಡಿ ತಿಂದು ಕೊತಿವಿ. ಹೊಲದಾಗ ದಗದಿಲ್ಲ, ಹ್ವಾರೇ ಇಲ್ಲ. ಹೊಟ್ಟಿಗೇನು ಕೇರು ಹಕ್ಕೊಳ್ಳೇದೈತೆ ? ಊರಾಗಿನ ಮಂದೆಲ್ಲಾ ಬಾಯಿ ಬಿಡಾಕ ಹತ್ತ್ಯ. ದನಕರ ಮೇವಿಲ್ಲದ ನೀರಿಲ್ಲದ ಕಣ್ಣಾಗ ಜೀವ ಹಿಡಕೊಂಡು ನಿಂತವು. ಸುತ್ತ ಹಳ್ಳ್ಯಾಗ ಇರವಿ ಸಾಲಿನಂಗ ಮನಾರೆ ಜನ ಗುಳೆಹೊಂಟತಿ, ಮಲನಾಡ ಸೀಮ್ಯಾಗ ದಗದ ಸಿಗತತಿ, ಕಾಳ ಸಿಗತತಿ ಅಂತ ಹೇಳಿಕ್ಯಾಸ ಊರೆಲ್ಲ ಎಬ್ಬಿಸಿದರೋ ಎಪ್ಪ, ಬ್ಯಾಟಿ ಎಬ್ಬಿಸು ಗತಿ. ದನಕತ ಕಟಿಗೊಂಡು ಮುದಕರ್ನ ತದಕರ್ನ ಹಿಂದ ಬಿಟ್ಟು ಹೊರ ಟೇವು, ಕುರುಡರ ಬೆನ್ನುಹತ್ತಿ ಕುರುಡರು ಹೊಂಟಾಂಗ.'

'ಪಾಪ, ಆ ಮುದುಕರ ಗತಿ ಏನಾಗಿರಬಹುದು ?' ಅಮೃತ ನಡುವೆ ಕನಿಕರಿಸಿದನು.

'ಏನಾಗೋದು ? ದುರಗವ್ವಗ ನಮ್ಮಂಗ ಹಸುವಾಗೇತಿ. ಅವರ್ನ ಒಂದೇ ತುತ್ತಿನಾಗ ನುಂಗಿಬಿಟ್ಟಿರತಾಳು !' ತೀರ ನಿರ್ವಿಕಾರ ಧ್ವನಿಯಿಂದ ಹೇಳಿ ಅವಳು ಮುಂದುವರಿಸಿದಳು : 'ಯಾರಾರೆ ಪುಣ್ಯಾತ್ಮರು ರೊಟ್ಟಿ ಕೊಟ್ಟರೆ ಅವು ಬದುಕಿರಿ ತಾವ. ಇಲ್ಲದಿರಕ ಹೋಗಿರತಾವ ಕಣ್ಣು ಮುಚ್ಚಿ ಶಿವನ ಹಂತೀಕ. ದಾರಿ ಹಿಡಿದು ನಡದ್ವ ನಡದೇವು ಅವೇಟು ಮಂದಿ ಗಂಡು ಹೆಣ್ಣು ನಮ್ಮಂಗ ಹೊರಟತಿ. ಎಲ್ಲೀಗೆಹೊಕ್ಕೀರಿ ಅಂದರ ಗುಳೇಕ್ಕ ಅಂಬೂ ಮಾತs ಒಬ್ಬಾವ ಗಂಮತಿನ ಹಿರ್‍ಯಾ ಹೇಳತಾನ, 'ಗುಳೇಕ್ಕ ಅಲ್ಲಬೆ, ದುರಗವ್ವನ ಜಾತ್ರಿಗೆ. ಈ ಬ್ಯಾರೆ ಕುರಿ ಕ್ವಾಣ ಬ್ಯಾಡ, ಮನಸ್ಯಾರ್ನ ತಂದು ಕೊಡು ತಿನ್ನಾಕ ಅಂತ ಪೂಜಾರ ಮೈಯ್ಯಾಗ ಹೊಕ್ಕು ಹೇಳ್ಯಾಳ ದೇವಿ. ಅದಕ್ಕ ಹೊಂಟೇವಿ.' ನಮಗೂ ಕೂಳಿಲ್ಲ, ದನಕೂ ಮೇವಿಲ್ಲ ಆಗಾಣ ಅವನ್ನ ಕಟಕರಿಗೆ ಮಾರಿಕೊಂಡೇವು. ಸಿಕ್ಕಟು ಸೆಜ್ಜಿ,ಜ್ವಾಳಾ ಕೊಂಡಕ್ಯಾಸ ರೊಟ್ಟಿಬಡದು ಗಂಟ ಕಟ್ಟಿಕ್ಯಾಸ ತಿನಕೋತ ಹ್ವಾದೇವು. ಕತ್ತಲಾ ಗೂಣ ಗಿಡದ ಬುಡಾಕ ಹಳ್ಳೀ ಊರ ಕಟ್ಟಿಗೆ ಮನಕೊಂಡು ಹರ್‍ಯಾಗ ಮತ್ತ ಹಾದಿ ಹಿಡಿತಿದ್ದೇವು. ಗದಗ್ಗೆ ಬಂದೇವು. ಓಣ್ಯಾಗಿನ ಮಂದೆಲ್ಲಾ ಮದವಿ ಮೆರ ವಣಿಗಿ ನೋಡಿದಂಗ ನಮ್ಮನ್ನ ನೋಡಿಕೋತ ನಿಂತ್ಯ. ಯಾರೇನು ತುಣಕ ರೊಟ್ಟಿ ಕೊಡಲ್ಲಿಲ್ಲ. ನೀರು ಹಣಸಲಿಲ್ಲ. ಏಟು ಚಾದಂಗಡಿ ! ಏನು ಝಳಕಾಸ ಬೆಳಕು! ನಮ್ಮ ಹೊಟ್ಟ್ಯಾಗೆಲ್ಲ ಭುಗ್ಗಂತ ಉರಿ! ಭೂಮಿತಾಯನ್ನ ಅಪ್ಪಿಕೊಂಡು

ಗಿಡದ ಬುಡಾಕ ಉಸ್ಸನಕೋತ ಉರಳಿದಿವಿ. ಕೂಸೆಲ್ಲಾ ಗಂಟಲ ಹರಿಯೂಹಂಗ ಅತ್ತುವು. ರಾತ್ರಿ ಆಗಾಣ ನಾಚಿಕೆ ಬಿಟ್ಟು ಭಿಕ್ಷಾ ಬೇಡಾಕ ಹೋದಿವಿ. ಬೆಯ್ಸಿ ಕೊಂಡು ತಂದ ಎಂಜಲ ತಿಂದಿವಿ, ಕೂಸಿಗೆ ತಿನಿಸಿದಿವಿ. ಈಟೊತ್ತಿಗೆ ದೇವರು ಭೂಮಿ ಮ್ಯಾಗ ಬಂದಾಂಗ ಅಂದಾನೆಪ್ಪ ಬಂದನೊ ಎಪ್ಪ! ತನ್ನ ವಖಾರದಾಗ ಕರದು ಜಾಗ ಕೊಟ್ಟ, ಹಿಟ್ಟ ಕೊಟ್ಟ, ಕೂಸಿಗೆ ಹಾಲ ಕೊಟ್ಟ. ಈಟs ಯಾಕ, ಮಲಿನಾಡಿನತಕ್ಕ ಮೋಟರದಾಗ ಕರಕೊಂಡು ಹೋಗಿ ಬಿಟ್ಟುಬಂದ. ದುರಗವ್ವನ ಜಾತ್ರಿ ಹೋಗಿ ಕ್ಯಾಸ ಅಂದಾನೆಪ್ಪನ ಜಾತ್ರಿ ಆತು. ಅವನ ಹೆಸರು ಕೇಳಿಕ್ಯಾಸ ಗುಳೇಕಾರ ಮಂದೆಲ್ಲಾ ಗದಿಗ್ಗೆ ಹಪಾಪಿಸಿ ಬಂತು; ಹರಸಿಕೋತ ಹೋತು. ಮಲಿ ನಾಡಿಗೆ ಹೋಗಿಕ್ಯಾಸ ಏನು ಸುಖಉಂಡೇವಂತೀ ಅಮೃತಪ್ಪ. ಜಿಯ್ಯಂತ ಅಡವಿ! ನೋಡಿದಲ್ಲಿ ಗಿಡಾನs ಗಿಡ! ದಗದ ಕೊಟ್ಟರು. ಕೂಲಿ ಕೊಟ್ಟರು. ಜೀವ ಮಾತ್ರ ತಗೊಂಡರು. ಮೈಯೆಲ್ಲ ಗುಂಗಾಡು ಕಡಿದು ಚಳಿಜ್ವರಬಂದು ಎಲ್ಲಾ ರೂ ಮನಗಿದಿವಿ. ತರತರದ ಬ್ಯಾನಿ ಬಂದು ನಮ್ಮ ಜತಿ ಬಂದ ಗಂಡಾಳೆಲ್ಲಾ ಪಟಪಟ ಹುಳದಂಗ ನೆಲಕ್ಕ ಬಿದ್ದವು. ನಾವು ಗಾಬರಿ ಆಗಿ ಗಾಡಿ ಹತ್ತಿ ಗದಿಗ್ಗೆ ಬಂದೇವು. ಅಂದಾನಪ್ಪನ ವಖಾರದಾಗ ಮತ್ತೆ ತಳವೂರಿದಿವಿ. ಆಟೊತಿಗೆ ಶರಣಕ್ಕಗ ದಿನ ದಾಗ ಬಿತ್ತು. ಅಲ್ಲೇ ಹಡದ್ಲು. ಈಟ ಕಡಿಮಿ ಮಾಡದ ಬಾಣಂತನ ಮಾಡಿದಿವಿ. ಅಮೃತಪ್ಪ, ನಿನಗೇನು ತ್ಯಾಂವಿಕಿ? ಶರಣಕ್ಕ ನಮ್ಮೂರ ಗೌಡರ ಸೊಸಿ.

'ಹಾ! ಅವಳು ಹೆಂಗ ನಿಮ್ಮ ಜೋಡಿ ಗುಳೆಕ್ಕ ಬಂದಳು?' ಅಲ್ಲಿಯೆ ಮಗ್ಗಲಿಗೆ ಕೂಸಿಗೆ ಮೊಲೆಕೊಡುತ್ತ ಕೂತಿದ್ದ ಶರಣಕ್ಕನು ಕೆಳಗೆ ಮೋರೆ ಹಾಕಿ ದಳು. ಮೊನ್ನೆ ಸ್ಟೇಶನ್ನಿನಿಂದ ಬರುವಾಗ ಮೂರ್ಛೆ ಹೊಂದಿ ಬಿದ್ದವಳು ಅವಳೇ.

'ಗೌಡರಾಗ ನಾಕ ಮನಿ ಆಗಿ ಒಡದು ಎಲ್ಲಾ ಹದಗೆಟ್ಟೈತಿ. ಇವರಿಗೆ ಐವತ್ತು ಕೂರಿಗಿ ಜಮಿಾನಿತ್ತು. ಈಕಿ ಗಂಡ ಹರೇದ ಉಬ್ಬಿನ್ಯಾಗ ಕೆಟ್ಟ ತಲ ಬಿಗೆ ಬಿದ್ದು ಸಾಲ ಮಾಡಿ ಜಮಿಾನೆಲ್ಲ ಸಾವಕಾರರ ಹೆಸರಿಗೆ ಬರಕೊಟ್ಟು ಕೂತ. ಕಿಗ್ಗಳ ಒಂದೆರಡು ಉಳಿದದ್ದರಾಗ ಬೆಳಿ ಇಲ್ಲದ ಈ ಗತಿ ಆತು ಇವರಿಗೆ.'

'ಅವ ಎಲ್ಲಿ ಹೋದ?'

'ಎಲ್ಲೇನು? ಒಬ್ಬಾಕಿ ಹೊಯ್ಮಾಲೀ ಬೆನ್ಹತ್ತಿ ಹೋಗ್ಯಾನ ನಾಯಿಗತಿ.'

'ಅಮೃತಪ್ಪ, ಶರಣಕ್ಕಗ ಮನಿ ಬಿಟ್ಟು ಹೊರಗೆ ಬಂದು ಗೊತ್ತಿಲ್ಲ. ದುಡದು ಗೊತ್ತಿಲ್ಲ. ಘಾಳ್ಯಾಗ ಮಳ್ಯಾಗ ತಿರಗಿಕ್ಯಾಸ ಗೊತ್ತಿಲ್ಲ. ಗುಳೆ ಹೊರಟಾಗ ನಾಕ ತಿಂಗಳ ಹೊಟ್ಟಲೆ ಇದ್ದಾಕಿ ನಮ್ಮ ಬೆನ್ನ ಹಿಂದೆ ಈ ಎರಡು ಮಕ್ಕಳ್ನ ಕಟ

ಗೊಂಡು ಬಂದಳು. ಆಕಿ ಬೊಗಳಿ ಶಿವನ್ಯ ಬಲ್ಲ, ಅಮೃತಪ್ಪ! ಬಾರ್‍ಯಾಗಿನ ಬವಣಿ ಹೇಳಲಾಸಲ್ಲ. ಮ್ಯಾಗ ಮಲನಾಡಿಗೆ ಹೋದಲ್ಲೆ ಕೆಲಸ ತಗೊಂಬೊ ಸಾಯೇಬ ಕೆಲಸ ತಪ್ಪಸತಾಳ ಕುಂತು ಕುಂತು ಮಾಡತಾಳ ಅಂತ ಒದ್ಯಾಕ ಬಂದಿದ್ದ. ನಾವ್ಯ ಹೋಗಿ ಅಡ್ಡಬಿದ್ದು 'ಬಸರಿದ್ದಾಳ ಎಪ್ಪ ಕಾಲಬೀಳತೀನಿ ಹೊಡಿಬ್ಯಾಡ' ಅಂತ ಬಾಯಿ ತೆಗೆದು ಬಿಡಿಸಿದಿವಿ. ಚಳಿಜರ ಬಂದು ಮನಕೊಂಡಾಗ ಒಂದಿನ ಆಕೀ ಆಶಾನ ಬಿಟ್ಟು ಕೂತಿದ್ದಿವಿ. ಆಕೀನ್ನ ಓದು ಊರ ಮುಟ್ಟಿಸಿದರ ನಾವು ಬದಕಿದ್ದರಕಿಂತ ಹೆಚ್ಚಾಕ್ಕತಿ.'

ತೇವಗೊಂಡ ಉಸುಕುನೆಲವನ್ನು ತೋಡಿದಲ್ಲಿ ಒರತೆಯು ನೀರು ಚಿಮ್ಮು ವಂತೆ ಈ ಕರುಣಕಥೆ ಕೇಳಿದಲ್ಲಿ ಕಂಬನಿಯು ಚಿಲುಮೆಯಾಗಿತ್ತು. ಕೇಳಲಾರದೆ ಅಮೃತ ಎದ್ದು ಹೊರಟನು. ರಾತ್ರಿಯೆಲ್ಲ ಅವ ಕನಸಿನಲ್ಲಿ ಕಂಡದ್ದು ಗುಳೇಕಾ ರರ ಕಥೆಯ ನೂರಾರು ಮುಖದ ವಿಕೃತ ಚಿತ್ರಗಳನ್ನು. ಮರುದಿನ ಕಲ್ಯಾಣಿ ಯವರು ಬಂದರು. ಅವರಿಗೆ ಎಲ್ಲ ಸಂಗತಿ ಹೇಳಲಾಗಿ ಅಮೃತನು ಸಿರೂರಿಗೆ ಆ ಹೆಂಗಸರ ಗುಂಪನ್ನು ಕರೆದೊಯ್ದು ಅಲ್ಲಿ ರಾಟೆಗಳನ್ನು ಕೊಟ್ಟು ನೂಲಲಿಕ್ಕೆ ಹಚ್ಚಿಯಾಗಲಿ ಬೇರೆ ಬಗೆಯಿಂದಾಗಲಿ ಅವರ ಹೊಟ್ಟೆಪಾಡಿಗಾಗಿ ಏರ್ಪಾಡು ಮಾಡಬೇಕೆಂದು ನಿರ್ಣಯವಾಯಿತು.

ಹೀಗೆ ಐದಾರು ದಿನದಿಂದ ಅಮೃತ ಬರಗಾಲ ಸಮಿತಿಯ ಕೆಲಸದಲ್ಲಿ ತೊಡಗಿ ಊಟಕ್ಕೆ ಮಲಗುವುದಕ್ಕೆ ಮಾತ್ರ ಮನೆ ಸೇರುತ್ತಿದ್ದನು.ಇದು ಶಂಭುರಾಯರಿಗೆ ಎಷ್ಟೂ ಸರಿಬೀಳಲಿಲ್ಲ. ದಿನಾಲು ಏನಾದರೂ ಒದರಾಟವಿದ್ದೇ ಇರುತ್ತಿತ್ತು. 'ಇಂಥಾ ಕೆಲಸ ಹೊಟ್ಟೀ ಕಾಳಜಿ ಇಲ್ಲದವರು ಮಾಡಬೇಕು. ಅವ ಕಲ್ಯಾಣಿ ಗೇನು ಕಡಿಮಿ ಆಗೇದ ? ಜ್ವಾಳ ಗೋದಿ ಚೀಲ ಹಚ್ಚ್ಯಾನ ಅಪ್ಪ ಮನ್ಯಾಗ, ಬರಗಾಲದ ಕೆಲಸ ಮಾಡತಾನ. ನಮ್ಮನ್ಯಾಗ ದಿನಬೆಳಗಾದರ ಬರಗಾಲ ನಡ ದದ. ಈ ಬರಗಾಲದ ಕೆಲಸ ಯಾರು ಮಾಡಬೇಕು ? ನಿನಗೆ ಕಲಿಸಿದ್ದೇ ನಮ್ಮ ಮೂರ್ಖತನ ಆತು. ಅದ್ಯ ದುಡ್ಡು ತಗೊಂಡು ಬ್ಯಾಂಕಿನಾಗ ಇಟ್ಟಿದ್ದರ ಬಡ್ಡೀಮ್ಯಾಲೆ ಸುಖದಿಂದ ಇರತಿದ್ದಿವಿ.' ಈ ಮಾತಿಗೆ ಪಾರ್ವತಿಬಾಯಿ ಮನಸ್ಸಿ ನಲ್ಲಿ ಒಪ್ಪಿದರೂ ಹೊರಗೆ ತಡೆಹಾಕಲು ಪ್ರಯತ್ನ ಮಾಡುತ್ತಿದ್ದಳು.ಅಮೃತನೆಲ್ಲಿ ಮನಸ್ಸಿಗೆಹಚ್ಚಿಕೊಂಡು ಕೂಡುವನೋ ಎಂದು ಅವಳಿಗೆ ಒಳಗುದಿ.'ಇನ್ನೊಂದು ತಿಂಗಳ ಇಷ್ಟ್ಯ ಮಾಡತೀನಿ ಅಂತಾನಲ್ಲ ? ಎಂದು ಗಂಡನ ಸಾಂತ್ವನ ಮಾಡುತ್ತಿದ್ದಳು. ಆದರೆ ಶಂಭುರಾಯರಿಗೆ ಅದರಿಂದ ಇನ್ನಿಷ್ಟು ವ್ಯೈಯುರಿ

ಯುತ್ತಿತ್ತು. 'ಅವನದೇನು ಭರೋಸ ? ಈಗ ತಿಂಗಳಂತಾನ, ನಾಳೆ ವರ್ಷಂತಾನ. ಈವತ್ತು ವಿಜಾಪುರ ಇಷ್ಟ್ಯ ಅಂತಾನ. ನಾಳೆ ಮತ್ತ ಬಂಗಾಲಕ್ಕ ಹೋದಾನು. ನಮ್ಮನ್ನೆಲ್ಲಾ ಗೊತ್ತಿಗೆ ಹಚ್ಚಿ ದೇಶಸೇವಾ ಮಾಡಬೇಕಂತಾನ ಅವ.' 'ಹಂಗನ ಬ್ಯಾಡರಿ !' ಎಂದು ತಿರುತಿರುಗಿ ಆ ಹೆಂಗರುಳು ಸೊಲ್ಲುತ್ತಿತ್ತು. ಪಿಟ್ಟೆಂದು ಆಡದ ಅಮೃತ ಸುಮ್ಮನೆ ಕೂತು ಕೇಳುತ್ತಿದ್ದನು. ಯಾಕಂದರೆ ಮನೆಯಲ್ಲಿ ನಡೆದ ತಾಪತ್ರಯ, ಆದೇಕೆ ತಾಪಶತ ಅವನಿಗೆ ತಿಳಿದೇ ಇತ್ತು. ತಾನೇ ಅದನ್ನು ಶಮನ ಮಾಡಬೇಕೆಂದು ಹಿರಿಯರು ನಿರೀಕ್ಷಿಸಿದ್ದೂ ಸ್ವಾಭಾವಿಕ. ಆದರೆ ಸದ್ಯದ ಮಟ್ಟಿಗೆ ಸೇವೆಯ ಕರೆ ಅವನನ್ನು ಬಲವಾಗಿ ಎಳೆದಿತ್ತು.

ಒಂದುದಿನ ಬೆಳಿಗ್ಗೆ ಸಿರೂರಿಗೆ ಸಮಿತಿಯ ಕೆಲಸಕ್ಕೆಂದು ತಾನು ಹೋಗುತ್ತಿರುವುದನ್ನು ಮನೆಯಲ್ಲಿ ಅಮೃತ ಹೇಳಿದ. ಯಥಾಪ್ರಕಾರ ಶಂಭುರಾಯರು ರೇಗಿದರು. 'ಹೊರಟನಪ, ಪಿರಿಪಿರಿ ತಿರಗಿಕೋತ. ಸಿರೂರಂತ ಹೇಳಿದರೆ ನಾವು ಸುಮ್ಮನಿರತೀವಿ ಅಂತ ಅದನ್ನ ಹೇಳೋದು. ಮುಂದ ಸಿಕ್ಕಲ್ಲೆ ತಿರಗೂದು.' 'ಕೆಟ್ಟ ಬ್ಯಾಸಗಿ ದಿವಸ. ಎಲ್ಲ್ಯೂ ಹೋಗಬ್ಯಾಡೊ ನಮ್ಮಪ್ಪ, ಇದ್ದೂರಾಗ ಬೇಕಾದ್ದು ಮಾಡು !' ಎಂದು ತಾಯಿಯ ಮೊರೆ. ತಾನು ಹೋಗಲೇಬೇಕೆಂಬುದಕ್ಕೆ ಗುಳೇಕಾರರ ಕರುಣಕಥೆಯನ್ನು ಅವನು ವರ್ಣಿಸಿ ಹೇಳಿದನು. 'ಹೌದು, ಅವರು ಹೊಟ್ಟಿಗಿಲ್ದ ಸಾಯತಾರ. ಇಲ್ಲಿ ನಮ್ಮ ಹೊಟ್ಟ್ಯಾಗೇನು ಅಮೃತ ಹಾಕೇದೇನು ? ಮನ್ಯಾಗ ಅಕ್ಕಿಲ್ಲ, ಸಕ್ಕರಿಲ್ಲ. ಸಾಲ ಗುಡ್ಡದಂಗ ಕೂತದ. ತುಟಪುಂಜಿ ಪಗಾರೆಲ್ಲ ಖಲಾಸಾತು. ದೆವ್ವನಂಗ ಬೆಳೆದು ಕೂತ ಹುಡುಗಿಯ ಮದಿವಿಗೆ ಠಿಕಾಣಿಲ್ಲ. ನಿನ್ನೇನು ಕೆತ್ತೀ ಬಜಿ ಕಾರಭಾರ ಮಾಡಲಿಕ್ಕಂತ ಅನ್ನ ಹಾಕಿ ಬೆಳಸಿದೆವೇನು ?' ಶಂಭುರಾಯರು ನೆಲದಿಂದ ಪುಟಿದೆದ್ದ ಬಿಸಿನೀರಿನ ಕಾರಂಜಿಯಂತೆ ಮಾತು ತೂರಿದರು. ಅಮೃತನು ಅವಾಕ್ಕಾಗಿ ಕಂಬನಿದುಂಬಿ ಕೂತುಬಿಟ್ಟನು. ಆ ಕ್ಷಣ ಬರಗಾಲಸಮಿತಿಯ ಸೇವೆ ಇಷ್ಟು ಸಾಕೆಂದು ಅನಿಸಿತು. ಕೆಲ ಹೊತ್ತು ಆಲೋಚಿಸಿ, 'ನಿಮಗ ಇಷ್ಟು ಬ್ಯಾಡಾಗಿದ್ದರ ಈ ಕೆಲಸ ಬಿಟ್ಟುಬಿಡತೀನಿ !' ಎಂದು ಹೇಳಿದನು.

'ಬರೀ ಬಾಯಿಲೆ ಅಂತೀದಿ. ನೀ ಏನು ಬಿಡತೀದಿ ? ಆ ಸಂನ್ಯಾಸಿ ಜನಾರ್ದನರಾಯ ನಿನ್ನ ತಲಿ ತಿರಗಸ್ಯಾನ.'

'ಅವರಿಗ್ಯಾಕ ಆಡಿಕೋತೀರಿ !' ಎಂದು ಹೇಳಬೇಕೆಂದು ಅಮೃತನ ಬಾಯ್ತುದಿಯವರೆಗೆ ಬಂತು. ಹೇಳಲಿಲ್ಲ. ಮತ್ತೊಮ್ಮೆ ತನ್ನ ನಿರ್ಧಾರವನ್ನು

ತಿಕ್ಕಿ ನೋಡುವ ಪ್ರಸಂಗ ಬಂದಿತು. ಹಾಗೇ ಕೂತುಕೊಂಡು ಸಾಧ್ಯವಿದ್ದಷ್ಟು ಶಾಂತವಾಗಿ ಮನಸ್ಸನ್ನು ಹಿಡಿತಕ್ಕೆ ತಂದು ವಿಚಾರ ಮಾಡಿದನು. ಕೆಲಸವನ್ನು ಮೊನ್ನೆಯೆ ಸುರುವು ಮಾಡಿ ಬಿಡುವುದು ಸರಿಯಲ್ಲ ಎಂದು ತಿರುತಿರುಗಿ ಅನಿಸ ಹತ್ತಿತು.ತಾನಿಲ್ಲಿ ಮನೆಯೊಳಗೆ ಇದ್ದಾದರೂ ಏನು ಮಾಡಬಹುದು? ಇನ್ನೊಂದು ತಿಂಗಳಿಗೆ ಕಾಲೇಜಿಗೆ ಹೋಗಬೇಕೆಂದು ಗೊತ್ತುಮಾಡಿದೆ. ಅವರಿಗೆ ಇಷ್ಟು ಸೇವೆ ಸಲ್ಲಿಸಕೂಡದೇ ? ಕೊನೆಗೆ ಗಟ್ಟಿಮನಸ್ಸು ಮಾಡಿ ತಂದೆಗೆ ನಮ್ರ ರೀತಿಯಲ್ಲಿ ತನ್ನ ನಿಶ್ಚಯ ಸಾರಿದನು. ಅಪ್ಪಣೆ ಕೊಡಲು ಬೇಡಿಕೊಂಡನು. ಅವರು 'ಬೇಕಾದ್ದು ಮಾಡು' ಎಂದು ತಮಗದು ಬೇಡಾದ್ದು ಎಂಬುದನ್ನು ಸ್ಪಷ್ಟವಾಗಿ ಸೂಚಿಸಿದರು. ಆದರೂ ಇದ್ದದರಲ್ಲಿ ಸಮಾಧಾನ ಮಾಡಿಕೊಂಡು, 'ಹೆಂಗೂ ಸಿರೂರಿಗೆ ಹೋಗತೀ? ಹೊಲಮನೀದು ನೋಡಿಕೊಂಡು ಬಾ.ಈ ವರ್ಷದ ಲಾವಣಿ ಅಂತೂ ಬಾದಾತು. ಏನs ಆಗಲಿ, ನಮ್ಮ ರೈತಗ ಬಂದು ಭೆಟ್ಟಿ ಆಗಂತ ಹೇಳು.' ಎಂದು ಹೇಳಿ ಅವನಿಗೆ ಬೇಕಾದ ಮಾಹಿತಿಯನ್ನೆಲ್ಲ ಒದಗಿಸಿದರು.ಗಡಿಬಿಡಿಯಿಂದ ಪಾರ್ವತಿ ಬಾಯಿ ಅವನಿಗೆ ಅಡಿಗೆ ಮಾಡಿ ಊಟಕ್ಕೆ ಹಾಕಿ, 'ಸಿಕ್ಕ ಸಿಕ್ಕಲ್ಲೆ ನೀರು ಕುಡಿ ಬ್ಯಾಡ, ಅದು ಇದು ತಿನಬ್ಯಾಡ' ಎಂದು ಬಜಾಯಿಸಿ ಕಳಿಸಿಕೊಟ್ಟಳು.

ಸಿರೂರ ಮೇಲಿಂದ ಹೋಗುತ್ತಿದ್ದ ಒಂದು ಖಾಲಿಯಾದ ಮಾಲ ಮೋಟಾರಿನಲ್ಲಿ ಆ ಹೆಂಗಸರನ್ನು ಪರಿವಾರಸಹಿತ ಕೂಡಿಸಿ ಅಮೃತನು ತಾನೂ ಅವರ ಜೋಡಿ ಹೋದನು. ಹತ್ತು ಘಂಟೆಯಾದ ಮೇಲೆ ಹೊರಟವರು ಬಿಸಿಲೇರುವದರೊಳಗೆ ಸಿರೂರನ್ನು ತಲುಪಿದರು.ಎಲ್ಲರೂ ಇಳಿದರು. ಮೋಟರು ಮುಂದೆ ಹೋಯಿತು. 'ಮೊದಲು ನಿಮ್ಮ ಮನಿಗೆ ಹೋಗಿರಿ. ಏನೇನುಳಿದದ ನೋಡಿ ಕೊಳ್ಳಿರಿ. ಸಂಜೀಕ ಇಲ್ಲಿಗೆ ಬರ್ರಿ. ನಾ ಎಲ್ಲಾ ವ್ಯವಸ್ಥಾ ಮಾಡತೀನಿ!' ಎಂದು ಅಮೃತ ಹೇಳಿದರೆ ಹೆಂಗಸರೆಲ್ಲ ಊರ ಕಡೆ ಮಿಕಿ ಮಿಕಿ ನೋಡುತ್ತ ಮುಂದಡಿ ಯಿಕ್ಕದೆ ನಿಂತುಬಿಟ್ಟರು. ಆರೇಳು ತಿಂಗಳ ಹಿಂದೆ ಬಿಟ್ಟುಹೋದ ಸಿರೂರು ಈಗವರಿಗೆ ಧಾವಿಸಿ ಮುಗಿಬೀಳುವಂಥದಾಗಬೇಕು. ಹುಟ್ಟಿ ಬೆಳೆದು ತಮ್ಮದಾದ ಊರನ್ನು ಇಷ್ಟುದಿವಸಬಿಟ್ಟು ಹೋದವರು ಈಗ ತಿರುಗಿ ಬಂದೊಡನೆ ತಾಯಿಯ ತೊಡೆಯತ್ತ ಬಹಳಹೊತ್ತು ಅಗಲಿದ ಮಗು ಓಡಿಹೋಗುವಂತೆ ಹೋಗಬೇಕು. ಆದರೆ ಅವರಾರೂ ಹಾಗೆ ಮಾಡಲಿಲ್ಲ. ಸಣ್ಣ ಹುಡುಗರು ಮಾತ್ರ ಊರು ಬಂತೆಂದು ಕುಣಿದಾಡಿದರು. ನಡೆಯೆಂದು ತಮ್ಮತಾಯಂದಿರ ಸೆರಗು ಜಗ್ಗಿದರು. ಅವರು ಹಾಗೇ ನಿಂತರು ! 'ಹಾಗೇಕೆ ನಿಂತರು ? ' ಈ ಪ್ರಶ್ನೆಗೆ ಇನ್ನೊಂದು

ಪ್ರಶ್ನೆಯೇ ಉತ್ತರ. ಊರಿಗೆ ಬಂದದ್ದರಲ್ಲಿ ಅವರಿಗೇನು ಸುಖವಿತ್ತು ? ನೋಡಿದವಲ್ಲೆಲ್ಲ ಭಣಭಣ ಸುರಿಯುತ್ತದೆ. ಮನೆಗೆ ಹೋದರೆ ಅಲ್ಲೇನಿದೆ ? ತಮಗಾಗಿ ದಾರಿ ಕಾದು ಬಂದೊಡನೆ ಚರಿಗೆನೀರು ಕೊಡುವವರಿಲ್ಲ, ತುಣುಕು ರೊಟ್ಟಿ ನೀಡುವವರಿಲ್ಲ. ತಾವು ಬಿಟ್ಟು ಹೋದ ಮುದುಕರ ಪಾಡೇನಾಗಿರುವುದೋ ? ಮತ್ತೆ ಯಾರ್ಯಾರನ್ನು ಸಾವು ನುಂಗಿರುವುದೋ ? ತಮ್ಮೊಡನೆ ಬಂದವರು ಮಲೆನಾಡಿನ ಹಸಿವೆಯ ರಣರಂಗದಲ್ಲಿ ಪಟಪಟಬಿದ್ದು ಹೋದ ಸಂಗತಿ ಅವರ ನೆನವಿನಲ್ಲಿ ನುಗ್ಗಿ ಬಂತು. ಎಲ್ಲಾ ಕೂಡಿ ಸಿರೂರು ಅವರಿಗೆ ಒಂದು ಸ್ಮಶಾನದಷ್ಟು ಅಭೋ ಎನಿಸುವಂತಾಗಿರಬೇಕು. ಅಲ್ಲಿಯೇ ಬೇವಿನಗಿಡದ ಕಟ್ಟೆಯ ಮೇಲೆ ಉಸ್ಸೆಂದು ಅವರು ಕೂತುಬಿಟ್ಟರು. ಅಮೃತನಿಗೆ ಮೊದಲು ಈ ನಡತೆಯ ಅರ್ಥವಾಗಲಿಲ್ಲ. ಆಮೇಲೆ ತಿಳಿಯಿತು. ಮರಮರ ಮರುಗಿದನು. ತಾ ಕರೆದುಕೊಂಡು ಬಂದದ್ದು ಅವರ ಪ್ರೀತಿಯ ಊರಿಗಲ್ಲ, ಧಗಧಗಿಸುವ ಉರಿಗೊಂಡಕ್ಕೆ ಎಂದು ಅವನಿಗೆ ತೋರಿತು. ಅವನೂ ಮಾತಾಡದೆ ಕಟ್ಟೆಯ ಮೇಲೆ ಒಂದು ತುದಿಗೆ ಕೂತನು. ಶರಣಕ್ಕ ಕೂಸನ್ನು ಮಗ್ಗಲಿಗೆ ಮಲಗಿಸಿಕೊಂಡು, ಹೊಟ್ಟೆಗೆ ಕೊಡುತ್ತ ಕಟ್ಟೆಯ ಮೇಲೆ ಮಲಗಿಕೊಂಡಳು. ಆದರೆ ಎಷ್ಟು ಹೊತ್ತು ಹಾಗೇ ಕೂಡುತ್ತಾರೆ ? ಹಿಂದೆ ಗುಳೆಯ ಕತೆ ಹೇಳಿದ ಹಿರೇ ಹೆಂಗಸು 'ಏಳಿರೇ ಏಳಿರಿ. ಮನೀಕಡೆ ಹೋಗಾಣ !' ಎಂದು ಉಸಿರ್ಗರೆದು ಏಳುತ್ತ, 'ಅಮೃತಪ್ಪ, ನಮಗ ನೀ ಅಂದಾನೆಪ್ಪನಂಗ ಊಟಕ್ಕ ಹಾಕಿ ಮೋಟರದಾಗ ಕುಂಡರಿಸಿ ನಮ್ಮೂರಿಗ ತಂದು ಬಿಟ್ಟಿ. ನಾವೂ ಬಂದೇವು. ಮತ್ತ ನಮ್ಮ ಬೊಗಳಿ ಸುರುವಾತೋ ಎಪ್ಪ. ಒಣಗಿದ ಕೆಚ್ಚಲ ಕಚ್ಚಿ ಸಾಯಾಕ ಬಂದಿವಿ ನಮ್ಮೂರಿಗೆ !' ಎಂದು ಆಳವಾದ ಸಂಕಟದಿಂದ ಆಡಿದಳು. 'ಹಂಗನಬ್ಯಾಡವ್ವ. ನಿಮ್ಮದೆಲ್ಲಾ ಕಾಳಜಿ ತಗೋತೀವಿ. ಮತ್ತ ನಾಯೆದಕ್ಕ ಬಂದೀನಿ ?' ಅಮೃತ ಸಮಾಧಾನಿಸಲು ಯತ್ನಿಸಿದನು. ಇಷ್ಟರಲ್ಲಿ ಆ ಗುಂಪಿನಲ್ಲಿ ಯಾರೋ ಹೊಯ್ಯೆಂದು ಅಳುವಂತೆ ಕೇಳಿತು. ನೋಡಲಾಗಿ ಶರಣಕ್ಕ ಎದ್ದು ಅಳುತ್ತ ಕೂತಿದ್ದಾಳೆ. ಅದೇಕೆಂಬುದು ಯಾರಿಗೂ ತಿಳಿಯದು. 'ಏನಾತು ಶರಣಕ್ಕ ?' ಎಂದು ಉಳಿದೆಲ್ಲರೂ ಅವಳತ್ತ ತಿರುಗಿದರು. ಏನೂ ಹೇಳಲೊಲ್ಲಳು. ಕೆಲಹೊತ್ತಿನ ಮೇಲೆ 'ನನ್ನ್ಯಾಕ ಕರಕೊಂಡ ಬಂದಿರೇ ? ಅಲ್ಲೇ ಯಾಕ ಕುತ್ತಿಗಿ ಹಿಚಕಿ ಒಗಿಲಿಲ್ಲ ? ಹೆಂಗ ಮನ್ಯಾಗ ಕಾಲಿಡಲೇ ?' ಎಂದು ಆರಂಭಿಸಿದಳು. ತನ್ನ ಮೂರಾಬಟ್ಟೆ ಬಾಳುವೆಯ ಚಿತ್ರ ಅವಳ ಮುಂದೆ ಈಗ ಹೆಚ್ಚು ಕೊರೆದಂತಾಗಿ ದುಃಖ ಒತ್ತ

ರಿಸಿ ಬಂದಿತು. ಕೊನೆಗೆ ಹೇಗೋ ತಡಕೊಂಡಳು. ಎಲ್ಲರೂ ಕಾಲೆಳೆಯುತ್ತ ತಮ್ಮ ಗಂಟುಗದಡಿಗಳನ್ನು ತಲೆಯಮೇಲೆ ಹೊತ್ತುಕೊಂಡು ಮಕ್ಕಳು–ಮರಿ ಯೊಂದಿಗೆ ಊರಲ್ಲಿ ಸೇರಿದರು. ಸರಿಯಾಗಿ ನಡುನೆತ್ತಿಗೆ ಏರಿದ ಸೂರ್ಯ ನಟ್ಟು ನಡುಬೇಸಿಗೆಯ ಅಗ್ನಿಬಾಣಗಳನ್ನು ಬಿಡುತ್ತ ಆ ಬಡಜೀವಗಳ ಮೈಮನವನ್ನು ಭೇದಿಸಿ ಗಾಸಿಗೊಳಿಸುತ್ತಿದ್ದನು. ಅವನ ಬಿಸಿಲು ಹೆಚ್ಚಿದಂತೆ ಅವರ ಒಡಲು ರಿಯೂ ಹೆಚ್ಚುತ್ತಲಿತ್ತು.

ಆ ಹೆಂಗಳೆಯರನ್ನು ಕಳಿಸಿ ಅಮೃತನು ಕೆಲ ಹೊತ್ತು ಊರ ಹೊರಗಡೆ ಯನ್ನು ನಿರಕಿಸುತ್ತ ನಿಂತನು. ಹಿಂದೆ ಶಾಲೆ ಕಲಿಯುತ್ತಿದ್ದಾಗ ಒಂದೆರಡು ಸಾರೆ ಶಂಭುರಾಯರ ಕೂಡ ಸಿರೂರಿಗೆ ಬಂದು ಹೋಗಿದ್ದನು. ಆದರೆ ಈಗ ಕಾಣುತ್ತಿ ರುವ ಸಿರೂರು ಬೇರೆಯೆ ಆಗಿತ್ತು. ಈಗಿನ ಅವನ ದೃಷ್ಟಿಯೂ ಬೇರೆ ಆಗಿತ್ತು. ಊರ ಹೊರಬದಿಗೆಲ್ಲ ಗೊಬ್ಬರದ ಕುಪ್ಪೆಗಳು ದುರ್ನಾತವನ್ನು ಹರಡುತ್ತ ತೆಗೆ ಯುವವರು ದಿಕ್ಕಿಲ್ಲದೆ ನಿಂತಿವೆ. ಎಂಥ ಒಳ್ಳೆ ಕಾಲದಲ್ಲಿಯೂ ಹಳ್ಳಿಯೂರಿನ ಹೊರಭಾಗ ಇಂಥ ಹೊಲಸಿನಿಂದ 'ಅಲಂಕೃತ'ವಾಗಿರುತ್ತದೆ. ಈಗಂತೂ ಕೇಳುವದೇನು ? ತಮ್ಮ ಹೊಟ್ಟೆಯನ್ನು ಹೊರೆಯಲಾಗದ ಜನ ತಮ್ಮೂರಿನ ಹೊಲಸನ್ನು ತೆಗೆಯಲಾರರು, ಹೊಲಗಳಿಗೆ ಗೊಬ್ಬರವಾಗಿ ಬಳಸಲಾರರು, ಮಳೆ –ಬೆಳೆಯ ಮೇಲಿನ ಅವರ ನೆಚ್ಚಿಗೆಯೆ ಹಾರಿಹೋಗಿದೆ. ಗೊಬ್ಬರದ ಸುತ್ತು ಬಯಲಲ್ಲಿ ನೋಡಿದಲ್ಲೆಲ್ಲ ಬಿಡಿಬಿಡಿಯಾದ ಕೈಕಾಲಿನೆಲಬುಗಳು, ಅಸ್ಥಿಪಂಜರ ಗಳು 'ನಗ್ನ ಸತ್ಯ'ವನ್ನು ಸಾರುತ್ತ ಬಿದ್ದಿವೆ. ಬೆಕ್ಕು, ನಾಯಿ, ದನಕರ ಇವು ಬರಗಾಲ ಮಾರಿಗೆ ಆಹುತಿಯಾಗಿದ್ದರ ಗುರುತುಗಳಾಗಿರಬೇಕು. ಒಂದು ಮನೆಯ ಉಳಿದೊಂದೇ ಗೋಡೆಗೆ ಮೈಹಚ್ಚಿ ಕೆಳಗೆ ಮುಖ ಬಾಗಿಸಿ ಕತ್ತೆ ಯೊಂದು ಸುಮ್ಮನೆ ನಿಂತಿರುತ್ತದೆ. ಅದು ಹೇಗೆ ಇಂಥ ಕಾಲದಲ್ಲಿಯೂ ಬದು ಕಿದೆ ಯಾರು ಬಲ್ಲರು ? ಬದುಕಿದ್ದು ಮಾತ್ರವಲ್ಲ, ಚೆನ್ನಾಗಿ ಬದುಕಿದೆ. ಅದೇನು ಸೊರಗಿದಂತಿಲ್ಲ. ಬುದ್ಧಿವಂತನಾದ ಮನುಷ್ಯನನ್ನು ಮುಟಿಗೆ ಮಾಡಿ ಒಗೆಯುವ ಅನ್ನದ ಸಮಸ್ಯೆ ತೀರ ಬುದ್ಧಿಹೀನವೆಂದು ಕರೆಯಲ್ಪಡುವ ಈ ಕತ್ತೆಯನ್ನು ತುಡು ಕಿಲ್ಲ. ಕೆಳಮೋರೆ ಹಾಕಿ ತೆಪ್ಪಗೆ ನಿಂತು ಅದೇನನ್ನು ನೆನೆಯುತ್ತಿರಬಹುದು ? 'ತನ್ನಷ್ಟು ಬುದ್ಧಿಯಾದರೂ ಈ ನರಮನುಷ್ಯನಿಗೆ ಬರಲಿ' ಎಂದು ಮೌನವ್ರತಿ ಯಂತೆ ತಪಸ್ಸು ಮಾಡುತ್ತಿರಬಹುದೆ ? ತಿಪ್ಪೆಯಲ್ಲಿ ಕಾಲು ಕೆದರಿ ಎಲುಬು ಗಳನ್ನು ಬೆದಕಿ ತೆಗೆದು ಕಟಕಟ ಕಡಿಯುತ್ತಿರುವ ಮೈತುಂಬ ಹುಣ್ಣಾದ ನಾಯಿ

ಗಳು ಬೇರೆ ಅಲ್ಲಿ ಕಾಣುತ್ತಿವೆ. ಸಿರೂರಿನ ವಿಕಟ ವಿರೂಪತೆಯೆಲ್ಲ ಅಮೃತನ ಕಣ್ಣಲ್ಲಿ ನೆಟ್ಟಿತು. ಇನ್ನೂ ಹೋದರೆ ಮತ್ತೇನೇನು ಕಾಣುವುದೋ ಎಂದು ಕೊಂಡು ಮೆಲ್ಲಗೆ ಒಳಗೆ ನಡೆದನು. ಗುಳೆಕಾರರಲ್ಲಿ ಬಹುಜನರು ಈಗ ತಿರುಗಿ ಬಂದಿದ್ದರೂ ಈಗ ಊರೆಲ್ಲ ಭಣಭಣ ಸುರಿಯುತ್ತದೆ. ಯಾಕೆಂದರೆ ಅನೇಕರು ಬೇವಿನಮಟ್ಟಿಯಲ್ಲಿ ಖಡಿ ಒಡೆಯುವ ಬರಗಾಲ ಕಾಮಗಾರಿಗೆ ಹೋಗಿದ್ದಾರೆ. ಕೀಲಿ ಬಿದ್ದ ಮನೆಗಳೇ ಹೆಚ್ಚೆಂದು ತೋರಿತು. ಕೆಲವು ಬಾಗಿಲುತೆರೆದ ಗುಡಿಸಲು ಗಳಿವೆ. ಅಲ್ಲಿ ಏನಿದೆ? ಒಡೆದ ಮಡಕೆಗಳು, ಕಪ್ಪಿಟ್ಟ ನಿಲುವುಗಳು, ಸುಟ್ಟ ಒಲೆಯ ಕಲ್ಲುಗಳು.

ಸಿರೂರಿನ ಕೆಲವು ಸಿರಿವಂತರ, ಗೌಡ–ಕುಲಕರ್ಣಿಯರ ಮನೆ ಎಂದಿನಂತೆ ವಿಶೇಷ ತೊಂದರೆಇಲ್ಲದೆ ಸುಖಸಮಾಧಾನದ ಗೂಡುಗಳಂತೆ ತೋರುತ್ತವೆ. ಆದರೆ ಅವರೂ ಹೆದರಿದ್ದಾರೆ. ಸುತ್ತೆಲ್ಲ ಬರಗಾಲದ ಹಾಹಾಕಾರವಿದ್ದಾಗ ಅವರಿಗೆ ಹೇಗೆ ನೆಮ್ಮದಿ ಇದ್ದೀತು? ಕಳವು ದರೋಡೆಗಳಿಗೆ ಬೆದರಿ ಅವರಲ್ಲಿ ಹಲವರು ಹುನಗುಂದವನ್ನೋ ಬಾಗಲಕೋಟೆಯನ್ನೋ ಸೇರಿದ್ದಾರೆ. ನಿರ್ವಾಹವಿಲ್ಲದೆ ಇದ್ದ ವರು ತಮ್ಮ ಆಸ್ತಿಯ ಜಂಗಮಭಾಗವನ್ನು ಪಟ್ಟಣದಲ್ಲಿಟ್ಟು ತಾವು ಹೇಗೋ ಕೈ ಯಲ್ಲಿ ಜೀವ ಹಿಡಕೊಂಡು ಇಲ್ಲಿ ವಾಸಿಸಿದ್ದಾರೆ. ಒಬ್ಬಿಬ್ಬರು ಸಹಜ ಔದಾರ್ಯ ದಿಂದ ಇಲ್ಲವೆ ಭೀತಿಯಿಂದ ಗುಳೇ ಹೊಗಲಾರದ ಮುದುಕರಿಗೂ ಅಂಗಹೀನ ರಿಗೂ ಊಟಕ್ಕೆ ಹಾಕುತ್ತಾರೆ.

ಊರ ಸಂದಿಗೊಂದಿಗಳಲ್ಲಿ ತಿರುಗುತ್ತ ಕಂಡವರೊಡನೆ ಸುಖದುಃಖದ ಮಾತಾಡುತ್ತ ಅಮೃತ ನಡೆದನು. ಒಂದುಕಡೆ ಕರುಳಿರಿಯುವ ದೃಶ್ಯವೊಂದು ಕಂಡಿತು. ಅದನ್ನು ನೋಡುತ್ತ ಕಂಬದಂತೆ ನಿಂತುಬಿಟ್ಟನು. ಅರಳಿ-ಬೇವು ಹೆಣೆದುಕೊಂಡು ಬೆಳೆದ ದೊಡ್ಡ ಅಶ್ವತ್ಥ ಮರವೊಂದರ ಬುಡದಲ್ಲಿ ಒಬ್ಬ ಮುದುಕನು ಗಿಡದ ಬೊಡ್ಡೆಗೆ ಮೈಯಾನಿಸಿ ನೆಲದ ಮೇಲೆ ಕಾಲು ಚಾಚಿ ಬಿದ್ದು ಕೊಂಡಿದ್ದಾನೆ. ಮೊದಲು ಅವನನ್ನು ನೋಡಿದ ಕೂಡಲೆ ಅಮೃತನಿಗೆ ಹೆಣದಂತೇ ಕಂಡನು. ಅಷ್ಟು ಅವನು ಕರಾಳವಾಗಿದ್ದನು. ಮುಖ, ಎದೆ, ಕೈ, ಕಾಲು ಎಲ್ಲ ಕಡೆ ಎಲುಬಿನ ಹಂದರವೊಂದು ಕಾಣುತ್ತದೆ. ಮಡಿಮಡಿಕೆಯಾದ ಒಣದೊಗ ಲನ್ನು ಆ ಹಂದರಕ್ಕೆ ತೆಳುವಾಗಿ ಹೊಚ್ಚಿದಂತಿದೆ. ಕಾಲ ತುಂಬ ಯಾವುದೋ ತರದ ಹುಣ್ಣಾಗಿದ್ದು, ನೊಣಗಳು ಸಿಕ್ಕಷ್ಟು ರಕ್ತ-ಮಾಂಸವನ್ನು ಹೀರಲು ಕಾಲಿಗೆ ಮುಕುರಿಬಿಟ್ಟಿವೆ. ಅವನ್ನು ಜಾಡಿಸಲು ಕೈಯಲ್ಲಿ ತ್ರಾಣವೆಷ್ಟೂ ಇಲ್ಲ.

ಮೇಲೆ ಗೂರಲುಕೆಮ್ಮಿನ ಸಂಭ್ರಮ ಬೇರೆ. ಕೆಮ್ಮಿದಾಗಲೆ ಈ ಮೈಯಲ್ಲಿ ಇನ್ನೂ ಉಸಿರಿದೆ ಎಂದು ಅಮೃತನಿಗೆ ತಿಳಿಯಿತು. ಹತ್ತಿರ ಹೋಗಲು ಅವನಿಗೆ ಮೊದಲು ಎದೆಯಾಗಲಿಲ್ಲ. ಆದರೆ ಮಿದನಾಪುರದತ್ತ ಕೊಂತಾಯಿಯಂಥ ಊರುಗಳಲ್ಲಿ ಇಂಥ ಜೀವಂತ ಶವಗಳನ್ನು ನೋಡಿ ಅವನ ಕಣ್ಣಿಗೆ ಸಲುವಳಿಯಾಗಿತ್ತು. ಮೆಲ್ಲಗೆ ಹತ್ತಿರ ಹೋಗಿ ನಂತನು. ಮೈಯ ಹೊಲಸುವಾಸನೆ ಅವನನ್ನು ಹಿಮ್ಮೆಟ್ಟಿಸಿತು. ಆದರೆ ಅವನೀಗ ಹಿಮ್ಮೆಟ್ಟಲಿಲ್ಲ. 'ನಿನ್ನ ಹೆಸರೇನೊ ಮುದುಕ?' ಎಂದು ಕೇಳಿದನು. ಅದಕ್ಕೆ ಉತ್ತರವೆಂದರೆ ತಸತಸ ಕೆಮ್ಮು. ಮಾತಾಡುವಷ್ಟು ಶಕ್ತಿಯೆಲ್ಲಿದೆ, ಬಿಡುವೆಲ್ಲಿದೆ? ಅಮೃತ ತಾನೇ ಆ ಕಾಲಮೇಲಿನ ನೊಣದ ಕರಿ ಹಚ್ಚಡವನ್ನು ಹಾರಿಸಿದನು. ಆಗ ಹಾರಿದವು, ಮತ್ತೆ ಮುಕುರಿದವು. ಅನಾಯಾಸವಾಗಿ ಬಡಿಸಿದ ಮೇಜವಾನಿಯನ್ನು ಮನುಷ್ಯರು ಬಿಡಲಾರರು. ನೊಣಗಳೇಕೆ ಬಿಡುವವು? ಕೆಲ ಹೊತ್ತಾಗಲು ಒಂದು ಸಂದಿಯಿಂದ ಕುಷ್ಟ ಮುದುಕಿಯೊಂದು ಕೋಲೂರುತ್ತ ಕೈಯಲ್ಲಿ ಒಂದು ಹರಿವಾಣವನ್ನು ತಗೊಂಡು ಮಿನಿಟಿಗೊಂದು ಹೆಜ್ಜೆಯಿಡುತ್ತ ಬಂದಿತು. ಎಲ್ಲಿ ಹೊರಟಿದ್ದಾಳೆ ಈ ಪ್ರಾಣಿ ಎನ್ನುವದರಲ್ಲಿ ಅವಳು ಈ ಮುದುಕನಿದ್ದಲ್ಲಿಗೇ ಬಂದು ಕೂತಳು. 'ನೀವಿಬ್ಬರೂ ಒಂದೇ ಏನು?'

'ಒಂದ್ಯನೋ ಎಪ್ಪ. ಇವ ನನ್ನ ಗಂಡ!' ಎಂದವಳು ಪ್ರಯಾಸದಿಂದ ಹೇಳಿದಳು.

ಅಲ್ಲಿಂದ ಅವಳು ಹರಿವಾಣದಲ್ಲಿ ಕೂಡಿಸಿ ತಂದ ಒಣಗಿ ಕಟಕಾದ ಬಕ್ಕರಿ ಚೂರುಗಳನ್ನು ಇನ್ನಿಷ್ಟು ಚೂರು ಮಾಡುವ ಯತ್ನ ಮಾಡಿ ಅಲ್ಲಿಯೆ ಮಡಿಕೆಯಲ್ಲಿಟ್ಟ ಹೊಲಸು ನೀರನ್ನು ಆ ಹರಿವಾಣದಲ್ಲಿ ಸುರುವಿದಳು. ಹೀಗೇಕೆ ಮಾಡುವಳೆಂಬುದು ಅಮೃತನಿಗೆ ಮೊದಲು ಹೊಳೆಯಲಿಲ್ಲ. ಆಮೇಲೆ ತಿಳಿಯಿತು. ಸ್ವಲ್ಪ ಹೊತ್ತಿನ ಮೇಲೆ ಮೆತ್ತಗಾದ ಬಕ್ಕರಿ ತುಣುಕುಗಳನ್ನು ಮುದುಕನ ಬಾಯಲ್ಲಿ ಹಾಕಹತ್ತಿದಳು. ಅವು ಅವನ ಗಂಟಲಲ್ಲಿ ಇಳಿಯಲೊಲ್ಲವು. ನಡುವೆ ಕೆಮ್ಮು ಬೇರೆ ಬಂದು ಎಲ್ಲ ಉಗುಳಿಸಿಬಿಡುತ್ತಿತ್ತು. ಆಗವಳು ಅವನಿಗೆ ಬೈದು ಬೈದು ಮುಚ್ಚುತ್ತಿದ್ದಳು. ಇಷ್ಟು ಮಂದಿ ಸತ್ತು ಹೋದರು, ತಮಗೇಕೆ ಸಾವು ಬರವೊಲ್ಲದೆಂದು ಒದರಿದಳು. ಮುದುಕನ ಹೊಟ್ಟೆಯಲ್ಲಿ ಹತ್ತರಲ್ಲಿ ಒಂದು ಪಾಲು ಹೋಯಿತೋ ಇಲ್ಲವೊ, ತಾನಾದರೂ ತಿನಬೇಕೆಂದು ಅದನ್ನು ಆಚೆ ಸರಿಸಿ ಮುದುಕನ ಬಾಯಿಗೆ ನೀರು ಹಚ್ಚುವಾಗ

ನಾಯಿಯೊಂದು ಎಲ್ಲಿಂದಲೋ ಓಡಿ ಬಂದು ಹರಿವಾಣದಲ್ಲಿ ಬಾಯಿ ಹಾಕಿತು. ಅದನ್ನು ಕಂಡು ಅಮೃತ ಎಚ್ಚರಿಸಲು ಅವಳು ಗಡಬಡಿಸಿ ಅದನ್ನು ಹೊಡೆಯಲು ಹೋಗಿ ತಾ ಕಡಕೊಂಡು ಬಿದ್ದಳು. ಹರಿವಾಣ ಡಬ್ಬಾಗಿ ಅದರಲ್ಲಿದ್ದುದೆಲ್ಲ ಮಣ್ಣುಪಾಲಾಯಿತು. ಮುದುಕನು ತನ್ನ ಕೆಮ್ಮಿನ ಒದ್ದಾಟದಲ್ಲಿಯೆ ಇದ್ದನು. ಅಮೃತನಿಗೆ ಬಹಳ ಸಂಕಟವಾಯಿತು. ಓಡಿ ಹೋಗಿ ಮುದುಕಿಯನ್ನು ಎಬ್ಬಿಸಿ ಕೂಡಿಸಿದನು. ಅವಳ ಗೋಳೋ ಎಂಬ ಅಳುವಿಕೆ. ಮುದುಕನ ಕೆಮ್ಮು ಕೂಡಿ ಅಪಸ್ವರಮಾಲಿಕೆಯಾಗಿ ಸಾಗಿದವು. ಆ ಅಶ್ವತ್ಥ ಮರದಲ್ಲಿ ಆಕಸ್ಮಿಕವಾಗಿ ಬೀಸಿ ಬಂದ ಬಿಸಿಬಿಸಿ ಗಾಳಿ ಗಿಡವನ್ನೇ ಕೆಡಹುವಷ್ಟು ಜೋರಾಗಿ ಬೀಸಿ ಎಲೆಗಳ ರಾಶಿಯನ್ನೇ ಕೆಳಗೆ ಕೆಡವಿತು. ಇದೇನೆಂದು ತಿಳಿಯದೆ ಅಮೃತ ದಿಙ್ಮೂಢನಾಗಿ ನಿಂತನು. ಆ ಗಾಳಿಯಲ್ಲಿ ಯಾರೋ 'ಅಯ್ಯೋ ಪಾಪ!' ಎಂಬ ಭಾವ ಪ್ರಕಟಿಸುವ ಹಾಗೆ ಮರಮರಳಿ ಮರುಗುವಂತೆ ಅವನಿಗೆ ಭಾಸವಾಯಿತು. ಮೇಲೆ ನೋಡಿದನು. ಯಾರೂ ಕಾಣಲಿಲ್ಲ. ಆದರೂ ಆ ಅನಿಸಿಕೆ ನಿಜ ನಿಜವಾದದ್ದಾಗಿ ತೋರಿತು. ಅವನು ಮುದುಕಿಗೆ ಸಮಾಧಾನ ಮಾಡಿ ತಾನೇ ಕುಲಕರ್ಣಿಯ ಮನೆಗೆ ಹೋಗಿ ಬೇರೆ ರೊಟ್ಟಿಯನ್ನು ದೊರಕಿಸಿ ತಂದುಕೊಟ್ಟನು.

ಅಮೃತನು ಯಾರೆಂದು ಗೊತ್ತಿದ್ದ ಕಾರಣ ಕುಲಕರ್ಣಿ ತನ್ನಲ್ಲಿಯೇ ಅವನನ್ನು ಇಳಿಸಿಕೊಂಡನು. ಅವನಿಗೆ ತಮ್ಮ ರೈತನ ಸುದ್ದಿಯನ್ನು ಅಮೃತ ಕೇಳಲು, ಕೂಲಿ ಕೆಲಸಕ್ಕೆ ಹೋಗಿರುವನೆಂದೂ ರಾತ್ರಿಯಲ್ಲಿ ಅವನು ಸಿಗಬಹುದೆಂದೂ ತಿಳಿಯಿತು. ಅದೆಷ್ಟೋ ಹೊತ್ತಿನವರೆಗೆ ಊರಿನ ಹಾಗೂ ದೇಶದ ಸ್ಥಿತಿಗಳ ಬಗ್ಗೆ ಕುಲಕರ್ಣಿಯೊಡನೆ ಮಾತುಕತೆಯಾಯಿತು. ತಾನು ಬಂದ ಕೆಲಸವನ್ನು ಅಮೃತ ಹೇಳಿದನು. ಅದಕ್ಕೆ ತನ್ನ ದೃಷ್ಟಿಯಿಂದ ಕುಲಕರ್ಣಿ ಅಂದನು 'ಬಡ ಮಂದೀ ಸೇವಾ ಮಾಡತೀರಿ. ಭಾಳ ಛಲೋ ಕೆಲಸ ಅದು. ಆದರೆ ನಮ್ಮ ಮ್ಯಾಲೆ ಟೀಕಾ ಮಾಡಬ್ಯಾಡರಿ ಆತು. ಮನ್ಸ್ಯಾಗ ಒಂದೀಸು ಜ್ವಾಳದ ಹೊರತು ಇನ್ನೇನೂ ಇಲ್ಲ. ಒಣ ರೊಟ್ಟಿ ತಿಂದು ನಾವು ಹೆಂಗೋ ಬದಕೇವಿ. ಅದರಾಗ ತಿರತಿರಗಿ ಮ್ಯಾಲಿನ ಅಧಿಕಾರಿಗಳ ಸರಬರಾಯಿ ಬ್ಯಾರೆ ಮಾಡಬೇಕು. ಎಷ್ಟು ಮಾಡಿದರೂ ಸಮಾಧಾನ ಇಲ್ಲದ ಅವರ ಒದಕಿ ತಿನಬೇಕು. ಇತ್ತಲಾಗ ಬಡಜನರ ಹೆದರಿಕೆ, ಮ್ಯಾಲೆ ನಿಮ್ಮಂತವರ ಬೆದರಿಕೆ. ಒಂದ್ಸ ಎರಡ್ಸ ಸಾಕಾಗಿ ಹೋಗೇದ.' ಇದರಲ್ಲಿ ಅತಿಶಯೋಕ್ತಿ ಇರುವದೆಂದು ಅಮೃತನಿಗೆ ಆಗ ತೋರಿ

ರಲಿಕ್ಕಿಲ್ಲ. ಆದರೂ ಹೇಳಿದ್ದನ್ನೆಲ್ಲ ಅವನೇನು ನಂಬಲಿಲ್ಲ. ಯಾಕೆಂದರೆ ಮನೆಯಲ್ಲಿಯ ದನಕರುಗಳ ಮೈಮಾಟ, ಮೇವುಮಿಡಚಿ, ವಸ್ತುಸ್ಥಿತಿ ಬೇರೆಯೆಂಬುದನ್ನು ಸಾರುತ್ತಿತ್ತು. ಮೊದಲಿಗಿಂತ ತೊಂದರೆಯಿದ್ದರೂ ಅಂಥದೇನು ಗೋಳಾಟವಿಲ್ಲ ಎಂಬುದು ಸ್ಪಷ್ಟವಾಗಿತ್ತು. ಸಂಜೆಯಾದ ಕೂಡಲೇ ಅಮೃತನು ಊರ ಹೊರಕ್ಕೆ ಹೋಗಿ ಅಲ್ಲಿಯ ಕಟ್ಟೆಯ ಮೇಲೆ ನೆರೆದ ಹೆಂಗಸರ ಗುಂಪನ್ನು ಕಂಡನು. ತಾವು ಬಿಟ್ಟುಹೋದ ಮನೆಯಲ್ಲಿ ಅವರೇನನ್ನೂ ಬಿಟ್ಟು ಹೋಗಿರಲಿಲ್ಲ. ಅಂತೇ ಅವರು ಈ ವಿಷಯದಲ್ಲಿ ನಿಶ್ಚಿಂತೆಯಾಗಿದ್ದರು. ಅವರಲ್ಲಿ ಅನೇಕರು ಹೊಲ ಮನೆ ಇಲ್ಲದವರು. ಅಂತೇ ಅವರ ಆಸ್ತಿಯೆಂದರೆ ಚಿಕ್ಕಮನೆ ಇಲ್ಲವೆ ಗುಡಿಸಲು, ಹಾಗೂ ಅದರೊಳಗಿನ ತುಣುಕು ನೆಲ. ಅಷ್ಟನ್ನೂ ಅವರು ಬಹಳವಾಗಿ ಪ್ರೀತಿಸುತ್ತಿದ್ದರು. ಗುಳೇ ಹೋದ ಹರೆಯದ ಹುಡುಗರು ಕೆಲವರು ತೀರಿಹೋದರಾದರೂ ಹೋಗದೇ ಊರಲ್ಲಿದ್ದ ಮುದುಕರು ಪಲವರು ಇನ್ನೂ ಹಾಗೇ ಗಟ್ಟಿಯಾಗಿದ್ದರು ! ಈ ಆಶ್ಚರ್ಯದ ಸಂಗತಿಯನ್ನು ಅಮೃತನಿದಿರು ಅವರು ಹೇಳಿದರು. ಅವರಿಗೆ ಅನ್ನ ನೀಡಿದ ಊರ ಹಿರಿಯರನ್ನು ಕೊಂಡಾಡಿದರು. ಮರುದಿನ ಆ ಹೆಂಗಸರಿಗೆ ಚರ್ಕಾ ಸಂಘದ ವತಿಯಿಂದ ರಾಟೆಗಳನ್ನೂ ಹಂಜಿಗಳನ್ನೂ ಕೊಡಲಾಗುವುದೆಂದೂ ಮನೆಯಲ್ಲಿ ದಿನಾಲು ನೂತು ವಾರಕ್ಕೊಮ್ಮೆ ಕೊಡಬೇಕೆಂದೂ ಅಮೃತ ಅವರಿಗೆ ತಿಳಿಸಿ ಹೇಳಿದನು. ಕೂಲಿಯ ವಿವರಗಳನ್ನು ತಿಳಿಸಿದನು. ಕೆಲವರು ಹೆಚ್ಚು ಸಶಕ್ತರಾದವರು ಬರಗಾಲ ಕಾಮಗಾರಿಗೆ ಹೋಗಲೊಪ್ಪಿದರು. ಶರಣಕ್ಕನು ಮಾತ್ರ ಅಲ್ಲಿ ಬಂದಿರಲಿಲ್ಲ. ಆದರೆ ಅವಳಿಗೆ ರಾಟೆಯನ್ನು ಕೊಡಬೇಕೆಂದು ಗೊತ್ತಾಯಿತು. ತಾನು ಬಾಗಿಲುಕೋಟೆಗೆ ಹೋಗಿ ರಾಟೆಗಳನ್ನು ಕೂಡಲೆ ಕಳಿಸುವೆನೆಂದು ಹೇಳಿದ್ದಲ್ಲದೆ ಆಗಿಂದಾಗ ಕುಲಕರ್ಣಿಯ ಹತ್ತಿರ ಅವರನ್ನೆಲ್ಲಕರೆದೊಯ್ದು ಪ್ರತಿಯೊಬ್ಬರಿಗೆ ಬರಗಾಲಸಮಿತಿಯ ಮೂಲಕ ಏಳೆಂಟು ದಿನದ ಸೆಜ್ಜೆಯನ್ನು ಕೊಡಿಸಿದನು. ಅದು ತೀರುವಷ್ಟರಲ್ಲಿ ಅವರಿಗೆ ನೂಲಿನ ಕೂಲಿ ದೊರೆಯುವದೆಂದು ತಿಳಿಸಿದನು. ರಾತ್ರಿಯಲ್ಲಿ ಅವನು ತನ್ನ ರೈತನನ್ನು ಕುಲಕರ್ಣಿಯ ಮನೆಗೆ ಕರೆಸಿ ಮಾತಾಡಿಸಿದನು. ಊರಿಗೆ ಬಂದು ತಂದೆಯವರನ್ನು ಭೇಟಿಯಾಗಿ ಹೋಗಲು ಹೇಳಿದನು. 'ಏನು ಬರತೀನರಿ ಎಪ್ಪ? ನಮ್ಮದು ನಮಗ ರಗಡ ರಾಮಾಯಣ ಆಗೇತಿ. ದನಕರ ಎಲ್ಲಾ ಮಾರಿಕೊಂಡು ಬಿಟ್ಟೇವು ಕಟಗರಿಗೆ. ನಾವೂ ಕಟಗರಿಗಿಂತ ಅತ್ತತ್ತ ಆಗಿ ಹೊಲ

ಏನ ಮಾಡತೇವು, ಹೊಟ್ಟೆ ಏನು ತುಂಬಿಕೊತೇವು. ದೆವ್ವನಂತ ಮಗ ಮಾರಿಕಾ ಬಂದು ಕೈಬಿಟ್ಟು ಹೋದ. ಕೂಲಿ ಮಾಡಿ ಹಾಗ್ಯಾರ ಬದಕತೀವಿ ' ಎಂದು ಮುಂತಾಗಿ ನಿರಾಶೆಯ, ನಿರ್ವೇಗದ ಸ್ವರ ತೆಗೆದನು. 'ಅವ ಅಂಬೂದು ಖರೇ ಅದ' ಎಂದು ಕುಲಕರ್ಣಿ ಅದಕ್ಕೆ ದನಿಗೂಡಿಸಿದನು. ಏನು ಹೇಳಬೇಕು ತಿಳಿಯದೆ ಅಮೃತನು ಶೂನ್ಯ ಮನದಿಂದ ಕೆಲಹೊತ್ತು ಸುಮ್ಮನೆ ಕುಳಿತನು. ಕಡೆಗೆ ' ಏನs ಆಗಲಿ ಅಪ್ಪಾವರು ಹೇಳ್ಯಾರ, ಬಂದು ಹೋಗು ' ಎಂದು ಕೇವಲ ಕರ್ತವ್ಯ ಬುದ್ಧಿಯಿಂದ ಹೇಳಿಕಳಿಸಿದನು. ಈವರ್ಷದ ಲಾವಣಿಯನ್ನು ಕೇಳುವ ದಂತೂ ಸಾಧ್ಯವೇ ಇರಲಿಲ್ಲ. ಮುಂದಿನ ವರ್ಷವೆಲ್ಲ ಮುಚ್ಚಿದ ಮುಷ್ಟಿ. ಮಾರನೆಯ ದಿನ ಬೆಳಗಿನ ಮೋಟರಿನಲ್ಲಿ ಅಮೃತ ಬಾಗಿಲಕೋಟೆಗೆ ಹೋಗಿ ಆ ಹೆಂಗಸರಿಗೆ ಹೇಳಿದಂತೆ ಎಲ್ಲ ವ್ಯವಸ್ಥೆ ಮಾಡಿ ಒಬ್ಬರನ್ನು ಸಿರೂರಿಗೆ ಕಳಿಸಿಕೊಟ್ಟನು. ಶಂಭುರಾಯರಿಗೆ ಸಿರೂರ ಕರುಣಕಥೆಯನ್ನೂ ತಮ್ಮ ರೈತನೊಡನಾದ ಮಾತುಕತೆಯನ್ನೂ ಹೇಳಿದನು.

ಒಂದೆರಡು ದಿನದಲ್ಲಿ ಅಮೃತನಿಗೆ ವೀಣೆಯ ಕಡೆಯಿಂದ ದೊಡ್ಡ ಪತ್ರ ಬಂತು. ಕಾಲೀಚರಣಪುರದಲ್ಲಿಯ ಡಾಕ್ಟರ ಮಂಡಳಿಯ ಕೂಡ ಬಗೆಹರಿಯದೆ ತಾನೀಗ ಮಿದನಾಪುರಕ್ಕೆ ಬಂದಿರುವುದನ್ನೂ ಯಾರೋ ದೂರದ ಬಳಗದವರಲ್ಲಿ ತಾತ್ಪೂರ್ತಿಕವಾಗಿ ಇರುವುದನ್ನೂ ಅದರಲ್ಲಿ ತಿಳಿಸಿದ್ದಳು. ಪತ್ರದ ತುಂಬೆಲ್ಲ ತನ್ನ ತಬ್ಬಲಿತನವನ್ನು ಹೃದಯದ್ರಾವಕವಾಗಿ ವರ್ಣಿಸಿ ತನಗೆ ಅನಾಥಬಂಧುವಾಗಿ ದೊರೆತ ಅಮೃತನು ಈಗ ಅಗಲಿದ್ದರಿಂದ ತನಗಾಗುತ್ತಿರುವ ವಿಯೋಗವೇದನೆಯನ್ನು ಹಲವಾರು ಮಾತಿನಲ್ಲಿ ಬಣ್ಣಿಸಿದ್ದಳು. ಒಂದು ದಿನ ಒಬ್ಬೊಂಟಿತನ ಅಸಹ್ಯವಾಗಲು ಅಮೃತನಬಳಿ ಬರಬೇಕೆಂದು ಸಾಮಾನುಕಟ್ಟಿ ಸ್ಟೇಶನ್ನವರೆಗೆ ಬಂದಳಂತೆ.ಆದರೆ ಸ್ಟೇಶನ್ನಿಗೆ ಹೋದಮೇಲೆ ಅವಳಸದ್ಬುದ್ಧಿ ಜಾಗ್ರತವಾಗಿ, ಮೊದಲು ಪತ್ರ ಬರೆದು ಕೇಳಿ ಆಮೇಲೆ ಹೊರಡಬೇಕೆಂದು ಮನೆಗೆ ತಿರುಗಿದಳಂತೆ. ಈ ಪತ್ರ ಓದುತ್ತಿರುವಂತೆ ಎಂದಿನಂತೆ ಹೆಚ್ಚಿನ ಮರುಕ ಹುಟ್ಟುವುದಲ್ಲದೆ ಇಲ್ಲದ ಭೀತಿ ಅವನಲ್ಲಿ ತಲೆದೋರಿತು. ಪತ್ರದಲ್ಲಿ ಬರೆದಂತೆ ಅವಳು ಬಂದುಬಿಟ್ಟಿದ್ದರೆ ಏನುಗತಿ! ದೇವರೆ ನನ್ನನ್ನು ಪಾರುಮಾಡಿದನೆಂದು ಉಸುರ್ಗರೆದನು. ಈಗಾಗಲೆ ತನ್ನ ಹೆಸರಿಲ್ಲೆ. ಶ್ರಾಪಿಸಿ ಕಲ್ಲೊಡೆಯುವದೆಂದರೆ ಮನೆಯಲ್ಲಿ ನಿತ್ಯಕ್ರಮವಾಗಿದೆ. ವೀಣೆ ಬಂದರಂತೂ ಆ ದಿವ್ಯಗಾನವು ತಾರಸಪ್ತಕದಲ್ಲಿ ನಡೆಯುವುದು. ಕೂಡಲೆ ಅವನು ನಿಶ್ಚಯ ಮಾಡಿದನು : ಇನ್ನವಳಿಗೆ ಪತ್ರಬರೆಯಕೂಡದು. ಇನ್ನು ಯಾವುದೇ

ಬಗೆಯ ಸಂಬಂಧವನ್ನು ಇಟ್ಟುಕೊಳ್ಳಬಾರದು. ಅಂದರೆ ತನ್ನಷ್ಟಕ್ಕೆ ತಾನೇ ಸುಮ್ಮನಾಗುತ್ತಾಳೆ. ಅವಳ ನಿರಾಧಾರ ಸ್ಥಿತಿಯಲ್ಲಿ ಎತ್ತಿಹಿಡಿಯುವವರು ಬೇಕೆಂಬುದು ನಿಜ. ಆದರೆ ತನಗೆ ಆ ಪರಿಸ್ಥಿತಿ ಇಲ್ಲ. ನಿರಾಧಾರವಾಗಿ ಕ್ಷಣವೂ ನಿಲ್ಲದೆ ಸುತ್ತುತ್ತಿರುವ ಈ ಭೂಮಿಯ ಮೇಲೆ ಅವೆಷ್ಟೋ ವೀಣೆಯಂಥ ಜೀವಗಳು ನಿರಾಧಾರವಾಗಿ ಆಳಲಿನ ಕಡಲಿನಲ್ಲಿ ಮುಳುಗೇಳುತ್ತಿರುವವು. ಅವರಿಗೆಲ್ಲ ತಾನೇನು ಮಾಡಬಲ್ಲನು ? ಸಹಾನುಭೂತಿ ತೋರಬಹುದು ; ಉಪಕಾರ ಮಾಡಬಹುದು. ಆದರೆ ವೀಣೆ ಬಯಸುವುದನ್ನು ನೀಡುವ ಧೈರ್ಯ ತನ್ನಲ್ಲಿಲ್ಲ. ಅವಳು ಜನ್ಮದ ಗೆಳೆತನವನ್ನು ಕೋರಿಯೆ ಹೀಗೆ ಮಾತಾಡುತ್ತಿರುವಳೆಂದಲ್ಲ. ಆದರೆ ತಂದೆ-ತಾಯಿ ಅಣ್ಣ-ತಂಗಿ ಮೊದಲಾಗಿ ಎಲ್ಲ ಪ್ರೀತಿಯ ಬಳಗವನ್ನು ಕಳಕೊಂಡು ಉಸುಬಿನ ಅರಣ್ಯದಲ್ಲಿ ಒಂಟಿಯಾಗಿ ಹೊಂಟ ಅವಳಿಗೆ ಒಂದು ಮರದ ನೆರಳು, ತಣ್ಣಸದ ತಾಣ ಬೇಕಾಗಿದೆ. ಅದನ್ನು ಅವಳ ಹತ್ತಿರ ಇದ್ದಾಗ ತಾನು ಒದಗಿಸಲು ಯತ್ನ ಮಾಡಿದನು. ಈಗದು ಮುಂದಿನ ನಿಲುಗಡೆಗೆ ಹೋಗಿ ಚಿರಂತನವಾದ ಹೃದಯ ಸಂವಾದವನ್ನು ಹಾರೈಸಬಹುದು. ಅವಳಿಲ್ಲಿಗೆ ಬಂದರೆ ಅಂಥ ವಾತಾವರಣವು ನಿರ್ಮಾಣವಾಗುವುದು ನಿಶ್ಚಿತ. ಹೀಗೆಲ್ಲಾ ಯೋಚಿಸಿ ಅವಳ ಪತ್ರವನ್ನು ತನ್ನ ಟ್ರಂಕಿನ ತೀರ ಬುಡದ ಇನ್ನೊಂದು ಪಾಕೀಟಿನಲ್ಲಿ ಬಚ್ಚಿಟ್ಟು ಈ ಪ್ರಕರಣದ ಮೇಲೆ ಎತ್ತಲಾರದ ತೆರೆಯೆಳೆಯುವಂತೆ ಟ್ರಂಕಿನ ಮೇಲ್ಬದಿಯನ್ನು ಜೋರಾಗಿ ಮುಚ್ಚಿ ಬೀಗ ಹಾಕಿದನು. ಇದರಿಂದ ಮನಸ್ಸು ಪ್ರಸನ್ನವಾಯಿತು. ಸಮಿತಿಯ ಕೆಲಸದಲ್ಲಿ ತೊಡಗಿದನು. ಇನ್ನು ಬೇಗನೆ ಕೆರೂರಿನಲ್ಲಿ ಹಾಗೂ ಸುತ್ತು ಮುತ್ತು ನಡೆದ ಕಾರ್ಯವನ್ನು ನೋಡಲು ಹೋಗಬೇಕೆಂದು ಕಲ್ಯಾಣಿಯವರು ಅವನಿಗೆಹೇಳಿದರು. ಅವನೂ ಒಪ್ಪಿದನು. ಅಂದು ರಾತ್ರಿ ಮಲಗಿದಾಗ ಮಾತ್ರ ವೀಣೆಯ ಸಂಬಂಧವಾದ ವಿಚಿತ್ರ ಕನಸುಗಳು ಬಿದ್ದವು. ಒಂದರಲ್ಲಿಯಂತೂ ಅವಳಿದ್ದ ಮನೆಯಲ್ಲಿ ಊಟಕ್ಕೆ ಹಾಕದೆ ಒದ್ದು ಹೊಡೆದು ಹೊರಗೆ ಹಾಕಿದಂತೆಯೂ ಅವಳು ಒಂದೇ ಸವನೆ ಅಳುತ್ತ ವಿದ್ಯುದ್ವೇಗದಿಂದ ಬಾಗಿಲುಕೋಟೆಗೆ ಬಂದು ಅಮೃತನನ್ನು ಅಪ್ಪಿಕೊಂಡು ತಾನಿನ್ನು ಇಲ್ಲಿಂದ ಕದಲುವುದಿಲ್ಲವೆಂದು ಭಾವನಾವಶವಾಗಿ ಆಡಿದಂತೆಯೂ ಆಯಿತು. ಒಮ್ಮೆಲೆ ಅಮೃತ ಹಾಸಿಗೆಯ ಮೇಲೆ ಎದ್ದು ಕುಳಿತನು. ಸುತ್ತೆಲ್ಲ ನೋಡಿದನು. ಎಲ್ಲಿ ವೀಣೆ ಬಂದೇಬಿಟ್ಟಿರುವಳೋ ಎಂಬುವಷ್ಟು ಭಯವು ಅವನನ್ನುಮುತ್ತಿತು. ಕನಸೆಂದು ತಿಳಿದೊಡನೆ ಮನಸ್ಸುಹಗುರಾಯಿತು. ಮುಂದೆ ನಿದ್ದೆ ಹತ್ತದೆ ಅದೆಷ್ಟೋ ಹೊತ್ತು ಅವನು ಕುಳಿತಾಗ ಅವನಿಗೆ ಅನಿ

ಸಿತು-ತನ್ನ ಉತ್ತರದ ಹಾದಿಯನ್ನು ಅವಳು ಪ್ರತಿನಿಮಿಷ ನೋಡುತ್ತಿರಬಹುದು; ಉತ್ತರಬರಲಿಲ್ಲವೆಂದೇ ಹುಚ್ಚು ಆವೇಶದಿಂದ ಇಲ್ಲಿಗೆ ಹೊರಟು ಬರಬಹುದು. ಈವರೆಗೆ ಈ ಸಂಭವ ಅವನಿಗೆ ಹೊಳೆದಿರಲಿಲ್ಲ. ಅವಳ ಬರವನ್ನು ತಡೆಯಬೇಕಾದರೆ ಕೊನೆಯ ಪತ್ರವೊಂದನ್ನು ಬರೆಯುವುದೇ ಮೇಲೆಂದು ಗೊತ್ತುಮಾಡಿದನು. ಮರುದಿನ ಬೆಳಿಗ್ಗೆ ಬರಗಾಲಸಮಿತಿಯ ಜಾಗಕ್ಕೆ ಹೋಗಿ ಅವನು ಮಾಡಿದ ಮೊದಲನೆಯ ಕೆಲಸವೆಂದರೆ ವೀಣೆಗೆ ಪತ್ರ ಬರೆದದ್ದು. ಅದು ಸಾಧ್ಯವಿದ್ದಷ್ಟು ಕಿರಿದಾಗಬೇಕೆಂದು ಅವನ ಸಂಕಲ್ಪವಿತ್ತು.ಬರೆಯುತ್ತಹೋದಂತೆ ಅದು ಪೂರ್ಣವಾಗಿ ಈಡೇರಲಿಲ್ಲ. ಅವನು ಬರೆದದ್ದು ಹೀಗೆ :

ಪ್ರೀತಿಯ ವೀಣಾ,

ನಿನ್ನ ಪತ್ರ ಮುಟ್ಟಿತು. ನಿನ್ನ ಸುದ್ದಿಯೆಲ್ಲ ತಿಳಿದು ಬಹಳ ಕೆಡುಕೆನಿಸಿತು. ಗೂಡಿನಿಂದ ಕೆಳಗೆ ಚೆಲ್ಲಿದ ಹಕ್ಕಿಮರಿಯಂತೆ ನೀನಲ್ಲಿಕಷ್ಟಪಡುತ್ತಿರುವಿ.ನಾನಿಷ್ಟು ದೂರದಲ್ಲಿದ್ದು ಏನು ಮಾಡಬಲ್ಲೆ? ನಿನಗೆ ಒಳ್ಳೆಯದಾಗಲಿ ಎಂದು ಬೇಡುತ್ತೇನೆ. ಹೆಚ್ಚಿಗೇನೂ ನನಗೆ ಸಾಧ್ಯವಿಲ್ಲ. ನೀನೂ ಅಪೇಕ್ಷಿಸಬೇಡ. ನಮ್ಮ ಭೇಟಿ ಇನ್ನು ಆಗುವ ಸಂಭವವಿಲ್ಲ: ದಯಮಾಡಿ ನೀ ಇಲ್ಲಿಗೆ ಬರಬೇಡ. ನನ್ನ ಮನೆತನದ ತೊಡಕಿನ ಜೇಡಬಲೆಯಲ್ಲಿ ನಾನು ನೊಣದಂತೆ ಸಿಕ್ಕಿಕೊಂಡಿದ್ದೇನೆ. ಅದರ ಚಿಂತೆಯೆ ನನಗೆ ಹೆಚ್ಚಾಗಿದೆ. ಮೇಲಾಗಿ ಈ ನನ್ನ ಜಿಲ್ಹೆಯಲ್ಲಿ ಬರಗಾಲ ಸಮಿತಿಯ ಕೆಲಸಕ್ಕೆ ಒಪ್ಪಿ ಕೆಲವು ದಿನಗಳಿಂದ ಊರಿಂದ ಊರಿಗೆ ತಿರುಗುತ್ತಿದ್ದೇನೆ. ಬರಗಾಲದ ದೃಶ್ಯಗಳು ನನ್ನ ಕರುಳನ್ನು ದಿನಾಲು ಇರಿಯುತ್ತಿರುವವು. ಸಾವಿನ ದವಡೆಯಲ್ಲಿಸಿಲುಕಿದ ಸಾವಿರಾರು ಜನರನ್ನು ಹೇಗೆ ಬದುಕಿಸಬೇಕೆಂಬುದೆಇಲ್ಲಿಯ ಎಲ್ಲ ಕೆಲಸಗಾರರ ಚಿಂತೆಯ ವಿಷಯವಾಗಿದೆ. ಇಂಥ ಪರಿಸ್ಥಿತಿಯಲ್ಲಿ ನೀನಿಲ್ಲಿ ಬಂದರೂ ನಿನ್ನೊಡನೆ ಒಂದುಕ್ಷಣವನ್ನುಕೂಡಕಳೆಯುವ ಅವಕಾಶವೂ ಮನಸ್ಸಿನ ಸಿದ್ಧತೆಯೂ ನನಗಿಲ್ಲ.ನಾನು ಹೀಗೆ ಬರೆದದ್ದು ಓದಿ ಸಿಟ್ಟಿಗೇಳಬೇಡ. ನನ್ನ ಅಂತಃಕರಣ ಬತ್ತಿಹೋಯಿತೆಂದು ಭಾವಿಸಬೇಡ. ನಿನ್ನ ಕರುಣ ಸ್ಥಿತಿಯನ್ನು ನಾನು ಊಹಿಸಿ ತಿಳಿದಿದ್ದೇನೆ. ಆದರೆ ನೀನು ಇಲ್ಲಿಯ ದುರಂತ ದೃಶ್ಯವನ್ನು ಕಲ್ಪಿಸಿ ತಿಳಿಯಬೇಕು. ನೋಡು, ಬಂಗಾಲದಂತೆ ವಿಜಾಪುರ ಜಿಲ್ಹೆಯೂ ಮೇಲಿಂದ ಮೇಲೆ ಬರಗಾಲಕ್ಕೆ ತುತ್ತಾದಸೀಮೆ. ಕಳೆದವರುಷವಂತೂ ಮುಂಗಾರ ಮಳೆ ಮೊದಲು ಬಿದ್ದು ಆಸೆ ತೋರಿ ಆಮೇಲೆ ಕೈಬಿಟ್ಟಿತಲ್ಲದೆ ಹಿಂಗಾರಿಯೂ ಹಾರಿಹೋಯಿತು. ಅನ್ನದಾತನಾದ ಒಕ್ಕಲಿಗನು ಹೌಹಾರಿದನು.. ಹೊಲಮನೆಯಿಲ್ಲದೆ ಕೂಲಿಯ

ಮೇಲೆ ಬಾಳಿದ ಜನರಂತೂ ಎದೆ ಒಡೆದುಕೊಂಡರು. ಪ್ರತಿಯೊಂದು ಹಳ್ಳಿಯಲ್ಲಿ ಅರ್ಧಕ್ಕರ್ಧ ಜನರು ಮನೆಮಾರು ಬಿಟ್ಟು ದನಕರಗಳನ್ನು ಕಟುಕರಿಗೆ ಮಾರಿ ಗುಳೆ ಕಟ್ಟಿಕೊಂಡು ಅನ್ನದ ಬಿಸಿಲುಗುದುರೆಯ ಬೆನ್ನು ಹತ್ತಿ ನಡೆದರು. ಕಳವು ದರೋಡೆಗಳು ಹೆಚ್ಚಿದವು. ಕೆಲವರು ಸಿಕ್ಕದ್ದು ತಿಂದು ಬದುಕುತ್ತಿದ್ದರು. ಕೆಲವು ಕುಟುಂಬಗಳ ಜನರು ಮಕ್ಕಳನ್ನು ಒಂದೊಂದರಂತೆ ಬಾವಿಯಲ್ಲಿ ನೂಕಿ ತಾವೂ ಹಾರಿಕೊಂಡು ಪ್ರಾಣಬಿಟ್ಟರು. ಈಗ ಬರಗಾಲ ಸಮಿತಿಯ ಮತ್ತು ಸರಕಾರದ ಉಪಾಯಯೋಜನೆಯಿಂದ ಸಾವು ಎಷ್ಟೋ ತಪ್ಪಿದೆ. ಆದರೆ ಸಾವಿಗಿಂತಕೀಳಾದ ಬದುಕು ಎಲ್ಲ ಕಡೆ ಕಾಣುತ್ತದೆ. ಕೆಲವು ಕಡೆ ಸೇಂಗಾದ ಹಿಂಡಿಯನ್ನೂ ಬೇರೆ ಬೇರೆ ತೊಪ್ಪಲಗಳನ್ನೂ ತಿಂದು ಹೇಗೋ ಹೊಟ್ಟೆಹೊರೆಯುತ್ತಿದ್ದರೆ, ಬೇರೆಕಡೆ ಹುಣಚಿ ಪಕ್ಕಗಳನ್ನು ಹುರಿದು ಜನ ಅವನ್ನು ತಿಂದು ಜೀವಿಸುತ್ತಿದ್ದಾರೆ. ಮನುಷ್ಯ ತನ್ನವರನ್ನು ಕೊಂದು ಮಾಂಸ ತಿನ್ನುವುದೊಂದು ಉಳಿದಿದೆ. ಅಷ್ಟಾದರೆ ಪಶುತ್ವದ ಸ್ಥಿತಿಗೆ ಪೂರ್ತಿ ಮುಟ್ಟಿದಂತಾಗುವುದು ! ಮೊನ್ನೆ ನಮ್ಮೂರಾದ ಸಿರೂರಿಗೆ ಹೋಗಿದ್ದೆ. ಅಲ್ಲಿಂದ ಗುಳೇಹೋದ ಪ್ರಾಯದ ಗಂಡಸರು ರೋಗಕ್ಕೆ ತುತ್ತಾಗಿ ಸತ್ತರೇಹೊರತು ಊರಲ್ಲಿ ಉಳಿದ ಮುದುಕರು ಬಹುಶಃ ಎಲ್ಲರೂ ಉಳಿದಿದ್ದಾರೆ. ಒಂದು ಮರದ ಬುಡದಲ್ಲಿ ತಿರಿದು ತಂದ ರೊಟ್ಟಿ ತುಣುಕುಗಳನ್ನು ತಿಂದು ಬದುಕಿದ ಇಬ್ಬರು ಜಿರಿಜಿರಿಯಾದ ಮುದುಕ ದಂಪತಿಗಳನ್ನು ಕಂಡೆ. ಅವರು ಹೇಗೆ ಬದುಕಿದ್ದಾರೆ? ಯಾಕೆ ಬದುಕಿದ್ದಾರೆ ? ನನಗೆ ತಿಳಿಯದೆ ಹೋಯಿತು. ಬಂಗಾಲದಲ್ಲಿ ಮೃತ್ಯುವಿನ ತಾಂಡವನೃತ್ಯದಲ್ಲಿ ಅದರ ಕಾಲ್ಕೆಳಗೆ ಸಿಕ್ಕು ನೆರೆಹಾವಳಿಯಿಂದಲೂ ಬೇನೆಯಿಂದಲೂ ಲಕ್ಷಾವಧಿ ಜನ ಸಾಯುತ್ತಾರೆ. ಅದೇ ಈ ನಮ್ಮ ಕರ್ನಾಟಕದಲ್ಲಿ ಆ ತಾಂಡವನೃತ್ಯದ ಬುಡದಲ್ಲಿ ಸಿಕ್ಕೂ ಸಾಯದ ಇರುವೆಗಳಂತೆ ಜನ ಬದುಕಿದ್ದಾರೆ. ನಿತ್ಯಶ್ರೀ ನಿತ್ಯಮಂಗಳವಾದ ದುಷ್ಕಾಳದಲ್ಲಿ ಬೇಕಾದ್ದು ತಿಂದು ಜೀವ ಹಿಡಿದುಕೊಂಡಿರುವ ಅದ್ಭುತ ಶಕ್ತಿ ಈ ಜನಕ್ಕಿರಬಹುದೇ? ಆದರೆ ಇದೆಂಥ ಬದುಕು ವೀಣಾ ! ಬದುಕಿದರೆ ತಲೆಯೆತ್ತಿ ತೇಜಸ್ವಿಯಾಗಿ ಬದುಕಬೇಕು; ಇಲ್ಲದಿದ್ದರೆ ಸತ್ತುಹೋಗಬೇಕು;

ಸ್ವಲ್ಪೇ ಬರೆಯಬೇಕೆಂದು ಬಹಳ ಬರೆಯುತ್ತ ಹೊರಟೆ. ಈ ನಾಡಿಗೆ ಹತ್ತಿದ ಬೇಗೆ ನಿನಗೆ ಗೊತ್ತಾಗಲಿ ಎಂಬುದೇ ನನ್ನ ಉದ್ದೇಶ. ನಾನೀಗ ತೊಡಗಿದ ಕೆಲಸವೆಂದರೆ ನನ್ನ ಈ ತಾಲೂಕಿನ ಹಳ್ಳಿಹಳ್ಳಿಗಳಲ್ಲಿ ಹೋಗಿ ನಡೆದ ಅನ್ನಛತ್ರ, ದನದಹಟ್ಟಿ ಮುಂತಾದ್ದನ್ನು ನೋಡಿ ಅವಶ್ಯವಿದ್ದಲ್ಲಿ ಕೊರತೆಗಳನ್ನು ಸರಿ

ಪಡಿಸುವುದು,ಮುಂದಾಳುಗಳಿಗೆ ನಿಜಸ್ಥಿತಿಯನ್ನು ತಿಳಿಸುವುದು. ನಿನಗೆಹೆಮ್ಮೆಯೆನಿಸುವಂಥ ಸಂಗತಿಯೆಂದರೆ ಬಂಗಾಲದಿಂದ ರಾಮಕೃಷ್ಣಮಠದ ಸಂನ್ಯಾಸಿಗಳೂ ಮಠದ ಬೆಂಗಳೂರು ಶಾಖೆಯ ಕಾರ್ಯಕರ್ತರೂ ಇಲ್ಲಿ ಬಂದು ಸೇವಾಬುದ್ಧಿಯಿಂದ ಎಂಥ ಕೆಲಸವನ್ನು ಮಾಡಲೂ ಸಿದ್ಧರಾಗಿದ್ದಾರೆ. ನಮ್ಮ ದೇಶದ ದುಃಖ ಎಲ್ಲಿದ್ದರೂಒಂದೇ. ನಾವೆಲ್ಲಾಒಂದೇ ಎಂಬುದನ್ನು ಅವರು ತೋರಿಸುತ್ತಿದ್ದಾರೆ. ಇಂಥ ಕಾಲದಲ್ಲಿ ಇದೇ ಜಿಲ್ಹೆಯುವನಾದ ನಾನು ಸುಮ್ಮನಿರಬೇಕೆ ?

ಹೆಚ್ಚು ಬರೆಯಲಾರೆ. ನಿನ್ನದು ನಿನಗೆ ಮಿಗಿಲಾಗಿದೆ. ನನ್ನದಿಲ್ಲಿ ನನಗೆ ಮಿಕ್ಕಿದೆ. ಇದನ್ನರಿತು ಧೈರ್ಯದಿಂದ ಬಂದದ್ದನ್ನು ಇದುರಿಸೋಣ.

ವೀಣಾ, ಇದೇ ನಿನಗೆ ನನ್ನ ಕೊನೆಯ ಪತ್ರವೆಂದು ತಿಳಿ. ನೀನೂ ಈಗ ಬರೆದದ್ದನ್ನೇ ಕೊನೆಯದಾಗಿ ಮಾಡು. ತಪ್ಪು ತಿಳಿಯಬೇಡ. ಇಲ್ಲಿಗೆ ಬರುವ ಹವ್ಯಾಸ ಸರ್ವಥಾಬೇಡ. ಇದ್ದಲ್ಲಿಂದ ಹೃದಯದ ತಂತಿಗಳು ತಂತಿಯಿಲ್ಲದ ಅಲೆಗಳ ಮೇಲೆ ಭಾವದ ಸ್ವರವನ್ನು ನುಡಿಸಲಿ.

ನಿನ್ನ
—ಅಮೃತ

## ೮. ಸಾವು ತಡೆದ ಸೇವೆ

ಬೆಳಗಿನ ೧೦ ಗಂಟೆ ಹತ್ತಿರ ಬಂದಿದೆ. ಮೇ ತಿಂಗಳ ಕೊನೆ ಕೊನೆಯ ದಿನಗಳಲ್ಲಿ ಮೋಡದೊಳಗಿನ ಬಿಸಿಲು ಬಲುಚುರುಕಾಗಿ ಚುಚ್ಚುತ್ತಿರುವುದು. ಬೇಸಿಗೆ ಮುಗಿಯ ಬಂತು. ಮಳೆಗಾಲ ಕಾಲಿಕ್ಕುವ ಕಾಲ ಸಮೀಪಿಸಿದೆ. ಅದರೆ ಬೇಸಿಗೆ ಮುಗಿದಿಲ್ಲ, ಮಳೆ ಇಳಿದಿಲ್ಲ. ಮಳೆಯ ಆಶೆ ತೋರಿಸುವಂತೆ ಎಲ್ಲಿಂದಲೋ ಮೋಡ ಬಂದು ನಿಲ್ಲುತ್ತದೆ.'ಎಲ್ಲಿಯಮಳೆ, ನಾನಿನ್ನೂ ಜೋರಾಗಿಯೇ ಇದ್ದೇನೆ' ಎಂದು ಮೋಡದ ಕಿಂಡಿಯಲ್ಲಿ ತಲೆದೋರಿ ಸೂರ್ಯನು ಸಾರುತ್ತಾನೆ. ಇದರಿಂದ ಜನಕ್ಕೆ ಇನ್ನಿಷ್ಟು ಬೇಗುದಿ. ಇಂದಿನ ಈ ಬರಗಾಲದಲ್ಲಿಯಂತೂ ಮಳೆಗಾಗಿ ಹಾತೊರೆದ ಬಯಲುಸೀಮೆಯ ಬಂಧುಗಳಿಗೆ ಎಲ್ಲಾ ಬಯಲು-ಬಯಲೊಡಲು, ಬಯಲುಮನೆ, ಬಯಲು ನೆಲ, ಬಯಲಾಸೆ!

ಕೆರೂರಲ್ಲಿಯ ಊರೊಳಗಿನ ಮುದುಕರು,ಹುಡುಗರು ಕೈಯಲ್ಲಿ ತಾಬಾಣ ತಂಬಿಗೆಗಳನ್ನು ಹಿಡಿದುಕೊಂಡು ಗುಂಪುಗುಂಪಾಗಿ ನಡೆದಿದ್ದಾರೆ. ಅವರಲ್ಲಿ ಹುಡುಗರ ಸಂಖ್ಯೆಯೇ ಹೆಚ್ಚಾಗಿದೆ. ಬಿಸಿಲೇರಿದಂತೆ ಅವರ ಹಸಿವು ಹೆಚ್ಚುತ್ತಿದೆ.

ಮುಂದೆ ಮುಂದೆ ಹೋಗಿ ಜಾಗ ಹಿಡಿಯಬೇಕೆಂದು ಹುಡುಗರು ಓಟದ ನಡಿಗೆ ಯಲ್ಲಿ ನಡೆದಿದ್ದರೆ ಮುದುಕರು ಕುಂಟುತ್ತ ಕೂರುತ್ತ ಮೆಲ್ಲಗೆ ಸಾಗಿದ್ದಾರೆ. ಅನೇ ಕರ ಮೋರೆಯ ಮೇಲೆ ಹೇಗೋ ಬದುಕಿದ್ದಾರೆ ಎಂಬುದರ ಗುರುತಿವೆ ಹೊರತು ಜೀವಕಳೆಯೆಂಬುದಿಲ್ಲ ಸರಿಯಾಗಿ ಕಾಳಿಲ್ಲದೆ ಸೊರಗಿ ಕಡ್ಡಿಯಾಗಿದ್ದಾರೆ. ಗಂಡ ಸರ ಮೈಮೇಲೆ ತೀರಕಡಿಮೆ ಅದೂ ಹರಕಾದ ಹೊಲಸುಬಟ್ಟೆ ಇದ್ದುದು ಅವರು ಬೇಸಿಗೆಗೆ ಮೈತೆರೆದಿದ್ದಾರೆ ಎಂಬುದರಿಂದ ಅಲ್ಲ, ಅವರಲ್ಲಿ ಇರುವದೇ ಅಷ್ಟು. ಹೇಗಸರ ಮೈತುಂಬ ಸೀರೆ ಇರುವದೆಂಬುದು ಸುಳ್ಳಲ್ಲ; ಆದರೆ ಅದನ್ನು ಬಿಚ್ಚಿ ಹರಡಿದರೆ ಕಾಣುವ ಎಲ್ಲ ಹರಕುಗಳೂ ತೂತುಗಳೂ ಈಗ ಉಟ್ಟುಕೊಂಡಾಗಿನ ರೀವಿಯಲ್ಲಿ ಮುಚ್ಚಿದಂತಾಗಿವೆ. ಅಲ್ಲಲ್ಲಿ ಹೊಲಗೆಯ ಟಿಬಕಿಗಳೂ ಸೀರೆ-ಕುಬಸ ಗಳ ಮೇಲೆ ಎದ್ದು ಕಾಣುತ್ತವೆ. ಕೆಲವು ಮೈಗಳ ಮೇಲೆ ಬೇರೆ ಬೇರೆ ಬಣ್ಣದ ಹೊಸ ಹಳೆಯ ನಮೂನೆಗಳ ಸಂಗಮವು ಸಹ ಕಾಣುತ್ತದೆ. ಬೇರೆ ಕೆಲವರು ಒಳ್ಳೆಯ ಸೀರೆಕುಬಸ ತೊಟ್ಟವರಾಗಿ ಮುಪ್ಪಿನಿಂದ ಮುಖಬಾಗಿಸಿ ನಡೆದಿರುವಂತೆ ತೋರುತ್ತಾರೆ. ಆದರೆ ಈ ಬಾಗಿನಲ್ಲಿ ಅವರ ಜೀವಕ್ಕೆ ಉರಿ ಹತ್ತಿಸಿದ ನಾಚಿಕೆ ತಿಳಿಯುವಂತಿತ್ತು. ತಾವು ಮನೆಯ ಹಿರಿಯರಾಗಿದ್ದುಕೊಂಡು ಸುಖದ ಕಾಲ ದಲ್ಲಿ ಮಕ್ಕಳ ಗಳಿಕೆಯ ಹಿಗ್ಗಿನಲ್ಲಿ ಮುಳುಗಿ ಮಮ್ಮಕ್ಕಳನ್ನು ಆಡಿಸುತ್ತ ಕೂತಿ ರುವ ಮುದುಮೆಯವರು ನಾಚಿಕೆ ತೊರೆದು ಈಗ ಅನ್ನ ಛತ್ರಕ್ಕೆ ಹೊರಟಿದ್ದಾರೆ. ಅವರು ಮೇಲೆ ಮೊಗವೆತ್ತಿ ಸಹ ನೋಡಲಾರರು.

ಊರ ಉತ್ತರಕ್ಕೆ ಒಂದು ಮಗ್ಗಲಿಗೆ ಒಂದು ಮನೆ ಹಾಗೂ ಶಂಕರಲಿಂಗನ ಗುಡಿಯ ನಡುವಿನ ಬಯಲುಜಾಗದಲ್ಲಿ ಅನ್ನಛತ್ರಕ್ಕಾಗಿ ಮಂಡಪವನ್ನು ಹಾಕಿದೆ. ಆ ಮನೆಯ ಹಿಂಭಾಗವೇ ಛತ್ರಕ್ಕೆ ಅಡಿಗೆಮನೆಯಾಗಿತ್ತು. ಬಡಿಸುವ ದಕ್ಕೆಂದು ಸ್ವಯಂಸೇವಕರ ತಂಡವು ಸಿದ್ಧವಾಗಿತ್ತು. ಯಾರ ಮನೆಯ ಮದು ವೆಯ ಕಾರ್ಯಕ್ಕೂ ಒದಗಿ ಬಾರದ ಸಿಸ್ತು, ಹುರುಪು ಪ್ರತಿ ವಿವರದಲ್ಲಿ ಕಾಣು ತ್ತಿದ್ದವು. ಜನರು ಬಂದು ಜಾಗ ಹಿಡಿದು ಕೂತುಕೊಂಡರು. ಅಡಿಗೆಮನೆಯಿಂದ ತಮಗಾಗಿ ಬರುವ 'ಅಮೃತ'ದ ಕಡೆಗೇ ಎಲ್ಲರ ನೋಟ. ಹಸಿದು ಕಂಗಾಲಾದ ಹೊಟ್ಟೆಗೆ ಹೊಟ್ಟೆಯಲ್ಲಿ ಹೋಗಬಹುದಾದ್ದೇನೇ ಇರಲಿ, ಅದು ಅಮೃತವೇ. ಹತ್ತು ಗಂಟೆಗೆ ಸರಿಯಾಗಿ ಬಡಿಸುಗಾರರು ಸಾಲಾಗಿ ಬಂದು ಎಲ್ಲರ ತಾಬಾಣ ಗಳಲ್ಲಿ ಜೋಳದ ಕಿಚಡಿಯನ್ನೂ ಹೆಸರಿನ ಸಾರನ್ನೂ ನೀಡಿದರು. ಎಷ್ಟು ನೀಡು ವುದೆಂದು ನಿಯೋಜಕರು ಗೊತ್ತುಮಾಡಿದ್ದರೋ ಅಷ್ಟನ್ನೇ ನೀಡಿದರು. ದಿನ

ದಿನವೂ ಪರಿಚಿತವಾದ ಅದೇ ಊಟ ಈವೊತ್ತು ದೊರಕಿತು. ಅದರಲ್ಲಿ ಏನೇನೂ ಹೊಸದಿಲ್ಲ. ದಿನಾಲೂ ದೊರೆಯುವದೊಂದೇ ಹೊಸದು. ಹಪ್ಪಳವಿಲ್ಲ, ಸಂಡಿಗೆ ಯಿಲ್ಲ, ಹೋಳಿಗೆ ತುಪ್ಪವಿಲ್ಲ, ರೊಟ್ಟಿ ಕಾರ ಕೂಡ ಇಲ್ಲ. ಆದರೆ ಸಾವಿನ ದವಡೆ ಯಿಂದ ಜನವನ್ನು ಬದುಕಿಸಲು ಪ್ರಯೋಗಿಸಿದ ಸೇವಾಸ್ತ್ರದ ಪ್ರಭಾವವದು. ಹೇಗಾದರೂ ಈ ಜನ ತಕ್ಕಮಟ್ಟಿಗೆ,ಒಳ್ಳೆಯದಾದ, ಅಗ್ಗವಾದ ಆಹಾರ ತಿಂದು ಬದುಕಲಿ, ನಾಳೆ ಇದಕ್ಕೂ ಒಳ್ಳೆಯದನ್ನು ಪಡೆದಾರು ಎಂಬುದೇ ಬರಗಾಲ ಸಮಿತಿಯವರ ಆಶೆಯು.

ಹೀಗೆ ಎಂಟು ನೂರರವರೆಗೆ ಜನಸಮುದಾಯ ಕೂತುಕೊಂಡು ಸುರಿ ಸುರಿದು ಉಣ್ಣುತ್ತಿರಲು, ಆ ನೋಟವನ್ನು ತೋರಿಸಲೆಂದು ಡಾಕ್ಟರ ದಾತಾ ರರು ಅಮೃತನನ್ನು ಕರಕೊಂಡು ಅಲ್ಲಿಗೆ ಬಂದರು. ಅವರ ಹಿಂದೆ ಕೆರೂರಿನ ಖಾದಿ ಕೆಲಸಗಾರರಾದ ಉಪಾಧ್ಯೆ ಎಂಬುವವರೂ ಇದ್ದರು.ಕೆರೂರಿಗೆ ಅಮೃತನು ಹಿಂದಿನ ದಿನವೇ ಅಲ್ಲಿಯ ಎಲ್ಲ ಬರಗಾಲ ಕೆಲಸಗಳ ಮೇಲ್ವಿಚಾರಣೆಗೆಂದು ಬಂದಿ ದ್ದನು. ಡಾಕ್ಟರ ದಾತಾರರ ಪರಿಚಯು ಅವನಿಗೆ ತೀರ ಹೊಸದು. ಆದರೂ ಅವರಿಬ್ಬರೂ ಸಲಿಗೆಯಿಂದ ಮಾತಾಡುತ್ತ ಬರುವದನ್ನು ನೋಡಿದರೆ ಹಲವಾರು ವರುಷಗಳ ಕೆಳೆಯಿದ್ದವರಂತೆ ಕಾಣುತ್ತಿದ್ದರು. ಅನ್ನಛತ್ರದ ಮೊದಲು ಎಂದಾ ಯಿತು,ಹೇಗದು ಬೆಳೆಯಿತು ಎಂಬುದನ್ನೆಲ್ಲ ದಾತಾರರು ಅಮೃತನಿಗೆ ಹೇಳುತ್ತ ಹೊರಟಿದ್ದರು. ತಾವು ಮಾಡುತ್ತಿದ್ದ ಜನಸೇವೆಯ ಕೆಲಸದ ಬಗ್ಗೆ ಒಂದು ಸಮಾಧಾನದ ಕಳೆ ಅವರ ಮೋರೆಯಲ್ಲಿ ಒಡೆದು ಕಾಣುತ್ತಿತ್ತು. 'ನಮಗೆ ಎಂದೂ ಯಾವ ಮಾತಿನದೂ ಕೊರತೆ ಬಿದ್ದಿಲ್ಲ. ಸಮಿತಿಯ ಕಡೆಯಿಂದ ಧನ ಸಹಾಯವಿದೆ. ಕಡಿಮೆ ಬಿದ್ದರೆ ಊರಲ್ಲಿಯ ಶ್ರೀಮಂತರಿದ್ದಾರೆ. ನಮ್ಮ ಮನೆ ಗೆಂದು ಕೇಳಲಿಕ್ಕೆ ಹೋದರೆ ದೊರೆಯಲಾರದ ಕಾಳುಕಡಿ ಅನ್ನಛತ್ರಕ್ಕಾಗಿ ಎಂದೊ ಡನೆ ಹಗೆಯಿಂದ ಹೊರಗೆ ಬರುತ್ತದೆ. ಎಲ್ಲ ತರದ ಕೆಲಸಕ್ಕೆ ಎಲ್ಲ ಸಮಾಜ ದಲ್ಲಿಯ ಜನರೂ ಮುಂದೆ ಬಂದಿದ್ದಾರೆ.ಬರಗಾಲದಿಂದ ಕೆರೂರಿಗೆ ಆದ ಹೆಚ್ಚಿನ ಲಾಭ ಇದು.'

'ಹೀಗೇನು ? ಕೆಡಕಿನಿಂದ ಒಳಿತು ಹುಟ್ಟಿದಂತಾಯಿತು ! ಆದರೆ ಈ ಮೊದಲು ಹೇಗಿತ್ತು ?' ಎಂದು ಕುತೂಹಲದಿಂದ ಅಮೃತನು ಕೇಳಿದನು. 'ಅದು ಬಹಳ ದೊಡ್ಡ ಕಥೆ. ಆಮೇಲೆ ಹೇಳುವೆ' ಎಂದು ದಾತಾರರು ಆ ವಿಷಯ ತಡೆದರು. ಊಟ ಮಾಡುತ್ತಿರುವವರ ಕಡೆ ಲಕ್ಷಪೂರ್ವಕವಾಗಿ

ನೋಡುತ್ತ ಇಬ್ಬರೂ ಮುನ್ನಡೆದರು. ನೂರಕ್ಕೆಎಂಬತ್ತರಂತೆ ಹುಡುಗ ಹುಡುಗಿಯರ ವಾನರ ಸೈನ್ಯವೇ ಇತ್ತು. ಅದರಿಂದ ಕಲಕಲ, ಚೆಲ್ಲಾಪಿಲ್ಲಿ ಊಟ, ಚೀರಾಟ-ಚೂರಾಟಗಳಿಗೆ ಮುಕ್ತದ್ವಾರ. ಸ್ವಯಂಸೇವಕರ ಶಂಖವಾದ್ಯದ ಪರಿಣಾಮ ಅಸ್ವರಪೂರ್ತಿ ಆಗುತ್ತಿತ್ತು. ಈಗ ಡಾಕ್ಟರರು ಬಂದಿದ್ದ ಕಾರಣ ಅವರು ಹೋದ ಪಂಕ್ತಿಯಲ್ಲಿ ಕೃತಕವಾದ ಮೌನ, ಪ್ರೋಕ್ತತನ ಕಾಣುತ್ತಿದ್ದವು. 'ಭಲ್ಲಬ್ಯಾಡಿರಿ' ಎಂಬ ಮಂತ್ರ ಜಪಿಸುತ್ತ ಅವರು ಎಲೆಎಲೆಯ ಮುಂದೆ ನಡೆದಿದ್ದರು. ಒಂದು ಎಲೆಯ ಮುಂದೆ ಅವರು ಬರಲು ಅಲ್ಲಿ ಕುಳಿತಿದ್ದ ಒಬ್ಬ ಮುದುಕಿ ಡಾಕ್ಟರರನ್ನು ಕಂಡೊಡನೆ ದಿಂಗನೆ ಎದ್ದು ನಿಂತಳು. 'ಯಾಕಬೇ ಆತ್ರೇನು ?' ಡಾಕ್ಟರರು ಸಹಜವಾಗಿ ಕೇಳಿದರು. 'ಇಲ್ಲೆಪ್ಪ.' 'ಹಾಂಗಾರ್‍ಯಾಕೆ ಎದ್ದಿ ? ಕೂಡ್ರು' ಅವಳೇನು ಕೂಡಲಿಲ್ಲ. ಡಾಕ್ಟರರು ಮುಂದೆ ಹೆಜ್ಜೆಯಿಟ್ಟರು, ಮತ್ತೆ 'ಎಪ್ಪ !' ಎಂದಳು ಆ ಮುದುಕಿ. ಅಮೃತ ಡಾಕ್ಟರರನ್ನು ತಡೆದು ನಿಲ್ಲಿಸಿದನು. 'ಇತ್ತಿತ್ತ ಬಾರೋ ಎಪ್ಪ ! ಒಂದೀಟು ಕಣ್ತುಂಬ ನೋಡತೀನಿ. ನನಗೆ ಬೇಸಿ ಕಾಣೂದುಲ್ಲ' ಆಲ್ಪರಿದು ಕೇಳಿದಳು. 'ನೋಡೇನ ಹೊಟ್ಟಿ ತುಂಬತದೇನು ? ಸುಮ್ಮ ಕೂತು ಊಟ ಮಾಡು' ಎನ್ನುತ್ತ ಡಾಕ್ಟರರು ಮುಂದೆ ಸಾಗುವದರಲ್ಲಿದ್ದರು. ಆದರೆ ಅವಳ ಭಾವಾವೇಶವನ್ನು ಅಮೃತನು ಗುರುತಿಸಿ ಡಾಕ್ಟರರನ್ನು ಕರೆತಂದು ಇದಿರು ನಿಲ್ಲಿಸಿದನು. ಅವಳು ಬಾಗಿ ಆ ಮುದುಡಿದ ಮೊಗದ ಮನೆಗೆ ಹಳೆಯ ಕಿಂಡಿಯಂತಿದ್ದ ಕಣ್ಣುಗಳನ್ನು ತೆರೆದು ನೋಡಿ 'ಯಪ್ಪ ಡಾಗದರ ! ನಿನಗ ಸಿವ ನೂರು ವರ್ಷ ಆಯುಸ್ಯಾ ಕೊಡಲಿ !' ಎಂದು ಎದೆದುಂಬಿ ಹರಸಿದಳು. 'ಸಾಕೇನು ನೂರು ವರ್ಷ ? ವರ್ಷ ವರ್ಷ ಬರಗಾಲ ಬರಲಿ, ಹಿಂಗs ಕೂಡಿಸಿ ಹೊಟ್ಟಿಗೆ ಹಾಕಲಿ ಅಂತ ಬೇಡಿಕೊ ಅಲ್ಲ !' ಎಂದು ಡಾಕ್ಟರರು ಅಣಕದ ರೀತಿಯಲ್ಲಿಯೆ ಮಾತಾಡಿದರು. 'ಬ್ಯಾಡೊ ಎಪ್ಪ. ಇಂತಾ ಬರಗಾಲ ಎಂದೆಂದೂ ಬರೂದು ಬ್ಯಾಡೋ ನಮ್ಮಪ್ಪ. ಏಟು ಮಂದಿಗೆ ಕೂಸು ಕುನ್ನಿಗೆ ದಿನಾ ಹೊಟ್ಟಿಗೆ ಹಾಕತೀದಿ, ನಿನ್ನ ಹೊಟ್ಟಿ ತಣ್ಣಗಾಗಲಿ !' ಎಂದೊಡನೆ ಕೊರಳುಬ್ಬಿ ಆ ಮುದುಕಿ ಗೊಂಬೆಯಂತೆ ನಿಂತುಬಿಟ್ಟಳು. ಆಮೇಲೆ ಅವಳೆರಡೂ ಕಣ್ಣುಗಳಿಂದ ದಳದಳ ಹನಿ ಉದುರಿದುವು. ಆಗ ಡಾಕ್ಟರರಿಗೆ ಅವಳ ಭಾವನೆಯು ಅರ್ಥವಾಯಿತು. ಕೆಳ ಮೋರೆ ಮಾಡಿ ಸುಮ್ಮನೆ ನಿಂತರು. ಅಮೃತನು ಒಮ್ಮೆ ಮುದುಕಿಯನ್ನೂ ಒಮ್ಮೆ ಡಾಕ್ಟರರನ್ನೂ ನೋಡಿ ಒಡಲಲ್ಲಿ ಏನೋ ಸಂಕಟವಾದಂತಾಗಿ ಕಣ್ಣಲ್ಲಿ ಹನಿದುಂಬಿ ಅವ

ರನ್ನು ನೋಡಲಾರದೆ ಮಂಟಪದ ಮೂಲೆಯೊಂದನ್ನು ನೋಡುತ್ತ ನಿಂತನು. ಇಬ್ಬರೂ ಮುಂದರಿದರು. ತನ್ನ ವಸ್ತ್ರವನ್ನು ಹೊರದೆಗೆದು ಅಮೃತ ಕಣ್ಣೊರಸಿ ಕೊಂಡನು. ಮುದುಕಿ ತನ್ನ ಜಾಗದಲ್ಲಿ ಕೂತುಕೊಂಡಳು.

ಇತ್ತ ಒಂದು ಮೂಲೆಯಲ್ಲಿ ಏನೋ ಒದರಾಟ ನಡೆದಂತೆ ಕೇಳಿತು. ಡಾಕ್ಟರರೂ ಅಮೃತನೂ ಅಲ್ಲಿಗೆ ಧಾವಿಸಿ ಹೋದರು. ಉಪಾಧ್ಯೆಯವರು ಬೇರೆ ಪಂಕ್ತಿಯಲ್ಲಿ ಸಹಜವಾಗಿ ತಿರುಗುತ್ತ ಹೋಗುತ್ತಿರಲು ನಡುಹರೆಯದ ಗಂಡಸು-ಹೆಂಗಸು ಇಬ್ಬರೂ ಹುಡುಗರ ತಾಬಾಣದೊಳಗಿಂದ ಊಟ ಮಾಡುತ್ತಿರುವಂತೆ ಅವರ ಕಣ್ಣಿಗೆ ಬಿದ್ದಿತು. ಮೊದಲವರು ಹಾಗೇ ನೋಡುತ್ತ ಅಲ್ಲಿ ಸುಳಿದಾಡಿದರು. ಅಲ್ಲಿಂದ ಆ ಎಲೆಗಳ ಮುಂದೆ ಬಂದು ನಿಂತು 'ನೀವು ಯಾರು ? ಹುಡುಗರ ಎಲ್ಯಾಗ ನೀವ್ಯಾಕ ಉಣತೀರಿ ?' ಎಂದು ಗದ್ದರಿಸಿ ಕೇಳಿದರು. ಅವರಿಂದ ಉತ್ತರ ಬರಲಿಲ್ಲ. 'ಸುಮ್ಮಾ್ಯಕ ಕೂತೀರಿ ? ನಾಚಿಕಿಲ್ಲ ನಿಮಗ ? ಈ ಅನ್ನ ಛತ್ರ ಮುದುಕರು, ಕೈಕಾಲಿಲ್ಲದವರು, ಹತ್ತು ವರ್ಷದ ಕೆಳಗಿನ ಹುಡುಗರು ಇವರ ದಸಿಂದ ನಡದದ' ಉಪಾಧ್ಯೆಯವರು ಕಾಂಗ್ರೆಸ್ಸಿನ ಶಿಸ್ತಿನಲ್ಲಿ ಬೆಳೆದು ನಿಷ್ಠುರ ನ್ಯಾಯದ ಏಕನಿಷ್ಠ ಭಕ್ತರಾಗಿದ್ದರು. ದಯೆಮಾಯೆಗೂ ನ್ಯಾಯ ನಿಯಮದ ಜೋಡು ಬೇಕೆಂಬ ಹಾಗೆ ಅವರ ನಡತೆಯಿತ್ತು. ನಿಯಮಕ್ಕೆ ಅಪವಾದಗಳನ್ನು ಕೊಡುವ ಮನೋವೃತ್ತಿ ಅವರದಲ್ಲ, ಅವರ ಒದರಾಟ ಸಾಕಷ್ಟು ಆದಮೇಲೆ 'ಹಾಗಾರ ನಾವೇನು ಮಾಡಬೇಕರಿ ?' ಎಂದು ಆ ಗಂಡಸು ಧೈರ್ಯಗೊಂಡು ಕೇಳಿದನು. 'ನೀವು ದುಡಕೊಂಡು ತಿನಬೇಕು. ಬರಗಾಲ ಕಾಮಗಾರಿ ಸುರುವಾಗ್ಯಾವ. ಅಲ್ಲಿಗೆ ಹೋಗಿ ದುಡೀರಿ ಇಬ್ಬರೂ. ನಾವು ಕಳಿಸಿಕೊಡತೇವಿ ಬೇಕಾರ. ಏಳರಿ ಇಲ್ಲಿಂದೀಗ.' ಉಪಾಧ್ಯೆಯವರ ಈ ಗದ್ದರಣೆಗೆ ಮಂಟಪವೇ ನಡುಗಿತು. ಎಲ್ಲರೂ ಅತ್ತ ನೋಡಹತ್ತಿದರು. ಅಷ್ಟರಲ್ಲಿ ಅಮೃತನೂ ಡಾಕ್ಟರರೂ ಅಲ್ಲಿಗೆ ಹೋದರು. ಉಪಾಧ್ಯೆ ಅವರಿಗೆ ನಡೆದದ್ದು ಹೇಳಿ 'ತಮ್ಮ ಹುಡುಗರಿಗೆ ಉಣಸತೇವಿ ಎಂದು ಹೇಳಿ ತಾವೇ ಉಣಹತ್ಯಾರ ಇವರಿಬ್ಬರು' ಎಂದು ಮುಗಿಸಿದರು. 'ಇರಲಿ ಹಂಗ ಒದರಾಡಬಾರದು, ಉಪಾಧ್ಯೆ ! ಹೊಟ್ಟೆ ಭಾಳ ಕೆಟ್ಟದು !' ಎಂದು ಡಾಕ್ಟರರು ಸಮಾಧಾನದಿಂದ ಅವರನ್ನು ಮಾತಾಡಿಸಲಾಗಿ ತಮ್ಮ ಹೃದಯದ್ರಾವಕ ಕಥೆಯನ್ನು ಆ ದಂಪತಿಗಳು ಹೇಳಿದರು. ಹತ್ತಿರದ ಎಂಕಂಚಿ ಹಳ್ಳಿಯವರಂತೆ ಅವರು. ಮನೆಯೊಳಗಿನ ಕಾಳು ತೀರಿದವು. ಎಲ್ಲ ವಸ್ತ್ರ, ಒಡವೆ, ಪಾತ್ರೆ, ದನಕರ ಮಾರಿ ಒಂದೆರಡು ತಿಂಗಳು ಬದುಕಿದರು. ಎಲ್ಲಾ ಮುಗಿದುಹೋಯಿತು. ಊರುಬಿಟ್ಟು

ಮಕ್ಕಳನ್ನು ಕಟಿಗೊಂಡು ಹೊರಟರು. ಎಲ್ಲಿಗೆ ಯಾತಕ್ಕೆ ಎಂಬುದು ಗೊತ್ತಿಲ್ಲ. ದಾರಿಯಲ್ಲಿ ಕಿರಕಸಾಲಿ, ಹೊನ್ನಿಕುಕ್ಕಿ, ಗೊರಜಿತೊಪ್ಪಲ ಸಿಕ್ಕದ್ದು ತಿಂದರು. ಜೋಳ ಸೆಜ್ಜಿ ಸಿಗದಾದ ಕಾರಣ ಅನೇಕಜನರ ಆಹಾರ ಈ ಬಗೆಯು ತೊಪ್ಪಲವೇ ಆಗಿತ್ತು. ಅವರೂ ಹಾಗೇ ಮಾಡಿ ಕೆಲವು ದಿನ ನೂಕಿದರು. ಕೊನೆಗೆ ಜೀವ ಬೇಸತ್ತುಹೋಯಿತು. ಯಮುನ ಮನೆಗೆ ಹೋಗಿಯೇ ಇನ್ನು ಮಿಷ್ಟಾನ್ನ ಉಣ್ಣ ಬೇಕೆಂದು ಕೆರೂರ ಹತ್ತಿರಕ್ಕೆ ಬಂದು ಒಂದು ಬಾವಿಯಲ್ಲಿ ಮಕ್ಕಳನ್ನು ಮೊದಲು ನೂಕಿ ತಾವು ಬೀಳುವ ಬೇತು ಮಾಡಿದರು. ಮುನ್ನಾ ದಿನ ರಾತ್ರಿಯೇ ಇದು ನಡೆದದ್ದು. ಬಾವಿಯ ದಂಡೆಯ ಮೇಲೆ ಹೋಗಿ ನಿಂತರು. ಇನ್ನೇನು ಹತ್ತಾರು ನಿಮಿಷದಲ್ಲಿ ಜಲದೇವತೆಗೆ ಎಲ್ಲರೂ ಬಲಿಯಾಗಬೇಕು. ಅಷ್ಟರಲ್ಲಿ ಯಾವನೋ ಒಬ್ಬ ಸನ್ಯಾಸಿ ಅಲ್ಲಿಗೆ ಬರಬೇಕೆ ? ಆ ಬಾವಿಕಟ್ಟೆಯೇ ಅವನ ವಿಶ್ರಾಂತಿಯ ಜಾಗ ವಂತೆ. ಹಗಲೆಲ್ಲ ಮನಸ್ಸಿಗೆ ಬಂದತ್ತ ತಿರುಗಿ ರಾತ್ರಿ ಅವನಲ್ಲಿಗೆ ಬರುತ್ತಿದ್ದನು. ಅವರ ಬೇತನ್ನು ಅವನು ಕಂಡುಹಿಡಿದು ಆತ್ಮಹತ್ಯೆಯಿಂದ ಅವರ ಮನಸ್ಸನ್ನು ತಿರುಗಿಸಿ ಅಲ್ಲಿಯೇ ಮಲಗಿಕೊಂಡು,ಮರುದಿನ ಬೆಳಿಗ್ಗೆ ಕೆರೂರಲ್ಲಿ ಅನ್ನಛತ್ರ ನಡೆ ದಿದೆ,ಅಲ್ಲಿಗೆ ಹೋಗಿರೆಂದು ಹೇಳಿಕಳುಹಿಸಿದನಂತೆ.' ಡಾಕ್ಟರರು ಇಂಥ ನೂರಾರು ಕತೆಗಳನ್ನು ದಿನಾಲು ಕೇಳುತ್ತಿದ್ದ ಕಾರಣ ಅವರಿಗೆ ದಡ್ಡುಬಿದ್ದಹಾಗೆ ಆಗಿತ್ತು. ಮೇಲಾಗಿ ಅವರು ಡಾಕ್ಟರರೆಂದ ಮೇಲೆ ಜಡ್ಡು, ಸಾವು, ಕೊಲೆ, ಹೆಣ ಈ ಮಾತುಗಳಿಂದ ಅವರಿಗೆ ಗಾಬರಿಯಾಗುವದೆಂಬುದು ಗೊತ್ತಿರಲಿಲ್ಲ. ಅಮೃತನ ಅಂತಃಕರಣ ಮಾತ್ರ ಕರಗಿತು. ಅವನೇನೂ ಮಾತಾಡದೆ ಹಾಗೇ ನೋಡುತ್ತ ನಿಂತನು. ಕೊನೆಗೆ ಡಾಕ್ಟರು 'ಉಸಾಘ್ಯೆ, ಹೋಗಲಿ. ಈಗ ಎಬ್ಬಿಸಬ್ಯಾಡರಿ. ಊಟ ಮಾಡಿದ ಮ್ಯಾಲ ಮನಿಗೆ ಕರಿಸಿ ಅವರಿಗೆ ಕಾಮಗಾರಿಗೆ ಕಳಿಸಿಕೊ ಡೋಣ ಎಂದು ಅವರಿಗೂ ತಿಳಿಹೇಳಿ ಅಮೃತನೊಂದಿಗೆ ಅನ್ನ ಛತ್ರದಿಂದ ಹೊರಟರು. ಅಂದಿನ ಊಟ ಮುಗಿಸಿ ಜನವೆಲ್ಲ ತಮ್ಮ ಗೂಡು ಸೇರಿತ್ತು. ಮತ್ತೆ ಸಂಜೆ ಐದರವರೆಗೆ ಅತ್ತ ಕಾಲಿಡುವಂತಿರಲಿಲ್ಲ.

ಹನ್ನೊಂದಾಯಿತು. ಬಿಸಿಲು ನಡುನೆತ್ತಿಗೆ ಏರುವುದರಲ್ಲಿತ್ತು. ಆದರೆ ಬರ ಗಾಲ ಪರಿಹಾರದ ಎಲ್ಲ ಕೆಲಸವನ್ನು ನೋಡಬೇಕೆಂಬ ಅಮೃತನನ್ನೂ ತೋರಿಸ ಬೇಕೆಂಬ ಡಾ. ದಾತಾರರನ್ನೂ ಎಂಥ ಉರಿಬಿಸಿಲು ಕೂಡ ತಡೆದು ನಿಲ್ಲಿಸುವಂತಿ ರಲಿಲ್ಲ. ಅನ್ನಛತ್ರದಿಂದ ಅವರು ದನದ ಛತ್ರದ ಕಡೆ ನಡೆದರು. ಇದರಲ್ಲಿ ಎರಡು ತರದ ಬೀಡುಗಳಿದ್ದವು. ಒಂದು ದನದ ಮೇವನ್ನೂ ಹಿಂಡಿಯನ್ನೂ ಒದಗಿಸುವ

ಆಹಾರ ವ್ಯವಸ್ಥೆಯ ಬೀಡು. ಇನ್ನೊಂದು ಕಟುಕರಿಂದ ಬಿಡಿಸಿಕೊಂಡ ದನಗಳ ಸಂಪೂರ್ಣ ಜೋಪಾಸನೆಯ ಬೀಡು. ಮೊದಲನೆಯ ಬೀಡಿಗೆ ಬಡರೈತರು ತಮ್ಮ ದನಕರುಗಳನ್ನು ಕರಕೊಂಡು ಬಂದು ಗೊತ್ತಾದಷ್ಟು ಮೇವು ಮಿಡಿಚಿಯನ್ನು ತಿನಿಸಿ ತಮ್ಮ ಮನೆಗೆ ತಿರುಗಿ ಕರೆದೊಯ್ಯುತ್ತಿದ್ದರು. ಕೆರೂರ ಬೀಡಿನಲ್ಲಿ ಸುಮಾರು ಎರಡುನೂರು ದನಗಳ ಸರಬರಾಯಿ ಈ ರೀತಿ ನಡೆದಿತ್ತು. ಹೊಲಗಳ ಕೆಲಸಕ್ಕೆ ಉಪಯೋಗಿಸಿ ಹಗಲು-ರಾತ್ರಿ ಬೇಕಾದಾಗ ಒಮ್ಮೆ ದನಗಳನ್ನು ಬೀಡಿನಲ್ಲಿ ಮೇಯಿಸಲು ಒಕ್ಕಲಿಗನು ತರಬಹುದಾಗಿತ್ತು. ಈ ವ್ಯವಸ್ಥೆಯಲ್ಲಿಯ ದೂರದೃಷ್ಟಿ ಬಹಳ ಮೆಚ್ಚುವಂಥದು. ಡಾಕ್ಟರರು ಬೀಡಿನೊಳಕ್ಕೆ ಅಮೃತನನ್ನು ಅಲೆದಾಡಿಸಿ ಎಲ್ಲ ವಿವರಗಳನ್ನು ತಿಳಿಸಿ ಹೇಳಿದರು. ಕಣಿಕೆ ಸಿಗುವದು ತೀರ ದುಸ್ತರವಾದಾಗ, ಸಿಕ್ಕರೂ ವಿಪರೀತ ತುಟ್ಟಿಯಾದಾಗ ಈ ವ್ಯವಸ್ಥೆ ದನಕ್ಕೆ ಸಂಜೀವಿನಿಯಾಯಿತು. ದನಗಳನ್ನು ಮಾರಲಾರದೆ ಹೊಟ್ಟೆಗೆ ಹಾಕಲಾರದೆ ಒದ್ದಾಡುತ್ತಿರುವ ರೈತರು ಬರಗಾಲ ಸಮಿತಿಯನ್ನು ಹಾಡಿಹರಸಿದರು. ಇದರಿಂದ ಎಲ್ಲ ದನವನ್ನೂ ಸಾವಿನ ದವಡೆಯಿಂದ ಉಳಿಸಿದಂತಾಯಿತೆಂದಲ್ಲ, ಆದರೆ ಗೋಧನ ಉಳಿದಷ್ಟು ಲೇಸು. ಅದು ಸಲ್ಲಿಸುವ ಮೂಕ ಸೇವೆಯಿಂದ ನಾಡಿಗೆ ನಾಡೇ ಹೊಟ್ಟೆತುಂಬ ಅನ್ನ ಪಡೆಯುತ್ತದೆ. ದನವೇ ಹೋದರೆ ಜನವೇನು ಬದುಕ್ಯಾರು ? ವಿಜಾಪುರ ಜಿಲ್ಹೆಯ ಬೇರೆ ಬೇರೆ ೪೨ ಸ್ಥಳಗಳಲ್ಲಿ ೨ ಲಕ್ಷದ ಮೇಲಿನ ವೆಚ್ಚಕ್ಕೆ ಪ್ರತಿನಿತ್ಯ ಸುಮಾರು ೭೦೦೦ ದನಗಳು ಸಮಿತಿಯ ಬೀಡುಗಳಲ್ಲಿ ಆಹಾರ ಪಡೆಯುತ್ತಿದ್ದವು; ಮುಂಬರುವ ಮನುಷ್ಯನ ಆಹಾರಕ್ಕೆ ತಮ್ಮ ದುಡಿಮೆಯನ್ನು ಮೀಸಲಾಗಿರಿಸುತ್ತಿದ್ದವು.

ಈ ಬೀಡಿನಿಂದ ಅವರಿಬ್ಬರೂ ಇನ್ನೊಂದಕ್ಕೆ ಹೋದರು. ಇಲ್ಲಿ ಸಮಿತಿಯ ವತಿಯಿಂದ ಹಣಕೊಟ್ಟು ಕೊಂಡ ದನಗಳ ಹಿಂಡಿತ್ತು. ಕೆಲವು ಇವುಗಳಲ್ಲಿ ಬಡ ಒಕ್ಕಲಿಗರು ಕೆಲ ದಿನದ ಜೋಪಾಸನೆಗೆಂದು ತಂದಿಟ್ಟ ದನಗಳೂ ಇದ್ದವು. ಈ ಎಲ್ಲ ದನ ಮೈತುಂಬಿಕೊಂಡು ಪುಷ್ಟವಾಗಿದ್ದು ದಂಟು ಮುರಿಯುತ್ತ ತಿಂದು ಮೆಲುಕುಹಾಕುತ್ತ ಗೋದಲಿಯಮುಂದೆ ನಿಂತಿದ್ದವು. ಬಂದವರನ್ನು ನೋಡಲು ಸಹ ಅವಕ್ಕೆ ಪುರಸತ್ತಿರಲಿಲ್ಲ. ಸಮಿತಿಯವರು ಸುಮಾರು ೩೦೦ ದನಗಳನ್ನು ಈ ರೀತಿ ಕೊಂಡು ಜಿಲ್ಹೆಯ ಐದು ಕೇಂದ್ರಗಳಲ್ಲಿ ಇಟ್ಟಿರುವದಾಗಿ ಡಾಕ್ಟರರು ಅಮೃತನಿಗೆ ಹೇಳಿದರು. 'ಇಷ್ಟೇ ಏನು ?' ಅಮೃತ ಕೇಳಿದನು. 'ಇಷ್ಟಾದರೂ ಸಾಧ್ಯವಾಯಿತು.' ಡಾಕ್ಟರರು ಉತ್ತರ ಕೊಟ್ಟರು. 'ಮಳೆ–ಬೆಳೆ ಹೋಗಿ ಹೌಹಾರಿದ ಹಳ್ಳಿಗರು ಊರು-ಕೇರಿ ಬಿಟ್ಟುಹೋಗುವಾಗ ತಮ್ಮ ದನಗಳನ್ನು ಕಟಕರಿಗೆ ಮನ

ಸಿಗೆ ಬಂದಂತೆ ಮಾರಿಕೊಂಡರು. ಆ ಹೆಣ್ಣುಮಂಗನ ಕಥೆಯನ್ನು ನೀವುಕೇಳಿಲ್ಲವೇ? ತನ್ನ ಪ್ರಾಣದ ಸುತ್ತು ಬಂದಾಗ ಅದು ತನ್ನ ಮರಿಯನ್ನೂ ಏರುತ್ತಿರುವ ನೀರಿಗೆ ಬಲಿಕೊಟ್ಟಿತಂತೆ. ಮನುಷ್ಯನಂತೂ ಮಂಗನ ಅವತಾರವೆಂದು ಇಂದಿನ ಸಂಶೋಧನೆ! ಅಲ್ಲದೆ ಗುಳೆಕಾರರ ಹಾಹಾಕಾರವೆದ್ದಾಗ ಬರಗಾಲ ಸಮಿತಿ ಎಲ್ಲಿತ್ತು? ಸರಕಾರಕ್ಕಂತೂ ಎಂದಿನಂತೆ ನಿರ್ಲಕ್ಷ್ಯ, ನಿಷ್ಕ್ರಿಯತೆ!' ಕಟಕರಿಗೆ ಮಾರಿದರು ಎಂದು ಕೇಳಿದೊಡನೆ ಅಮೃತನ ಕರುಳು ಹಿಚುಕಿದಂತಾಯಿತು. ಹೃದಯ ತಪ್ತವಾಯಿತು. 'ಡಾಕ್ಟರರೇ, ಏನು ಕೊಂಡವರು ಕಟಕರೋ ಮಾರಿದವರು ಕಟಕರೋ?' ಎಂದು ಕೇಳಿದನು. 'ಇಬ್ಬರೂ ಅಲ್ಲ,ಪರಿಸ್ಥಿತಿ ಕಟಕ!' ಎಂದು ಡಾಕ್ಟರರುತಮ್ಮ ಅನುಭವದ ಆಳದಿಂದಕಂಡ ಸತ್ಯವನ್ನು ಸೂಚಿಸಿದರು. 'ಹಾಗೆಂದರೇನು? ನನಗೆ ಅರ್ಥವಾಗಲಿಲ್ಲ!' ಅಮೃತ ಆಡಿದನು. ಡಾಕ್ಟರರು ದನಗಳ ಪಟ್ಟಿಯ ಹೊರಗೆ ಅವನನ್ನು ಹಂದರದ ನೆರಳಲ್ಲಿಗೆ ಕರೆತಂದು, 'ಹೇಳತೀನಿ ಬರ್ರಿ.' ಎಂದು ಸುರುವುಮಾಡಿದರು;

"ಈ ನಮ್ಮ ಕೆರೂರು ನೇಕಾರಿಕೆ ಕೊಲೆಗಾರಿಕೆ ಇವಕ್ಕೆ ಪ್ರಸಿದ್ಧವಿದ್ದಂತೆ ದನಗಳ ಸಂತೆಗೂ ಬಹಳ ಪ್ರಸಿದ್ಧವಾದದ್ದು. ಎಂತೆಂಥ ದನಗಳು ಈ ಸಂತೆಗೆ ಬರುತ್ತಿದ್ದವು ಅನ್ನುತ್ತೀರಿ! ಕುಟ್ಟಿ ಮಾಡಿದಂತಿದ್ದ ತುಂಬಿದ ಮೈ, ಡೌಲಾದ ಗೋಣು, ತೂಗುಬಿದ್ದ ಗಂಗೆದೊಗಲು, ಲಕಲಕಿಸುವ ಅಣಸ ಹಾಕಿದ ಕೋಡು ಕಿರುಗಂಟೆಗಳುಳ್ಳ ಕೊರಳ ಪಟ್ಟಿ ಇವುಗಳಿಂದ ಮೆರೆಯುವ ಎತ್ತುಗಳಿಗೆ ಬೇಡಿದಷ್ಟು ಕೊಟ್ಟು ಕೊಂಡೊಯ್ಯಲು ಹತ್ತು ಹರದಾರಿಯ ಹಳ್ಳಿಗರು ರೊಕ್ಕದ ಹಮ್ಮಿಣಿ ಕಟ್ಟಿಕೊಂಡು ಬರುತ್ತಿದ್ದರು. ಮಾರುವವರಿಗೂ ಕೊಳ್ಳುವವರಿಗೂ ಕೂಡಿಯೇ ಅತ್ಯಂತ ಸಂಭ್ರಮ. ಸುಳಿಯನ್ನು ನೋಡಿ ನುರಿತ ರೈತರು ಹಿಂದೆ ಮುಂದೆ ಪರೀಕ್ಷಿಸಿ ತಮ್ಮ ಜೋಡಿಯನ್ನು ಆರಿಸಿ ತಂದ ಹಣವನ್ನೆಲ್ಲ ಸುರುವಿ ಸಂತೋಷದಿಂದ ಬಂದ ಭಾಗ್ಯವನ್ನು ಮನೆಗೆ ಕರೆದೊಯ್ಯುತ್ತಿದ್ದರು. ಅವರ ಹೊಲಗೆಲಸದ ದುಡಿಮೆಗೆಂದು ಮಾತ್ರವಲ್ಲ, ತಮ್ಮ ಭಾಗ್ಯದೇವತೆಯಾದ ಬಸವಣ್ಣನೆಂಬ ಭಕ್ತಿಯಿಂದ್ಲ್ಣಉತ್ಸಾಹದಿಂದ ಆ ಎತ್ತಿನ ಜೋಡಿಯನ್ನು ನೋಡುತ್ತಿದ್ದರು. ಹಾಲು-ಹೈನದ ಕಾಮಧೇನುವೆಂಬಂತೆ ತಾವು ಕೊಂಡ ಆಕಳು-ಎಮ್ಮೆಗಳನ್ನು ಕಾಣುತ್ತಿದ್ದರು. ಅಂಥ ಕಾಲದಲ್ಲಿಯೂ ಕಟಕರ ವ್ಯವಹಾರ ನಡೆದೇ ಇತ್ತು. ಆದರೆ ಅಂಥ ದನಗಳ ಸಂಖ್ಯೆ ಹಿರಿದಲ್ಲ. ಮುಂದೆ ಬರಗಾಲ ಬಂತು. ನೋಡಿರಿ.ಬಿತ್ತಿಗೆಯ ಮಳೆಯಾಗಿ ಬಿತ್ತಿಸಿತು.ಆಸೆ ತೋರಿಸಿತು, ಮುಂದೆ ಮಟ

ಮಾಯವಾಯಿತು. ಆಗೊಮ್ಮೆ ಈಗೊಮ್ಮೆ ಮಳೆಮೋಡ ಕವಿದಂತಾಗಿ ಸೋತ ಮಳೆಯ ಸೆಳಕುಗಳು ಹಿಂಡಿದ ಹಣ್ಣಿನ ತಟಗುರಸದಂತೆ ತಟಗುಟ್ಟಿದವು. ಅದರಿಂದ ಬೆಳೆಗಳು ಎಲೆತುದಿಗಳಲ್ಲಿ ನಾಲ್ಕುದಿನ ಜೀವ ಹಿಡಿದು ಮೊಣಕಾಲೆತ್ತರ ಬೆಳೆದು ಕೊನೆಗೆ ಬಾಡಿ ಮುಗ್ಗರಿಸಿದವು. ಮುಂಗಾರಿ ಹೀಗಾಯಿತು; ಹಿಂಗಾರಿಗೆ ಮಳೆಯೇ ಇಲ್ಲ. ಒಕ್ಕಲಿಗರು ಹೌಹಾರಿದರು. ಬಕಬಕ ಬಾಯಿಬಿಟ್ಟರು. ಮನೆಯೊಳಗೆ ಕಾಳು ಧಾನ್ಯವಿಲ್ಲ. ಮುಂದೆ ಬರುವದೆಲ್ಲ ನೆಲ ನುಂಗಿತು. ತಮ್ಮ ಗತಿಯೇನು, ದನದ ಗತಿಯೇನು ? ಹಸಿರು ಹುಲ್ಲು ಸಿಗುವಷ್ಟು ದಿನ ದನಗಳನ್ನು ಮೇಯಿಸಿದರು. ಸಿಕ್ಕ ನೀರನ್ನು ಕುಡಿಸಿದರು. ತಮ್ಮ ಕಣ್ಣೆದುರಿಗೇ ಸೊರಗಿ ಸೊಳಕಲಾಗುತ್ತ ಎಲುಬುತೆಗೆದ ದನಕರುಗಳನ್ನು ಅವರಿಗೆ ನೋಡಲಾಗಲಿಲ್ಲ. ಇಂದಿಲ್ಲ ನಾಳೆ ಅವು ಹೊಟ್ಟೆಗಿಲ್ಲದೆ ಒದ್ದಾಡಿ ಸಂಕಟಪಟ್ಟು ಸಾಯುವುದನ್ನು ನೋಡಲಾರದೆ ಅವನ್ನು ಮಾರಿ ಬಂದ ಹಣದಲ್ಲಿ ತಾವಾದರೂ ಬದುಕಬಹುದೆಂಬ ಆಶೆಯಿಂದ ದನಗಳ ಸಂತೆಗೆ ಕಾಲೆಳೆಯುತ್ತ ಉಸಿರ್ಗರೆಯುತ್ತ ನಡೆದರು. ಮಾರಿದರೆ ಒಂದೆತ್ತಿಗೆ ೫೦–೬೦ ರೂಪಾಯಿಯಷ್ಟಾದರೂ ಬರಬಹುದು. ಅದರಿಂದ ಕೆಲಕಾಲ ಬದುಕಬಹುದು. ಮುಂದೆ ಸಿವನಿದ್ದಾನೆ ಎಂದು ಒಮ್ಮೆ ತೋರುವುದು. ಆದರೆ ಇಂಥ ಜೋಡಿಯನ್ನು ಮಾರಿ ನಾಕೊಪ್ಪತ್ತು ಹೊಟ್ಟೆ ಹೊರೆಯಬಹುದು. ಮುಂದಿನ ಬಗೆಯೇನು ಎಂಬ ಮುಂದಾಲೋಚನೆ ಬಂದು ಕಂಗೆಡಿಸುವುದು. ಅಂತೂ ಊರಿಗೆ ಊರೇ ದನಕಟ್ಟಿಕೊಂಡು ಕೆರೂರ ಸಂತೆಗೆ ಬಂದಂತೆ ದನಗಳ ಸಮುದ್ರ ಉಕ್ಕೇರಿತು. ಸಂತೆಯ ಜಾಗ ಸಾಲದೆ ಹಾದಿ ಬೀದಿಗಳೆಲ್ಲ ತುಂಬಿಹೋದುವು. ಮಾರುವವರ ಸಂಖ್ಯೆಗೆ ಲೆಕ್ಕವಿಲ್ಲ. ಆದರೆ ಕೊಳ್ಳುವವರ್ಯಾರು? ಹೊಲಮನೆಯ ಕೆಲಸಕ್ಕೆ ಈಗ ದನಗಳನ್ನು ಕೊಂಡು ಕೊರಳಿಗೆ ಗುದ್ದಿ ಕಟ್ಟಿಕೊಳ್ಳುವ ಮೂರ್ಖರೆಲ್ಲಿ? ಇದ್ದ ದನಗಳ ಸಂರಕ್ಷಣೆಯೆ ಎಲ್ಲರಿಗೆ ಸಾಕುಬೇಕಾಗಿದೆ. ಆಯಿತು, ಕಟಕರಿಗೆ ಇದು ಸುವರ್ಣಸಂಧಿಯಾಯಿತು. ಎಲ್ಲ ದಿಕ್ಕಿನಿಂದ ಅವರು ಕುಣಿಯುತ್ತ ಬಂದರು. ನೋಡಿದಲ್ಲೆಲ್ಲ ಚಣ್ಣದ ಸಾಹೇಬರ ಚಲ್ಲಾಟ. ಅವರಿಗೆಕೊಡಲೊಪ್ಪದೆ ಸಂಜೆಯವರೆಗೆ ರೈತರು ಬಿಗಿ ಹಿಡಿದರು. ಆದರೆ ಕುತ್ತಿಗೆಗೆ ಬಂತೋ ಸಂಗಯ್ಯ ಎಂಬಂತೆ ಆದಮೇಲೆ ಏನು ಮಾಡುತ್ತಾರೆ ? ಸಿರೂರ, ಏನು ಹೇಳಲಿ ? ಕೊನೆಗೆ ೪೦–೫೦ ರೂ. ಜೋಡೆತ್ತುಗಳನ್ನು, ಆರೇಳು ರೂಪಾಯಿಗೆ ನಿರ್ವಾಹವಿಲ್ಲದೆ ಮಾರಿಕೊಂಡರು. ಉತ್ತಮ ಆಕಳು ಐದು ರೂಪಾಯಿಗೆ, ಕರುಗಳು ಎರಡು ರೂಪಾಯಿಗೆ ಹೋದವು. ಸಂತೆಗೆ ಸೇರಿದ ಜನವೆಲ್ಲ ಮರ ಮರ

ಮರುಗಿತು. ನಾವು ಹೋಗಿ ದನಕ್ಕಿಂತ ಮೂಕರಾಗಿ ನಿಂತು ನೋಡಿದೆವು. ಬರಗಾಲಸಮಿತಿಯ ವಿಚಾರ ಹೊಳೆಯುವುದಕ್ಕಿಂತ ಮೊದಲು ಆ ಕಲ್ಲು ಕರಗಿಸುವ ದೃಶ್ಯ ನೋಡಿ ಏನಾದರೂ ಮಾಡಬೇಕೆಂದೆವು. ಏನು ಮಾಡಬೇಕೆಂಬುದು ತೋಚಲಿಲ್ಲ. ಸುತ್ತಲಿನ ಒಣಬಯಲು ಮಳೆಯಿಲ್ಲದೆ ಬೀಸುವ ಒಣಗಾಳಿ ನಮ್ಮನ್ನು ಹೆದರಿಸಿದವು. ಒಂದು ಕಡೆ ಹೀಗಾಯಿತು—ನಮಗಿನ್ನೂ ಆ ದೃಶ್ಯ ಕಣ್ಣ ಮುಂದೆ ನಿಲ್ಲುತ್ತದೆ—ಅದೆಷ್ಟೋ ವರ್ಷಗಳಿಂದ ತಾನು ಕಟ್ಟಿ ಸಾಕಿ ಸಲುಹಿದ ಎತ್ತಿನ ಜೋಡಿಯನ್ನು ಆಕಳೊಂದನ್ನೂ ಒಬ್ಬ ಕಲ್ಲೀವಿಾಸೆಯ ಮುದುಕ ಒಕ್ಕಲಿಗ ಕಟಕರಿಗೆ ತೀರ ಅಗ್ಗ ದರಕ್ಕೆ ಮಾರಿ ಅವನ್ನು ಕಳೆಗೆಟ್ಟ ಕಣ್ಣಿನಿಂದ ನೋಡುತ್ತ ನಿಂತಿದ್ದಾನೆ. ಅವನಿಗೆ ಜಗತ್ತೇ ಶೂನ್ಯವಾಗಿದೆ. ಮನೆಮಕ್ಕಳನ್ನು ಯಮ ಬಂದು ತನ್ನ ಪಾಶದಿಂದ ಎಳೆಯುವಾಗ ಆಗುವಷ್ಟು ಸಂಕಟ ಅವನಿಗೆ ಆಗುತ್ತಿದೆ. ಕೊನೆಗೆ ಕಟಕರವನು ಬಂದು ತನ್ನ ಹಗ್ಗ ಬಿಗಿದು ಎಳೆದೊಯ್ಯಲು ಸಿದ್ಧನಾಗಲು ಮುದುಕ ಹೋಗಿ ತನ್ನ ಒಂದು ಎತ್ತಿನ ಮೈಮೇಲೆ ಗೋಣು ಚೆಲ್ಲಿ ಬಿದ್ದುಕೊಂಡು ಮೈಯೆಲ್ಲ ಕೈಯಾಡಿಸಿದನು. ಎಲುಬಿನ ಹಂದರವೇ ಕೈಗೆ ಹತ್ತಿದರೂ ಅದಾವುದೋ ಸುಖ ಅವನ ಹೃದಯದಲ್ಲಿ ಸುಳಿದಾಡಿತು. ಕೈಯಿಂದ ಬಾಲ ತಿರುವಿ ಕಣ್ಣಿಗೆ ಒತ್ತಿಕೊಂಡನು. 'ಹೋಗಿ ಬರತೀಯಾ ನಿಂಗಣ್ಣಾ ?' ಎಂದು ಅದರ ಹೆಸರಿನಿಂದ ಕೊರಳುಬ್ಬಿ ಆಡಲು ನಿಂಗಣ್ಣನು ಗೋಣೆತ್ತಿ ಹಿಂಗಡೆ ನೋಡಿದನು. ಅದೆಂಥ ಕರುಳು ಕತ್ತರಿಸುವ ನೋಟವದು! ಮುದುಡಿದ ಕಪ್ಪು ಕಮಲದ ಮೊಗ್ಗೆಯಂತಿದ್ದ ಕಣ್ಣು ತೆರೆದು ಆ ಎತ್ತು ದೈನ್ಯದ ಮೂರ್ತಿಯಾಗಿ ನೋಡಿತು. ಅದರ ಮೂಕವೇದನೆಯನ್ನು ನೋಡಿ ನಮ್ಮ ಕಣ್ಣೀರು ಉಕ್ಕಿತು. ಹೇಳಲಿಕ್ಕೆ ಬರುವ ಮನುಷ್ಯನ ದುಃಖಕ್ಕಿಂತ ಹೇಳಲು ಬಾರದ ಆ ಪ್ರಾಣಿಯ ದುಃಖ ಅಸದಳವಾಯಿತು. ಅದರ ನೋಟವನ್ನು ನೋಡಲಾರದೆ ಮುದುಕನು ಹೊಯ್ಕೆಂದು ಅಳಹತ್ತಿದನು. ಇಷ್ಟರಲ್ಲಿ ಕಟಕನು 'ಸರಕೋ ಏ ಬುಡ್ಡಾ' ಎಂದು ಎತ್ತಿನ ಕಾಲಿಗೆ ಝುಬರಿಯ ಏಟು ಕೊಟ್ಟನು. ತನ್ನ ಎದೆಗೆ ಬರೆ ಕೊಟ್ಟಂತೆ ಆಯಿತು ಆ ಮುದುಕನಿಗೆ. 'ಬ್ಯಾಡೊ ಯಪ್ಪ ಹಂಗ ಹೊಡಿಬ್ಯಾಡ ನನ್ನ ನಿಂಗಣ್ಣಾಗ. ಮುಕಾಟಲೆ ಬರತಾನ' ಎಂದು ಅದು ಹೇಗೊ ಜುಲುಮೆಯಿಂದ ಮಗ್ಗಲಿಗೆ ಸರಿದು ನಿಂಗಣ್ಣನು ಇತರ ದನಗಳೊಂದಿಗೆ ಹಿಂದು ಹಿಂದೆ ನೋಡುತ್ತ ಹೋಗುತ್ತಿರಲು ತಾಳಲಾರದೆ ತಾನು ಧೊಪ್ಪನೆ ನೆಲಕ್ಕೆ ಬಿದ್ದುಬಿಟ್ಟನು. ನಾವು ಧಾವಿಸಿ ಹೋಗಿ ಅವನನ್ನು ತೊಡೆಯ ಮೇಲೆ ತಗೊಂಡು

ಗಾಳಿ ಹಾಕಿ ನೆತ್ತಿಗೆ ನೀರು ಬಡಿದು ಆರೈಕೆ ಮಾಡಿದ ಕೆಲ ಹೊತ್ತಿನ ಮೇಲೆ ಅವನು ಎಚ್ಚತ್ತನು, ಈ ಬಗೆಯ ನೋಟಗಳಿಂದ ಕೆರೂರ ಸಂತೆ ಇನ್ನಿಷ್ಟು ಹೆಸರಾಗಿ ಹೋಯಿತು.'

ಅಮೃತನು ಎಲ್ಲ ಕೇಳಿ ಕಂಗೆಟ್ಟು 'ಡಾಕ್ಟರ, ಇಷ್ಟು ಗೊತ್ತಿದ್ದೂ ಕೊಂಡವರು ಕಟಕರಲ್ಲ ಎಂದು ಅನ್ನುವಿರಿ?' ಎಂದು ಕೇಳಿದನು.

'ಸಿರೂರ, ಕೊಂಡವರು ಜಾತಿಯಿಂದ ಉದ್ಯೋಗದಿಂದ ಕಟಕರು ಹೌದು. ಆದರೆ ಅವರಿಗೂ ಹೊಟ್ಟೆಯಿರುವುದು. ಅವರಿಗೆ ಅದೊಂದು ಹೊಟ್ಟೆಯ ಧಂದೆ. ಮುಂಬಯಿಯಂಥ ಪಟ್ಟಣಗಳಿಗೆ ದನಗಳನ್ನು ಕೊಂಡು ಸಾಗಿಸುವ ಕಂಟ್ರಾಟು ಹಿಡಿದು ಸಂತೆಯಿಂದ ಸಂತೆಗೆ ತಿರುಗುತ್ತಾರೆ. ಇಂಥ ಪ್ರಸಂಗವೆಂದರೆ ಅವರಿಗೆ ಪರ್ವಣಿ. ಜನಕ್ಕೆ ಬರಗಾಲವಾದರೆ ಅವರಿಗೆ ಕನ್ಯಾಗತ! ಅದಕ್ಕೇನು ಮಾಡುವುದು? ಮಾಂಸಾಹಾರಿಗಳಾದ ಜನರಿಗೆ ಮಾಂಸ ಬೇಕು. ಅದನ್ನು ಒದಗಿಸುವುದಕ್ಕೆ ಜಗತ್ತಿನಲ್ಲಿ ಕಟಕರು ಬೇಡವೆಂದರೆ ಹೇಗೆ?'

'ನೀವು ಏನೇ ಅನ್ನಿರಿ. ಇಂಥ ನಿರ್ದಯ ಪಶುಗಳನ್ನು ಮನುಷ್ಯರೆಂದು ನಾನಂತೂ ಕರೆಯಲಾರೆ!'

'ಆದರೆ, ಶಿರೂರ. ಅವರಿಗಿದ್ದಷ್ಟು ದಯೆ ನಮಗ್ಯಾರಿಗೂ ಇರಲಿಲ್ಲ ನೋಡಿರಿ. ಎಷ್ಟೇ ಸೋಯಿ ಬೆಲೆಗಾದರೂ ದನ ಕೊಂಡು ರೈತರ ಕೈಯಲ್ಲಿ ತುಸು ನಾಣ್ಯ ಕೊಟ್ಟರಲ್ಲ!'

'ಅದರಿಂದ ಇಂದಿನ ಸಾವನ್ನು ನಾಳಿಗೆ ಹಾಕಿದಂತಾಯಿತು.!'

'ಹಾಗಲ್ಲ, ಕೂಲಿ ಕುಂಬಳಿ ಸಿಗುವ ವರೆಗೆ ಅವರಿಗೆ ಬದುಕಲು ಮಾರ್ಗ ವಾಯಿತು. ಎಲ್ಲರೂ ಕೈಬಿಟ್ಟಾಗ ತಮ್ಮ ಸ್ವಾರ್ಥದ ವ್ಯಾಪಾರದಿಂದ ಕಟಕರು ನಮ್ಮ ಜನರಿಗೆ ಸ್ವಲ್ಪ ಮಟ್ಟಿಗೆ ಆಧಾರವೇ ಆದರಲ್ಲವೇ?'

'ಇರಬಹುದು. ಈ ವ್ಯವಹಾರ ನನಗಂತೂ ತಿಳಿಯದು.'

'ಸಿರೂರ, ಹೋಗಲಿ, ಹೊತ್ತಾಯಿತು, ಮನೆಗೆ ಹೋಗೋಣ. ನಾ ಏನು ಕಟಕರ ಪತಿಯಿಂಧ ವಕೀಲಿ ಮಾಡತೀನಿ ಎಂದು ತಿಳಿಯಬೇಡಿರಿ. ಪರಿಸ್ಥಿತಿಯೇ ಹಾಗೇ ಕೂಡಿ ಬಂತು ಎಂದು ಹೇಳಿದೆ.'

ಸೂರ್ಯ ನಡುನೆತ್ತಿಗೇರಿ ಅದೇ ಕೆಳಗಿಳಿಯತೊಡಗಿದ್ದ. ಅಮೃತನು ಡಾ. ದಾತಾರರೊಡನೆ ಅವರ ಮನೆಗೆ ಹೋದನು. ಬರಗಾಲದಲ್ಲಿ ದೊರೆಯುತ್ತಿರುವ ಬಕ್ಕರಿ ಹುಳಿಯ ಊಟವನ್ನು ಮಾಡಿದನು. ಮಧ್ಯಾಹ್ನದ ಕೆಟ್ಟ

ಬಿಸಿಲು ಕುಳಿತಲ್ಲಿಯೇ ತುಸು ಜಂಪು ತಂದಿತು.  ಒಂದರ್ಧಘಂಟೆಯ ಮೇಲೆ ಎಚ್ಚರಾಗಿ ನೋಡುತ್ತಾನೆ.  ಡಾಕ್ಟರರು ಕಾಣಲೇ ಇಲ್ಲ. ಹತ್ತಿರದಲ್ಲಿ ಎಲ್ಲೊ ಹೋಗಿರಬಹುದೆಂದು ಅವರ ಕೋಣೆಯಲ್ಲಿಯ ಪುಸ್ತಕಗಳನ್ನೂ ಅಲ್ಲಿಯ ಭಾವ ಚಿತ್ರಗಳನ್ನೂ ನೋಡುತ್ತ ಅಲೆದಾಡಿದನು.  ಅವರು ಹೇಳಿದಂತೆ ಕೆರೂರಿಗೆ ಬಂದು ಸುಮಾರು ಹತ್ತು ವರ್ಷ ಮಾತ್ರ ಆಗಿದ್ದವು.  ಇಷ್ಟರಲ್ಲಿ ಅವರು ಸ್ವಂತದ ಹರವಾದ ಮನೆಯೊಂದನ್ನು ಕಟ್ಟಿಸಿಕೊಂಡಿದ್ದಾರೆ. ಅದರ ಅರ್ಧ ಭಾಗ ವನ್ನು ದವಾಖಾನೆಗಿಟ್ಟು ಉಳಿದರ್ಧವನ್ನು ಖಾಸಗಿಗೆ ಬಳಸುತ್ತಿದ್ದಾರೆ.  ದವಾ ಖಾನೆಯೆಂದರೆ ಬರೀ ಔಷದ ವಿಕ್ರಯದ ಸ್ಥಳವಲ್ಲ.  ಅಲ್ಲಿಯೇ ಇರುವ ರೋಗಿ ಗಳಿಗೆ ಐದಾರು ಕೋಣೆ, ಬಾಣಂತಿತನಕ್ಕಾಗಿ ಬೇರೆ ಕೋಣೆ ಹೀಗೆ ಮೀಸಲಿರಿಸಿ ದ್ದಾರೆ.  ಮನೆಯೆಲ್ಲ ಅಚ್ಚುಕಟ್ಟಿಗೆ ಮಾದರಿಯಾಗಿದೆ.  ಖಾಸಗಿ ವಿಭಾಗದಲ್ಲಿ ಖುರ್ಚಿಗಳಿಂದ ಅಂದವಾಗಿ ಸಿಂಗರಿಸಿದ ಭೆಟ್ಟಿಯ ಕೋಣೆಯಿದೆ.  ಹತ್ತಿರವೇ ಅತಿಥಿಗಳ ಬಿಡಾರವಿದೆ. ಅಲ್ಲಲ್ಲಿ ಗೋಡೆಗಳ ಮೇಲೆ ಗಾಂಧಿ-ನೆಹರು ಮುಂತಾದ ರಾಷ್ಟ್ರೀಯ ಮುಂದಾಳುಗಳ ದೊಡ್ಡ ಛಾಯಾಚಿತ್ರಗಳೂ ಡಾಕ್ಟರರ ತಂದೆತಾಯಿ ಗಳ, ಕಾಲೇಜ ಗುರುಗಳ ಹಾಗೂ ಮಿತ್ರರ ಭಾವಚಿತ್ರಗಳೂ ಕಂಗೊಳಿಸುತ್ತವೆ. ತರತರ ಕೆಲಸಕ್ಕೆಂದು ಅವರ ಮನೆಗೆ ಬರಹೋಗುವವರ ತೆರಪಿಲ್ಲ. ಕೆರೂರಿಗೂ ಸುತ್ತ ಮುತ್ತಿನ ಸೀಮೆಗೂ ಅವರು ಅಷ್ಟು ಬೇಕಾಗಿದ್ದಾರೆ.  ಅಲ್ಲಿಯ ಗೌಡ ಕುಲಕರ್ಣಿಯರಿಗಿಂತ ಅವರ ಅಧಿಕಾರ ಹೆಚ್ಚಿನದಾಗಿದೆ.  ಅದು ಬಂದದ್ದು ಸೇವೆಯ ಬಲದಿಂದ ;  ಹೆದರಿಕೆಯಿಂದ, ಹಣದಿಂದ ಅಲ್ಲ.  ಒಂದು ಹಳ್ಳಿ ಯಲ್ಲಿ ನೆಲಸಿ ಎಲ್ಲರಿಗೂ ಬೇಕಾಗಿ ಅಲ್ಲಿಯ ನಾಯಕನಾಗುವುದೆಂದರೆ ಇಂದಿನ ಹಸಗೆಟ್ಟ ಕಾಲದಲ್ಲಿ ಅಸಾಧ್ಯಕೋಟಿಯ ಮಾತು.  ಜಾತಿ, ಮತ, ಬಣ, ಚುನಾವಣೆ ಮುಂತಾದ ಹೊಸಬಗೆಯ ಷಡ್ರಿಪುಗಳು ಹಳ್ಳಿಯ ತಲೆ ಕೆಡಿಸಿ ಅವರ ಬಾಳಿನ ಒಂದುತನವನ್ನು ದಿನಾಲು ಒಡೆಯುತ್ತಿರುವವು.  ಇಂಥದರಲ್ಲಿ ಡಾ|| ದಾತಾರರು ಮಾಡಿ ತೋರಿಸಿದ್ದು ಒಂದು ಪವಾಡವೇ ಸರಿ.  ತಾನೂ ಡಾಕ್ಟರರಪರೀಕ್ಷೆ ಆದಮೇಲೆ ಮುಂದಿನವರುಷ ಇವರ ಮೇಲ್ಪಂಕ್ತಿಯನ್ನು ಅನು ಸರಿಸಿ ಒಂದು ಹಳ್ಳಿಯಲ್ಲಿ ಕಾಲೂರಬೇಕು, ಸ್ವಾರ್ಥಪರಾರ್ಥಗಳೆರಡನ್ನೂ ಸಾಧಿಸ ಬೇಕು ಎಂದು ಅಮೃತನು ತನ್ನಷ್ಟಕ್ಕೆ ಅಂದುಕೊಂಡನು. ಹೀಗೆ ಮಾಡುವ ದಾದರೆ ಸಿರೂರಲ್ಲಿಯೇ ಯಾಕೆ ಇರಕೂಡದು ಎಂಬ ವಿಚಾರ ಹೊಳೆಯಿತು. ಕೂಡಲೆ ಮನಸ್ಸು ಅದಕ್ಕೆ ಒಪ್ಪಿಗೆಕೊಟ್ಟಿತು. ಒಂದು ಚಿತ್ರವನ್ನು ನೋಡುತ್ತ

ನಿಂತಿರುತ್ತಲೆ ಅವನು ಹಗಲುಗನಸಿನ ರಾಜ್ಯದಲ್ಲಿ ಹೊಕ್ಕನು. ಆ ಚಿತ್ರದ ಕನ್ನಡಿಯಲ್ಲಿ ತಾನು ತನ್ನ ಪ್ರೀತಿಯ ಸಿರೂರಲ್ಲಿ ಮುಂದೆ ಕಟ್ಟಿಸಬಹುದಾದ ದವಾಖಾನೆಯನ್ನೂ ಮನೆಯನ್ನೂ ಕಂಡನು. ಜನರ ಶುಶ್ರೂಷೆಗಾಗಿ ಸುತ್ತಾಡಿದನು. ಎಲ್ಲರ ಮೆಚ್ಚಿಗೆಯ ನುಡಿಗಳನ್ನು ಕೇಳಿ ಹಿಗ್ಗಿದನು.

ಇಷ್ಟರಲ್ಲಿ ಡಾಕ್ಟರರು ಸಾಯಕಲ್ಲಿಳಿದು ಮನೆಯೊಳಗೆ ಬೂಟಿನ ಸಪ್ಪಳ ಮಾಡುತ್ತ ಬಂದರು. ಅಮೃತನ ಕನಸಿನ ಮನೆಯನ್ನು ಬೂಟಿನ ಬುಡದಲ್ಲಿ ತುಳಿದು ಕೆಡವಿದಂತಾಯಿತು ! ಅವನು ಅದನ್ನು ತೋರಗೊಡದೆ ಮುಗುಳುನಗೆ ನಕ್ಕನು. 'ಏನು ಡಾಕ್ಟರ, ಇಷ್ಟರಲ್ಲಿ ಎಲ್ಲಿಗರೆ ಹೋಗಿದ್ದಿರಿ ಈ ರಣರಣ ಬಿಸಿಲಿನಲ್ಲಿ ? ' ಎಂದು ಕೇಳಿದನು. ಡಾಕ್ಟರರು ಖುರ್ಚಿಯಲ್ಲಿ ಕುಳಿತು ಬೂಟನ್ನು ಉಜ್ಜುತ್ತ 'ಎಲ್ಲಿಗೇನು? ಬರಗಾಲವ್ವನ ಪೂಜಾಕ್ಕೆ. ದಿನಾ ನಡದದ್ದೇ ಇದು ' ಎಂದರು.

ಅಮೃತನು ಆಶ್ಚರ್ಯದ ಮುದ್ರೆಯಿಂದ 'ಬರಗಾಲವ್ವ? ಇದಾವ ದೇವರ ಹೊಸ ಗುಡಿಯನ್ನು ಕಟ್ಟಿಸಿದ್ದೀರ ಡಾಕ್ಟರ ? ' ಎಂದನು.

'ನಾವೇನು ಕಟ್ಟಿಸಿಲ್ಲ ಸಿರೂರ. ತಾನೇ ಕಟ್ಟಿಸಿಕೊಂಡು ಬಿಟ್ಟಾಳೆ ನಮ್ಮ ಜಿಲ್ಲೆಯ ಊರೂರಲ್ಲಿ ಈ ಮಾರಾಯಿತಿ. ಇನ್ನು ಮೇಲೆ ದ್ಯಾಮವ್ವ-ದುರ್ಗವ್ವನ್ನ ಯಾರು ಕೇಳತಾರೆ ? '

ಅಮೃತನಿಗೆ ಅರ್ಥವಾಯಿತು. ಆದರೆ ಇಷ್ಟಾದರೂ ಹೋದದ್ದೆಲ್ಲಿಗೆ ತಿಳಿಯಲಿಲ್ಲ. 'ಇಂಥ ಬಿಸಿಲಲ್ಲಿ ಸಹ ನಿಮಗೆ ವಿಶ್ರಾಂತಿ ಕೊಡಬಾರದೇ ಈ ನಿಮ್ಮ ದೇವಿ ? ಎಲ್ಲಿಗಾದರೂ ಕರೆದಿದ್ದಳು ?'

'ಬಿಸಿಲಲ್ಲಿಯೇ ತನಗೆ ಪೂಜೆ ಕಟ್ಟಬೇಕೆಂದು ಆಕೆಯ ಹಟವಿರುವುದು. ನೋಡಿರಿ, ನೀವು ಊಟವಾದ ಮೇಲೆ ಕಾಲು ಚಾಚಿ ಮಲಗಿದ್ದಿರಲ್ಲ, ಅಷ್ಟರಲ್ಲಿ ಒಬ್ಬ ಮನುಷ್ಯ ಸಾಯಕಲ್ಲ ಮೇಲೆ ಓಡುತ್ತ ಬಂದ. ಇಲ್ಲಿಯೇ ಹತ್ತಿರದಲ್ಲಿ ಹಲಕುರಿಕಿ ರಸ್ತೆಯ ಮೇಲೆ ಬರಗಾಲ ಕಾಮಗಾರಿ ನಡೆದಿದೆ. ಅಲ್ಲಿ ಕೂಲಿ ಕೆಲಸಕ್ಕೆ ಬಂದ ಒಂದು ಇಡೀ ಕುಟುಂಬಕ್ಕೆ ಮಾರಿಕಾ ಜೋರಾಗಿ ಬಂದಿದೆ. ನಿನ್ನೆ ರಾತ್ರಿ ಸುರುವಾದ ಹೊರಕಡಿಗೆ–ಕಾರಿಕೆ ಇನ್ನೂ ನಿಂತಿಲ್ಲ. ಈ ಸುದ್ದಿ ತಿಳಿದ ಕೂಡಲೇ ಸಾಯಕಲ್ಲೇರಿ ಔಷಧದ ಚೀಲ ತಗೊಂಡು ಹೊರಟೆ. ಬಿಸಿಲ ತಾಪದಿಂದ ಬೆವರು ಸುರಿಸುತ್ತ ಅಲ್ಲಿಗೆ ಹೋದೆ. ಆ ಕುಟುಂಬದ ಸ್ಥಿತಿ ನೋಡಲಾಸಲ್ಲ. ಗಂಡ, ಹೆಂಡತಿ, ಮೂರು ಮಕ್ಕಳು ಹೆಣಕ್ಕಿಂತ ಕಡೆಯಾಗಿ ಬೇನೆಯ ಹೊಡ

ತಕ್ಕೆ ಸಿಕ್ಕು ಹಣ್ಣಾಗಿ ಒಂದು ಗಿಡದ ಬುಡದಲ್ಲಿ ಹೊರಳಾಡುತ್ತಿರುವರು. ಆಸರಿಗೆ ಒಂದುಗುಡಿಸಲಿಲ್ಲ, ಹಾಸಿಕೊಳ್ಳಲು ಕಂಬಳಿಯಿಲ್ಲ. ಮಾರಿಕಾ ಬಂದೊಡನೆ ಎಲ್ಲರಿಗಾಗಿದ್ದ ಛಪ್ಪರದಿಂದ ಅವರನ್ನು ಹೊರಗೆ ಹಾಕಿದ್ದಾರೆ. ಯಾರೂ ಕೇಳು ವವರಿಲ್ಲ. ಎಲ್ಲರೂ ತಂತಮ್ಮ ಕೆಲಸದಲ್ಲಿ ಹೋದ ಕೂಡಲೇ ನಾನು ವೈದ್ಯ ಕೀಯ ಉಪಚಾರಮಾಡಿ ಒಂದು ಬಂಡಿಯಲ್ಲಿ ಮಲಗಿಸಿ ಅವರನ್ನು ಹಲಕುರಿಕೆಗೆ ಕರೆದೊಯ್ದು ಒಂದು ಗುಡಿಯಲ್ಲಿ ಇರುವ ವ್ಯವಸ್ಥೆ ಮಾಡಿ ಬಂದೆ. ಮತ್ತೆ ಸಂಜೆ ಯಲ್ಲಿ ಹೋಗಿ ಅವರನ್ನು ನೋಡಿಕೊಂಡು ಬರಬೇಕು.'

'ಅವರೇನು ಬದುಕುವಂತಿರುವರೋ?' ಅಮೃತ ಕೇಳಿದ.

'ಜೋಯಿಸಗೆ ಕೇಳುವ ಪ್ರಶ್ನೆ ಡಾಕ್ಟರರಿಗೆ ಕೇಳಿದರೆ ಹೇಗೆ ಸಿರೂರ? ನಾನಾದರೂ ಹೇಗೆ ಹೇಳಲಿ? ಮಾಡುವಷ್ಟು ಮಾಡಬೇಕು. ಅದು ನಮ್ಮ ಕರ್ತವ್ಯ. ಇಷ್ಟು ಮೀರಿ ಹೋದರೆ ಪಾರಾದರೆಂದೇ ಅನಬೇಕು. ಬಿಸಿಲಲ್ಲಿ ಹೆಣ ಬೀಳ ದುಡಿದು ಸುಡಗಾಡ ಸಜ್ಜೆಗೂಳು ತಿಂದು ಬದುಕುವುದರಲ್ಲಿ ಆದರೂ ಏನು ಸುಖವಿದೆ?'

ಅಮೃತನು ಆ ಬಡಕುಟುಂಬದ ಸ್ಥಿತಿಯನ್ನು ನೆನೆದು ಏನೇನೋ ಚಿತ್ರ ಕಟ್ಟಿ 'ಪಾಪ!' ಎಂದು ಉದ್ಗಾರ ತೆಗೆದನು.

'ಪಾಪ! ಸಿರೂರ, ಪಾಪವಿದ್ದಲ್ಲೇ ಜಗತ್ತು ನಡೆದಿರುತ್ತದೆ. ನಿಮ್ಮಂತೆ 'ಪಾಪ' ಎಂದು ಕೆಲವರು ಎದೆ ಕರಗುವುದಕ್ಕೆ ವಿಷಯಬೇಕಲ್ಲವೇ? ಹೋಗಲಿ. ನೀವು ೧-೨ ದಿನದಲ್ಲಿ ಅಲ್ಲಿಗೆ ಹೋಗಿ ಆ ಕೂಲಿಕಾರರ ದೃಶ್ಯವನ್ನು ನೋಡ ಬೇಕು.'

ಡಾಕ್ಟರರ ಈ ಮಾತಿಗೆ ಅಮೃತನು 'ಹೌದು, ತಪ್ಪದೆ ಹೋಗಬೇಕು. ನೀವೂ ನನ್ನ ಕೂಡ ಬರಬೇಕು!' ಎಂದು ಆ ಮಾತು ಮುಗಿಸಿದನು.

ಡಾಕ್ಟರರು ಕೆಲಹೊತ್ತು ತಮ್ಮರೋಗಿಗಳ ಭೆಟ್ಟಿ ಹಾಗೂ ಶುಶ್ರೂಷೆಯಲ್ಲಿ ತೊಡಗಿದರು.

ಸ್ವಲ್ಪ ಬಿಸಿಲು ತಗ್ಗಿದ ಮೇಲೆ ಉಪಾಧ್ಯೆ ಅಲ್ಲಿಗೆ ಬಂದರು. ಅವರೊಡನೆ ಬರಗಾಲ ಪರಿಹಾರಕ್ಕೆಂದು ಚರ್ಕಾಸಂಘದ ಪರವಾಗಿ ನಡೆದ ಸ್ತುತ್ಯವಾದ ಕೆಲಸದ ಬಗ್ಗೆ ಮಾತುಕತೆಯಾಯಿತು. ಅಮೃತನಿಗೆ ಅಲ್ಲಿಯ ಕಾರ್ಯಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಅವರು ತಿಳಿಸಿದರು. ಕೆರೂರಿನ ಸುತ್ತು ಮುತ್ತಿನ ಹಳ್ಳಿಗಳಲ್ಲಿ ೮೦೦ ಕೈರಾಟಿಗಳನ್ನು ಪುಕ್ಕಟೆಯಾಗಿ ಹಂಚಿ ನೂಲು

ತೆಗೆಯಲು ಹಚ್ಚಿದೆ. ನೂಲುವವರೆಲ್ಲ ಹೆಚ್ಚಾಗಿ ಹೆಣ್ಣು ಮಕ್ಕಳು, ಅದರಲ್ಲಿಯೂ ಮುದಕರಿದ್ದಾರೆ. ಅವರಿಗೆ ದಿನಕ್ಕೆ ೪ ಆಣೆಯವರೆಗೆ ಕೂಲಿ ದೊರೆಯುತ್ತದೆ. ಮನೆಯಲ್ಲಿ ಕೂತಲ್ಲಿಯೇ ನೂತು ಹೊಟ್ಟೆ ಹೊರೆಯಲು ರಾಟೆಗಿಂತ ಇನ್ನೊಂದು ಸಾಧನವಿಲ್ಲ. ಜಿಲ್ಹೆಯಲ್ಲಿ ಚಡಚಣ ಮುಂತಾದ ಬೇರೆ ಬೇರೆ ಸ್ಥಳಗಳಲ್ಲಿ ಈ ಉಪಕ್ರಮವು ನಡೆದಿದೆ. ಉಪಾಧ್ಯೆಯವರು ಈ ರೀತಿ ಎಲ್ಲ ಹೇಳುತ್ತಿರಲು ಅಮೃತ ನಡುವೆ ಕೇಳಿದನು: 'ನೂಲುವವರಿಗೆಲ್ಲಸರಿಯಾಯಿತು. ಆದರೆ ನಿಮಗೂ ಅನುಭವ ಬಂದಿರಬೇಕು. ಅವರು ನೂತ ನೂಲು ಯಾತಕ್ಕೆ ಬರುವದು ? ಅವರೆಲ್ಲ ಹೊಸಬರೇ ಇರಬೇಕಲ್ಲವೇ ?'

'ಬಹಳ ಜನ ಹೊಸಬರೆಂಬುದು ಸುಳ್ಳಲ್ಲ. ಎಂಥಾ ಹೊಸಬರಿದ್ದರೂ ನೂಲಿನ ವಿದ್ಯೆ ಎಂಟು ಹತ್ತು ದಿನದಲ್ಲಿ ತಕ್ಕಮಟ್ಟಿಗೆ ಬರುತ್ತದೆ.ಅದರಲ್ಲಿ ಎಷ್ಟೋ ಹೆಂಗಸರು ಹಿಂದೊಮ್ಮೆ ನೂಲುವದರಲ್ಲಿ ನುರಿತವರಾಗಿ ಪರದೇಶಿ ಬಟ್ಟೆಯ ಪರ ಚಕ್ರ ಸುರುವಾದಂದಿನಿಂದ ಕೆಲವು ವರ್ಷ ಬಿಟ್ಟಿದ್ದರು ಮಾತ್ರ. ಈಗ ಮತ್ತೆ ಕೈ ಹಚ್ಚಲಾಗಿ ಕೆಲವರು ಜಿನುಜಿನುಗಾದ ನಾಲ್ವತ್ತು ನಂಬರಿನ ನೂಲು ತೆಗೆಯ ಬಲ್ಲವರಾಗಿದ್ದಾರೆ'

'ಹೀಗೇನು? ಒಂದು ಸ್ವಲ್ಪ ಊರಲ್ಲಿ ಹೋಗಿ ನೋಡಿಬರೋಣವೇ ?' ಅಮೃತ ಕೇಳಿದನು.

'ಅವಶ್ಯನಡೆಯಿರಿ. ನೀವು ಮೇಲ್ವಿಚಾರಕರಾಗಿ ಬಂದವರು, ನೋಡದಿದ್ದರೆ ಹೇಗೆ ? ಈಗ ಸಂದಿಗೊಂದಿಗಳಲ್ಲಿ ನಿಮಗೆ ಕೇಳುವದು ರಾಟೆಯ ಸಂಗೀತವೇ.'

ಇಬ್ಬರೂ ಡಾಕ್ಟರರಿಗೆ ಹೇಳಿ ಹೊರಟರು.

'ಒಳ್ಳೇದು. ನೀವು ಹೋಗಿ ಬರುವುದರಲ್ಲಿ ನಾ ಹಲಕುರಕಿಗೆ ಹೋಗಿ ಆ ಕಾಲರಾ ರೋಗಿಗಳನ್ನು ನೋಡಿಕೊಂಡು ಬರತೇನೆ' ಎಂದು ಡಾಕ್ಟರರು ಕಾಲ ಚಕ್ರವನ್ನೇರಿದರು.

ಇತ್ತ ಇವರಿಬ್ಬರು ಕೆರೂರಿನ ಒಳಭಾಗದಲ್ಲಿ ನಡೆದರು. ಉಪಾಧ್ಯೆಯವರು ಬಣ್ಣಿಸಿದಂತೆ ರಾಟೆಯ ನಾದ ಎಲ್ಲ ಕಡೆಗೆ ಕೇಳಿಬರುತ್ತಿತ್ತು. ಮೂರು ನಾಲ್ಕು ಮನೆಗಳಲ್ಲಿ ಹೊಕ್ಕು ಅಮೃತ ನೋಡುತ್ತ ನಿಂತನು. ಯಾರೋ ಬಂದರೆಂದು ನೂಲುವ ಹೆಂಗಸರು ರಾಟೆಬಿಟ್ಟು ಎದ್ದು ನಿಂತರು. ನೂಲುವುದನ್ನೇ ನೋಡಲಿಕ್ಕೆ ಬಂದಿರುವವರೆಂದು ಉಪಾಧ್ಯೆ ಮನವೊಲಿಸಿದ ಮೇಲೆ ನೂತು ತೋರಿಸಿದರು. ನೂಲುವಿಕೆಯ ವೇಗ, ಎಳೆಯ ಹುರಿಕಟ್ಟು, ಸಮವಾದ ಜಿನುಗು ಅಮೃತನಿಗೆ

ನಲಿವನ್ನು ಉಂಟುಮಾಡಿದವು. ಒತ್ತಟ್ಟಿಗೆ ತನ್ನ ಗುಡಿಸಲ ಮುಂದೆ ಕುಳಿತು ಒಬ್ಬ ನರೆಗೂದಲಿನ ಮುದುಕಿ ಬಹಳ ಸೊಗಸಾಗಿ ನೂಲುತ್ತ ತನ್ನಷ್ಟಕ್ಕೆ ಏನೇನೋ ಗುಣಗುಣಿಸುತ್ತಲಿದ್ದಳು. ಅವಳ ನೂಲಿನಷ್ಟೇ ಅವಳ ಮಾತು ಸೊಗಸಾಗಿತ್ತು. ಇಬ್ಬರೂ ಅವಳನ್ನು ಮಾತಾಡಿಸುತ್ತ ನಿಂತರು, 'ಯಾಕ ಮುದಕಿ, ನೀ ಒಬ್ಬಾಕೇ ಕಾಣತೀ ಮನ್ಯಾಗ?' ಅಮೃತ ಕೇಳಿದನು.

'ಯಾಕೆಪ್ಪ, ರಾಟಲೊಂದ ಐತೆಲ್ಲ ನನ್ನಬಾಗ್ಯದಲಚ್ಮಿ— ಈ ಮಾಕ್ಠಾಯ ತಂಪು ಕೊಟ್ಟ. ಇವನ ಹೊಟ್ಟೆ ತಣ್ಣಗಾಗಲಿ!' ಎಂದು ಉಪಾಧ್ಯೆಯು ಕಡೆಗೆ ಕೃತಜ್ಞತಾ ದೃಷ್ಟಿಯಿಂದ ನೋಡಿದಳು.

'ನಿನ್ನ ಮಕ್ಕಳುಮರಿ ಯಾರಿಲ್ಲೇನು?'

'ಇದ್ದರೋ ಯಪ್ಪ! ಕಂಬದಂತ ಮಗ ಬಾಳಿಕಂಬದಂಗ ಕಡಕೊಂಡು ಬಿದ್ದು ಸಿವನ ಪಂತ್ಯಾಕ ಹೋದ!'

ಅವಳ ಕಣ್ಣಲ್ಲಿ ಉರುಳಲೊಲ್ಲದ ಹನಿಯೂರಿತು. ಸಂಜೆ-ಬಿಸಿಲಿನ ಕಿರಣ ಬಂದು ಅದರಲ್ಲಿ ಸೇರಿ ಅದರ ಹೊಗರು ಹೆಚ್ಚಿಸಿತು, ಕನಿಕರವನ್ನೂ ಹೆಚ್ಚಿಸಿತು. ಅವಳಿಗೆ ಹೆಚ್ಚು ಮಾತಾಡುವದಾಗಲಿಲ್ಲ. ನೆನವಿನ ತೆರೆಯ ಮೇಲೆ ಭೀಕರ ಚಿತ್ರಗಳು ಮೂಡಹತ್ತಿರಬೇಕು. ನೂಲುವ ಕೈ ನಡುಗಹತ್ತಿತು. ಉಪಾಧ್ಯೆ ತಾವೇ ಹೇಳಿದರು: 'ಆ ಮುದುಕಿಯ ಮಗ ಹೊಟ್ಟೆಗಿಲ್ಲದೆ ದಗದವಿಲ್ಲದೆ ಹಸಿದು ಬಳಲಿ ಒಂದು ದಿನ ರಾತ್ರಿ ತಾಯಿಗೆ ಹೇಳದೆ ಊರಹೊರಗಿನ ಗಿಡಕ್ಕೆ ಹೋಗಿ ಉರುಲು ಹಾಕಿಕೊಂಡು ಸತ್ತುಹೋದ.ಅವನ ಹಿಂದೆ ಆರೇಳುಮಕ್ಕಳನ್ನು ಕಳೆದುಕೊಂಡು ಅವನನ್ನೇ ಕಕುಲಾತಿಯಿಂದ ಜೋಪಾನ ಮಾಡಿ ನಂಬಿದ್ದ ಮುದುಕಿಗೆ ನಡು ನೀರಲ್ಲಿ ನಾವೆ ಮುಳುಗಿದಂತಾಯಿತು. ಆ ದುಃಖದ ಗಾಯವಿನ್ನೂ ಮಾದಿಲ್ಲ. ಯಾರಾದರೂ ವಿಷಯ ತೆಗೆದರಾಯಿತು ಅವಳ ಕಸಿವಿಸಿ ಹೆಚ್ಚುತ್ತದೆ, ಮಾತು ನಿಲ್ಲುತ್ತದೆ. ಅವಳ ಗಾಸಿಗೊಂಡ ಜೀವ ಆಗ ಕಂಬನಿಯ ಮೂಲಕವೇ ಮಾತಾಡುವುದು. ಇದು ತಿಳಿಯಲು ತಾನೇಕೆ ಆ ಸುದ್ದಿ ತೆಗೆದೆನೆಂದು ಅಮೃತ ಮಿಡುಕಿದನು. ದುಃಖದ ಬಗ್ಗೆ ಮರುಕವೂ ದುಃಖಕ್ಕೆ ಕಾರಣವಾಗುತ್ತದೆ ಎಂದವನಿಗೆ ತೋರಿ ಕೆಲಹೊತ್ತು ಸುಮ್ಮಗಾದನು. ಮುದುಕಿಯ ಕಳವಳ ಸ್ವಲ್ಪ ಕಡಿಮೆ ಆಯಿತು. ಮತ್ತೆ ಮೊದಲಿನಂತೆ ನೂಲಹತ್ತಿದಳು, ಮಾತಾಡಹತ್ತಿದಳು. ಉಪಾಧ್ಯೆಯವರನ್ನೂ ಡಾ. ದಾತಾರರನ್ನೂ ತಿರುತಿರುಗಿ ಬಾಯ್ತುಂಬ ಹೊಗಳಿದಳು. ಕೆರೂರಿಗೆ ಇವರೇ ತಾಯಿ-ತಂದೆ ಇದ್ದಂತೆ ಎಂದು ಹೇಳಿದಳು.

'ಇದರಿಂದ ಹೊಟ್ಟೆ ತುಂಬತದ ?' ಅಮೃತ ಕೇಳಿದನು.

'ತುಂಬದ ಏನು ಮಾಡತೈತಿ ? ಅದೇನು ಹಾಕಿದಟು ತಿಂದೇನಂತತಿ. ಸಿವ ಒಯ್ಯುತಕ್ಕ ಜೀವ ಹಿಡಿಯುವಟು ಕೊಡತಾಳ ಸಾಕು ಈ ತಾಯಿ.' ಎಂದು ಭಕ್ತಿಯಿಂದ ರಾಟೆಯ ಕಡೆ ನೂಲುತ್ತಲೆ ನೋಡಿ ಕಣ್ಣೋಟದಿಂದಲೇ ವಂದಿಸಿ ದಳು. 'ಎಪ್ಪ ಏನ ಹೇಳಲಿ. ದನಕರ ಎಲ್ಲ ಹ್ವಾದು ಹಳ್ಳಗೂಡಿ. ಈ ಗೋಪವ್ವ ಒಬ್ಬಾಕಿ ನಮುಗ ಇದ್ದಾಳ. ಈಕೀದ ಹಿಂಗ ಥಾರಿ ತಗದಕ್ಯಾಸ ಅದರ ಮ್ಯಾಗ ಬಾಳವಿ ಮಾಡೂದು, ಆತು !' ಎಂದು ಕದರಿನಿಂದ ಎಳೆಯನ್ನು ಮೇಲೆ ಜಗ್ಗಿ ಜಗ್ಗಿ ಹುರಿಹಾಕುತ್ತ ತೋರಿಸಿದಳು. ಅಮೃತನಿಗೆ ರಾಟೆಯನ್ನು ಗೋಮಾತೆಗೆ ಸಹಜವಾದ ದೇಸಿಯಲ್ಲಿ ಆ ಮುದುಕಿ ಹೋಲಿಸಿದ್ದು ಸೋಜಿಗವಾಗಿ ತೋರಿತು. ಆ ಕಲ್ಪನೆ ರಮ್ಯವಾಗಿದ್ದಂತೆ ಕರುಣಾಮಯವಾಗಿತ್ತು. ಜೀವನದ ಪ್ರತಿನಿತ್ಯದ ಅನುಭವದ ಅಗ್ನಿಯಲ್ಲಿ ಎದ್ದು ಬಂದ ಕಾವ್ಯದೇವತೆಯಂತೆ ಅದು ಅಷ್ಟು ಸಹಜ ವಾಗಿ ಹೊರಹೊಮ್ಮಿತು. ಜನಪದಸಾಹಿತ್ಯದ ಅಜ್ಞಾತ ಕವಯಿತ್ರಿಯರೆಲ್ಲ ಇಂಥ ಹೆಂಗಸರೇ ಇರಬೇಕೆಂದು ಅವನು ಭಾವಿಸಿದನು.

ಅಲ್ಲಿಂದ ಇಬ್ಬರೂ ಮುಂದೆ ಹೊರಟರು. ಊರ ಹೊರಗೆ ಮೋಟಾರಿನ ರಸ್ತೆಗೆ ಬಂದರು. ರಸ್ತೆಯ ಆಚೆ ಕೆಲವು ಮನೆಗಳು ಕಂಡವು. 'ಅದೇನು' ಎಂದು ಅಮೃತ ಕೇಳಿದನು.

ಉಪಾಧ್ಯೆ ಹೇಳಿದರು : 'ಅದು ಹೊಸ ಪ್ಯಾಟೆ. ಇಲ್ಲಿಯ ನೇಕಾರರು ತಮ್ಮದೊಂದು ಸ್ವತಂತ್ರ ವಸತಿಯನ್ನು ಅಲ್ಲಿ ಮಾಡಿಕೊಂಡಿರತಾರೆ !'

'ಓಹೋ. ಅವರ ಪಾಕಿಸ್ತಾನವೊಂದು ಕೆರೂರಲ್ಲಿ ಸ್ಥಾಪನೆಯಾಗಿದೆ ಅನಬಾರದೇ ?' ಅಮೃತನು ನಗೆಯಾಡಿದನು.

'ಹಿಂದುಸ್ತಾನದಲ್ಲಿ ಪಾಕಿಸ್ತಾನವಿರಲೇಬೇಕಲ್ಲ !'

'ಹೌದು ಹೌದು, ಊರಿದ್ದಲ್ಲಿ ಹೊಲಗೇರಿಯೆಂಬಂತೆ ಇದೊಂದು ಹೊಸ ಗಾದೆ ಮಾತು ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿದಂತಾಯಿತು.'

'ಅಲ್ಲಿಗೆ ಹೋಗಿ ತಿರುಗಾಡಿ ಬರೋಣ' ಎಂದು ಇಬ್ಬರೂ ಅತ್ತ ನಡೆ ದರು. ನೇಕಾರರು ಸಾಮಾನ್ಯವಾಗಿ ಒಳ್ಳೆಯ ಸ್ಥಿತಿಯಲ್ಲಿದ್ದವರು. ಅವರಲ್ಲಿ ಕೆಲವರಂತೂ ಭಾರೀ ಶ್ರೀಮಂತರಾಗಿದ್ದಾರೆ. ಆದರೆ ಈ ಬರಗಾಲದಲ್ಲಿ ಅವರ ಪಾಡನ್ನು ನೋಡಲಾಗದು. ವಿಜಾಪುರ ಜಿಲ್ಹೆಯಲ್ಲಿ ಸುಮಾರು ಒಂದು ಲಕ್ಷ ದಷ್ಟು ನೇಕಾರರಿದ್ದಾರೆ. ಬದಾಮಿ ಬಾಗಿಲಕೋಟೆ ತಾಲೂಕಿನ ಮುಖ್ಯ ಊರು

ಗಳಲ್ಲಿ ಅರ್ಧಕ್ಕೆ ಮೇಲೆ ಅವರ ಸಂಖ್ಯೆಯಿದೆ. ಆದರೆ ಗಿರಣಿಗಳೊಡನೆ ಸ್ಪರ್ಧೆಯಲ್ಲಿ ಮೊದಲೇ ಸಾಕುಬೇಕಾದವರು ದುಷ್ಕಾಳದ ಗಾಣಕ್ಕೆ ಸಿಕ್ಕು ಇನ್ನಿಷ್ಟು ಹತಾಶ ರಾಗಿದ್ದಾರೆ. ನೂಲಿನ ಹಾಗೂ ಬಣ್ಣದ ಧಾರಣೆ ಏರಿದ ಪ್ರಮಾಣದಲ್ಲಿ ಅವರು ನೆಯ್ದ ಬಟ್ಟೆಯ ಧಾರಣೆ ಏರಿರುವದಿಲ್ಲ. ಗಿರಣಿಯ ಬಟ್ಟೆ ಅಗ್ಗವಿರುವಾಗ ನೇಕಾ ರರು ಬದುಕಲಿ ಎಂಬ ಪರೋಪಕಾರಬುದ್ಧಿಯಿಂದ ಯಾರು ಅವರ ಅರಿವೆಗಳನ್ನು ಕೊಳ್ಳುತ್ತಾರೆ ? ಒಂದು ಕಾಲಕ್ಕೆ ಹೆಂಗಸರಿಗೆ ಅಚ್ಚುಮೆಚ್ಚಾದ ಇಲಕಲ್ಲ ಸೀರೆ, ಗುಳೇದಗುಡ್ಡದ ಖಣಗಳು ಹೊಸಕಾಲದ ಪತ್ತಲ-ಪ್ರೋಲಕಗಳ ಮುಂದೆ ಕೈ ಯೂರಿ ಕೂತಿವೆ.ವ್ಯಾಪಾರ ಕಟ್ಟಾಗಲು ನೇಕಾರಿಕೆಯ ಕೂಲಿಯನ್ನು ವ್ಯಾಪಾರ ಸ್ಥರು ಕಡಿಮೆ ಮಾಡಿದ್ದಾರೆ. ಹಿಂದೆ ವಾರಕ್ಕೆ ೫ರೂ. ಕನಿಷ್ಟ ದೊರೆಯುತ್ತಿದ್ದರೆ ಈಗ ೧ ರೂ, ಯಿಂದ ೨ ರೂ. ವರೆಗೆ ಸಿಗಬೇಕಾದರೆ ರಗಡಾಗುತ್ತದೆ. ಇಷ್ಟರಲ್ಲಿ ಅವರ ಪ್ರಪಂಚ ಹೇಗೆ ಸಾಗಬೇಕು ? ಹೀಗಾಗಿ ಎಷ್ಟೋ ಕಡೆಗೆ ಅರ್ಧದಷ್ಟು ಮಗ್ಗಗಳು ಬಂದುಬಿದ್ದಿರುತ್ತವೆ; ಮಗ್ಗದ ಮನೆಗಳಲ್ಲಿ ಜೇಡರ ಬಲೆಗಳು ಹೆಣೆದು ಕೊಂಡು ತಮ್ಮ ಸ್ವಂತ ನೇಕಾರಿಕೆಯ ಕೈವಾಡವನ್ನು ತೋರಿಸುತ್ತವೆ ! ಅವುಗಳ ವ್ಯಾಪಾರಕ್ಕೆಂದುಓಡಾಡುವಂತೆ ಜೊಂಡಿಗಗಳು ಬೇಕಾದಷ್ಟುಅಲ್ಲಿ ತಿರುಗುತ್ತವೆ! ಇಂಥಪರಿಸ್ಥಿತಿಯಲ್ಲಿ ಚರ್ಕಾಸಂಘದವರೂ ಬರಗಾಲಸಮಿತಿಯವರೂ ನೇಕಾರರಿಗೆ ಒದಗಿಸಿದ ಪರಿಹಾರವನ್ನು ಉಪಾಧ್ಯೆ ಅಮೃತನಿಗೆ ಬಣ್ಣಿಸುತ್ತ ಹೊಸಪೇಟೆಯಲ್ಲಿ ಅವನನ್ನು ಕರೆದುಕೊಂಡು ಹೋದರು.ಕೆಲವರ ಮನೆಗಳಲ್ಲಿ ಹೊಕ್ಕು ಅಮೃತನು ಅವರ ಸ್ಥಿತಿಗತಿಗಳನ್ನು ನೋಡಿದನು. ನೂಲುವದರಿಂದ ಕೆಲವರು,ಆ ನೂಲನ್ನು ನೇಯುವದರಿಂದ ಕೆಲವರು ಹೊಟ್ಟೆಹೊರೆಯುತ್ತಿದ್ದಾರೆ.ನೇಗೆಯುವರಿಗೆ ವಾರಕ್ಕೆ ೪ ರೂ.ವರೆಗೆ ಕೂಲಿ ದೊರೆಯುತ್ತಿರುವುದು. ಗಿರಣಿನೂಲನ್ನು ಕೆಲವು ಗಿರಣಿಯ ಮಾಲಕರಿಂದ ದೊರಕಿಸಿ ನೇಕಾರರಿಗೆ ಪೇಟೆಯ ದರಕ್ಕೆಕೊಟ್ಟು ಅವರಿಗೆ ಯೋಗ್ಯ ಪ್ರತಿಫಲ ದೊರೆಯುವ ವ್ಯವಸ್ಥೆಯನ್ನೂ ಕೆಲಮಟ್ಟಿಗೆ ಮಾಡಲಾಗಿದೆ. ಎಲ್ಲ ನೋಡಿ ಆದಮೇಲೆ ತಿರುಗಿ ಅಮೃತ, ಉಪಾಧ್ಯೆ ರಸ್ತೆಗೆ ಬಂದರು. ಅಷ್ಟರಲ್ಲಿ ಕತ್ತಲೆ ಮುಸುಕತೊಡಗಿತ್ತು.ಹೆಲಕುರಕಿಗೆ ಹೋಗಿದ್ದ ಡಾಕ್ಟರರು ಅದೇ ಬಂದು ಸಾಯಕಲ್ಲಿಳಿದು ಅಲ್ಲಿ ನಿಂತಿದ್ದ ಮಿತ್ರರನ್ನು ಕೂಡಿದರು. ಹಳ್ಳಿಯ ಅನೇಕ ಬಂಧುಗಳು ಸಹಜ ಆದರದಿಂದ ಡಾಕ್ಟರರಿಗೆ ನಮಸ್ಕಾರ ಮಾಡಿದರು. ಅವರು ಅದನ್ನು ಸ್ವೀಕರಿಸುತ್ತ ತಾವೂ ನಮಸ್ಕಾರ ಮಾಡಿದರು.

'ರೋಗಿಗಳಿಗೆ ಈಗ ಹೇಗಿದೆ ?' ಅಮೃತ ಕೇಳಿದನು.

'ಅವರೆಲ್ಲರೂ ಬದುಕುವರು!' ಎಂದು ಡಾಕ್ಟರರು ಸಮಾಧಾನದಿಂದ ಹೇಳಿದರು, ತಾವು ಮಧ್ಯಾಹ್ನ ಹೋದಾಗ ನಿರಾಶೆಯಿತ್ತು. ಈಗ ಔಷಧೋಪ ಚಾರದಿಂದ ಬೇನೆಯ ಜೋರು ಕಡಿಮೆಯಾಗಿರುವುದೆಂದೂ ಇನ್ನಿಷ್ಟು ಕಾಳಜಿ ತಗೊಂಡರೆ ಅವರಿಗೆ ಗುಣವಾಗಬಹುದೆಂದೂ ತಿಳಿಸಿದರು. ರಾತ್ರಿ ಅವರನ್ನು ನೋಡಿಕೊಳ್ಳಲು ಕೆಲವು ಸ್ವಯಂಸೇವಕರನ್ನಿರಿಸಿ ಎಲ್ಲ ಏರ್ಪಾಡು ಮಾಡಿ ಬಂದಿರುವುದಾಗಿಯೂ ಅರುಹಿದರು.

'ನಿಮ್ಮ ಕೈಗುಣವೇ ಹಾಗಿದೆ!' ಎಂದು ಉಪಾಧ್ಯೆ ವರ್ಣಿಸಿದರು.

'ಯಾಕೆ ? ನಮ್ಮ ಕಾಲ್ಗುಣವಲ್ಲವೇನು? ಈವತ್ತು ಅವರ ಮನೆಗೆ ನಾವು ಬಂದದ್ದರಿಂದ ಹೀಗಾಯಿತು.' ಎಂದು ಅಮೃತ ಅಂದನು.

ಡಾಕ್ಟರರು ನಗುತ್ತ ಆಡಿದರು : 'ಹೌದು, ಸಿರೂರ, ನಿಮ್ಮ ಕಾಲ್ಗುಣ ವೆಂಬುದೇನು ಸುಳ್ಳಲ್ಲ. ಆದರಿಂದಲೇ ಮುಂಜಾವಿನಿಂದ ಸಂಜೆಯುವರೆಗೆ ಕಾಲು ಬಾಯುವಂತೆ ನಾವು ತಿರುಗಬೇಕಾಯಿತು! ನಡೆಯಿರಿನ್ನು ಮನೆಗೆ ಹೋಗೋಣ' ಆದರೆ ಅಮೃತನಿಗೆ ಸ್ವಲ್ಪ ತಿರುಗಾಡಿಬರಬೇಕೆಂದು ಅನಿಸಿತು.'ಡಾಕ್ಟರ,ಸ್ವಲ್ಪ ಇದೇ ರಸ್ತೆಯುಗುಂಟ ಹವಾ ತಿನ್ನಲಿಕ್ಕೆ ಹೋಗಿ ಬರೋಣವೇನು ?'

'ಯಾಕೆ ? ನಮ್ಮ ಕೆರೂರಲ್ಲಿ ಒಪ್ಪತ್ತು ಊಟ, ರಾತ್ರಿ ಏನೂ ತಿನಲಿಕ್ಕೆ ಸಿಗುವುದಿಲ್ಲ ಎಂದನಿಸಿತೇನು ನಿಮಗೆ ?'

'ಇಲ್ಲ, ರಾತ್ರಿಯೂಟಕ್ಕೆ ಪೂರ್ವತಯಾರಿ ಎಂದು ಹವೆಯ ಊಟ.'

'ಆಗಲಿ, ನಡೆಯಿರಿ. ದಾರಿಯಲ್ಲಿ ನಿಮಗೆ ತೋರಿಸಬೇಕಾದ್ದು ಇರು ವದು.'

ಮೂವರೂ ಕೂಡಿ ಬಾಗಿಲುಕೋಟೆಯ ದಾರಿಯ ಕಡೆಗೆ ನಡೆದರು.ಊರಿ ನಿಂದ ಒಂದೆರಡು ಫರ್ಲಾಂಗ ಹೋದ ಮೇಲೆ ಡಾಕ್ಟರರು ಪಶ್ಚಿಮಕ್ಕೆ ಹೊರಳಿ ನಿಂತು, 'ಸಿರೂರ, ಈ ಹೊಲದ ವಂಡಿಗುಂಟ ಇರುವ ಗಿಡಗಳ ಸಾಲು ನೋಡಿರಿ. ಇವು ಈಗ ಇತಿಹಾಸ ಪ್ರಸಿದ್ಧವಾಗಿಬಿಟ್ಟವು !' ಎಂದರು.

'ಅಂದರೆ ? ಯಾವ ಬಾದಶಹನ ಗೋರಿ ಇರುವದು ? ನನಗಂತೂ ಗಿಡದ ಹೊರತು ಇನ್ನೇನೂ ಕಾಣುವದಿಲ್ಲ.'

'ಅದನ್ನೇ ನಿಮಗೆ ಹೇಳಬೇಕು. ಬಾದಶಹನ ಗೋರಿಯಿದ್ದರೆ ಇತಿಹಾಸ ಪ್ರಸಿದ್ಧವೆನ್ನುವಕಾಲ ಹಳೆಯದಾಗಿ ಹೋಯಿತು. ಇದು ಬಡಜನರ ಕಾಲ. ಬಡ ಜನರ ಮೇಲೆ ಮೃತ್ಯು ದಾಳಿಮಾಡಿದಾಗ ಅವರನ್ನು ಬೇರೆ ತಂದಿಟ್ಟು ಕಾಪಾಡ

ಲೆಂದು ಕಟ್ಟಿದ ಕೋಟೆಗಳು ಇಲ್ಲಿದ್ದವು. ಅದರಿಂದ ಇಲ್ಲಿ ಇತಿಹಾಸ ನಿರ್ಮಾಣ ವಾಯಿತು.'

ಇಷ್ಟಾದರೂ ಅಮೃತನಿಗೆ ಹೊಳೆಯಲಿಲ್ಲ. 'ಕೋಟೆಗಳು ? ನೀವು ಹೇಳು ವದೆಲ್ಲ ದಂತಕಥೆಯಾಗಿ ಕಾಣತದೆ.'

'ಅಲ್ಲ, ಸಿರೂರ. ಹದಿನೈದು ದಿನದ ಹಿಂದೆ ಪ್ರತ್ಯಕ್ಷ ನಡೆದ ಕಥೆ!' ಎಂದು ಡಾಕ್ಟರರು ಸಾದ್ಯಂತವಾಗಿ ಎಲ್ಲವನ್ನೂ ವಿವರಿಸಿದರು. ಮೇ ತಿಂಗಳ ನಡುವಿನ ಸುಮಾರಕ್ಕೆ ಕೆರೂರಲ್ಲಿ ಭಯಂಕರ ಕಾಲರಾ ಬೇನೆ ಸುರುವಾಗಿಬಿಟ್ಟಿತು. ಮುನ್ ಸೂಚನೆಯಿಲ್ಲದೆ ವಿಮಾನ ದಾಳಿ ಬಂದು ಮನೆಗಳನ್ನು ದಪದಪ ಕೆಡವಿದಂತೆ ಮಾರಿಕಾ ಬಂದು ಒಮ್ಮೆಲೆ ಊರಲ್ಲಿ ೨೫–೩೦ ಕೇಸುಗಳಾದವು. ಊರ ಜನ ಕಕ್ಕಾವಿಕ್ಕಿಯಾದರು. ಹತ್ತಿರದಲ್ಲಿಯೇ ಹತ್ತು ಸಾವಿರ ಮೇಲೆ ಕೂಲಿಕಾರರು ದುಡಿಯುತ್ತಿದ್ದರು. ಕಾಡಗಿಚ್ಚಿಗಿಂತ ಹೆಚ್ಚಾಗಿ ಹಬ್ಬುವ ಬೇನೆಯೆಂದರೆ ಈ ಮಾರಿಕಾ. ಹಿಂದಕ್ಕೆ ಯಮನೂರ ಉರುಸಿಗೆ ಹೋದವರನ್ನು ಸಾವಿರಾರು ಲೆಕ್ಕ ದಿಂದ ಪಟಪಟ ಹುಳದಂತೆ ಕೊಂದೊಗೆದ ವೀರಮಹಿಳೆ ಮಾರೆಮ್ಮ ಇಂದೇನು ಮಾಡಲಾರಳು ? ಡಾಕ್ಟರರಿಗೂ ಅವರ ಸಹಕಾರಿಗಳಿಗೂ ಬಹಳ ಚಿಂತೆಯಾ ಯಿತು. ಆದರೆ ಅವರು ಎದೆಗೆಡಲಿಲ್ಲ. ರಾತ್ರಿ ಬೆಳತನಕ ದುಡಿದು ಊರ ಹೊರ ಗಿನ ಈ ಗಿಡಗಳ ಬುಡದಲ್ಲಿ ಕೆಲವು ಗುಡಿಸಲುಗಳನ್ನು ಹಾಕಿಸಿ ಅಲ್ಲಿಗೆ ಕಾಃಲರಾ ರೋಗಿಗಳನ್ನೆಲ್ಲ ಸಾಗಿಸಲಾಯಿತು. ಉಚಿತವಾಗಿ ಅವರ ಉಪಚಾರದ ವ್ಯವಸ್ಥೆ ಯಾಯಿತು. ಅಲ್ಲದೆ ಎರಡು ಮೂರು ದಿನಗಳಲ್ಲಿ ಊರಲ್ಲಿಯ ಪ್ರತಿಯೊಬ್ಬರಿಗೆ ಚುಚ್ಚುಮದ್ದನ್ನು ಕೊಡಲಾಯಿತು. ಇದೇ ಹೊತ್ತಿಗೆ ಆಸಂಗಿ, ಕೊಲ್ಹಾರ ಮುಂತಾದ ಬೇರೆ ಹಳ್ಳಿಗಳಲ್ಲಿಯೂ ಈ ಬೇನೆ ಹುಟ್ಟಿದ್ದು ತಿಳಿಯಿತು. ಆದರೆ ಕೆರೂರಲ್ಲಿ ಆದಷ್ಟು ತೀವ್ರಸ್ವರೂಪ ಅವಕ್ಕಿರಲಿಲ್ಲ. ಅದರಿಂದ ಡಾಕ್ಟರರ ಸೇವಾವ್ರ ತದ ಸತ್ವಪರೀಕ್ಷೆ ಆಗಿಬಿಟ್ಟಿತು. ಸರಕಾರದ ಆರೋಗ್ಯಖಾತೆಯವರ ನೆರವಿನಿಂದಲೂ ಸ್ವಂತ ಉತ್ಸಾಹಬಲದಿಂದಲೂ ಡಾಕ್ಟರರು ಈ ಸತ್ವಪರೀಕ್ಷೆಯಲ್ಲಿ ಉತ್ತೀರ್ಣ ರಾಗಿ ಕೆರೂರಿಗರ ಹಾಗೂ ಜಿಲ್ಹೆಯ ಜನರ ಹಾರ್ದಿಕ ಧನ್ಯವಾದಗಳಿಗೆ ತಕ್ಕವರಾ ದರು. ಅಂದಿನಿಂದ ಉತ್ತಮಪ್ರತಿಯ ಜನಸೇವಕರೆಂದು ಅವರ ಖ್ಯಾತಿ ಹಬ್ಬಿತು. ಮೊದಲಿನ ಕೇಸುಗಳಲ್ಲಿ ಅರ್ಧದ ಮೇಲೆ ಸಾವಿಗೆ ತುತ್ತಾದವು. ಆದರೆ ಅವುಗಳ ಸಂಸರ್ಗ ಹಬ್ಬಲಿಲ್ಲ. ಮೂರು ದಿನಗಳ ಮೇಲೆ ಮಾರೆಮ್ಮ ತನ್ನ ಬಿಡಾರವನ್ನು ಕಿತ್ತಿಕೊಂಡು ಹೋದಳು. ಅದಕ್ಕೆ ಕಾರಣವೇನೊ ಎಂಬಂತೆ

ಜೋರಾದ ಬಿರುಮಳೆಬಂದು ಊರನ್ನೂ ಸುತ್ತುಮುತ್ತನ್ನೂ ತೊಳೆದುಕೊಂಡು ಹೋಯಿತು. ತನ್ನ ಕ್ರಿಮಿಸೈನಿಕರನ್ನು ಈ ರೀತಿ ಹೊಡೆದೋಡಿಸಿದ್ದರಿಂದ ರುಷ್ಟಳಾಗಿ ಮಾರೆಮ್ಮ ಕೈಗೆ ಸಿಕ್ಕ ಕೆಲವು ರೋಗಿಗಳ ಪ್ರಾಣ ಹಿಂಡಿದಳು. ಒಂದು ರೋಗಗ್ರಸ್ತ ಮಗುವನ್ನು ಮಳೆನೀರಿನ ಸೆಳವಿನಲ್ಲಿ ನುಗಿಸಿ ಮುಳುಗಿಸಿದಳು !

ಒಂದು ಮೈಲಿನವರೆಗೆ ಮುಂದೆ ಹೋಗಿ ಮೂವರು ಮರಳಿ ಮನೆಗೆ ಬಂದರು. ಅಷ್ಟರಲ್ಲಿ ರಾತ್ರಿ ಆಗಿತ್ತು. ಡಾಕ್ಟರರ ಸಲುವಾಗಿ ಅನೇಕ ಜನರು ಕಾದಿದ್ದರು. ಬಿಡುವೇನು ಅವರಿಗೆ ದೊರೆಯಲಿಲ್ಲ. ಒಂಬತ್ತು ಗಂಟೆಯುವರೆಗೆ ದವಾಖಾನೆಯು ಕೆಲಸ ನಡೆಯಿತು. ಅದು ಮುಗಿಯುವುದೊಂದೆ ತಡ, ಅನ್ನಛತ್ರ ದನದ ಹಟ್ಟಿಯ ಕೆಲಸಗಾರರು ದಿನದ ವರದಿಯನ್ನು ಕೊಡಲಿಕ್ಕೂ ಮರುದಿನದ ಸಂವರಣೆಯು ಬಗ್ಗೆ ಮಾತನಾಡುವುದಕ್ಕೂ ಬಂದರು.

ಅದೊಂದು ತಾಸು ನಡೆಯಿತು. ಅಮೃತನು ಅವರ ಅವ್ಯಾಹತವಾದ ದಿನಚರಿಯನ್ನು ಕಂಡು ಅಚ್ಚರಿಪಟ್ಟನು. ಹತ್ತರ ಮೇಲೆ ರಾತ್ರಿ ಊಟವಾಯ್ತು. 'ಆತು, ಡಾಕ್ಟರ, ಇನ್ನು ನೀವು ಮಲಕೊಳ್ಳಿರಿ. ನಿಮಗೆ ವಿಶ್ರಾಂತಿ ಬೇಕು !' ಅಮೃತ ಅಂದನು.

'ಓಹೊ. ತಿಳಿಯಿತು ನಿಮಗೆ ನಿದ್ದೆ ಬಂತೆಂದು ಕಾಣತದೆ. ಅಂತೇ ಹೀಗೆ ಸೂಚನೆ ಕೊಟ್ಟರಲ್ಲ.'

'ಅಲ್ಲ, ಹೀಗೆ ನೀವು ಇಪ್ಪತ್ನಾಲ್ಕು ತಾಸು ದುಡಿದರೆ ನಿಮಗಾಗಿ ಒಂದು ದವಾಖಾನೆ ತೆರೆಯಬೇಕಾದೀತು. ನೀವು ನೆಟ್ಟಗಿದ್ದರೆ ಕೆರೂರು ನೆಟ್ಟಗಿರುವುದು.'

'ಹೌದು, ನೆಟ್ಟಗಿರಬೇಕೆಂದು ನಾ ಮಲಗಿದರೆ ಕೆರೂರೂ ಮಲಗುವದು. ದೇವರು ನನಗೆ ಬಹಳ ಚಲೋ ಆರೋಗ್ಯ ಕೊಟ್ಟಿದ್ದರಿಂದಲೇ ಇಷ್ಟೆಲ್ಲ ನಡೆದಿದೆ. ಸಿರೂರ, ನೋಡಿರಿ. ನನಗೆ ಕ್ವಚಿತ್ತಾಗಿ ಬರುವ ನೆಗಡಿಯೊಂದನ್ನು ಬಿಟ್ಟರೆ ಎಂದಿಗೂ ಈವರೆಗೆ ಯಾವ ಬೇನೆಯೂ ಬಂದಿಲ್ಲ. ಈ ಗಟ್ಟಿಮುಟ್ಟೆಯಾದ ಮೈ ತಿಂದು ಕೊಬ್ಬುವದಕ್ಕಿಂತ ಸೇವೆಯಲ್ಲಿ ಸಣ್ಣಾಗಿ ಹೋಗಲಿ ಎಂದು ನನ್ನ ಅಪೇಕ್ಷೆ.'

ಅಮೃತನಿಗೆ ಆದರ್ಶವಾದದಿಂದ ಸ್ಫುರಿಸಿದ ಈ ಮಾತುಗಳನ್ನು ಕೇಳಿ ಸಂತಸವಾಯಿತು. ಡಾಕ್ಟರರ ವೈಯಕ್ತಿಕಜೀವನದ ಬಗ್ಗೆ ಕೆಲವಂಶಗಳನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲ ಹೆಚ್ಚಾಯಿತು. ಆದರೆ ಅವರ ವಿಶ್ರಾಂತಿಗೆ ಅಡ್ಡಿ ಬರಬಹುದೆಂದು ಸುಮ್ಮಗಾದನು. ಇಬ್ಬರೂ ತಂತಮ್ಮ ಕೋಣೆಯಲ್ಲಿ ಮಲಗಿಕೊಂಡರು. ಹನ್ನೊಂದಾಗಿ ಹೋಗಿತ್ತು. ಇನ್ನೂ ಹಾಸಿಗೆಗೆ ಅದೇ

ವೈಹಚ್ಚಿದ್ದರು. ಹತ್ತು ಮಿನಿಟು ಕೂಡ ಆಗಿರಲಿಲ್ಲ. ಅಷ್ಟರಲ್ಲಿ ಬಾಗಿಲು ಬಡಿದ ಸಪ್ಪಳವಾಯ್ತು. ಇಬ್ಬರೂ ತಟ್ಟನೆ ಎದ್ದರು. ಹೋಗಿ ನೋಡಲಾಗಿ ಒಬ್ಬ ಬಸುರ ಹೆಂಗಸು ಬೆಳಗಿನಿಂದ ಬೇನೆ ತಿನ್ನುತ್ತಿದ್ದು ಇನ್ನೂ ಹಡೆದಿಲ್ಲವೆಂದೂ ಸಂಕಟದಿಂದ ಹೊರಳಾಡುತ್ತಿರುವಳೆಂದೂ ಕೂಡಲೆ ಬಂದು ನೋಡಬೇಕೆಂದೂ ಡಾಕ್ಟರರಿಗೆ ಕರೆ ಬಂದಿತು. ನೇಕಾರರಲ್ಲಿಯ ತೀರ ಬಡ ಕುಟುಂಬವದು. ಫೀ ಕೊಡುವ ಯೋಗ್ಯತೆ ಇರಲಿಲ್ಲ. ಆದರೆ ಡಾಕ್ಟರರು ಇದಾವದನ್ನೂ ಲಕ್ಷ್ಯಕ್ಕೆ ತರಲಿಲ್ಲ. ತಮ್ಮ ವೇಷ ಹಾಕಿಕೊಂಡು ಕೈಯಲ್ಲಿ ಔಷಧದ ಪೆಟ್ಟಿಗೆ ತಗೊಂಡು ಕೂಡಲೆ ಹೊರಟೇ ಬಿಟ್ಟರು. ನನಗೆ ದಣಿವಾಗಿದೆ, ನಾಳೆ ನೋಡುವೆನೆಂದು ಹೇಳುವ ಮಿಜಿಮಿಜಿ ಮಾತೇ ಸುಳ್ಳು. ಅಮೃತನಿಗೆ ಅಗಾಧವೆನಿಸಿತು. ತಡೆಯಬೇಕೆಂದು ಒಂದು ಕ್ಷಣ ಅನಿಸಿದರೂ ಅವನು ಆ ಗೊಡವೆಗೆ ಹೋಗಲಿಲ್ಲ. 'ಈಗ ಬರತೀನಿ' ಎಂದು ಹೇಳಿ ಡಾಕ್ಟರರು ಕರೆಯಬಂದ ಮನುಷ್ಯನ ಕೂಡ ಹೋದರು. ಅಮೃತನು ಬಾಗಿಲಕ್ಕೆ ಚಿಲಕ ಹಾಕಿ ತನ್ನ ಹಾಸಿಗೆಯ ಮೇಲೆ ಬಂದು ಬಿದ್ದುಕೊಂಡನು. ಏನೇನೋ ವಿಚಾರಗಳು ತಲೆಯಲ್ಲಿ ಎದ್ದವು. ಚಿತ್ರಗಳು ಸುಳಿದವು. ನಿದ್ದೆ ಹಾರಿಹೋಯಿತು. ಸುಮ್ಮನೆ ಕಣ್ಣು ಮುಚ್ಚಿ ಬಿದ್ದುಕೊಂಡನು. ಇಷ್ಟು ದಿನ ಕಾಲೇಜಿನಲ್ಲಿ ಕಲಿತದ್ದಕ್ಕಿಂತ ಡಾಕ್ಟರರ ಸಹವಾಸದಲ್ಲಿ ಕಳೆದ ಒಂದು ದಿನ ಅವನಿಗೆ ಹೆಚ್ಚು ಬೆಲೆಯುಳ್ಳದ್ದಾಗಿ ತೋರಿತು. ದೈವವು ಸೇವಾಧರ್ಮದ ಪ್ರಯೋಗ ಶಾಲೆಗೆ ತನ್ನನ್ನು ಕಳಿಸಿದಂತೆ ತಿಳಿದನು. ತಾನು ಇಷ್ಟು ಗಟ್ಟಿಯೇ, ತನ್ನಿಂದ ಈ ಬಗೆಯ ಜನತಾಸೇವೆ ಸಾಧ್ಯವೇ ಎಂದು ಯೋಚಿಸುತ್ತಿರಲು ಅವನಿಗೆ ಮನೆಯ ನೆನಪಾಯಿತು. ಅಲ್ಲಿ ಏನೇನು ನಡೆದಿರುವದೋ, ತನ್ನನ್ನು ಅವ್ವ-ಅಪ್ಪ ಎಷ್ಟು ಶಪಿಸುತ್ತಿರುವರೋ ಎಂಬ ಎದೆಗುದಿ ಉಂಟಾಯಿತು. ಬೆಳೆದು ನಿಂತ ತಂಗಿಯ ಅಳುಮೋರೆ ತಿರುತಿರುಗಿ ಕಂಡಿತು. ಅವಳ ಮದುವೆಯ ಗತಿಯೇನು ಎನ್ನುತ್ತಿರಲು ದೂರದಿಂದ ವೀಣೆ ಬಂದು ತನ್ನ ದೂರನ್ನು ಹೇಳು ತ್ತಿರುವಂತೆ ಭಾಸವಾಯಿತು. ತನ್ನ ಪತ್ರ ನೋಡಿ ಅವಳು ಹತಾಶಳಾಗಿ ಮುಳು ಮುಳು ಅಳುತ್ತ ಯಾವದೋ ನದಿಯ ದಂಡೆಗೆ ಹೋಗಿ ದುಡುಮ್ಮೆಂದು ಹಾರಿ ದಂತೆ ಅವನಿಗೆ ಚಿತ್ರ ಕಂಡಿತು. ಕೂಡಲೆ ಅವನು ಮುಸುಕು ತೆಗೆದು ಕಣ್ಣೊರಸಿ ಕೊಂಡು ಎದ್ದು ಕುಳಿತನು. ಸುತ್ತುಮುತ್ತು ನೋಡಿದನು. ಅಷ್ಟರಲ್ಲಿ ಡಾಕ್ಟರರು ತಿರುಗಿ ಬಂದರು. ಅಮೃತ ಬಾಗಿಲ ತೆರೆದು 'ಹೇಗಿದೆ ?' ಎಂದನು.

'ಈಗ ಸ್ವಲ್ಪು ಕಡಿಮೆ ಆಗಿದೆ. ಇಂಜಕ್ಶನ್ ಕೊಟ್ಟು ಬಂದಿರತೇನೆ. ಬೆಳಗಾಗುವದರಲ್ಲಿ ಆ ಪ್ರಾಣಿ ಹಡೆಯುವಳು!' ಎಂದು ಡಾಕ್ಟರು ಆತ್ಮವಿಶ್ವಾಸ ದಿಂದ ಹೇಳಿದರು. ಇಂಥ ಎಷ್ಟೋ ಅನುಭವಗಳು ಅವರಿಗೆ ಬಂದಿರಬೇಕು. ಹೆರಿಗೆ ಸುಲಭವಾಗುವಂಥ ಉಪಚಾರವೂ ಗೊತ್ತಿರಬೇಕು ಎಂಬುದನ್ನು ಅವರ ಮಾತಿನ ಸರಣಿಯಿಂದ ತಿಳಿಯುವಂತಿತ್ತು. ಅವರು ಬಂದು ಅಮೃತನಕೋಣೆಯಲ್ಲಿಕುಳಿತು ಕೊಂಡರು. ಅಮೃತ ತನ್ನ ಹಾಸಿಗೆಯ ಮೇಲೆ ಹೋಗಿ ಕುಳಿತನು. 'ಡಾಕ್ಟರ, ಇನ್ನಾದರೂ ಹೋಗಿ ಮಲಗಿಕೊಳ್ಳಿರಲ್ಲ.' ಅಮೃತ ಆಗ್ರಹದಿಂದ ಹೇಳಿದನು.

'ಮಲಗೋಣ, ನಿದ್ದೆ ಇದ್ದೇ ಇರುವದು!'

'ಅಲ್ಲ, ಅದೇ ದಣಿದು ಮಲಗಿದ್ದಿರಿ. ಆ ಮನುಷ್ಯನ ಕೈಯಲ್ಲಿ ಏನಾದರೂ ಔಷಧ ಕೊಟ್ಟು ಮುಂಜಾನೆ ಬರುವೆನೆಂದು ಹೇಳಿದ್ದರೆ ಬರುತ್ತಿದ್ದಿಲ್ಲವೇ?'

'ಅರ್ಜಂಟ ಕೇಸಿದ್ದಾಗ ಹೇಗೆ ಬರುವದು? ಅಲ್ಲದೆ, ನಿಮಗೆ ಸಿರೂರ, ಖಾಸಗಿ ಆಗಿ ಹೇಳಬಹುದು. ಬಸುರು–ಬಾಣಂತಿಯರಿಗೆ ಜಡ್ಡೆಂದು ಬೇಕಾದ ಹೊತ್ತಿನಲ್ಲಿ ಯಾರೇ ಕರೆಯಬರಲಿ, ಕೈಕಾಲು ಗಟ್ಟಿಯಿರುವತನಕ ನಾ ಒಲ್ಲೆನ್ನ ಬಾರದೆಂದು ಪ್ರತಿಜ್ಞೆ ಮಾಡಿರತೇನೆ. ಇಲ್ಲಿಯ ಜನರಿಗೆಲ್ಲ ಈ ನನ್ನ ಸ್ವಭಾವ ಚೆನ್ನಾಗಿ ಗೊತ್ತಿದೆ. ಅಂತೇ ಅವರು ಅಪರಾತ್ರಿಯಲ್ಲಿ ಸಹ ಕರೆಯಬರುತ್ತಾರೆ.'

'ಹೀಗೇನು? ಈ ನಿಮ್ಮ ಪ್ರತಿಜ್ಞೆಗೆ ಏನಾದರೂ ವಿಶೇಷ ಕಾರಣ ಇರು ವದೇನು?'

'ಇರುವದು. ಅದಕ್ಕೆ ದೊಡ್ಡ ಇತಿಹಾಸವಿರುವದು.'

ಅಮೃತನ ಲವಲವಿಕೆ ಹೆಚ್ಚಿತು. ಆದರೆ ಅವರ ನಿದ್ದೆಗೆ ಬಾಧೆ ಬರುವು ದೆಂದು ಕೇಳಲೋ ಬೇಡವೋ ಎಂಬ ಸಂಶಯದಲ್ಲಿ ಬಿದ್ದನು. ಕೊನೆಗೆ 'ಹಾಗಾ ದರೆ ನಾನದನ್ನು ಕೇಳಬೇಕು. ನಾಳೆ ಹೇಳುವಿರಾ?'

'ನಾಳೆ ಯಾಕೆ? ಇಬ್ಬರಿಗೂ ನಾಳೆ ಸವಡು ಸಿಗಲಾರದು. ನಮ್ಮ ಕೆಲಸದ ಯಂತ್ರ ಬೆಳಿಗ್ಗೆ ಸುರುವಾಯಿತೆಂದರೆ ಅದು ರಾತ್ರಿಯೇ ನಿಲ್ಲಬೇಕು. ಈಗಲೆ ಹೇಳತೀನಿ ಕೇಳಿರಿ. ನನ್ನ ನಿದ್ದೆಯ ಕಾಳಜಿ ಬೇಡ. ಬರಗಾಲ ಸಮಿತಿಯ ಕೆಲಸಕ್ಕೆ ಕೈಹಾಕಿದಂದಿನಿಂದ ನನಗೆ ಮೂರು ನಾಲ್ಕುತಾಸಿನ ನಿದ್ದೆಯ ರೂಢಿ ಆಗಿಬಿಟ್ಟದೆ.'

ಹೀಗೆಂದು ಅವರು ಆರಂಭಿಸಿಯೇ ಬಿಟ್ಟರು. ಕೇಳಬೇಕೆಂಬ ಭರದಲ್ಲಿ ಬೇಡವೆಂಬುವ ಆರ್ಜವವನ್ನು ಅಮೃತನು ತಡೆದನು. 'ನೋಡಿರಿ ಸಿರೂರ, ನಾನು ಸಣ್ಣವನಿದ್ದಾಗ ಒಂದು ಹಳ್ಳಿಯಲ್ಲಿಯೇ ಬೆಳೆದೆ. ನಮ್ಮ ತಂದೆಯವರು

ಅಲ್ಲಿಯ ಇನಾಮದಾರರು. ಒಂದು ಕಾಲಕ್ಕೆ ಬಹಳ ಶ್ರೀಮಂತಿಕೆ ಇತ್ತು. ನಾ ಹುಟ್ಟುವುದರಲ್ಲಿ ಅದೆಲ್ಲಾ ಹಳೆ ಕತೆಯಾಗಿತ್ತು. ಆದರೂ ಇನಾಮದಾರರೆಂಬ ಜರುಬು ಇಟ್ಟುಕೊಳ್ಳಲು ಬೇಕಾಗುವಷ್ಟು ಜಮೀನು ಇದ್ದವು. ದೊಡ್ಡ ಮನೆ ಯೂ ಇತ್ತು. ಕನ್ನಡ ಮುಗಿಸಿ ಹಾಯಸ್ಕೂಲ ಕಲಿಯಲು ನಾ ವಿಜಾಪುರಕ್ಕೆ ಹೋದೆ.ಅಭ್ಯಾಸಕ್ಕಿಂತ ಚಹಾದಂಗಡಿ ಸಿನೇಮಾ ಇವುಗಳಕಡೆ ಲಕ್ಷ್ಯವೇ ಹೆಚ್ಚು. ಪ್ರಕೃತಿ ಅಂತೂ ಎಂದಿನಿಂದಲೂ ನಿರೋಗಿ. ಜಗತ್ತಿನಲ್ಲಿ ದುಃಖ ಇರುವುದೆಂಬ ಕಲ್ಪನೆ ಸಹ ಆಗ ಇರಲಿಲ್ಲ. ಪರೀಕ್ಷೆಯ ಪೂರ್ತೆ ಅಭ್ಯಾಸ ಮಾಡಿ ಹಾಗೂ ಹೀಗೂ ಮಾಡಿ ಕೊನೆಗೆ ಮ್ಯಾಟ್ರಿಕ್ ಕ್ಲಾಸಿಗೆ ಬಂದೆ. ಮ್ಯಾಟ್ರಿಕ್ ಪಾಸಾದರೆ ಕಾಲೇಜಿಗೆ ಹೋಗಿ ಚೈನಿ ಮಾಡುವ ಸಂಧಿ ದೊರೆಯುವದೆಂದು ಮೊದಲಿನಿಂದ ಅಭ್ಯಾಸದಲ್ಲಿ ತೊಡಗಿದ್ದೆ. ದೀಪಾವಳಿ ಸೂಟಿಗೆ ನಮ್ಮ ಹಳ್ಳಿಗೆ ಹೋದೆ. ಅಲ್ಲಿ ಬಂದ ಅನುಭವವೇ ನನ್ನ ದೃಷ್ಟಿಯನ್ನು ಬದಲಾಯಿಸಿಬಿಟ್ಟಿತು. ನಮ್ಮ ತಾಯಿ ಗರ್ಭಿಣಿ ಇದ್ದು ಅವಳಿಗೆ ದಿನದಲ್ಲಿ ಬಿದ್ದಿದ್ದವು. ಅದರಲ್ಲಿ 'ಎನಿಮಿಯ' ಆಗಿ ಬಹಳ ಅಶಕ್ತ ಆಗಿದ್ದಳು. ನರಕಚತುರ್ದಶಿಯ ಬೆಳಗಿನಾರತಿ ಆಗಿ ಮಧ್ಯಾಹ್ನ ಊಟವಾಯ್ತು. ಸಂಜೆ ಹೊತ್ತಿಗೆ ಅವಳು ಬೇನೆ ತಿನ್ನುವದು ಸುರುವಾಯಿತು. ನಾ ಏನು ಹೇಳಲಿ, ಆ ಸಂಕಟದ ಕೂಗು ಇನ್ನೂ ನನ್ನ ಕಿವಿಯಲ್ಲಿ ಕಟ್ಟಿರುವದು. ಒಂದೇ ಸವನೆ ಅವಳು ಹಲುಬುತ್ತಿರುವಳು; ಹೆರಿಗೆ ಆಗಲೊಲ್ಲದು. ಕೆಟ್ಟ ಹಳ್ಳಿಯೂರು. ಡಾಕ್ಟರು, ನರ್ಸ ಇಲ್ಲವೆಂದು ಬೇರೆ ಹೇಳ ಬೇಕಾಗಿಲ್ಲ. ಸೂಲಗಿತ್ತಿಯೇ ಹಳ್ಳಿಯ ನರ್ಸು, ಮನೆಮನೆಯ ಹಿರಿಯರೇ ಡಾಕ್ಟರು. ಸೂಲಗಿತ್ತಿ ತನ್ನ ವಿದ್ಯೆಯನ್ನೆಲ್ಲ ಉಪಯೋಗಿಸಿದಳು. ಬಂದವರೆಲ್ಲ ತಮಗೆ ತಿಳಿದ ಔಷಧ ಹೇಳಿದರು. ನಮ್ಮ ಜನದ ಪದ್ಧತಿಯ ಪ್ರಕಾರ ಎಲ್ಲದರ ಪ್ರಯೋಗ ಮಾಡಿದರು. ಹೆಚ್ಚು ತರದ ಔಷಧದಿಂದ ಹೆಚ್ಚು ಬೇಗನೆ ಪರಿಹಾರ ವೆಂಬುದು ಅವರ ಹುಚ್ಚು ಕಲ್ಪನೆ. ಅಮಾವಾಸ್ಯೆಯ ಬೆಳಗಾಯಿತು. ಇನ್ನೂ ಹಡೆಯಲಿಲ್ಲ. ನಮಗೆಲ್ಲಾ ಅಂದು ಹಬ್ಬದ ಅಮವಾಸ್ಯೆ ಎಂಬುದು ಹೋಗಿ ದುಃಖದ ಕಗ್ಗತ್ತಲೆ ಕವಿದ ಅಮವಾಸ್ಯೆ ಆಯಿತು. ಮನೆಯ ತುಂಬೆಲ್ಲಾ ನಮ್ಮ ತಾಯಿಯ, 'ಅಯ್ಯಯೋ ! ನಾ ಸಾಯುತೀನರೇ !' ಎಂಬ ಕರುಳುರಿಯುವ ಕೂಗುಗಳು ವ್ಯಾಪಿಸಿಕೊಂಡವು. ಊಟ ಉಡಿಗೆಯಿಲ್ಲದೆ ಎಲ್ಲರೂ ಅಳುತ್ತ ಕೂತೆವು. ಎಲ್ಲಿಂದಾದರೂ ಡಾಕ್ಟರರನ್ನು ಕರೆಸಬೇಕೆಂದರೆ ಹತ್ತು ಹರದಾರಿ ಹೋಗಬೇಕು. ಆದರೂ ಅಡ್ಡಿಯಿಲ್ಲ ಎಂದು ಕುದುರೆಯ ಮೇಲೆ ಒಂದು ಆಳನ್ನು

ವಿಜಾಪುರಕ್ಕೆ ಕಳಿಸಿದೆವು. ಮೋಟರದಲ್ಲಿ ಡಾಕ್ಟರ, ನರ್ಸ ಇಬ್ಬರನ್ನೂ ಕರೆತರಲು ಹೇಳಿತ್ತು. ಆದರೆ ಅವರು ಹೊತ್ತಿಗೆ ಒದಗಲಾರರೆಂಬ ಹೆದರಿಕೆ ಇದ್ದೇ ಇದ್ದಿತು. ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತಿಗೆ ಸೂಲಗಿತ್ತಿ ಹೊರಗೆ ಬಂದು ಅವಳಿ ಜವಳಿ ಇರುವದೆಂದೂ ಒಂದರ ಕಾಲು ಮುಂದಾಗಿ ಬಂದಿದ್ದು ಅದರಲ್ಲಿ ಇನ್ನೊಂದರ ತಲೆ ಸಿಕ್ಕಿರುವದೆಂದೂ ಹೇಳಿದಳು. ಆಯಿತು,ಎಲ್ಲರೂ ಮೈಬೆವತು ಕೈಕಾಲು ತಣ್ಣಗಾಗಿ ಕೂತೆವು. ತನ್ನ ಶಕ್ತಿಮೀರಿ ಪ್ರಯತ್ನ ಮಾಡುವೆನೆಂದು ಸೂಲಗಿತ್ತಿ ಧೈರ್ಯ ಹೇಳಿದಳು. ಆದರೆ ಅವಳ ಮುಖ ನೋಡಿದರೆ ನಿರಾಶೆ ಬರೆದಂತಿತ್ತು. ಇಷ್ಟಾದ ಮೇಲೆ ಯಾರೋ ಬಂದು ಒಂದು ಯುಕ್ತಿ ಸೂಚಿಸಿದರು. ಅದರಿಂದ ಹಡೆಯುವದು ನಿಶ್ಚಿತವೆಂದರು. 'ನಿಮಗೆ ಸರಿ ಕಂಡರೆ ಮಾಡಿ ನೋಡಿರಿ' ಎಂದೆವು. ಆ ಗೃಹಸ್ಥರು ಊರಲ್ಲಿಯ ಎಲ್ಲ ಹುಡುಗರನ್ನೂ ಹಿರಿಯರನ್ನೂ ಕರೆದುತಂದು ನಮ್ಮ ಮನೆಯಿಂದ ಎರಡು ಮೂರು ಫರ್ಲಾಂಗಿನ ದೂರದಲ್ಲಿದ್ದ ಒಂದು ಹೊಕ್ಕು ತುಂಬುವ ಬಾವಿಯವರೆಗೆ ಸಾಲಾಗಿ ಪತ್ತಿರಪತ್ತಿರದಲ್ಲಿ ನಿಲ್ಲಿಸಿದರು. ನೀರಿನ ಪಾವಟಗೆಯಿಂದ ನಮ್ಮ ತಾಯಿಯವರೆಗೆ ಹೀಗೆ ಜನ ನಿಂತಿತು. ಬಾವಿಯಲ್ಲಿ ಒಂದು ತಂಬಿಗೆ ನೀರು ತುಂಬಿ ಕೈಯಿಂದ ಕೈಗೆ ಕೊಡುತ್ತ ತಾಯಿಯವರೆಗೆ ತಂದು ಆ ನೀರನ್ನು ಅವಳಿಗೆ ಕುಡಿಸಿದರು. ನೆಲದ ಆ ತಂಬಿಗೆಯನ್ನಿಡಕೂಡದೆಂಬುದೇ ಅದರಲ್ಲಿ ಮುಖ್ಯವಾಗಿತ್ತು. ಊರಿಗೆ ಊರೇ ಈ ನೋಟ ನೋಡಲು ಬಂದಿತು. ಎಲ್ಲರಿಗೂ ನಮ್ಮಂತೆ ಅದು ಚಿಂತೆಯ ವಿಷಯವಾಗಿತ್ತು. ಇಷ್ಟೆಲ್ಲ ಮಾಡಿದರೂ ಪರಿಣಾಮವೇನೂ ಆಗಲಿಲ್ಲ. ಏನೋ ತುಸು ಸಂಕಟದ ಕೂಗು ಕಡಿಮೆ ಆದಂತಾಗಿ ತಾಯಿ ಗೋಣು ಚೆಲ್ಲಿ ಬಿದ್ದುಕೊಂಡಳು. ಇನ್ನು ಹೆರಿಗೆ ಆದೀತೆಂದು ಆ ಹೆಜ್ಜೆ ನೀರಿನ ಯೋಜಕರ ಆಶೆ. ಆದರೆ ಮೈಯಲ್ಲಿಯ ಶಕ್ತಿಯೆಲ್ಲ ಹರಿದುಹೋಗಿ ಕೂಗಲೂ ತ್ರಾಣವಿಲ್ಲದೆ ಅವಳು ಬಿದ್ದಿರಬಹುದೆಂದು ಅವರಿಗೆ ತಿಳಿಯಲಿಲ್ಲ. ಅಂದು ರಾತ್ರಿಯೆಲ್ಲ ಹೀಗೇ ಸಾಗಿತು. ಬೆಳಗು ಮುಂಜಾನೆ ಡಾಕ್ಟರ ಮತ್ತು ನರ್ಸ ಬಂದರು. ಅವರು ತಪಾಸು ಮಾಡಿ ನೋಡಿ ಆಶೆಯಿಲ್ಲ ಎಂದು ಕಂಡುಕೊಂಡರು. ಆದರೂ ಪ್ರಯತ್ನ ಮಾಡಿ ನೋಡೋಣ ಎಂದು ಇಂಜೆಕ್ಶನ್ನು ಕೊಟ್ಟರು. ಅದೂ ಸಫಲವಾಗಲಿಲ್ಲ. ಕೊನೆಗೆ ಎರಡೂ ಕೂಸನ್ನು ತುಂಡುತುಂಡಾಗಿ ಕತ್ತರಿಸಿ ತೆಗೆದು ಹೊರಗೆ ಹಾಕಿದರು. ಅದನ್ನು ನೋಡಬಾರದೆಂದು ತಾಯಿಯ ಕಣ್ಣು ಕಟ್ಟಿದ್ದರು. ಅವಳಿಗೆ ಗೊತ್ತಾಗದೆ ಹೋಗುವದೇ ? ಎಲ್ಲ ಮುಗಿದ ಕೆಲಹೊತ್ತಿನಲ್ಲಿ ತನ್ನ

ನಿತ್ರಾಣದಿಂದ, ಮನಸ್ಸಿನ ಮೇಲಾದ ಆಘಾತದಿಂದ ನಮ್ಮ ಕೈಬಿಟ್ಟು ನಮ್ಮ ಪ್ರೀತಿಯ ತಾಯಿಹೋದಳು ! ಮನೆಯೆಲ್ಲ ದುಃಖದಲ್ಲಿ ಮುಳುಗಿತು. ಸಿರೂರ, ನನ್ನ ಆಯುಷ್ಯದಲ್ಲಿ ಎಂದೂ ಮರೆಯಲಾರದ ಪ್ರಸಂಗವದು. ದೀಪಾವಳಿಯ ಪಾಡ್ಯ ನಮಗೆ ಕಗ್ಗತ್ತಲೆಯ ದಿನವಾಯಿತು. ಆದರೆ ಅಂದಿನ ಅನುಭವ ಮುಂದೆ ನನ್ನ ಪ್ರತಿಜ್ಞೆಗೆ ಕಾರಣವಾಯಿತು. ನಾನು ಕಲಿತು ಡಾಕ್ಟರನಾಗ ಬೇಕೆಂದೂ ಒಂದು ಹಳ್ಳಿಯಲ್ಲಿಯೇ ನೆಲಸಬೇಕೆಂದೂ ನಮ್ಮ ತಾಯಿಯಂತೆ ಬಳಲುವ ಹೆಣ್ಣುಮಕ್ಕಳ ಶುಶ್ರೂಷೆಗೆ ಎಂದೂ ಹಿಂಜರಿಯಬಾರದೆಂದೂ ನಾನು ಸಂಕಲ್ಪ ಮಾಡಿದೆ. ಸುದೈವದಿಂದ ಮುಂದೆ ಎಲ್ಲ ಕೂಡಿ ಬಂತು. ನಾನು ವೈದ್ಯಕೀಯ ಕಾಲೇಜಿನಲ್ಲಿದ್ದಾಗ ಮುಂಬಯಿಯಲ್ಲಿ ಅನೇಕ ಮುಖಂಡರ ಮಾತು ಕೇಳಿ ಅವರಿಂದ ಸ್ಫೂರ್ತಿ ಪಡೆಯುವ ಸಂಧಿ ಸಿಕ್ಕಿತು. ೧೯೩೦-೩೧ ರ ಸತ್ಯಾಗ್ರಹದಲ್ಲಿ ನಾನು ಒಂದೆರಡು ತಿಂಗಳು ಜೇಲನ್ನೂ ಕಂಡೆ. ಜನಸೇವೆ ಯಲ್ಲಿಯೇ ನನ್ನ ಆಯುಷ್ಯ ಸವೆಸಬೇಕೆಂಬ ನನ್ನ ನಿರ್ಧಾರವು ದೃಢವಾಗುತ್ತ ಹೋಯಿತು. ಅದೆಲ್ಲದರ ಫಲವೇ ಇಂದಿನ ನನ್ನ ಅಲ್ಪಸ್ವಲ್ಪ ಕೆಲಸ."

ಡಾಕ್ಟರರು ತಮ್ಮ ಮಾತು ಮುಗಿಸಿದರು. ಆಗ ಎರಡು ಬಡಿಯಿತು. ಸುತ್ತೆಲ್ಲಸ್ತಬ್ಧವಾಗಿತ್ತು.ಅಮೃತನು ಡಾಕ್ಟರರ ವಿಷಯದಲ್ಲಿ ಹೆಚ್ಚಿನ ಆದರದಿಂದ ಭಾವನಾಮಯವಾಗಿ ಕುಳಿತುಕೊಂಡನು. ತಾವೇ ಎದ್ದು ಡಾಕ್ಟರರು ತಮ್ಮ ಕೋಣೆಗೆ ಹೊರಡುತ್ತಾ 'ಆತಿನ್ನು ಮಲಗಿರಿ, ಸಿರೂರ. ಯಾರಿಗೂ ನಾ ಹೇಳದ ಕತೆಯನ್ನು ನನ್ನಿಂದ ಹೊರಪಡಿಸಿದಿರಿ. ಆತ್ಮಸ್ತುತಿಯೆಂದು ಮಾತ್ರ ತಿಳಿಯುವ ದಿಲ್ಲವಷ್ಟೇ?' ಎಂದರು.

ಅಮೃತನು ಕೂಡಲೆ 'ಛೆ, ಹಾಗೆ ತಿಳಿಯುವುದು ಶಕ್ಯವೇ ? ಡಾಕ್ಟರ, ನಿಮ್ಮ ಜೀವನವನ್ನು ನೋಡಿ ಕೇಳಿ ಈವತ್ತು ನನ್ನಲ್ಲಿ ಹೊಸ ಶಕ್ತಿ ಹುಟ್ಟಿದಂತಾ ಗಿದೆ. ನೀವು ನನಗೆ ಗುರುಗಳಾದಿರಿ. ಇದನ್ನು ಮಾತ್ರ ಮುಖಸ್ತುತಿಯೆಂದು ತಿಳಿಯಬೇಡಿರಿ.' ಹೀಗೆಂದು ಹಾಸಿಗೆಯಿಂದ ತಟ್ಟನೆ ಎದ್ದು ಅಮೃತನು ಮನ ಮುಟ್ಟಿದ ಭಾವನೆಯಿಂದ 'ಡಾಕ್ಟರ, ನೀವು ನಿಜವಾದ ದಾತಾರರು ! ಇಲ್ಲಿಯ ಜನಕ್ಕೆ ಅನ್ನದಾತಾರರು !' ಎಂದು ಹೊಗಳಿದನು.

ಅಮೃತನು ತನ್ನ ಹಾಸಿಯಲ್ಲಿಗೆ ಬಿದ್ದುಕೊಂಡು ಅರನಿದ್ದೆಯಲ್ಲಿ ಅಂದಿನ ಅನುಭವದ ಹಲವಾರು ಚಿತ್ರಗಳನ್ನು ಕನಸಿನ ಪರದೆಯ ಮೇಲೆ ಕಂಡನು.ತಾನೂ ಸಹ ಅದೇ ರೀತಿ ಬಾಳುವಂತೆಯೂ ಮುಂಗನಸು ಕಂಡನು.

## ೯. ಬರಗಾಲ ಕಾಮಗಾರಿ

ಮರುದಿನ ಬೆಳಿಗ್ಗೆ ಹೊತ್ತು ಹುಟ್ಟಿ ಒಂದು ಮಾರು ಮೇಲೆ ಹೋಗಿದೆ. ಏಳುವರೆ ಆಗಿ ಹೋಗಿರಬೇಕು. ಎಳೆತನದಲ್ಲಿಯೆ ಬುದ್ಧಿ ಬಲಿತ ಬಾಲಕನಂತೆ ಎಳೆ ಬಿಸಿಲು ಚುರುಕಾದ ಅಚ್ಚ ಕಿರಣಗಳಲ್ಲಿ ಕಳಕಳಿಸುತ್ತದೆ. ಹತ್ತಿರದ ಹಳ್ಳಿಗಳಿಂದ, ಅಲ್ಲಲ್ಲಿಯ ಗುಡಿಸಲುಗಳಿಂದ ಗಡಬಡಿಸಿ ಎದ್ದ ಕೂಲಿಯವರು ಹಲಕುರಕಿ-ಬಟ ಕುರುಕಿ ರಸ್ತೆಯ ಕೆಲಸಕ್ಕೆ ಹೊರಟಿದ್ದಾರ. ಹಲವಾರು ದಿನಗಳಿಂದ ನಡೆದ ಕಾರ್ಯಚಕ್ರದಲ್ಲಿ ಇದೊಂದು ದಿನ ಎಂಬಂತೆ ಯಾಂತ್ರಿಕವಾಗಿ ಆ ಹನ್ನೊಂದು ಸಾವಿರ ಜನ ನಡೆದಿದ್ದರು. ಬದುಕಲು ಬೇರೆ ದಾರಿಯಿಲ್ಲ; ಈ ದಾರಿಯಿಂದ ಎಷ್ಟು ದಿನ ಬದುಕಬಹುದೆಂಬುದು ಭರವಸೆಯಿಲ್ಲ. ಆದರೂ ನಿನ್ನೆ ಹೋಗಬೇಕಾ ದವರು ಇಂದು ಇರುವಂತಾಯಿತಲ್ಲ, ನಾಳಿನದು ನಾಳೆಂಬುದೇ ಅವರೆಲ್ಲರವೃತ್ತಿ. ಅವರ ಮೈಯಲ್ಲಿ ತ್ರಾಣವಿಲ್ಲ, ಹುರುಪಿಲ್ಲ. ಆದರೆ ತುತ್ತಿನ ಚೀಲದ ಸಲುವಾಗಿ ದುಡಿಯುವದಕ್ಕೆಂದು ಇಲ್ಲದ ತ್ರಾಣವನ್ನು ತಿಣುಕಿ ತರುತ್ತಾರೆ. ಹೆಣ್ಣೇನು, ಗಂಡೇನು—ಮೊದಲೇ ರೂಪ, ಬಣ್ಣ ಅಷ್ಟಕಷ್ಟೇ—ಈಗಂತೂ ಗೋರಿಯಿಂದ ಎದ್ದು ಬಂದ ಹಲವು ಕಾಲದ ಹಿಂದಿನ ಹೆಣಗಳಂತೆ ಅವರು ನಡೆದು ಬರುತ್ತಿ ದ್ದಾರೆ. ಬಟ್ಟೆಗಳೆಲ್ಲ ಹರಕು, ಕೊಳಕು. ಕೆಲವು ಹೆಂಗಸರ ಬಗಲಲ್ಲಿ ಜೋಲು ಮೋರೆಯ ಕೂಸುಗಳಿವೆ. ಯಾರೂ ನೋಡಲಾಗದೆಂದೇನೋ ಹಲವರು ಬೆನ್ನಿನ ಜೋಳಿಗೆಯಲ್ಲಿ ತಮ್ಮ ಆ ದಾರಿದ್ರ್ಯ ಸೃಷ್ಟಿಯನ್ನು ಮುಚ್ಚಿ ಮುನ್ನಡೆಯುತ್ತಿ ರುವರು. ಎಂಟಾಯಿತು. ಇನ್ನು ದಿನದ ಕೆಲಸ ಸುರುವಾಗಬೇಕು. ಆದರೆ ಸುರು ವಾಗಲಿಲ್ಲ. ತಂತಮ್ಮ ಕೆಲಸದ ಜಾಗೆಯಲ್ಲಿ ಎಲ್ಲರೂ ಹಾಜರಾಗಿದ್ದಾರೆ. ಆದರೆ ಸಲಕಿ ಗುದ್ದಲಿಗಳಿಗೆ ಕೈಹಚ್ಚಲೊಲ್ಲರು. ಏನೋ ಗುಜುಗುಜು ನಡೆದಿದೆ. ಯಾವುದೋ ಪಿಸು ಮಾತಿನ ಸಂದೇಶ ಮೈಲುದ್ದದ ದಾರಿಗುಂಟ ಒಬ್ಬರಿಂದಒಬ್ಬ ರಿಗೆ ಅಲೆದು ಮುಟ್ಟುತ್ತಲಿದೆ. ಅದರ ಪರಿಣಾಮವಾಗಿ ಕೂಲಿಕಾರರೆಲ್ಲ ಬಿಸಿಲು ಕಾಯಿಸುತ್ತ ಕೂತುಬಿಟ್ಟರು. ಎಂಟುವರೆ ಆಗುತ್ತ ಬಂತು. ಹೀಗೇಕೆ ಆಯಿ ತೆಂದು ಗ್ಯಾಂಗರರು ತಮ್ಮ ಪಥಕಗಳ ನಿರೀಕ್ಷಣೆಗೆ ಓಡಿದರು. ಎಲ್ಲ ಕಡೆಗೆ ಅದೇ 'ಬೈಠಾಸಂಪು.' 'ಏ ಸೂಳಿಮಕ್ಕಳ, ಏಳರಿನ್ನ ಕೆಲಸಕ್ಕ' ಎಂದು ಅವರು ಗದ್ದರಿಸಿ ನೋಡಿದರು. ಅದರ ಉಪಯೋಗವಾಗಲಿಲ್ಲ. ಆಮೇಲೆ ಒಬ್ಬ ಗ್ಯಾಂಗ ರನು ಒಂದು ಬೇವಿನ ಗಿಡದ ರಂಬೆಯನ್ನು ಕಿತ್ತಿ ತಂದು ಝುಬರಿಮಾಡಿ ಬೆನ್ನಿಗೆ ಹೊಡೆಯುತ್ತ ಎಬ್ಬಿಸಹತ್ತಿದನು, 'ಸುಮ್ನಾಕ ಕುಂತು ತಿನಬೇಕಂತಿರೇನು ಬಿಕ

ನಾಸಿಗೋಳ !' ಎಂದು ಮುಂತಾದ ಬೈಗುಳೊಡನೆ ಜೋರಾದ ಏಟುಗಳು ಬೀಳುತ್ತಿದ್ದವು. ಕೆಲವು ಹೆಣ್ಣುಮಕ್ಕಳ ಬೆನ್ನ ಮೇಲೂ ಬಿದ್ದವು. ಅವರು ಚಿಟ್ಟೆಂದು ಚೀರಿದರು,ಹೊಯ್ಯೆಂದು ಅಳಹತ್ತಿದರು.ಉಳಿದ ಗ್ಯಾಂಗರರೂ ಇದರ ಅನುಕರಣ ಮಾಡಲಾಗಿ ಆವರಣವೆಲ್ಲ ಆಕ್ರೋಶಮಯವಾಯಿತು.ಅಂದು ನಿತ್ರಾಣದಲ್ಲಿಯೂ ತರುಣ ಕೂಲಿಕಾರರ ರಕ್ತ ಕುದಿಯಿತು. ಹೊಟ್ಟೆಗಾಗಿ ತಾವುಯಾರ ಆಧೀನ ಎಂಬುದರ ಅರಿವು ಹಾರಿಹೋಯಿತು. ಅವರು ಅಲ್ಲಲ್ಲಿ ನುಗ್ಗಿ ಗ್ಯಾಂಗರರ ಕೈಯಲ್ಲಿಯ ಝುಬರಿಯನ್ನು ಕಸಿದುಕೊಂಡು ಕುತ್ತಿಗೆಗೆ ಕೈಕೊಟ್ಟು ಹಿಚುಕಲು ಸಿದ್ಧರಾದರು.ಈ ಪ್ರತೀಕಾರವನ್ನುನೋಡಿ ಮುದುಕರು, ಹೆಂಗಸರು ಹಿಗ್ಗಿ ತಮ್ಮ ನೋವನ್ನು ನುಂಗಿದರು.' ಹೊ ! ಹೇ ! ' ಎಂದು ಮುಂತಾದ ಹುಚ್ಚುಆವೇಶದ ಕೂಗುಗಳು ದಿಕ್ಕು ತುಂಬಿದವು.

ಇಷ್ಟರಲ್ಲಿ ಅಲ್ಲಿಯ ಕೆಲಸದ ಮುಖ್ಯ ಮೇಲ್ವಿಚಾರಕರಾದ ಓವರಸಿಯರು ಕಾಮಗಾರಿಗೆ ಸಂಬಂಧಿಸಿದ ಕೆಲವು ನೌಕರರೊಡನೆ ಅಲ್ಲಿಗೆ ಬಂದರು. ನಡೆದ ಕೋಲಾಹಲ ನೋಡಿ ಅವರಿಗೆ ದಿಕ್ಕು ತಪ್ಪಿದಂತಾಯಿತು. ಶಾಂತವಾಗಿ ನಡೆಯುವ ದುಡಿತದ ಬದಲು ದೊಡ್ಡ ದಂಗೆಯುದಳ್ಳುರಿ ಅವರ ಕಣ್ಣಿಗೆ ಬಿದ್ದಿತು. ಇದೇನೋ ಮಾರಾಮಾರಿ ನಡೆದಿದೆಯೆಂದು ತಿಳಿದು ಹಿಂಜರಿದು ನಿಂತರು. ಜನದ ಸಮುದ್ರ ಗ್ಯಾಂಗಮುಖ್ಯರನ್ನು ಕೈಯಲ್ಲಿ ಗಟ್ಟಿಹಿಡಿದು ಸೆರೆಯಾಳುಗಳಂತೆ ಎಳೆಯುತ್ತ ಮೇಲ್ವಿಚಾರಕರು ನಿಂತೆಡೆಗೆ ಸರಿಯಿತು. ತಮ್ಮ ಅವಸ್ಥೆ ಆಯಿತೆಂದು ಅವರು ಕೈಕಾಲು ಥಣ್ಣಗಾಗಿ ನಿಂತರು. ಜನವೆಲ್ಲ ಹತ್ತಿರ ಬಂದು ನಿಂತು'ಕೊಲ್ಲರಿ ಇವರ್ನ, ಕೊಲ್ಲರಿ ಇವರ್ನ ! ' ಎಂಬ ಘೋಷವಾಕ್ಯವನ್ನು ಕೂಗತೊಡಗಿತು. ತಮ್ಮನ್ನೇ ಕುರಿತು ಈ ರ[illegible]ರ್ಜನೆ ಇರಬಹುದೆಂದು ಓವರಸಿಯರು ಹೆಂಡತಿ ಮಕ್ಕಳನ್ನು ನೆನಸಿ ಸಂಕಟಪಟ್ಟರು.ಅವರೊಡನೆ ಬಂದ ಒಬ್ಬಿಬ್ಬರು ಹಿಂದಿನಿಂದಲೆ ಸಾಯುಕಲ್ಲೇರಿ ಪಲಾಯನ ಮಾಡಿದರು. ಆ ಜನಸಂದಣಿಯ ಮುಂಭಾಗಕ್ಕೆಎಲ್ಲ ಗ್ಯಾಂಗರರನ್ನು ಎಳೆತಂದು ಒಬ್ಬಿಬ್ಬರು ಆಡಿದರು : 'ನೋಡಿರಿ ಸಾಯೇಬ್, ಇವರು ಸುಮ್ಮಸುಮ್ಮಾಕ ನಮಗ ಹೆಂಗಸರಿಗೆ ಝುಬರೀಲೆ ಹೊಡದು ಜೀವತಗೋತಿದ್ದರು. ಇವರ್ನ ನಿಮ್ಮ ಇದರಿಗೇ ಕೊಂದ ಹಾಕತೀವಿ.' ಇದನ್ನು ಕೇಳಿ ತಮ್ಮ ಬಗ್ಗೆ ತಕರಾರಿಲ್ಲವೆಂದೂ ಈ ಕೊಲೆಪಾತಕಕ್ಕೆ ತಾವು ಗುರಿಯಲ್ಲವೆಂದೂ ತಿಳಿದ, ಆ ಓವರಸಿಯರು ಉಸಿರ್ಗರೆದು ಧೈರ್ಯ ತಾಳಿದರು. ತೋರಿಕೆಗೆ ಆದರೂ ಅವರು ಗ್ಯಾಂಗರರನ್ನು ಜೋರಾಗಿ ಬಯ್ದರು.ಅವರಿಗೆ ದಂಡ ಮಾಡಿ ಹೊಡಿಸುವೆನೆಂದರು

ಆಗ ಆ ತರುಣರ ಪಿತ್ತ ತುಸು ಇಳಿದು ಗ್ಯಾಂಗರರನ್ನು ಬಿಟ್ಟುಕೊಟ್ಟರು. ಅವರು ತಾವು ಬದುಕಿದ್ದು ಹೆಚ್ಚಾಯಿತೆಂದು ಓವರಸಿಯರ ಹತ್ತಿರ ಬಂದು ತಲೆಬಾಗಿ ನಿಂತರು. ಆಮೇಲೆ ಓವರಸಿಯರು 'ಹೋಗಿರಿನ್ನ ದಗದಕ್ಕ ; ಒಂಬತ್ತು ಬಡ ದ್ಹೋತು. ಹಿಂಗ ಮಾಡಿದರ ನಿಮ್ಮದಿನಗೂಲಿ ಕಟಾವಾದೀತು.' ಎಂದು ಒದರಿ ಹೇಳಿದರು.

ಆಗ ಒಬ್ಬ ದಿಟ್ಟತರುಣನು ಮುಂದೆ ಬಂದು 'ರಾವಸಾಯೇಬ್, ನಮ್ಮ ಹದಿನೈದು ದಿನದ ಕೂಲಿ ನಿಂತತಿ. ಕೂಲಿ ಕೊಡಾಕಬೇಕು, ಕಾಳು ಕೊಡಸಾಕ ಬೇಕು, ಅಂದರ ದಗದಕ್ಕ ಹೊಕ್ಕೇವಿ.' ಎಂದು ಸಾರಿದನು.

'ಹೌದು ಹೌದು' ಜನಸಂಮರ್ದವೆಲ್ಲ ಮಾರ್ನುಡಿಯಿತು.

'ನಾಳೆನಾಡ್ದು ಕೊಡಸತೀನಿ ಹೋಗರಿ' ಎಂದು ಅವರು ಹೇಳಲು 'ಇವತ್ತs ಬೇಕು. ನಾವೇನು ಹೊಟ್ಟಿಗೆ ಕ್ಯಾರ ಹಾಕಿಕೊಳ್ಳೋಣೇನು ?' ಎಂಬ ಉತ್ತರ ಬಂತು.

'ತೊಪ್ಪಲ ತಿಂದು ಬದಕೀವಿ, ಹಾಕ್ಕೋಳಾಕ ಕ್ಯಾರ ಸೈತಿಲ್ಲ !' ಎಂದಿತು ಇನ್ನೊಂದು ಧ್ವನಿ.

' ನೀವೇನೊ.ಯಪ್ಪ, ರೋಟ್ಟಿ ತಿಂದು ಚಾ ಕುಡದಕ್ಯಾಸ ಬಂದೀರಿ.ನಮಗ ಇಲ್ಲಿ ಕುಡ್ಯಾಕ ನೀರಕಾಳಿಲ್ಲ.' ಎಂದು ಒದರಿತು ಇನ್ನೊಂದು ಬಾಯಿ.

ಏನು ಹೇಳಬೇಕೆಂಬುದು ತಿಳಿಯದೆ ಓವರಸಿಯರು ಬೆಪ್ಪಾದರು. ತಮ್ಮ ಪರಿವಾರದೊಂದಿಗೆ ಕೆಲಹೊತ್ತು ಮಾತಾಡಿದರು. ಆಮೇಲೆ ನಾಳೆ ತಪ್ಪದೆ ಕೂಲಿ ಕೊಡುವದಾಗಿಯೂ ಈ ಹೊತ್ತು ಕೆಲಸಕ್ಕೆ ಕೈಹಚ್ಚಬೇಕೆಂದೂ ಬೇಡಿಕೊಳ್ಳ ಲಾಯಿತು. ಆಗ ಕೂಲಿ ಕಾರರ ಮುಖಂಡರೆಲ್ಲ ಸೇರಿ ಮಾತಾಡಿ ನಾಳಿನ ವರೆಗೆ ತಡೆದು ನೋಡೋಣ ಎಂದು ನಿರ್ಧರಿಸಿ ಬೇಡಿಕೆಗೆ ಒಪ್ಪಿದರು. ಅಲ್ಲಿಂದ ಅರ್ಧ ಘಂಟೆಯಲ್ಲಿ ಎಲ್ಲರೂ ತಂತಮ್ಮ ಜಾಗಗಳಿಗೆ ಹೋಗಿ ಕೆಲಸಕ್ಕೆ ಸನ್ನದ್ಧರಾದರು. ಅಂದಿನ ಮಟ್ಟಿಗೆ ಕೂಳಿನ ಕಾಳಗ ಮುಗಿದು ತಾತ್ಪೂರ್ತಿಕ ಸಂಧಿಯಾಯಿತು. ಅದೇ ಹೊತ್ತಿಗೆ ಯಾರೋ ನಾಲ್ಕೈದು ಜನ ಹೊಸಬರು ಗದ್ದಲದಿಂದ ಮುಂದೆ ಬಂದು' ರಾವಸೇಯೇಬ್ ನಮಗೀಟು ಕೂಲಿಗೆ ಹಚಿಗೋರಿ' ಎಂದು ಅಂಗಲಾಚಿ ದರು' ಈವತ್ತ ಆಗಾಣೆಲ್ಲ, ಹೋಗರಿ' ಎಂದು ಮೊದಲು ಓವರಸಿಯರು ಝುಬ ರಿಸಿದರು. ಆದರೆ ಅವರು ತಿರುತಿರುಗಿ ಕೇಳಹತ್ತಿದರು. ಕೂಡಿದ ಜನವೂ ಹೊಸ ಬರಿಗೆ ಸಹಾನುಭೂತಿ ತೋರಿಸಿತು. ಆಗ ನಿರ್ವಾಹವಿಲ್ಲದೆ ಅವರನ್ನು ತೆಗೆದು

ಕೊಳ್ಳಲು ಒಬ್ಬ ಗ್ಯಾಂಗ್ ಮುಖ್ಯನಿಗೆ ಹೇಳಿ ಓವರಸಿಯರು ಈ ವರೆಗಾದ ಕೆಲಸದ ನಿರೀಕ್ಷಣೆಗೆಂದು ವರ್ಕ್ಸ ಇನಸ್ಪೆಕ್ಟರೊಂದಿಗೆ ತುದಿಯಿಂದ ತುದಿಯವರೆಗೆ ಓಡಾಡತೊಡಗಿದರು. ಬಿಸಿಲು ನೆತ್ತಿಗೇರುವದರಲ್ಲಿತ್ತು. ಕೆಳಗೆ ಕರೇ ನೆಲ, ಮೇಲೆ ನೀಲಿ ಆಕಾಶದಲ್ಲಿ ಒಬ್ಬನೇ ಒಬ್ಬನಾದ ಬಿಳಿಬಿಳಿ ನೇಸರ. ಅವನ ಕೋಟ್ಯಾವಧಿ ಕಿರಣಗಳು ಕಾದ ಕಬ್ಬಿಣದ ಮೊಳೆಗಳ ಮಳೆಯಂತೆ ಎಲ್ಲಕಡೆ ಬೀಳುತ್ತಿವೆ—ಕೂಲಿಕಾರರ ಕರಿಮೈಗಳಿಂದ ಬೆವರುಹನಿಗಳು ಕೆಳಗುರುಳುತ್ತಲಿವೆ. ನೆಲವನ್ನು ಹಡ್ಡಲು ಬಾಗಿದ ಹಣೆಯಮೇಲೆ ಮುತ್ತಿನಮಾಲೆಯಂತೆ ಬೆವರುಕೂಡಿಕೊಳ್ಳಲು ಅವನ್ನು ಎಡಗೈಯಿಂದ ಒರಸಿ ಒಗೆಯುತ್ತ ಅವರು ಕೆಲಸ ಸಾಗಿಸಿದ್ದಾರೆ.. ಹೆಜ್ಜೆಹೆಜ್ಜೆಗೆ ಉಸ್ಸೆನ್ನುತ್ತ ಮಣ್ಣಿನ ಪುಟ್ಟಿಗಳನ್ನೆತ್ತಿತಂದು ಹೆಂಗಸರು ಒಬ್ಬರೊಬ್ಬರಿಗೆ ಕೊಡುತ್ತಿದ್ದಾರೆ. ಒಂದು ಕಡೆ ಗುದ್ದಲಿಯಿಂದ ನೆಲ ತೋಡುವುದು, ಸಲಿಕೆಯಿಂದ ಮಣ್ಣು ಬಳಿಯುವುದು, ಪುಟ್ಟಿಯಲ್ಲಿ ಅದನ್ನು ತುಂಬಿಕೊಡುವುದು ನಡೆದಿದೆ. ಇನ್ನೊಂದು ಕಡೆ ಕಲ್ಲನ್ನೊಡೆದು ಖಡಿಮಾಡುವ ಖಣ ಖಣ ನಾದ ನಡೆದಿದೆ. ರಸ್ತೆಯ ಮೇಲೆ ಖಡಿ ಹಾಕಿ, ಮೇಲೆ ಮಣ್ಣನ್ನು ಹಾಕಿ ರೋಲರಿನಿಂದ ಸಮ ಮಾಡುವುದೂ ಸಾಗಿರುತ್ತದೆ. ಹೊಟ್ಟೆಯಲ್ಲಿ ಸರಿಯಾಗಿ ಕೂಳಿಲ್ಲದೆ ಈ ಜನಕ್ಕೆ ಕೆಲಸ ಮಾಡುವ ಬಲವೆಲ್ಲಿಂದ ಬಂತು ಎಂಬುದು ತಿಳಿಯುವಂತಿರಲಿಲ್ಲ. ತಂತಮ್ಮ ಗ್ಯಾಂಗಿನ ಕೂಲಿಕಾರರಿಗೆ ಹಲ್ಯಾ ಹಲ್ಯಾ ಎನ್ನುತ್ತ ಗ್ಯಾಂಗರ ಜನರು ಕೆಲಸ ತೆಗೆದುಕೊಳ್ಳುತ್ತಲಿದ್ದಾರೆ. ಒಳಗಿನ ಬಲಕ್ಕಿಂತ ಈ ಹೊರಗಿನ ಒತ್ತಾಯದ ಬಲ ಹೆಚ್ಚಾಗಿದ್ದರಿಂದ ಕೆಲಸ ಅದು ಹೇಗೋ ನಡೆದಿದೆ. ತಂಬಾಕ ಸೇದುವ ನೆವದಿಂದ ಕೆಲಹೊತ್ತು ಕೂಡುತ್ತ, ಕಾಲಿಗೆ ಮುಳ್ಳು ನಟ್ಟಿತೆಂದು ಕುಂಟುತ್ತ ತರತರದನೆವ ತೆಗೆದು ಗಂಡು—ಹೆಣ್ಣು ಕೆಲಸ ತಪ್ಪಿಸಿಯೂ ಮಾಡುವಂತೆ ನಟಿಸುತ್ತಿರುವರು. ಇದೆಲ್ಲ ಗೊತ್ತಿದ್ದೂ ಸರಕಾರದ ಏಕನಿಷ್ಠ ಸೇವಕರಂತೆ ಗ್ಯಾಂಗಮುಖ್ಯರು ಎಲ್ಲ ಕಡೆಗೆ ಓಡಾಡಿ ಚಟುವಟಿಕೆಯ ನಟನೆ ಮಾಡುತ್ತಿರುವರು. ಅವರಿಗ ತಮ್ಮ ಮೇಲಿನವರ ಹೆದರಿಕೆ. ಆ ಮೇಲಿನವರಿಗೆ ಇನ್ನೂ ಮೇಲಿನವರೆಲ್ಲಿ ಬಂದು ತಮ್ಮ ಎದೆಯ ಮೇಲೆ ಕೂಡುವರೋ ಎಂಬ ಭಯ. ಸರಕಾರಿ ಕೆಲಸಗಳೆಲ್ಲ ನಡೆಯುವ ರೀತಿಯೇ ಹೀಗೆ. ಹೊಟ್ಟೆಗಾಗಿ ಸಿಕ್ಕಷ್ಟು ಸಿಕ್ಕಹಾಗೆ ದೋಚಿಕೊಳ್ಳುವುದು ಮುಖ್ಯ. ಪಗಾರ, ಭತ್ತೆ, ಲಂಚ ಯಾವ ದಾರಿಯಿಂದ ಹಣ ಹರಿದು ಬಂದರೂ ಬೇಕು. ತೋರಿಕೆಯ ನಿಷ್ಠೆ ಇದು ಇವರ ಭಕ್ತಿಮಾರ್ಗದ ಸೂತ್ರ. ಅಪರೂಪವಾಗಿ ಮಾತ್ರ ಕೆಲವು ಧರ್ಮರಾಜರು ಸಿಗುತ್ತಾರೆ. ಅವರಲ್ಲಿ ಸಹ ಕೆಲವರು

ಕ್ರಮೇಣ ಕಲಿಯುಗದ ಧರ್ಮಕ್ಕೆ ಮನಸೋತು ಬದಲಾಗುತ್ತಾರೆ.

ಒಂದು ಕಡೆ ತೋಡಿದ ತೆಗ್ಗಿನಿಂದ ಮಣ್ಣು ತುಂಬಿ ರಸ್ತೆಯ ಮೇಲೆ ತಂದು ಹಾಕುವುದು ನಡೆದಿದೆ. ಎರಡೆರಡು ಮಾರಿಗೆ ಒಬ್ಬರಂತೆ ಸಾಲಾಗಿ ಬೇರೆ ಬೇರೆ ವಯಸ್ಸಿನ ಹೆಂಗಸರು ನಿಂತು ತುಂಬಿ ಬಂದ ಪುಟ್ಟಿಗಳನ್ನು ಮುಂದೆ ಮುಂದೆ ಸಾಗಿಸುತ್ತಿದ್ದಾರೆ. ನಡುನಡುವೆ ಬಿಸಿಲು ನೆತ್ತಿಗೇರಿತೇ, ಕೆಲಸ ಮುಗಿಯುವ ಹೊತ್ತಾಯಿತೇ ಎಂದು ಕಣ್ಣೆತ್ತಿನೋಡುತ್ತಿದ್ದಾರೆ. ಕೆಲಸ ಮಾಡುವಾಗ ತೊಡಕಾಗಬಾರದೆಂದು ತಮ್ಮ ಚಿಂದಿಸೀರೆಗಳನ್ನು ಮೊಣಕಾಲ ವರೆಗೆ ಗಂಡುಕಚ್ಚಿ ಹಾಕಿ ಹಿಂದೆ ಸಿಗಿಸಿದ್ದಾರೆ. ಹೊತ್ತುಕೊಂಡ ಸೆರಗು ಕೆಲಸದ ಭರದಲ್ಲಿ ಕೆಳಗೆ ಬೀಳುತ್ತಿದೆ; ಎದೆಯನ್ನು ತೋರುತ್ತದೆ. ಕೆಲವರು ಕೂಡಲೆ ನಾಚಿ ಸೆರಗನ್ನು ಮೇಲೆಳೆದುಕೊಂಡು ಬಾಯಲ್ಲಿ ಚುಂಗು ಹಿಡಿದುಕೊಳುತ್ತಾರೆ. ಇಂಥದನ್ನು ಮಣ್ಣು ಹರವುವ ಗಂಡಾಳು ದೂರದಿಂದಲೇ ನೋಡಿ ಅಳಿಯಾಸೆಯಿಂದ ಪುಲಕಿತನಾಗುತ್ತಾನೆ; ನೋಡಿದ್ದು ತಪ್ಪೆಂದು ಮೋರೆಯನ್ನು ಹೊರಳಿಸುತ್ತಾನೆ. ಆದರೆ ಮೈಯೆಲ್ಲ ವಿದ್ಯುತ್ತಿನ ಅಲೆಯಂತೆ ಆವರಿಸಿದ ಆ ಉದ್ರೇಕಹೋಗುವುದಿಲ್ಲ. ಕೆಲಸದ ಮೇಲಿನ ಲಕ್ಷ್ಯ ಕಡಿಮೆಯಾಗುತ್ತದೆ. ಗ್ಯಾಂಗಮುಖ್ಯನು ಬಂದ ಗದ್ದರಿಸುತ್ತಾನೆ. ಆಗ ಮತ್ತೆ ಚುರುಕಾಗಿ ಕೆಲಸಕ್ಕೆ ಅರಂಭ. ಒಮ್ಮೆ ಸಾಲಿಗೆ ಸಾಲನ್ನು ನೋಡಲೆಂದು ಆ ಗ್ಯಾಂಗಮುಖ್ಯನು ಬಿಂಕದಿಂದ ನಡೆದು ಬಂದನು. ವಿಧವಿಧದ ಹೆಣ್ಣುಗಳ ಹತ್ತಿರದಲ್ಲೇ ಸುಳಿದನು. 'ಹೂ, ಗಸಗಸ ಕೊಡ್ರಿ!' ಎಂದು ವಿಧಿಸಿದನು. ಅವರ ಆಲಸ್ಯಕ್ಕಾಗಿ ಕೆಡೆನುಡಿಯುವದಕ್ಕೆಂಬ ನೆವದಿಂದ ತುಂಬುಜವ್ವನದ ಹೆಣ್ಣಾಳುಗಳ ಹತ್ತಿರ ತುಸು ನಿಂತನು. ಕಾಳಿ-ಬೋಳಿಯಂಥ ಬೈಗುಳನ್ನು ಸಹಜ ಸಲಿಗೆಯಿಂದ ಬಳಸಿದನು. ಅವನ ಶಾಪವೇ ದೊಡ್ಡ ಅನುಗ್ರಹವೆಂದು ಬಗೆದಂತೆ ಅವರು ವಿಲಾಸದಿಂದ ಬಾಗಿ ಮುಗುಳುನಗೆಯನ್ನು ಬೀರಿದರು. ಅವನಿಗೆ ಅಷ್ಟೇ ಸಾಕು. ಹೀಗೆ ಹಿಂದೆ ನಡೆಯುತ್ತ ಅವನು ಕೊನೆಯ ಹೆಂಗಸಿನ ವರೆಗೆ ಬಂದನು. ಮಣ್ಣನ್ನು ತೆಗ್ಗಿನಿಂದ ತುಂಬಿ ಕೊಡುತ್ತಿದ್ದಳವಳು. ಅಲ್ಲಿ ನಿಂತು ನೋಡಿ ಅವಳ ಮೈಗಳ್ಳತನದಿಂದ ಕೆಲಸ ಸಾವಕಾಶ ನಡೆದಿದೆಯೆಂಬ ಶೋಧವನ್ನುಮಾಡಿ ಹಿಗ್ಗಿದನು. ಆದರೆ ಅವನ ಒಳಮನವು ಅವಳನ್ನು ನೋಡುವುದಕ್ಕೆ ದೊರೆತ ಸಂಧಿಗೆ ಹಿಗ್ಗಿತ್ತು. 'ಏ ಸಂಗೀ, ಬಲೆ ಕಳ್ಳಿ ಆನೀ!' ಎನ್ನುತ್ತ ಹತ್ತಿರ ಹೋಗಿ ಅವಳು ಪುಟ್ಟಿಯನ್ನೆತ್ತಲು ಬಾಗಿರುತ್ತಲೆ ಕುಬಸದಿಂದ ಕೊಸರಿ ಹೊರಬಂದ ಅರೆ ಎದೆಗೆ ತನ್ನ ಕೈಯಲ್ಲಿಯ ಚಂಚಿಯನ್ನು

ತಾಕಿಸಿದನು. ಅವನ ಮೈ ಜುಮ್ಮೆಂದಿತು. ಹುಚ್ಚು ಭಾವಾವೇಶದಿಂದ ಒಂದು ಕ್ಷಣ ಮೈಮರೆತನು.

ಸಂಗವ್ವನ ಮುಖ ಕೆಂಪಗಾಯಿತು. ತಾನು ಕೂಲಿಯ ಆಳೆಂಬ ಅರಿವು ತಪ್ಪಿ 'ಯಾಕೋ ಮೂಳ, ಜೀವ ಬ್ಯಾಡಾಗೆತ್ತೇನು ?' ಎಂದು ಒದರಿದಳು.

'ಹೌದು. ನನಗ ಜೀವ ಬ್ಯಾಡಾಗೇತಿ, ನಿನಗ ದಗದ ಬ್ಯಾಡಾಗೇತಿ. ಇಬ್ಬರೂ ಏಕಾಡೆವೇಳು !' ಎಂದು ಒರಟು ಹಾಸ್ಯದ ಧಾಟಿಯಲ್ಲಿ ಮಾತಾಡಿ ತನ್ನ ಸುಪ್ತಭಾವವನ್ನು ಸೂಚಿಸಿದನು. ಅವಳ ಜೀವಕ್ಕೆ ಹತ್ತಿದ ಉರಿ ಅವನಿಗೆ ತಿಳಿಯಲಿಲ್ಲ. ಅವನನ್ನು ಸುಡುತ್ತಿದ್ದ ಅಳಿಯಾಸೆ ಅವಳಿಗೆ ಅರ್ಥವಾಗಲಿಲ್ಲ. ಹೆಚ್ಚು ಆಡಿದರೆ ಉಳಿದವರಿಗೆ ಗೊತ್ತಾಗಿ ತನ್ನದೇ ಸುಮಾರು ಆಗುವದೆಂದು ಸಂಗವ್ವ ಹೇಗೋ ನುಂಗಿಕೊಂಡು ಸುಮ್ಮಗಾದಳು. ಹನ್ನೆರಡಾಯಿತೆಂದು ಎಲ್ಲ ಕಡೆಯ ಕೂಲಿಕಾರರು ಕೆಲಸ ಬಿಟ್ಟು ಹೊರಟರು. ಅದರಿಂದ ಪ್ರಕರಣ ಅಲ್ಲಿಗೇ ತಡೆಯಿತು.

ಸಂಗವ್ವ ನಡುನೆತ್ತಿಯ ಬಿಸಿಲಿಗಿಂತ ತನ್ನ ಅವಮಾನದ ತಾಪದಿಂದ ಬೆಂದುರಿಯುತ್ತಿದ್ದಳು. ಅವಳು ಮೆಲ್ಲಗೆ ಕಾಲಿಡುತ್ತ ಜಾಲಿಗಿಡವೊಂದರ ನೆರಳಲ್ಲಿ ಒಬ್ಬಳೇ ಹೋಗಿ ಕುಳಿತಳು. ಜೊತೆಗಾತಿಯರು ಯಾರೊಡನೆಯೂ ಮಾತಾಡಲೂ ಅವರ ಮೋರೆ ನೋಡಲೂ ಅವಳಿಗೆ ಮನಸ್ಸಿಲ್ಲ. ಅಷ್ಟು ನಾಚಿಕೆಯಾಗಿದೆ. ತನ್ನ ಆಯುಷ್ಯದ ಕಥೆಯೆಲ್ಲ ನೆನಸಿದಳು; ನೆನಸಿದಂತೆ ಕಣ್ಣು ತುಂಬಿಕೊಂಡು ಬಂದ ಹನಿ ಗಲ್ಲದ ಮೇಲಿಂದ ಕೆಳಗುರುಳಿದವು. ಅವಳಿಗೆ ಸಾಯುವ ಸಂಕಟವಾಯಿತು. ಒಳ್ಳೇ ಮನೆಯಿಂದಬಂದ ಹುಡುಗಿ. ತಾಯಿ-ತಂದೆ ಒಬ್ಬಳೇ ಮಗಳೆಂದು ಮಲ್ಲಿಗೆಯ ಹೂವಿನಂತೆ ಬೆಳಸಿದರು. ಬಣ್ಣ ಕರಿದಾದರೂ ಅವಳ ಮುಖದ ಮಾಟ ಮೋಹಕವಾಗಿತ್ತು. ಅಗಲಾದ ಕಣ್ಣು ಚೆಲುವಾಗಿತ್ತು. ತಿಂದುಂಡು ಮೈತುಂಬಿಕೊಂಡು ಬೆಳೆದಳು. ಯಾವುದರ ಚಿಂತೆಯೆಂಬುದೇ ಗೊತ್ತಿಲ್ಲ. ಬಿಸಿಬಿಸಿ ರೊಟ್ಟಿ ಬೇಳೆ ತಿಂದು ಗೆಳತಿಯರೊಡನೆ ಹುಣಸಿಪಕ್ಕ ಆಡುವುದು, ಹಾಡುತ್ತ ಕೋಲಾಟ ಆಡುವುದು,ಬಿಸಿಲಲ್ಲಿ ತಿರುಗುತ್ತ ಹುಣಸಿಚಿಗುರು, ಕವಳಿಹಣ್ಣು ತಿನ್ನುವುದು ಇವೇ ಅವಳ ಬಾಲ್ಯದ ಲೀಲೆಯಾಗಿದ್ದವು. ವಯಸ್ಸಿಗೆ ಬಂದಮೇಲೆ ನೆರೆಯೂರಿನ ಸಿಂಗನಿಗೆ ಸೋಸಿನಿಂದ ಮದುವೆ ಮಾಡಿಕೊಟ್ಟರು. ಅಲ್ಲಿಯೂ ಅವಳಿಗೆ ದುಃಖದಸೋಂಕಿರಲಿಲ್ಲ.ಮನೆಯಲ್ಲಿ ನಾಕೆತ್ತಿನಕಮತವಿತ್ತು. ಒಂದು ತೋಟ, ನಾಲ್ಕು ಹೊಲ ಮನೆಗಳಿದ್ದವು. ಹಾಲುಹೈನವಿತ್ತು ; ಒಳ್ಳೇ

ಸ್ವಭಾವದ ಅತ್ತೆಮಾವಂದಿರಿದ್ದರು. ಐದಾರು ವರ್ಷ ಸಂಸಾರ ಮಾಡುತ್ತಿರಲು ದೇವರು ಮುತ್ತಿನಂಥ ಒಂದು ಗಂಡು, ಒಂದು ಹೆಣ್ಣು ಹೀಗೆ ಮಕ್ಕಳನ್ನು ಕೊಟ್ಟನು. ಆದರೆ, ಆರು ತಿಂಗಳಲ್ಲಿ ಎಲ್ಲ ಮೂರಾಬಟ್ಟೆ ಆಯಿತು ! ಮಳೆಬೆಳೆ ಹೋಗಿ ಊರಿಗೆ ಊರೇ ಹೌಹಾರಿತು, ಹುರಪಳಿಸಿ ಹೋಯಿತು. ದನಕರ ಕೈ ಬಿಟ್ಟವು.ಕಾಳು ತೀರಿತು. ಮಾರಿಬೇನೆ ಬಂದು ಅತ್ತೆ-ಮಾವ ಕಣ್ಣುಮುಚ್ಚಿದರು. ತನ್ನನ್ನೂ ಮಕ್ಕಳನ್ನೂ ಕರಕೊಂಡು ಗಂಡ ಗುಳೆಕ್ಕೆ ಹೋದರೆ ಅಲ್ಲಿಯ ನೀರು ಹತ್ತಿ ನಾಲ್ಕು ದಿನದಲ್ಲಿ ಅವನು ಸಾವಿನ ತುತ್ತಾದನು. ಇಷ್ಟು ದಿನ ಮುದ್ದಾಡಿ ಸಾಕಿದ ದಯುವುಳ್ಳ ದೈವ ಈಗ ಒಂದರ ಮೇಲೆ ಒಂದು ಸುತ್ತಿಗೆಯ ಪೆಟ್ಟನ್ನು ಕೊಡಹತ್ತಿತು. ಮಕ್ಕಳನ್ನು ಕಟಿಗೊಂಡು ಪರದೇಶಿಯಾಗಿ ತಿರುಗಿ ಊರಿಗೆ ಹೊರಟಳು. ಆದರೆ ಮಕ್ಕಳಿಗೆ, ತನಗೆ ಹೊಟ್ಟೆಗೇನು ಹಾಕಬೇಕು ? ಊರೂರಿಗೆ ಬಿಕ್ಕೆ ಬೇಡುತ್ತ, ಆಡಿದ್ದು ಆಡಿಸಿಕೊಳ್ಳುತ್ತ, ಸಿಕ್ಕದ್ದು ತಿನ್ನುತ್ತ ನಡೆದಳು. ಒಂದು ದಿನ ಬಿಕ್ಕೆಯೂ ಸಿಗದಾಯಿತು. ಮುತ್ತಿನಂಥ ಮಕ್ಕಳು ಸೊರಗಿ ಸಿಬರುಕಡ್ಡಿಯಾಗಿದ್ದವು. ಅವಳಿಗೆ ಬದುಕು ಸಾಕಾಯಿತು ಸಂಜೆಯ ಹೊತ್ತು ಎಲ್ಲಿಯೋ ಯಾರಿಗೂ ಕಾಣದ ಬಾವಿಯ ಬಳಿ ಎರಡೂ ಮಗ್ಗುಲಲ್ಲಿ ಮಗುಗಳನ್ನೆತ್ತಿ ಬಂದು ನಿಂತಳು. ಹಾರುವ ನಿರ್ಧಾರವಾಗಿದೆ, ಹಾರಲು ಆಗಲೊಲ್ಲದು. ಹೊಟ್ಟೆಯಲ್ಲಿಲ್ಲ. ಮೇಲೆ ನೀರನ್ನು ನೋಡಿ ಹೆದರಿಕೆಯಿಂದ ಅವು ಹಲುಬುತ್ತಿವೆ. ಅವಳು ಒಮ್ಮೆ ರಾಕ್ಷಸಿಯಂತೆ ಅವಡುಗಚ್ಚಿ ಸಾವಿಗೆ ಸಜ್ಜಾಗುತ್ತಾಳೆ. ಒಮ್ಮೆ ತಾಯಿಗರುಳು ಉಕ್ಕಿ ಬಂದು ಹೊಯ್ಕೆಂದು ಅಳುತ್ತಾಳೆ. ಇಷ್ಟರಲ್ಲಿ ಅಲ್ಲಿಗೆ ಒಬ್ಬ ದಾರಿಕಾರ—ಯಾವುದೋ ಊರಿನ ಗೌಡನಿರಬೇಕು-ಅಲ್ಲಿಗೆ ಬಂದು ಈ ಭೀಕರ ದೃಶ್ಯ ನೋಡಿ ಸಂಗವ್ವನನ್ನು ತಡೆದು ಮನವೊಲಿಸಿ ತನ್ನೊಡನೆ ಕರಕೊಂಡುಹೋದನು. ಕೆಲವು ದಿನ ಪುಣ್ಯಾತ್ಮ ಅವರನ್ನು ಇಟ್ಟುಕೊಂಡು ರಸ್ತೆಯ ಕೂಲಿಕೆಲಸಕ್ಕೆ ಕರೆತಂದು ಹಚ್ಚಿಹೋದನು. ಸಾವು ತಪ್ಪಿತು, ಆದರೆ ನಿತ್ಯಸಾವು ತಪ್ಪಲಿಲ್ಲ. ಯಾರ ಝೋಪಡಿಯಲ್ಲಿಯೋ ಮಕ್ಕಳನ್ನು ಬಿಟ್ಟು, ಒಮ್ಮೊಮ್ಮೆ ತನ್ನೊಡನೆ ಕರಕೊಂಡು ಕೂಲಿಗೆ ಬರುತ್ತಿದ್ದಳು. ಇದನ್ನೆಲ್ಲ ನೆನೆಯುತ್ತ ಇಂದಿನ ಅಪಮಾನಕ್ಕಿಂತ ಅಂದಿನ ಸಾವು ಬರಬಾರದಾಗಿತ್ತೇ? ನೀರಿನ ಹಾಸಿಗೆಯ ಮೇಲೆ ತಣ್ಣಗೆ ಮಕ್ಕಳನ್ನುಅವಚಿಕೊಂಡು ಮಲಗಿಬಿಡುತ್ತಿದ್ದೆ. ಈ ಕಲ್ಪನೆ ತಂದ ಚಿತ್ರದಿಂದ ಅವಳ ಮೈ ಮುಳ್ಳಾಯಿತು. ಅವಳಿಗೆ ಊಟ ಉಡಿಗೆ ಏನೂ ಬೇಕಾಗಿರಲಿಲ್ಲ. ನೆಲದ ಮೇಲೆ ಇದ್ದ ನೆರಳಿನಲ್ಲಿ ಹೊರಳಿದಳು. ತಾವು ತಂದ ಬುತ್ತಿಯನ್ನು

ತಿನ್ನುವದಕ್ಕೆಂದು ಕೂಲಿಕಾರರು ನೆರಳಿದ್ದ ನೆಲೆಗಳಿಗೆ ಹೋದರು. ಸರಕಾರದವರು ಇತ್ತೀಚೆ ಹಾಕಿದ ಛಪ್ಪರದ ಆಸರೆಯನ್ನು ಕೆಲವರು ಹೊಂದಿದರು.ಅಂತೂ ಎಲ್ಲ ಕಡೆ ಗದ್ದಲ ಕರಗಿತು. ಈ ಹೊತ್ತು ನೋಡಿ ಸಂಗವ್ವನ ಹುಚ್ಚು ಹಿಡಿದ ಆ ಗ್ಯಾಂಗರನು ತನ್ನ ಬುತ್ತಿಯ ಗಂಟನ್ನು ಚೀಲದಲ್ಲಿ ಹಾಕಿಕೊಂಡು ಅತ್ತಿತ್ತ ನೋಡುತ್ತ ಏನೋ ಸಹಜವಾಗಿ ಬಂದವರಂತೆ ಬಂದು, ಜಾಲಿಮರದ ಹತ್ತಿರ ನಿಂತನು.ಸುಮ್ಮನೆ ಕಣ್ಣುಮುಚ್ಚಿ ಬಿದ್ದ ಸಂಗವ್ವನನ್ನು ನೋಡಿದನು. ತುಂಬಿದ ಆ ಎದೆ ಅವನ ಕಣ್ಣಿಗೆ ಹಬ್ಬವಾಗಿ ತೋರಿತು. ಅವಳಿಗೆ ಯಾರು ಬಂದರೆಂಬುದು ಗೊತ್ತಿಲ್ಲ. ತನ್ನ ಕೋಟಲೆಯಲ್ಲಿ ತಾ ಹೊಕ್ಕಿದ್ದಳು. ಆದರೆ ತಾ ಬಂದುದು ತಿಳಿದರೂ ತನ್ನ ಮನಸೆಳೆಯಲೆಂದು ಅವಳು ಹಾಗೆ ಒರಗಿಕೊಂಡಿರಬೇಕೆಂದು ಅವನು ಭಾವಿಸಿದನು. 'ಹಿಂಗ್ಯಾಕ ಬಿದ್ದೀಯೆ ಸಂಗಿ, ಕೆಟ್ಟ ಬಿಸಲಾಗ!' ಎಂದು ಹಿಂದೆ ಮುಂದೆ ನೋಡುತ್ತ ಹತ್ತಿರ ಕುಳಿತನು.

ಸಂಗವ್ವ ಗಾಬರಿಯಾಗಿ ತಟ್ಟನೆ ಎದ್ದು ಕುಳಿತು ಸೆರಗನ್ನು ಸಂವರಿಸಿಕೊಂಡಳು.

'ಅಬ್ಬ, ಮರಿಯಾದೆ! ಒಳೆ ಗರತಿ ಬಿಡು ನೀ!' ಎಂದನು ಆ ಗ್ಯಾಂಗರು.

ಅವನೇ ಮರಳಿ ಬಂದನೆಂದು ಸಂಗವ್ವ ಹುಬ್ಬುಗಂಟಿಕ್ಕಿ ಎದ್ದುನಿಂತು 'ಯಾಕೋ ಅಡ್ನಾಡಿ. ನಾ ಯಾರಂತ ತಿಳದೀ? ಹೋಗಿಲ್ಲಿಂದ ಎದ್ದು.' ಎಂದು ಝುಬರಿಸಿದಳು.

ಈ ಸೈರಂಧ್ರಿಗೆ ಆ ಕೀಚಕ ಹೆದರುತ್ತಾನೆಯೆ? 'ಸಾಕ ಬಿಡ ಮುರಕ. ಕೂಡೀಟ. ರೊಟ್ಟಿ ಕೊಡತೀನಿ, ತಿಂಬೂಣ ಹೊಟೆತುಂಬ. ಉಪವಾಸ ಬಿದ್ದು ದಗದ ಹೆಂಗ ಮಾಡಾಕಿನೀ?

'ಒಗಿ ನಿನ್ನ ರೊಟ್ಟಿ ಅಲ್ಲೆ ಮಣ್ಣಾಗ, ನನಗೇನು ಬೇಕಾಗಿಲ್ಲ!' ಎಂದು ಸಂಗವ್ವ ಬಿಸಿಲಲ್ಲಿ ಹೊರಡಲಾರದೆಯೂ ಹೊರಟಳು.

ನಾಲ್ಕುಹೆಜ್ಜೆ ಹೋಗಗೊಟ್ಟು ಆ ಮೂಢನು ಬೆನ್ನುಹತ್ತಿ ಕೈಹಿಡಿದೆಳೆದು 'ಏ ಸಂಗೀ!' ಎಂದು ಕೊರೆಯುವ ನೋಟದಿಂದ ತಿವಿದು 'ನೋಡಿಲ್ಲೆ, ನಿನಗ ರೊಟ್ಟಿ ಬ್ಯಾಡಾದರ ಬಿಡು. ದಗದರ ಬೇಕಿಲ್ಲೊ? ಯಾರ ತಗೊಂಡರು ದಗದಕ್ಕ ನಿನ್ನ, ಆ? ನೀ ಒಬ್ಬಾಕೇ ನೋಡು ಲೋಕದಾಗ ಹಿಂಗ ಮಾಡಾಕಿ!' ಎಂದು ತನ್ನ ಅಮೋಘವಾದ ರಾಮಬಾಣ-ಅಲ್ಲ—ಕಾಮಬಾಣವನ್ನು ಎಸೆದನು.

ಸಂಗವ್ವನು ಕೈಕೊಸರಿಕೊಂಡು ಕಕ್ಕಾವಿಕ್ಕಿಯಾಗಿ ಸುತ್ತೆಲ್ಲ ನೋಡಿ

'ರಾವಸಾಬರ ಮುಂದ ಹೇಳತೀನಿ ನಡಿ. ಮೂಳ, ಮನಿಮುರಕ !' ಎಂದು ಬಯ್ಯುತ್ತ ಕಂಬನಿ ತುಂಬಿ ಕೊರಳುಬ್ಬಿ ನಿಂತಳು.

ಅದನ್ನು ನೋಡಿ 'ಅಬ್ಬ! ಅಳು, ಅಳು, ರಾವಸಾಯೇಬರಿಗೆ ಹೇಳು. ನಾನs ಅಲ್ಲೇನು ನಿನ್ನ ಮ್ಯಾಲಿನ ರಾವಸಾಯೇಬ !' ಎಂದು ಧಸಿ ಬದಲಿಸಿ ಹತ್ತಿರ ಬಂದು 'ಸುಳ್ಳs ಯಾಕ ? ರೊಟ್ಟಿ ಬ್ಯಾಡ ಹೌದಲ್ಲ ? ಮುಟ್ಟಬ್ಯಾಡ ಹೌದಲ್ಲ ? ಹೋಗಾತs ನನಗೀಟು ತಿಳಿಯೂದಿಲ್ಲೇನು ? ನಾ ಹೊಕ್ಕೀನಿ. ನೀ ಮನಕೋ ಹೋಗು !' ಎಂದನು.

ಇದೆಂಥ ಔದಾರ್ಯ! ಪೀಡಾ ತಪ್ಪಿತೆಂದು ಅವಳು ಮುಖ ಕೆಳಗೆ ಹಾಕಿ ಜಾಲಿಯ ಬುಡಕ್ಕೆ ಹೋದಳು. ಅವನು ಅಲ್ಲಿಂದ ಹೊರಟನು. ಅವಳು ಗಿಡದ ಬುಡದಲ್ಲಿ ನಿಂತು ತನ್ನ ಕಡೆ ಬೆನ್ನು ಮಾಡಿ ಹೋಗುತ್ತಿರುವ ನರಪಿಶಾಚಿಯನ್ನು ನೋಡುವಂತೆ ನೋಡುತ್ತಿರಲು ಅವನು ಸರ್ರನೆ ತಿರುಗಿ ಕಾಮುಕ ದೃಷ್ಟಿಯನ್ನು ಬೀರಿ 'ಸಂಗಿ, ಈಗ ಹೊಕ್ಕೀನಿ. ಛಂಜಿನ್ಯಾಗ ದಗದ ಮಾಡಿಕ್ಯಾಸ ನಮ್ಮನಿಗೆ ಬಾ ಆತು. ಆಕಿ ಜೋಡಿ ಮನಗೀ ಅಂತ!' ಎಂದು ಹೇಳಿದನು.

ಇದು ಇನ್ನೂ ಹೆಚ್ಚಿನ ಔದಾರ್ಯ ! ಹೆಂಡತಿಯನ್ನು ತವರ್ಮನೆಗೆ ಹಡೆಯಲಿಕ್ಕೆಂದು ಕಳಿಸಿದ ಆ ಮನುಷ್ಯನ ಪರೋಪಕಾರಬುದ್ಧಿ ! ಅವನ ಮಾತು ಮುಗಿಯುವದರೊಳಗೇ ಸಂಗವ್ವ ನೆಲದ ಮೇಲೆ ಕುಸಿದುಬಿದ್ದಳು. ಅರ್ಧ ಮೈ ಸೂರ್ಯನ ಬಿಸಿಲಿಗೆ ಆಹುತಿಯಾಯಿತು. ಆದರೂ ಅವಳಿಗೆ ಅದರ ಪರಿವೆಯಿರಲಿಲ್ಲ. 'ಸಾವೇ, ಸೂರ್ಯನ ರೂಪ ತಾಳಿ ಬಾ' ಎಂದವಳ ಜೀವ ಕೂಗುತ್ತಿರಬೇಕು.

ಮಧ್ಯಾಹ್ನ ಎರಡರಿಂದ ಮತ್ತೆ ಕೆಲಸಕ್ಕೆ ಮೊದಲು. ಕೂಲಿಕಾರರೆಲ್ಲ ತಮ್ಮ ಜಾಗದಲ್ಲಿ ಕಲೆತರು. ಬಿಸಿಲು ಭಯಂಕರವಾಗಿದೆ. ಅಸಾಧ್ಯ ಸೆಕೆ ಹೆಚ್ಚುತ್ತಿದೆ. ಆದರೆ ಹುಟ್ಟಿದಂದಿನಿಂದ ಬಿಸಿಲಿಗೆ ಮೈಯೊಡ್ಡಿ ದಪ್ಪ ತೊಗಲಿನವರಾದ ಕೂಲಿಕಾರರಿಗೆ ಅದರ ಪರಿವೆಯಿಲ್ಲ; ಕಾಮಗಾರಿಯ ಎಲ್ಲ ಸಂಕೀರ್ಣ ಧ್ವನಿಗಳು ಕೇಳಹತ್ತಿದವು. ಗ್ಯಾಂಗಮುಖ್ಯರು ತಮ್ಮ ಗ್ಯಾಂಗಿನ ದೇಖ-ರೇಖಿ ಮಾಡುತ್ತಾ ಓಡಾಡಹತ್ತಿದರು. ದೇವೇಂದ್ರನಿಗೂ ಅವರ ಆ ಬಿಂಕ ಬರಲಾರದು. ಅವರಲ್ಲಿ ಆ 'ಸಂಗಿ'ಗೆ ಮುಗ್ಧನಾದ ಗ್ಯಾಂಗರನಿಗೆ ಬೇರೆ ಧ್ಯಾಸವೇ ಇಲ್ಲದಾಗಿದೆ. ತನ್ನ ಹಸಿದ ಜೀವದ 'ಬರಗಾಲ ಕಾಮಗಾರಿ'ಯಲ್ಲಿ ಅವನ ಮನಸ್ಸು ಮುಳುಗಿಹೋಗಿದೆ. ಸಂಗಿ ಕೆಲಸಕ್ಕೆ ಬಂದಳೇ ಎಂಬುದರ ಕಡೆಗೆ ಅವನ ಲಕ್ಷ್ಯ. 'ಪಾಪ! ಕೂಳಿಲ್ಲದೆ

ಜಾಲಿಗಿಡದಡಿಯಲ್ಲಿ ಬಿದ್ದುಕೊಂಡವಳು ಹೇಗೆ ಕೆಲಸಕ್ಕೆ ಬರಬಹುದು !' ಎಂಬ ಮಿಕ್ಕಿದ ಕಸಿಕರ ಜೀರೆ. ಎಲ್ಲ ಕಡೆ ಅವನು ನೋಟ ಬೀರಿ ನಿರುಕಿಸಿದ. ಸಂಗಿ ಕಾಣಲಿಲ್ಲ. ಜಾಲಿಯ ಬುಡದಲ್ಲಿಯೂ ಯಾರಿಲ್ಲ. ಅವಳೆಲ್ಲಿಗೆ ಹೋಗಿರಬಹುದು? ತನ್ನ ಮಾತಿಗೆ ನೈತಾಗಿಸಿ ಹೋಗಿರಬಹುದೇ ? ಛೀ, ಅವಳಿಗೆಲ್ಲಿ ಅಷ್ಟು ಮಾನ? ಹೊಟ್ಟೆ ಹೊರಕೊಳ್ಳಲು ಬಂದ ಹರೆಯದ ಹುಡುಗಿ. ಇಷ್ಟೇ ಅವಳ ಬಗ್ಗೆ ಅವನ ತಿಳಿವಳಿಕೆ. ಈ ಬೇಟೆಯನ್ನು ಬಿಡಬಾರದೆಂದು ಹೃದಯ ಹಲುಬುತ್ತಿದೆ. ಅವನು ಸುತ್ತೆಲ್ಲ ತಿರುಗಾಡಿ ಬಂದನು. ಕಟ್ಟಕಡೆಯ ಗ್ಯಾಂಗಿನಲ್ಲಿ ಅವಳು ಸೇರಿಕೊಂಡು ಕೆಲಸ ನಡೆಸಿದ್ದು ಕಂಡಿತು. ಈ ಅವಿಧೇಯತೆಗೆ ಅವನ ಹೊಟ್ಟೆ ಉರಿಯಿತು. ಆದರೆ ಅವಳೇನಾದರೂ ಇಲ್ಲಿಯೇ ಇದ್ದಾಳಲ್ಲ ಎಂಬ ಸಮಾಧಾನವೂ ಉಂಟಾಯಿತು. ಆ ಗ್ಯಾಂಗಿನ ಹಿರಿಯನನ್ನು ಕರೆದು ತನ್ನ ಗ್ಯಾಂಗಿನ ಹೆಣ್ಣಾಳು ಇಲ್ಲಿಗೆ ತಪ್ಪಿಸಿ ಬಂದಿರುವಳೆಂದು ತನ್ನ ಕಾಯದೆಶೀರ ತಕರಾರನ್ನು ತಿಳಿಸಿದನು. ಆ ಹಿರಿಯನು ಮೊದಲು ಇದನ್ನು ಗಮನಿಸಿರಲಿಲ್ಲ. ಅವಳು ಯಾರೆಂದು ಕೇಳಿ ದೂರದಿಂದ ನೋಡಿದನು. ಅವನ ಬಗೆ ತಟ್ಟನೆ ಕದಡಿತು. 'ನಿವಳದ ಹುಡುಗಿ !' ಎಂದನು. 'ಅಂದರ ?' ಎಂದು ಪ್ರಥಮ ಪ್ರಣಯಿ ಕೇಳಲು, 'ಇರ್ಲಿ ಬಿಡಲೆ ನನ್ನ ಗ್ಯಾಂಗಿನಾಗ. ಇಲ್ಲೀದೊಬ್ಬಾಕಿನ್ನ ತಗೊಂಡ ಕ್ಯಾಸ ಹೋಗು.' ಎಂದು 'ಮೋಬದಲಿ'ಯ ನ್ಯಾಯ್ಯವಾದ ಸೂಚನೆ ಮಾಡಿದನು. ಇದಕ್ಕೆ ಆ ಸಂಗಿ ಲೋಲನ ಎದೆ ಕಳವಳಗೊಂಡಿತು. ಸಿಟ್ಟು ನೆತ್ತಿಗೇರಿತು. 'ಬೇಸೈತಿ, ಯಾರ ತ್ವಾಟದ ಹಣ್ಣು ಯಾರ ಉಡ್ಯಾಗ ಬೀಳೂದೊ ಬಿಕನಾಸಿ !' ಎಂದು ದನಿಯೇರಿಸಿ ಆಡಿದನು.ಇಬ್ಬರಿಗೂ ಬಾಯಿಗೆ ಬಾಯಿ ಹತ್ತಿತು. ಹತ್ತಿರದ ಕೂಲಿಕಾರರು ಇದೇನು ಮೋಜಿನ ಕಲಹವೆಂದು ಬಾಯಿ ತೆಗೆದು ನೋಡುತ್ತ ನಿಂತರು. ಅಷ್ಟೇ ಅವರಿಗೆ ಕೆಲಸ ತಪ್ಪಿಸುವ ನೆವ ಬೇಕಾಗಿತ್ತು. ಸಂಗಿ ದೂರದಿಂದ ಆ ಮೂಢ ಬಂದದ್ದು ಕಣ್ಣೆತ್ತಿ ನೋಡಿದಳು, ಕಲಮಲಗೊಂಡಳು. ಇನ್ನೇನು ಬರುವದೋ ತನ್ನಪಾಲಿಗೆ ಎಂದು ಯೋಚಿಸುತ್ತಲಿರಲು ಅವರಿಬ್ಬರ ಜಗಳಾಟದ ಬಾಯಿ ಕೇಳಿಸಿತು. ಅದೇಕೋ ಅವಳಿಗೆ ಅರ್ಥವಾಗಲಿಲ್ಲ. ಆದರೆ ತನ್ನ ಕೆಲಸದ ವಿಷಯ ಇರಬಹುದೆಂದು ಕಾಯಾಸ ಕಟ್ಟಿದಳು. 'ಸಾಹೇಬರಿಗೆ ಹೇಳತೀನಿ, ನಿನ್ನ ಬಡತರ್ಫ ಮಾಡಸತೀನಿ.' ಎಂಬ ಆ ಮೂಢನ ಮಾತು ಕೇಳಿದವು.

ಇಬ್ಬರೂ ಕುತ್ತಿಗೆಗೆ ಕೈಹಾಕಿದರು.ಅರ್ಥಮರ್ಥಆದ ರಸ್ತೆಯ ನಿಡು ನೆಲ ಕುಸ್ತಿಯ ಕಣವಾಯಿತು. ಕೂಲಿಕಾರರೆಲ್ಲ ಪುಕ್ಕಟೆ ಪ್ರೇಕ್ಷಕರಾದರು. ಗೊಳ್ಳಂತ

ನಗೆ ಕೇಳಿತು. 'ವಾಃ! ಭಲೆ! ಶಾಬ್ಬಾಸ!' ಎಂಬ ಕೂಗು ಎದ್ದವು. ಕಾಮಗಾರಿ ಎಲ್ಲಿಯೋ ಉಳಿಯಿತು. ಈ ಜಟ್ಟಿಗಾಳಗವು ಕೆಲಸಗಾರರಿಗೆ ನಡುವೆ ವಿಶ್ರಾಂತಿ ಕೊಡಲು ಏರ್ಪಡಿಸಿದ ಮನರಂಜನೆಯ ಕಾರ್ಯಕ್ರಮವಾಯಿತು.! ಅವರ್ಯಾರೂ ತಡೆಯುವ ಉಸಾಬರಿಗೆ ಹೋಗಲಿಲ್ಲ. ಐದುಮಿನಿಟು ಹೀಗೆ ಗುದ್ದಾಡಿ ಇಬ್ಬರೂ ನೆಲಕ್ಕೆ ಬಿದ್ದರು. ಮೈಯೊರಸಿಕೊಂಡು ಎದ್ದರು. ದೂರದಿಂದ ಯಾರೋ ಸಾಯು ಕಲ್ಲ ಮೇಲೆ ಏರಿಬರುತ್ತಿದ್ದರು. ತಮ್ಮ ಮೇಲಿನ ಇನಸ್ಪೆಕ್ಟರ ಸಾಹೇಬರು ಬರು ತ್ತಿರುವರೆಂದು ಗೊತ್ತಾಗಿ ಇಬ್ಬರೂ ಸಂಭಾವಿತರಾಗಿ ತಂತಮ್ಮ ಕೆಲಸದಲ್ಲಿ ತೊಡ ಗಲಣಿಯಾದರು. ಸಂಗವ್ವನು ಬದುಕಿದೆನೆಂದು ಉಸ್ಸೆನ್ನುತ್ತ ಕೆಲಸಕ್ಕೆ ಹತ್ತಿದಳು. ಅವಳನ್ನೇ ಬಿರುಗಣ್ಣಿನಿಂದ ನೋಡುತ್ತ ಆ ವಿಟನು 'ನಾ ಏನು ಬಿಡತೀನಂತ ತಿಳಿದೀ ಏನು?' ಎಂದು ವಟವಟಿಸುತ್ತ ಹಿಂದೆ ಹಿಂದೆ ಸರಿದನು

ನಾಲ್ಕು ಗಂಟೆ ಆಗಿಹೋದರೂ ಬಿಸಿಲಿನ್ನೂ ತಗ್ಗಿಲ್ಲ. ಕಪಾಳಕ್ಕೆ ಬಡಿ ಯುತ್ತ ಕಪಾಳಮೋಕ್ಷವನ್ನು ದಯಪಾಲಿಸುತ್ತದೆ. ಒಂದು ಸಣ್ಣಕಾರೀಕಂಟಿಯ ಬುಡದಲ್ಲಿ ಹಾಸಿದ ಹರಕು ಬಟ್ಟೆಯ ಮೇಲೆ ಒಂದು ತಿಂಗಳ ಕೂಸೊಂದು ಮಲಗಿದೆ. ಹತ್ತಿರ ಯಾರೂ ಇಲ್ಲ. ಅದರ ತಾಯಿ ಎಲ್ಲಿಯೋ ಕೆಲಸದಲ್ಲಿ ಗರ್ಕಾಗಿದ್ದಾಳೆ. ತಾಯಿ ಮಲಗಿಸಿದಾಗ ತುಸು ನೆರಳಿತ್ತೇನೋ. ಈಗ ಮೈ ತುಂಬ ಬಿಸಿಲು ಬಿದ್ದಿದೆ, ಎಳೆದಾದ ಮೈಯನ್ನು ಬರ್ಜಿಯಂತೆ ಚುಚ್ಚುತ್ತಿದೆ. ಅದರ ಪರಿವೆಯಿಲ್ಲದೆ ಸಾವಿರಾರು ವರ್ಷ ಸೂರ್ಯನತ್ತ ಮುಖ ಮಾಡಿ ತಪಸ್ಸು ಮಾಡಿದ ತವಸಿಯ ಶಾಂತ ಮುಖಮುದ್ರೆಯಿಂದ ಅದು ಒರಗಿದೆ. ಬಹುಶಃ ತಾಯಿ ಅದಕ್ಕೆ ಅಫುವಿನ ಗುಳಿಗೆಯನ್ನು ಕೊಟ್ಟದ್ದೇ ಕಾರಣವಿರಬೇಕು. ನಸು ಗೆಂಪಾದ ಎಳಮೈ, ಸೀರಾದ ಕೈಕಾಲು, ಎಣ್ಣೆಗಾಣದ ಕೂದಲು, ಇನ್ನೂ ಗರ್ಭದಲ್ಲಿದ್ದಂತೆ ಕಾಣುವ ಕಣ್ಣು-ಮೂಗು. ಮೆತ್ತನ್ನ ಹಾಸಿಗೆಯಲ್ಲಿ ಮಲಗಿ ಅರ ನಿದ್ದೆಯಲ್ಲಿಯೇ ತಾಯಿಯ ಮೊಲೆ ತಿಂದು ಬೆಳೆಯಬೇಕಾದ ಈ ಕಿರಿಯ ಜೀವ ಇಲ್ಲಿ ಸೂರ್ಯನ ಪ್ರಖರ ಕಿರಣಕ್ಕೆ ಆಹುತಿಯಾಗಿ ಬಿದ್ದಿದೆ. ಯಾತಕ್ಕಾಗಿ? ತಾಯಿಯ ಹೊಟ್ಟೆಗಾಗಿ, ತಾಯಿಯಿಂದ ತನ್ನ ಹೊಟ್ಟೆಗಾಗಿ. ಐದು ಹತ್ತು ನಿಮಿಷ ಹೋದವು. ಯಾರೂ ಅದನ್ನು ನೋಡ ಲಿಲ್ಲ. ಇಂಥ ನೋಟ ನೂರರಷ್ಟು ಇರುವಾಗ ಕನಿಕರಕ್ಕೆ ಎಡೆಯೆಲ್ಲಿ? ಅದೇ ತಾನು ಬಿಸಿಲಿನ ಚುರುಕಿಗೆ ಎದ್ದು ಅತ್ತಿತ್ತ ಹೊರಳಿತು. ಕಣ್ಣು ತೆರೆದು ನೋಡಿ ಶಿವನ ಉರಿಗಣ್ಣನ್ನು ಇದಿರಿಸಿದ ಕಾಮನಂತೆ ಗಾಸಿಗೊಂಡು ಮುಚ್ಚಿತು. ವ್ಯಥೆ

ಯನ್ನು ತಾಳಲಾರದೆ ಚಿಟ್ಟೆಂದು ಚೀರಿ ಹಾಹಾ ಎಂದು ಒಂದೇ ಸವನೆ ಅಳ ಹತ್ತಿತು. ಇಷ್ಟಾದರೂ ಯಾರೂ ಕೇಳಲಿಲ್ಲ. ಹೊರಳಿ ನೋಡಲಿಲ್ಲ. ತುಸು ದೂರದಲ್ಲಿಯೇ ಕೆಲಸಮಾಡುತ್ತಿದ್ದ ಸಂಗವ್ವನಿಗೆ ಇದು ಕೇಳಿಸಿತು. ತನ್ನದೇ ತನಗೆ ಸಾಕಾದಾಗ ತನ್ನ ಮಕ್ಕಳು ಹೆರವರಗುಡಿಸಲಲ್ಲಿ ಬಿದ್ದುಕೊಂಡು ಅಳುತ್ತಿ ರುವುದು ಕೇಳಿದಂತಾಗಿ ಅವಳು ನೊಂದು ಬೆಂದಳು. ತಲೆಯೆತ್ತಿ ನೋಡಿದಳು. ತುಸು ದೂರದಲ್ಲಿ ಮಲಗಿದ ಆ ಎಳಗೂಸು ಅವಳಿಗೆ ಕಾಣಿಸಿತು. ಕೈಯಲ್ಲಿಯ ಪುಟ್ಟಿಯನ್ನೊಗೆದು ಅತ್ತ ಓಡಿದಳು. 'ಏ ಪೋರಿ, ಎಲ್ಲೆ ಹೊಂಟೆ ?' ಎಂದು ಗ್ಯಾಂಗಮನ್ನನು ಜರಬಿನಿಂದಕೇಳಿದ್ದನ್ನು ಅವಳು ಲೆಕ್ಕಿಸಲಿಲ್ಲ. ಹೋಗಿ ನೋಡು ತ್ತಾಳೆ, ಕೂಸು ಸುಟ್ಟು ಕರಕಾದ ಹಪ್ಪಳದಂತಾಗಿದೆ. ಅಡರಾಸಿ ಅದನ್ನೆತ್ತಿ ಅವುಚಿಕೊಂಡು ತನ್ನ ಬೆನ್ನನ್ನು ಬಿಸಿಲಿಗೊಡ್ಡಿ ಆ ಕೂಸನ್ನು ನೆರಳಿನಲ್ಲಿ ಹಿಡಿದು ಆಚೀಚೆ ತೂಗಿದಳು. ಉಸಿರಿನಿಂದ ಗಾಳಿಯೂದಿದಳು. ಯಾರ ಕೂಸೋ ನನ ಗೇಕೆ ಎಂಬ ಯೋಚನೆ ಸ್ವಲ್ಪವೂ ಸುಳಿಯಲಿಲ್ಲ. ತನ್ನೆಲ್ಲ ನೋವು ಮರೆತು ಆದರ ಆರೈಕೆಯಲ್ಲಿ ತೊಡಗಿದಳು. ಅವಳ ಜೀವಜೀವಾಳದಲ್ಲಿಯ ತಾಯಿತನದ ದಿವ್ಯ ಪ್ರೇರಣೆ ಜಾಗೃತವಾಯಿತು. ಎಷ್ಟು ಮಾಡಿದರೂ ಅದರ ಹಲಬುವಿಕೆ ನಿಲ್ಲಲಿಲ್ಲ. ಕೊನೆಗೆ ಅದೇ ಕಂಟಿಯ ಬುಡಕ್ಕೆ ಅದಕ್ಕೆ ನೆರಳಾಗುವಂತೆ ಕೂತು ತನ್ನ ಸೆರಗು ಹೊಚ್ಚಿ ಮೊಲೆನೀಡಿದಳು. ಅದು ತಿನ್ನಲು ಒಲ್ಲದೆ ಅಳುವ ಭರ ದಲ್ಲಿಯೇ ಕೆಲಕಾಲವಿದ್ದು ಆಮೇಲೆ ಸಾವಕಾಶವಾಗಿ ತಿನ್ನುತ್ತ ಸುಮ್ಮನಾಗಿ ಮಲಗಿಕೊಂಡಿತು; ಮತ್ತೆ ತನ್ನ ಗಾಢ ನಿದ್ರೆಯ ಸಮಾಧಿಯಲ್ಲಿ ಲೀನ ವಾಯಿತು. ಸಂಗವ್ವನಿಗೆ ಅದೆಂಥ ಸಮಾಧಾನ! ಅಂದಿನ ಬೇಗುದಿಯೆಲ್ಲ ಹಾರಿಹೋಯಿತು. ಅವಳು ಅಲ್ಲಿಂದ ಎದ್ದು ಮಗುವನ್ನು ಅವುಚಿಕೊಂಡು ಯಾರದೆಂದು ವಿಚಾರಿಸುತ್ತ ಸುತ್ತೆಲ್ಲ ತಿರುಗಾಡಿದಳು. ನಾ ಅಲ್ಲ ನೀ ಅಲ್ಲ ಎಂದಾಗಿ ಕೊನೆಗೆ ಒಬ್ಬ ಸಣ್ಣ ವಯಸ್ಸಿನ ಹುಡುಗಿ ತನ್ನದೆಂದು ಕರೆದು ಕೊಂಡಳು. ಇನ್ನೂ ಹದಿನೈದು ವರ್ಷ ಆಗಿರಲಿಲ್ಲ. ಅವಳ ಚೊಚ್ಚಿಲ ಮಗುವದು. ಗಂಡನೊಡನೆ ಕೆಲಸಕ್ಕೆ ಬಂದಿದ್ದಾಳೆ. ಜೊತೆಗೆ ಕೂಸೂ ಬಂದಿದೆ. ಅವರ ದುಡಿತದ ಸಂಭ್ರಮವನ್ನು ನೋಡಬೇಕಲ್ಲವೇ ಅದು ? ತನ್ನ ಮುಂದಿನ ಬಾಳು ಎಷ್ಟು ಸುಖಮಯವಾಗಿದೆ ಎಂಬುದನ್ನು ಕಾಣ ಬೇಕಲ್ಲವೆ ? ಅವಳು ಕೆಲಸ ಮಾಡುತ್ತಿರುವ ಗ್ಯಾಂಗು ಆ ಕಾಮಾಂಧನಾದ ಮೂಢನದ್ದಾಗಿತ್ತು. ಸಂಗಿ ತಿರುಗಿ ತಾನಾಗಿ ಬಂದಳೆಂಬ ಉಬ್ಬಿನಲ್ಲಿ ಅವನು

ಆಚೆಯ ತುದಿಯಿಂದ ಹಾರುತ್ತಾ ಬಂದು 'ಬೇಶ್, ಬೇಶ್, ಈಗ ಹೆಂಗಾತು ? ಮಳ್ಳ ಹುಡಗಿ ! ನಾ ಏನ ಸಿಕ್ಸಾ ಮಾಡಾಣಿಲ್ಲ. ನೀ ಬೇಕಾರ ಸುಮ್ಮಾಕ ಕುಂಡ್ರು. ಹೊತ್ತು ಮುಳಗಾಕ ಬಂತು' ಎಂದು ತನ್ನ ಆರಾಧನೆಯ ಆಲಾಪವನ್ನು ನಡೆಸಿದನು. ತೊಲಗಿದ ದೆವ್ವ ಮತ್ತೆ ಗಂಟುಬಿದ್ದಿತೆಂದು ಸಂಗವ್ವ ತಲ್ಲಣಗೊಂಡು 'ನಾ ಯಾಕ ಬರ್ಲಿ ಹೋಗು' ಎನ್ನುತ್ತ ಲಗುಬಗೆಯಿಂದ ಹೊರಟಳು. ಅವನು ಗದ್ದರಿಸಿದನು, ಹತ್ತಿರ ಹೋಗಿ ಎಳೆಯುವ ಆವೇಶ ತೋರಿದನು. ಆದರೆ ಧೈರ್ಯ ಸಾಲಲಿಲ್ಲ. 'ಹೋಗೋಗು; ಮತ್ತೇನರ ಸೇವ ಮಾಡಿ ನೀ ಬರಾಕಿ. ನನಗ ಗೊತ್ತಿಲ್ಲೇನು ?' ಎಂದು ಸಮಾಧಾನ ತಾಳಿ ಹಿಂದಿರುಗಿದನು. ಆ ಕೂಸಿನ ತಾಯಿ ತನ್ನ ಕೂಸನ್ನು ಮಲಗಿಸಿ ಬರುವೆನೆಂದು ಸ್ವಲ್ಪ ಬಿಡುವು ಕೇಳಿದಳು. ಸಂಗಿಯ ಮೇಲಿನ ಸಿಟ್ಟನ್ನು ಅವಳ ಮೇಲೆ ಹಾಯಿಸುತ್ತ 'ಕೊಡೊದುಲ್ಲ. ಕೂಸಿಂದು ನನಗೇನು ಹಚ್ಚೀದಿ ? ಬೇಕಾದರೆ ಉಡ್ಯಾಗ ಹಕ್ಕೊಂಡು ಕೆಲಸ ಮಾಡು. ಹೂಂ, ನಿಂದರಬ್ಯಾಡ. ನಿಂತೆಂದರ ನಿಂದು ಈವತ್ತ ಕಾಟ ಹಾಕತೇನಿ ನೋಡು !' ಎಂದು ಹೆದರಿಕೆ ಹಾಕಿದನು. ಅವಳಿಗೇನೂ ತೋಚದಾಯಿತು, ಉಳಿದವರ್‍ಯಾರೂ ಅವಳಿಗೆ ಸಹಾಯಕ್ಕೆ ಬರುವಂತಿಲ್ಲ. ಸಂಗವ್ವನಂತೂ ಆ ಪಿಶಾಚಿಯಿಂದ ಹತ್ತುಹರಿದಾರಿ ದೂರವಿರಬೇಕೆಂದು ವೇಗದ ಹೆಜ್ಜೆ ಹಾಕುತ್ತ ಹೋದಳು. ಗಂಡನೆಲ್ಲಿಯೋ ಬೇರೆ ಕಡೆ ದುಡಿಯುತ್ತಿದ್ದಾನೆ. ಕಡೆಗೆ 'ಕಾಟು ಹಾಕಿದರೆ ಹಾಕಲಿ' ಎಂದವಳು ನೆರಳುಬಂದ ಒಂದು ಗಿಡದ ಬುಡಕ್ಕೆ ಹೋಗಿ ಅರಿವೆ ಹಾಯಿಸಿ ಮೊಲೆ ಕೊಡುತ್ತ ಮಲಗಿದಳು. ಆ ನೀಚನು ಕೈಯಲ್ಲಿ ಬಡಿಗೆ ಹಿಡಿದು ಅಲ್ಲಿಯೇ ಬಂದನು. 'ಏ. ಏಳತೀಯೋ ಏನು ಬೇಕೊ ? ಸರಕಾರಿ ಕೆಲಸಂದರ ಹುಡುಗಾಟಗಿ ಆತೇನು ?' ಎಂದು ಒದರಾಡಿದನು. ಅವಳು ಹೇಗೆ ಏಳುವಳು ? ಆದರೆ ಅವನು ನಿಂತಿರಲಾಗಿ ಅವಳು ಮಲಗಿದ್ದು, ಮಾತಾಡದಿರುವದು ನೋಡಿ ಅವನಿಗೆ ಭಯಂಕರ ಅಪಮಾನವಾಯಿತು. 'ಯಾಕ ಏನಂತಿ ?' ಎಂದು ತಲೆ ಕೆಟ್ಟು ಹೋಗಿ ಬೆನ್ನ ಮೇಲೆ ಬಡಿಗೆಯಿಂದ ಏಟು ಹಾಕಿದನು. 'ಅಯ್ಯಯ್ಯೋ !' ಎನ್ನುತ್ತ ಅವಳು ಬಾಯಿ ಬಿಟ್ಟಳು. ಮಲಗಿದ್ದ ಕೂಸು ಎದ್ದು ಚೀರಹತ್ತಿತು. ಅವಳು ಎದ್ದುಕೂತಳು. ಅವನು 'ಹಿಂಗ ಹಾದಿಗೆ ಬಾ. ಏಳಿನ್ನು ಒಗಿ ಕೂಸಲ್ಲೆ !' ಎಂದು ಯಮದೂತನ ಆವೇಶದಲ್ಲಿ ಮಾತಾಡಿದನು. ಅವಳು ಕೂತಲ್ಲೆ ಬಾಗಿ ಅವನ ಕಾಲಿಗೆ ಕೈಹಚ್ಚಿ 'ಯಪ್ಪ, ಒಂದೀಟ ಮನಗಿಸಿ ಬರತೀನಿ. ಹೊಟ್ಟ್ಯಾಗ ಹಕ್ಕೊ' ಎಂದು

ಅಲ್ಪರಿದು ಬೇಡಿದಳು. 'ಅದೇನು ಗೊತ್ತಿಲ್ಲ.' ಎಂದು ಅವನು ಮತ್ತೆ ಬಡಿಗೆ ಎತ್ತಿದನು. ಬೆಳಗುಮುಂಜಾನೆ ಹೊಸದಾಗಿ ದಗದಕ್ಕೆ ಸೇರಿದ ಐವರಲ್ಲಿ ಒಬ್ಬನು ಅಲ್ಲಿಯೇ ಹತ್ತಿರ ನೆಲ ಹಡ್ಡುತ್ತಿದ್ದನು. ಅವನು ಓಡಿ ಬಂದು 'ಏ ಹಿರಿಯ, ಬುದ್ದಿ ಎಲ್ಲಿಟ್ಟೆ? ಎಳೆ ಬಾಣಂತಿ, ಕೊಲಬೇಕಂತೀಯೇನು? ಎಂದು ಬುದ್ಧಿ ಹೇಳಿದನು. ಅದರಿಂದ ಆ 'ಹಿರಿಯ'ನ ಮನಸ್ಸು ಇನ್ನಿಷ್ಟು ಕಿರಿದಾಯಿತು. ಕೋಪ ಮಸುಗಿತು. 'ನೀ ಯಾರು ಬುದ್ಧಿ ಹೇಳಾಕ? ಹೋಗ ನಿನ್ನ ದಗದಕ್ಕ.' ಎಂದು ಗದರಿದನು. ಇಬ್ಬರಿಗೂ ವಾದಿಸ್ಯಾಟವಾಯಿತು. ಹತ್ತಿರದ ಗಂಡಾಳೆಲ್ಲ ಬಂದು ಮುಕುರಿತು. ಸಿಕ್ಕ ಸಿಕ್ಕ ಬೈಗಳ ಮಳೆಯಾಯಿತು. ಕೊನೆಗೆ ಹೇಗೋ ರಾಜಿಯಾಗಿ ಅಗಲಿದರು. ಇಷ್ಟರಲ್ಲಿ ಮಲಗಿದ ಕೂಸಿಗೆ ಹೊಚ್ಚಿ ಆ ಪುಟ್ಟ ತಾಯಿ ತನ್ನ ಕೆಲಸಕ್ಕೆ ತಿರುಗಿ ಹೋದಳು.

ಆರು ಬಡಿಯಿತು. ಅಂದಿನ ಕೆಲಸ ಮುಗಿಯಿತು. ಕೂಲಿಕಾರರೆಲ್ಲ ತಮ್ಮ ಆಯುಧಗಳನ್ನೆಲ್ಲ ಕೆಳಗಿಟ್ಟರು. ತಮ್ಮ ಗೂಡಿಗೆ ಹೋಗುವುದಕ್ಕೆ ಸಜ್ಜಾದರು. ಆದರೆ ಅಲ್ಲಿ ಹೋದ ಮೇಲೆ ಬಿಸಿ ರೊಟ್ಟಿಯೇನಾದರೂ ಸಿಗುವದೆ? ಅದಕ್ಕೆ ಹಿಟ್ಟೆಲ್ಲಿ? ಕಾಳೆಲ್ಲಿ? ಕೂಲಿಯೆಲ್ಲಿ? ಮತ್ತೆ ಆಶ್ವಾಸನವನ್ನು ಪಡೆಯಬೇಕೆಂದು ಅವರೆಲ್ಲಒಟ್ಟುಗೂಡಿ ಓವರಸಿಯರನ್ನೂಪಗಾರದಕಾರಕೂನರನ್ನುಮುತ್ತಿಗೆ ಹಾಕಿದರು. ಮೊದಲು ಅವರಿಂದ ಮೊಗಮ್ಮಾದ ಉತ್ತರ ಬಂತು. ಅವರಿಗೆ ಸಮಾಧಾನ ಆಗಲಿಲ್ಲ. ಮರುದಿನ ಬಂದೊಡನೆ ತಮಗೆ ಮೊದಲು ಹದಿನೈದು ದಿನದ ಕೂಲಿ ಕೊಡಬೇಕು. ಮತ್ತು ಕಾಳಿನ ವ್ಯವಸ್ಥೆ ಆಗಬೇಕು ಎಂದವರ ಬೇಡಿಕೆ ಇತ್ತು. ಕಳೆದ ವಾರದ್ದೆಲ್ಲ ಲೆಕ್ಕ ಮಾಡಿ ಸರಕಾರಕ್ಕೆ ತಾವು ಕಳಿಸಿರುವುದಾಗಿಯೂ ಅದು ಮಂಜೂರಾಗಿ ಸಹಿ ಆಗಿ ನಾಳೆ ಟ್ರೆಜರಿಯಿಂದ ಹಣ ಸಿಗಬಹುದೆಂದೂ ಕ್ಯಾಶಿಯರರೂ ಕಾರಕೂನರೂ ಹೇಳಿದರು. ಈ ಬಹುದುಗಿಹುದಿನ ಭಾಷೆಯಿಂದ ಅವರಿಗೆ ಸಂಶಯ ಬಂತು. ದೊರೆತರೂ ಒಂದು ವಾರದ್ದು ಮಾತ್ರ ಎಂದಾಯಿತು. ಹನ್ನೊಂದು ಸಾವಿರ ಜನದಲ್ಲಿ ಒಮ್ಮೆಲೆ ವಿದ್ಯುತ್ ಸಂಚಾರವಾದಂತೆ ಅಧಿಕಾರಿಗಳಿಂದ ಹಾರಿಕೆಯ ಉತ್ತರ ಸಿಕ್ಕಿತೆಂದೂ ನಾಳೆ ಸಹ ಕೂಲಿ ಹಾಗೂ ಕಾಳು ಸಿಗುವ ಭರವಸೆಯಿಲ್ಲವೆಂದೂ ಸುದ್ದಿ ಹರಡಿತು. ಆ ಜಂಗುಳಿ ಕಡಲಿನಂತೆ ಘೂರ್ಣಿಸಿತು; ಇನ್ನು ತಡೆದರೆ ನಡೆಯದೆಂದು ರುದ್ರಾವೇಶದಲ್ಲಿ ಆ ಅಧಿಕಾರಿಗಳನ್ನು ಸುತ್ತುಗಟ್ಟಿ ನಿಂತಿತು. ತಮ್ಮನ್ನೆಲ್ಲಿ ಕೊಂದುಹಾಕುವರೋ ಎಂದವರು ಭಯ ಗ್ರಸ್ತರಾದರು. ಆದರೆ ಓವರಸಿಯರು ಇದ್ದುದರಲ್ಲಿ ಧೈರ್ಯತಂದುಕೊಂಡು

ಚಾಣಾಕ್ಷತನದಿಂದ 'ರಾತ್ರಿಯಲ್ಲಿಯೇ ಹೋಗಿ ಬೆಳಗಾಗುವದರಲ್ಲಿ ನೀವು ಬೇಡಿ ದ್ದೆಲ್ಲ ವ್ಯವಸ್ಥೆ ಮಾಡತೀವಿ, ಈಗ ಹೋಗರಿ' ಎಂದು ವಚನ ಕೊಟ್ಟದ್ದಲ್ಲದೆ ಅವರಿಗೆ ಮನವರಿಕೆಯಾಗಲೆಂದು ಗ್ಯಾಂಗರರನ್ನು ಕರೆದು ತಮ್ಮ ಗ್ಯಾಂಗುಗಳ ರೋಲನ್ನು ನಿಂತ ಕಾಲ ಮೇಲೆ ಪೂರ್ಣಗೊಳಿಸಬೇಕೆಂದೂ ಆಜ್ಞಾಪಿಸಿದರು. ಅದರಂತೆ ಮಸ್ಟರ ರೋಲನ್ನು ಪೂರ್ಣಗೊಳಿಸಲು ಕಾರಕೂನರಿಗೆ ಹೇಳಿದನು. ಆಮೇಲೆ ಜನ ಸರಿದು ತಮ್ಮ ಅಂದಿನ ಹಾಜರಿ ಕೊಡಲು ಬೇರೆ ಬೇರೆಯಾಗಿ ಆಯಾ ಗ್ಯಾಂಗರರ ಸುತ್ತು ನೆರೆದಿತು. ಒಂದು ಗಂಟೆಯ ವರೆಗೆ ಈ ವಿಧಿ ನಡೆಯಿತು.

ಎಷ್ಟೋ ಚಳವಳಿ ಮಾಡಿದ ಮೇಲೆ ಮೊದಲು ಕಡಿಮೆಯಾಗಿದ್ದ ಕೂಲಿ ದರಗಳು ಈಗ ಏರಿ ಗಂಡಾಳು ೬ ಆಣೆ, ಹೆಣ್ಣಾಳು ೫ ಆಣೆ ಮತ್ತು ಹುಡುಗರು ೩ ಆಣೆ ಎಂದು ಹಿಡಿಯಲಾಗಿತ್ತು. ಗ್ಯಾಂಗಿನ ಹಾಜರಿ ಹಾಗೂ ಲೆಕ್ಕ ಮೇಲೆ ನೋಡಲು ಬಹಳ ಸರಳ ಹಾಗೂ ನಿಷ್ಕಪಟವೆನ್ನುವಂತಿತ್ತು. ಆದರೆ ಅದು ಸರ ಕಾರೀ ಅಧಿಕಾರಿಗಳ ಲಂಚಗುಳಿತನ ಹಾಗೂ ಮೋಸಗಾರಿಕೆಗೆ ಬಲಿಯಾಗದೆ ಇರುವುದು ಅಪರೂಪವೇ ಎನ್ನಬಹುದು. ಗ್ಯಾಂಗರರಿಂದ ತೀರ ಮೇಲಿನ ಅಧಿ ಕಾರಿಯ ವರೆಗೆ, 'ಹರಿಯುವ ಗಂಗಾನದಿಯಿಂದ ಎಲ್ಲರೂ ತುಂಬಿಕೊಳ್ಳೋಣ!' ಎಂಬ ವೃತ್ತಿ ವಾಡಿಕೆಯಾಗಿ ಹೋಗಿತ್ತು. ಕೆಲವರು ಹಂಡೆ, ಕೆಲವರು ಕೊಡ, ಕೆಲವರು ಬಿಂದಿಗೆ, ಕೆಲವರು ತಂಬಿಗೆ ಹೀಗೆ ತಂತಮ್ಮ ಸ್ಥಾನಕ್ಕೆ ಅನುಸರಿಸಿ ಬೇರೆ ಬೇರೆಯಾದ ಪ್ರಮಾಣದಲ್ಲಿ ಎಲ್ಲರೂ ತುಂಬಿಕೊಂಡು ಹೋಗುವವರೇ! ಆಡಳಿತದ ನಿತ್ಯಕ್ರಮದಲ್ಲಿ ಪ್ರತಿಯೊಂದಕ್ಕೂ ಸಹಜಪದ್ಧತಿಯಾಗಿದ್ದ ಈ 'ಗೋಪಾಳ'ವು ಬರಗಾಲ ಕಾಮಗಿರಿಯಲ್ಲಿ ಇನ್ನಿಷ್ಟು ಪ್ರಶಸ್ತವಾಗಿ ದೊರೆಯಿತು. ಗ್ಯಾಂಗರರು ತಮ್ಮ ಗ್ಯಾಂಗಿನವರಿಗೆ ಕೊಡಿಸುವ ಧ್ಯಾನದಲ್ಲಿಯೂ ಗೋಪಾಳ ಪಡೆದು ಆ ಧ್ಯಾನವನ್ನು ಕಳ್ಳಪೇಟೆಯಲ್ಲಿ ಮಾರಿ ಧನ್ಯರಾದರು. ಬರಗಾಲದಲ್ಲಿ ಅಧಿಕ ಮಾಸವೆನ್ನುತ್ತಾರೆ. ಇಲ್ಲಿ ಬಡಜನಕ್ಕೆ ಬರಗಾಲ, ಅವರ ರಕ್ತಹೀರಿ ಪಡೆದ ತೆರಿ ಗೆಯ ಹಣದಿಂದ ಸರಕಾರದ ಚಾಕರರಿಗೆ ಅಧಿಕಮಾಸದ ಬಾಗಿಣ ಎಂಬಂತಾ ಯಿತು. ಅದೆಷ್ಟೋ ಗ್ಯಾಂಗರರು ಈ ಧಂದೆಯಿಂದಾದ ಫಾಯಿದೆಯಲ್ಲಿ ಹೊಲ ಮನೆ ಕೊಂಡುಕೊಂಡರು. ತಮ್ಮ ಸುಪ್ರಸಿದ್ಧವಾದ ಚಲಾಖಿಯಿಂದ ಹಾಗೂ ನಿರ್ಲಜ್ಜತನದಿಂದ ಅವರು ರೋಲಿನಲ್ಲಿ ಕೆಲವು ಕಲ್ಪಿತ ಹೆಸರುಗಳನ್ನು ಸೇರಿಸಿ ಮೊದಲು ಗೊತ್ತುಪಡಿಸಿದವರಿಂದ ಅವರ ಹಾಜರಿ ಹೇಳಿಸಿಕೊಳ್ಳುತ್ತಿದ್ದರು.

ಪ್ರತ್ಯಕ್ಷ ಕೆಲಸ ಮಾಡುವವರು ೧೫ ಜನ ಇದ್ದಲ್ಲಿ ೨೫ಜನರ ಲೆಕ್ಕ ಹಚ್ಚಿಬಿಲ್ಲನ್ನು ತಯ್ಯಾರು ಮಾಡಿಸುತ್ತಿದ್ದರು. ಸುಳ್ಳು ಹೆಸರನ್ನು ಸೇರಿಸಿದ್ದು ಸರಿಯಲ್ಲ ಎಂದು ಹೇಳುವವರ್ಯಾರು? ದಗದಕ್ಕ ತಗೊಂಡ ಮಹೋಪಕಾರಕ್ಕಾಗಿ ಪ್ರತಿನಿತ್ಯವೂ ಕೆಲ ವರು ಸುಳ್ಳುಹಾಜರಿಯನ್ನು ಕೊಡಲು ಬದ್ಧರಾಗಿದ್ದರು. ಅಲ್ಲದೆ ಅವರ ಕೂಲಿ ಯಲ್ಲಿ ಇಂತಿಷ್ಟು ಪಾಲನ್ನು ಗ್ಯಾಂಗಾರಿಗೆ ಕೊಡಬೇಕೆಂದು ಗುಪ್ತಕರಾರಾಗಿ ಅದ ರಂತೆ ತಪ್ಪದೆ ವಸೂಲು ಮಾಡಲಾಗುತ್ತಿತ್ತು. ಇದೆಲ್ಲದರ ಸತ್ಯ ಸ್ವರೂಪವನ್ನು ಬಯಲಿಗೆಳೆದರೆ ತಮ್ಮ ಕಾಲಮೇಲೆ ಕೂಲಿಕಾರರು ಕಲ್ಲುಹಾಕಿಕೊಳ್ಳುತ್ತಿದ್ದರು. ಮೇಲಿನ ಅಧಿಕಾರಿಗಳಂತೂ ಹೆಚ್ಚಿನ ಪ್ರಾಪ್ತಿಯಲ್ಲಿ ಯೋಗ್ಯತಾನುಸಾರವಾಗಿ ಪಾಲುಗಾರರಾದವರು. ಕೆಲವು ಸಲ ಗ್ಯಾಂಗರರ ಕುಟಿಲ ನೀತಿಯನ್ನು ತಾವೂ ಪ್ರಯೋಗದಲ್ಲಿ ತರಬಯಸಿ ಕೆಲವು ಕೂಲಿಕಾರರು ಕಲ್ಪಿತಕೂಲಿಕಾರರ ಹೆಸರನ್ನು ಹೇಳಿ ತಮಗಲ್ಲದೆ ಅವರ ಹೆಸರಿನಲ್ಲಿ ಹಾಜರಿ ಹಾಕಿಸಿ ಕೂಲಿ ಪಡೆಯುತ್ತಿದ್ದರು. ಹತ್ತುಸಾವಿರದ ಮೇಲೆ ಜನ ಕೆಲಸ ಮಾಡುತ್ತಿದ್ದಾಗ ಯಾರ ಗುರುತು ಯಾರಿಗೆ ? ರೋಲಿನ ಕೆಲಸವೆಲ್ಲ ಮುಗಿಯಿತು. ನಾಳೆ ಬೆಳಗಿನ ಅಮೃತ ಗಳಿ ಗೆಯ ಸಿರೀಕ್ಷೆಯಿಂದ ಈಗ ಒಡಲು ತುಂಬಿದಂತಾಗಿ ದಣಿದ ಮೈಯನ್ನು ತೂಗುತ್ತ ಮಣ್ಣು ಹತ್ತಿದ ಬಟ್ಟೆಗಳನ್ನು ಕೊಡಹುತ್ತ ಕೂಲಿಕಾರರು ತಮ್ಮ ಇಕ್ಕೆಗಳಿಗೆ ಹೊರಟುಹೋದರು.

ಎಲ್ಲ ಕಡೆ ಮಬ್ಬುಗತ್ತಲೆಯಾಯಿತು. ಬಹುಶಃ ಎಲ್ಲ ಕೂಲಿಗಳು ದೂರ ಹೋಗಿದ್ದಾರೆ. ಕಾಲುದಾರಿಗಳಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಕರಿ ನೆರಳಂತೆ ಕಾಣುತ್ತಾರೆ. ಪಶ್ಚಿಮದ ಮುಗಿಲಂಚಿನಲ್ಲಿ ಸೂರ್ಯ ಮುಳುಗಿದರೂ ಕತ್ತಲೆ ಮುಸುಕುತ್ತಿದ್ದರೂತೊಲಗಲೊಲ್ಲದ ಕೆಂಪುಬಣ್ಣದ ಪಟ್ಟೆಗಳು ತಲೆದೋರುತ್ತಿವೆ. ಸಂಗವ್ವನು ಹಸಿವೆಯಿಂದ, ದಣಿವಿಂದ ತೀರ ಮೆಲ್ಲಗೆ ಕಾಲೆಳೆಯುತ್ತ ತನಗೆ ಆಸರೆಕೊಟ್ಟ ಪುಣ್ಯಾತ್ಮರ ಗುಡಿಸಲಕ್ಕೆ ಹೊರಟಿದ್ದಾಳೆ. 'ಮಕ್ಕಳು ಏನು ತಿಂದವೋ ಬಿಟ್ಟವೊ! ತನ್ನನೆಷ್ಟು ನೆನಸುತ್ತಿರಬಹುದು!' ಎಂದು ಧೇನಿಸಿದೊಡನೆ ಅವಳ ಕಂಠ ಉಬ್ಬಿ ಬರುತ್ತದೆ. ಅಂದಿನ ಘೋರ ಅನುಭವವು ನುಗ್ಗಿ ಬಂದು ಇನ್ನಿಷ್ಟು ಅವಳ ಸಂಕಟವನ್ನು ಹೆಚ್ಚಿಸುತ್ತದೆ. ಆವೊತ್ತು ಯಾಕೆ ಬಾವಿಯಲ್ಲಿ ಹಾರಿಕೊಳ್ಳಲಿಲ್ಲ ಎಂದು ತನ್ನ ಮೂರ್ಖತನಕ್ಕೆ ತನ್ನನ್ನು ಹಳಿದುಕೊಳ್ಳುತ್ತಾಳೆ. ಸ್ವಲ್ಪ ದಾರಿ ನಡೆದು ಹಿಂದೆ ಮುಂದೆ ನೋಡಿದಳು; ಒಬ್ಬಾನೊಬ್ಬರೂ ಇಲ್ಲ. ಅವಳ ಹೆದರಿಕೆ ಹೆಚ್ಚಿತು. ಆದರೇನು ಮಾಡುವುದು ? ಮನೆಯಿನ್ನೂ ಎರಡು

ವ್ಯೈಲಿದೆ. ಕಾಲುದಾರಿ ಬೇಡವೆಂದು ಅವಳು ದೊಡ್ಡ ರಸ್ತೆಗೆ ಬಂದಳು. ಅಲ್ಲಿ ಜನರ ಓಡಾಟವಿರುವದೆಂದು ಅವಳಿಗೆ ಧೈರ್ಯ ಬಂತು. ನಾಲ್ಕು ಹೆಜ್ಜೆ ನಡೆ ದಿದ್ದಳೋ ಇಲ್ಲವೋ, ಹಿಂದೆ ಯಾರದೋ ವೇಗದ ಹೆಜ್ಜೆಯ ಸಪ್ಪಳ ಕೇಳಿಸಿತು. ಯಾರೇ ಆಗಲಿ ಜೋಡಾಗುವರೆಂದು ಅವಳು ಸಮಾಧಾನ ಹೊಂದಿದಳು. ಹಿಂದೆ ನೋಡಿದಳು. ಯಾರೆಂಬುದು ಗೊತ್ತಾಗಲಿಲ್ಲ. ಗಂಡಸೆಂದು ಮಾತ್ರ ತಿಳಿ ಯಿತು. ತೀರ ಹತ್ತಿರ ಬಂದ ಮೇಲೆಯೆ ಅವಳಿಗೆ ಅಂದು ಗಂಟುಬಿದ್ದ ಶನಿಯೇ ಅದೆಂದು ತಿಳಿಯಿತು! ಅವಳು ಹೌಹಾರಿದಳು. 'ಇನ್ನೆಂಗ ಮಾಡಲಿ! ಈ ಪೀಡಾ ಮತ್ತ ಗಂಟಬಿತ್ತು!' ಎಂದು ತನ್ನಷ್ಟಕ್ಕೆ ಅಂದುಕೊಂಡು ಮುಂದೆ ಹೋಗಲು ತ್ರಾಣವಿಲ್ಲದೆ ಗಕ್ಕನೆ ನಿಂತಳು. ಆ ಗ್ಯಾಂಗಮನ್ನನು ತುಸು ಓಡೋ ಡುತ್ತಲೆ ಹತ್ತಿರ ಬಂದು, 'ವಾಃ ಸಂಗಿ, ನಾ ಬರತೀನಂತ ನಿಂತಿ ಹೌದಲ್ಲೊ ?' ಎಂದು ಖುಷಿಯಿಂದ ಆಡಿದನು. ಅವಳಿಗೆ ಮಾತೇ ಬರಲಿಲ್ಲ. ಎದೆ ಡವಡವ ಹಾರುತ್ತಿತ್ತು. 'ಸಾಕ ಬಿಡ್ರ ಈ ಮುುರಕ; ನಾಕ ಮಂದ್ಯಾಗ ಈವತ್ತ ಮಾಡಿದಿ ಛಂದಾತು. ಈಗ ನೋಡ ಯಾರಿದ್ದಾರಿಲ್ಲೆ ? ನಾ ಅಂದರ ನಾ, ನೀ ಅಂದರ ನೀ. ಎಲ್ಲಾ ಮಂದಿ ಪಾಣಾಪಾಣಾಗೇತಿ. ಕತ್ತಲಾತು. ನಡಿ ಹೋಗೋಣ!' ಎಂದು ಅವನು ಸಲಿಗೆಯಿಂದ ಮನವೊಲಿಸಿದನು. ಅದೇ ಅವಳಿಗೆ ಶೂಲ ವಾಗಿತ್ತು. 'ನೀ ಹೋಗ ಮುಂದಾಕೆ, ನಾ ಹಿಂದಾಗಡನೆ ಬರತೇನು.' ಎಂದು ಹೇಗೋ ಗಾಬರಿಯ ದನಿಯಲ್ಲಿ ಅವಳು ಹೇಳಿದಳು. 'ಯಾಕ ಸಂಗಿ, ಮತ್ತ್ಯಾವನರೆ ಗೆಣೆಯಾನ ದಸಿಂದ ನಿಂದರತಿಯೇನು ?' ಎಂದವನು ಚೇಷ್ಟೆ ಮಾಡಿದನು. ಅದು ಗಾಯದ ಮೇಲೆ ಬರೆ ಕೊಟ್ಟಂತಾಯಿತು. 'ಯಾಕೋ ಮೂಳ, ಬಾಳ ನಾಲಗಿ ಸಡಲು ಬಿಟ್ಟೀ ಹರ‍್ಯಾಗಿನ್ ತೊಟ್ಟು ?' ಎಂದಳು. 'ಸಡಿಲು ಬಿಟ್ಟವ ನಾನೋ ನೀನೋ ? ನೀ ಹಾದಿ ಹಿಡಿದು ಮಾತಾಡಿದ್ದರ ನಾ ಯಾಕ ಈ ಮಾತ ಅನತಿದ್ದೆ ?' ಹೀಗೆ ವಾದಿಸ್ಯಾಟ ಮುಂದರಿಯಿತು. ಅವನು ಮುಂದೆ ಹೋಗೆಂದರೂ ಹೋಗಲಿಲ್ಲ. ಅವಳೂ ಅಲ್ಲಿಯೇ ನಿಂತಳು. ಕೊನೆಗೆ ತನ್ನ ಮನಸ್ಸು ಅವಳಿಗಿನ್ನೂ ಅರ್ಥವಾಗಿಲ್ಲ ವೆಂದು ಭಾವಿಸಿ ಅವನು ಬಿಚ್ಚು ಮಾತಿನಿಂದ ಹೇಳಿಬಿಟ್ಟನು : 'ಏ ಸಂಗೀ ನಿನಗ ನಾಳಿನಿಂದ ದಗದ ಬೇಕೋ ಬ್ಯಾಡೋ ? ಒಂದು ಮಾತು ಹೇಳು. ಬೇಕಾಗಿದ್ದರ ಬಾ ಸಂಗಾಟ ಮನಿಗೆ. ಇಲ್ಲದಿರಕ ಹೋಗು ಹಾಳಾಗಿ.' ಅವನ ಈ ಬಿಚ್ಚುಮಾತಿನಲ್ಲಿಯ ಚುಚ್ಚು ಅವಳಿಗೆ ಪ್ರಾಣಘಾತಕ ಘಾಯ

ಮಾಡಲು ನೆಲಕ್ಕೆ ಕುಸಿದು ಬಿದ್ದಂತಾಗಿ ಅವಳು ಕೂತುಬಿಟ್ಟಳು. ಅವನು ಒಂದೆ ರಡು ಮಿನಿಟು ತಡೆದನು. ಏನೂ ಉತ್ತರ ಬರಲಿಲ್ಲ. ರೌಸಿನಿಂದ ನಾಲ್ಕು ಹೆಜ್ಜೆ ಹೊರಟು ಹೋದಂತೆ ಮಾಡಿದನು. 'ಹೋಗಲಿ ಪೀಡಾ' ಎಂದವಳು ತಲೆಹಿಡಿದು ಕೂತಳು. ಆದರೆ ಅವನೆಲ್ಲಿ ಹೋಗುತ್ತಾನೆ? ಮತ್ತೆ ತಿರುಗಿ ಬಂದು ಯಮದೂತನಂತೆ ಹತ್ತಿರ ನಿಂತನು. 'ಹೂ, ಏನಂತಿ, ಗಡ ಹೇಳು ?' ಎಂದು ತಿರುತಿರುಗಿ ಕೇಳಹತ್ತಿದನು. 'ಕರೆದರೆ ಖುಷಿಯಿಂದ ಅದೇಟು ಹೆಣ್ಣು ಬರತಾವ! ನೀನ್ಯ ನೋಡು ಲೋಕಕ್ಕ ಹೊರತು!' ಎಂದು ಅವಳಿಗೆ ಆಗ್ರಹ ಮಾಡಿದನು. ಯಾವುದಕ್ಕೂ ಕೇಳದಂತಾಗಲು ರಾವಣನ ತಾಮಸ ಆವೇಶದಿಂದ ಅವಳ ಕೈಹಿಡಿದು ಮೇಲೆತ್ತಿ, 'ಸುಮ್ಮಾಕ ನಡಿಯಿನ್ನ, ನಾಯಿ ಹಂಗ ಬೆನ್ಹತ್ತಿ. ನಿನಗ ಸವಿಮಾತ ಹೇಳಿದರೆ ಯಾಕ ತಿಳಿದಾವು ?' ಎಂದು ಗದ್ದರಿಸುತ್ತ ಅವಳನ್ನು ದರದರ ಎಳೆದನು. ಅವಳ ಮೈಯೆಲ್ಲ ತರಿದು ಮನಸ್ಸೆಲ್ಲ ಸಂತಪ್ತವಾಗಿ 'ಅಯ್ಯಯ್ಯಯ್ಯರೊ! ಯಾರರ ನನ್ನ ಪಾರ ಮಾಡಿರೋ!' ಎಂದು ಕೂಗಿಕೊಂಡಳು. 'ಒದರು, ಈಗ್ಯಾರು ಬರತಾರ ನೋಡತೀನಿ! ಕಡದು ಹಾಕತೀನಿ ಅವರ್ನ!' ಎಂದವನು ಬೆದರಿಸಿದನು. ಅವಳು ಮತ್ತೆ ಒದರಿದಳು. ಕೂಡಲೆ ರಪ್‌ರಪ್ಪೆಂಬ ಕೆಲವು ಕಾಲ ಹೆಜ್ಜೆಗಳು ಕೇಳ ಹತ್ತಿದವು. ಒಂದೆರಡು ನಿಮಿಷದಲ್ಲಿ ಐದು ಜನ ಹಿಂದಿನಿಂದ ಓಡುತ್ತ ಬಂದು ಆ ಗ್ಯಾಂಗರನ ಕೈಹಿಡಿತದಿಂದ ಅವಳನ್ನು ಬಿಡಿಸಿ ಅವನನ್ನು ಗಟ್ಟಿಯಾಗಿ ಹಿಡಿದರು. ಸಂಗವ್ವನಿಗೆ ಜೀವದಲ್ಲಿ ಜೀವ ಬಂದಿತು. ಅವನು ಮಾತ್ರ ನಾಟಕದಲ್ಲಿಯ ಖಲಪುರುಷನಂತೆ ಹಲ್ಲು ಕಡಿಯುತ್ತಿದ್ದನು, ಕೊಸರಿಕೊಳ್ಳಲು ಹವಣಿಸಿದನು. ಅವರು 'ಯಾಕೋ, ಹ್ಯಾಂಗ ಕಾಣತೈತಿ! ಈ ಹೆಂಗಸಿನ್ನ ಯಾಕ ಗೋಳಾಡಸ್ತಿದ್ದಿ ? ಕಳಸಬೇಕೇನು ಬಾಡಿಗಿಲ್ಲದ ಮನಿಗೆ ನಿನ್ನೂ?' ಎಂದರು. 'ಆಕಿ ನನ್ನಾಕಿ ನಿಮ್ಮದೇನಧಿಕಾರ ಆಕಿ ಮ್ಯಾಗ ? ಬಿಡಿರಿ ನನ್ನ!' ಎಂದವನು ಒದರಿಕೊಂಡನು. ಆದರೆ ಸಂಗವ್ವನ ತಡವರಿಸಿದ ಮಾತುಗಳಿಂದ ಅವರಿಗೆ ಸತ್ಯಾಂಶವೆಲ್ಲ ತಿಳಿಯಿತು. ಅವನು 'ಸುಪ್ರಸಿದ್ಧ' ಗ್ಯಾಂಗರನೆಂಬುದಾಗಿ ಅವರು ಗುರುತು ಹಿಡಿದರು. ತಾವು ರಸ್ತೆಯ ಕೆಲಸಕ್ಕೆ ಹೋದಾಗ ಅವನ ಲೀಲೆ ಗಳನ್ನೆಲ್ಲ ನೋಡಿದ್ದರು. ಪೋಲೀಸರ ಹೆದರಿಕೆ ಹಾಕಿ ಅವನನ್ನು ಹಿಡಿದು ಅವರು ಕರೆದುಕೊಂಡು ನಡೆದರು. ಆದರೆ ಅವನು ಕಾಲು ಕಾಲು ಬಿದ್ದು ಇನ್ನೊಮ್ಮೆ ಹೀಗೆ ಮಾಡುವದಿಲ್ಲವೆಂದು ದೇವರಾಣೆ ಮಾಡಿ ಬಿಡಿಸಿಕೊಂಡು ಹೋದನು.

ಐವರೂ ಸಂಗವ್ವನ ಅಂಗರಕ್ಷಕರಾಗಿ ಅವಳ ಗುಡಿಸಲವರೆಗೆಹೋಗಿ ಅವಳನ್ನುಸುರಕ್ಷಿತ ಮುಟ್ಟಸಿ, 'ನೀವು ದೇವರು ಬಂದಂಗ ಬಂದಿರಿ, ನನ್ನ ಅಬ್ರೂ ಉಳಿಸಿದಿರಿ.' ಎಂದವಳ ಉಪಕಾರ ಸ್ಮರಣೆಯ ಮಾತು ಕೇಳಿ ರಾತ್ರಿ ಒಂಬತ್ತು ಘಂಟೆಗೆ ಕೆರೂರನ್ನು ಸೇರಿದರು.

ಅಂದು ಕಾಲರಾ ರೋಗಿಗಳನ್ನು ನೋಡುವುದು ಹಾಗೂ ಇತರ ಜರೂರಾದ ಕೆಲಸವಿದ್ದ ಕಾರಣ ಡಾ॥ ದಾತಾರರೂ ಅಮೃತನನ್ನು ಕರಕೊಂಡು ಕಾಮಗಾರಿ ನೋಡಲು ಹೊರಡಲಾಗಲಿಲ್ಲ. ಆದರೆ ಅವರಿಗೆ ಒಂದು ಯುಕ್ತಿ ಹೊಳೆಯಿತು. ನಾಲ್ಕೈದು ಜನ ಕೆರೂರಿನ ತರುಣರನ್ನು ಕಾಮಗಾರಿಯಕೆಲಸಕ್ಕೆಕಳಿಸಿ ಅವರಿಂದ ಅಲ್ಲಿಯ ಆಗುಹೋಗುಗಳನ್ನು ಮೊದಲು ತಿಳಿಯಬೇಕು. ತಾವೇ ಹೋದಾಗ ಎಲ್ಲವೂ ತಿಳಿಯದೆಹೋಗಬಹುದು, ಸರಕಾರೀ ನೌಕರರು ಹೆಚ್ಚು ದಕ್ಷತೆ ತೋರಿಸಬಹುದು. ಈ ದೃಷ್ಟಿಯಿಂದ ಕಳಿಸಿದ ಐವರು ಆವೊತ್ತು ಎಲ್ಲ ನೋಡಿಕೊಂಡು ಬಂದು ರಾತ್ರಿ ಡಾಕ್ಟರರ ಮನೆಗೆ ತಮ್ಮ ವರದಿಯೊಪ್ಪಿಸಲು ಹೋದರು. ಇಬ್ಬರೂ ಅವರ ಹಾದಿಯನ್ನೇ ನೋಡುತ್ತಿದ್ದರು. ಕೂಲಿ ದೊರೆಯದೆ ಹದಿನೈದು ದಿನವಾದ್ದರಿಂದ ಕೂಲಿಕಾರರು ಬೆಳಿಗ್ಗೆ ಹೂಡಿದ ಸಂಪು-ರಂಪು, ಅಧಿಕಾರಿಗಳಿಂದ ದೊರೆತ ಭರವಸೆ, ತಾವು ಕೆಲಸಕ್ಕೆ ಸೇರಿದ ಮೇಲೆ ಹೆಜ್ಜೆ ಹೆಜ್ಜೆಗೆ ಕೂಲಿಕಾರರಿಗೆ ಗ್ಯಾಂಗರ ಮುಂತಾದವರಿಂದ ಆದ ಅಪಮಾನ, ವಂಚನೆ, 'ಸಂಗೀ' ಪ್ರಕರಣ ಮುಂತಾದ ಎಲ್ಲ ಸಂಗತಿಗಳನ್ನು ವಿಶದವಾಗಿ ತಿಳಿಸಿದರು. ಆ ದುಷ್ಟನಿಂದ ಸಂಗವ್ವನನ್ನು ಪಾರುಗೊಳಿಸಿ ಅವಳನ್ನು ಒಯ್ದು ಸುರಕ್ಷಿತ ಮುಟ್ಟಸಿದ್ದಕ್ಕೆ ಡಾಕ್ಟರರೂ ಅಮೃತನೂ ಆ ತರುಣರಿಗೆ ಭಲೆಯೆಂದರು. ಆದರೆ ಕೂಲಿ ಹಾಗೂ ಕಾಳಿನ ಪ್ರಶ್ನೆಅವರ ತಲೆತಿನ್ನಹತ್ತಿತು, ನಾಳೆ ಕೊಡುತ್ತೇವೆ ಎಂದು ಅಧಿಕಾರಿಗಳು ಎಷ್ಟು ಹೇಳಿದ್ದರೂ ಸರಕಾರದ ಮಂದಗತಿಯ ಕಾರಭಾರವನ್ನು ನೆನೆದರೆ ನಾಳೆ ಸಿಗುವುದು ಅಸಾಧ್ಯವೆಂದೇ ಅವರಿಗೆ ತೋರಿತು. ಆದರೆ ಸಿಗದೆ ಹೋದರೆ ಕೂಲಿಕಾರರು ದಂಗೆ ಮಾಡುವದು ನಿಶ್ಚಯ ಎಂಬುದೂ ಅವರಿಗೆ ಗೊತ್ತು. ತಮ್ಮ ಆ 'ಗುಪ್ತಚಾರ' ತರುಣರನ್ನು ಮನೆಗೆ ಕಳಿಸಿದ ಮೇಲೆ ಅವರಿಬ್ಬರೂ ಕೂತುಕೊಂಡು ಬಹಳಹೊತ್ತು ಅಪರಾತ್ರಿಯವರೆಗೆ ಈ ವಿಷಯವಾಗಿ ಆಲೋಚನೆ ಮಾಡಿದರು. ಬರಗಾಲ ಕಾಮಗಿರಿಯ ಬಗ್ಗೆ ಮೊದಲಿನಿಂದಲೂ ಸರಕಾರವು ತಾಳಿದ ಧೋರಣ, ಮಾಡಿದ ತಡ, ಈಗಿನ ಅವ್ಯವಸ್ಥೆ ಎಲ್ಲವೂ ಅವರ ಟೀಕೆಗೆ ಗುರಿಯಾಯಿತು. ಬರಗಾಲದ ಚಿಹ್ನ ತೋರಿ ಜನ ಹೌಹಾರಿದಾಗ ಗುಳೆ ಹೋಗಲು ಸರಕಾರದವರು ಉತ್ತೇಜನ

ಕೊಟ್ಟರು. ಅದರಿಂದ ಕಾಮಗಾರಿಯು ಅಗತ್ಯ ಬೀಳಲಿಕ್ಕಿಲ್ಲವೆಂದೂ ತಾವು ಗಂಡಾಂತರದಿಂದ ಮುಕ್ತರಾದೆವೆಂದೂ ತಿಳಿದರು. ಆಮೇಲೆ ಪ್ರಶ್ನೆ ಇದರಿಂದ ಬಗೆ ಹರಿಯದೆಂದು ತಿಳಿದರೂ ಸಾಕಷ್ಟು 'ರಿಲೀಫ್' ಕೆಲಸಗಳನ್ನು ಆರಂಭಿಸಲಿಲ್ಲ. ಬರಗಾಲ ತಾಂಡವನೃತ್ಯ ನಡಸಿ ನಾಲ್ಕೈದು ತಿಂಗಳಾಗಿ ಜಿಲ್ಹೆಯ ಅರ್ಧದಷ್ಟು ಜನ ಉಪವಾಸಮಾರಿಯ ಬಾಯಿಗೆ ತುತ್ತಾಗಿದ್ದರೂ ೧೯೪೨ ಡಿಸೆಂಬರದಲ್ಲಿ ಬರ ಗಾಲ ಸಾರಿದ್ದರೂ ೧೯೪೩ ಏಪ್ರಿಲ್‌ದಲ್ಲಿ ಸುಮಾರು ೭೦೦೦ ಜನ ಮಾತ್ರ ಕೂಲಿ ಕೆಲಸಕ್ಕಿತ್ತು. ಬರಗಾಲ ಸಮಿತಿಯವರು ಈ ಸಂಗತಿಯನ್ನು ಸರಕಾರದ ನಿದರ್ಶ ನಕ್ಕೆ ತಂದ ಮೇಲೆ ಹೆಚ್ಚು ಪ್ರಮಾಣದ ಕಾಮಗಾರಿಗಳು ಮೊದಲಾದವು. ಕೆರೆ, ರಸ್ತೆ, ವಡ್ಡು ಹಾಕುವ ಹೊಸ ಯೋಜನೆಯ ಕೆಲಸ ಇವೆಲ್ಲ ಜೋರಾಗಿ ಸುರವಾಗಿ ಒಂದು ಲಕ್ಷದ ಮೇಲೆ ಕೂಲಿಕಾರರಿಗೆ ಕೆಲಸ ಸಿಕ್ಕಿತು. ಜೀವನಕ್ಕೆ ಆಧಾರ ವಾಯಿತು. ಜಿಲ್ಹೆಯ ಎಲ್ಲ ಕಡೆ ಸರಿಯಾಗಿ ಹಂಚಿದಂತೆ ಕಾಮಗಾರಿಗಳು ನಡೆ ದಿಲ್ಲವಾದರೂ ಮಖನಾಪುರ, ತಾರೆನಾಳ, ಆಸಂಗಿ ಈ ಮೂರು ಕೆರೆಗಳ ದೊಡ್ಡ ಕಾಮಗಾರಿಗಳು ನಡೆದಿವೆ. ಈ ಹಲಕುರಕಿ-ಬಟಕುರಕಿ ರಸ್ತೆಯ ಬಹು ದೊಡ್ಡ ಕೆಲಸ ಸಾಗಿದೆ. ಆದರೆ ಇನ್ನೂ ವರೆಗೆ ಜನವೆಂದರೆ ದನವೆಂಬಂತೆ ನಡೆಸಿಕೊಳ್ಳು ತ್ತಾರೆ. ಹತ್ತಿಪ್ಪತ್ತು ದಿನಗಳ ವರೆಗೆ ಕೂಲಿ ಕೊಡುವಂತಿಲ್ಲ, ಕಾಳಿನ ವ್ಯವಸ್ಥೆ ಯಿಲ್ಲ, ವಾರಕ್ಕೆರಡು ದಿನ ಕೂಲಿ ಕೊಡಬೇಕೆಂಬ 'ಫ್ಯಾಮಿನ್ ಕೋಡಿನ' ನಿಯಮಕ್ಕೆ ಬೆಲೆಯಿಲ್ಲ. ಕೂಲಿಕಾರರಿಗೆ ನೆರಳಿನ ಆಸರೆಗಳಿಲ್ಲ. ಇದನ್ನೆಲ್ಲ ಆಗಾಗ ಜಿಲ್ಲೆಯಲ್ಲಿ ಸಂಚರಿಸಿ ಸೂಕ್ಷ್ಮವಾಗಿ ನಿರುಕಿಸಿ ಸುಪ್ರಸಿದ್ಧ ಮುಂದಾಳುಗಳು ಅಧಿಕಾರಿಗಳ ಗಮನಕ್ಕೆ ತಂದುಕೊಟ್ಟಿದ್ದರು. ಹೀಗೆ ಬರಗಾಲಸಮಿತಿ ಸರಕಾರದ ಮೇಲೆ ಯೋಗ್ಯ ನಿಯಂತ್ರಣದ ಕೆಲಸವನ್ನು ಮಾಡಿತ್ತು. ಇಷ್ಟಾದರೂ ಇನ್ನೂ ಅವ್ಯವಸ್ಥೆ ಇದೆ. ಎಲ್ಲ ಆಲೋಚಿಸಿ ಅವರಿಬ್ಬರೂ ಕೊನೆಗೆ ನಿರ್ಧರಿಸಿದರು: ತಾವು ಬೆಳಿಗ್ಗೆ ಅಲ್ಲಿ ಹೋಗಿ ನೋಡಬೇಕು, ಮಾತು ಕೊಟ್ಟಂತೆ ಅಧಿಕಾರಿಗಳಿಂದ ವ್ಯವಸ್ಥೆ ಆಗಿದ್ದರೆ ಒಳಿತು, ಇಲ್ಲದಿದ್ದರೆ ತಾವು ಸಂಜೆಯೊಳಗಾಗಿ ಎಲ್ಲ ಏರ್ಪಾಡು ಮಾಡುವುದಾಗಿ ವಚನ ಕೊಟ್ಟು ಕೂಲಿಯವರ ಸಮಾಧಾನ ಮಾಡಬೇಕು, ಡಾಕ್ಟರರು ಅವಶ್ಯ ಕಂಡರೆ ಕಾರಿನಲ್ಲಿ ಬಾಗಿಲುಕೋಟೆಯವರೆಗೆ ಹೋಗಿ ಬರ ಬೇಕು, ಅಮೃತನು ಅಲ್ಲಿಯೇ ಉಳಿಯಬೇಕು ಎಂದು.

ಮರುದಿನ ಬೆಳಗಾಯಿತು. ಹೊತ್ತೇರಿತು. ಆದರೆ ಬಿಸಿಲಿರಲಿಲ್ಲ. ಮುಂಗಾ ರಿನ ಮೋಡಗಳು ಸೂರ್ಯನ ಕಿರಣಗಳಿಗೆ ಢಾಲು ಹಿಡಿದಂತಿದ್ದವು. ಮಳೆಗಾಲ

ಹತ್ತಿರ ಬಂತೆಂಬ ಸೂಚನೆ ಕೊಡಲು ಮಾತ್ರ ದೂತರಂತೆ ಅವು ಬಂದಿರಬೇಕು. ಮಳೆಯೇನು ಬೀಳುವ ಲಕ್ಷಣವಿರಲಿಲ್ಲ. ಕವಿದ ಮುಗಿಲಿನಲ್ಲಿ ಹೊತ್ತು ಸರಿಯಾಗಿ ತಿಳಿಯದೆ ಕೂಲಿಕಾರರೆಲ್ಲ ದಗದಕ್ಕೆ ತುಸು ತಡವಾಗಿ ಗುಂಪುಕಟ್ಟಿಕೊಂಡು ಬಂದರು. ಈವೊತ್ತು ಕೂಲಿ-ಕಾಳು ದೊರೆಯುವುದೆಂದು ಅವರಿಗೆ ನಿರೀಕ್ಷೆ ಇತ್ತು. ದೊರೆಯುವವರೆಗೆ ಕೆಲಸಕ್ಕೆ ಜಪ್ಪೆಂದರೂ ಕೈ ಹಚ್ಚುವಂತಿಲ್ಲ ಎಂದವರು ಅಲ್ಲಲ್ಲಿ ದುಂಡುದುಂಡಾಗಿ ಕೂತು ಹರಟೆ ಹೊಡೆಯುತ್ತಿದ್ದರು. ತಂಬಾಕು ಸೇದಿ ಒಬ್ಬರೊಬ್ಬರಿಗೆ ಕೊಡುತ್ತಿದ್ದರು. ಗ್ಯಾಂಗರರು ಬಂದಿದ್ದರೂ ಕೆಲಸಕ್ಕೆ ಎಬ್ಬಿಸುವ ಎದೆ ಅವರಿಗಿಲ್ಲ. ನಿನ್ನೆಯ ದಿನದ ಚಿತ್ರವೆಲ್ಲ ಅವರ ಕಣ್ಮುಂದೆ ಇತ್ತು. ಎಂಟುವರೆ ಆಯಿತು. ರಸ್ತೆಯ ಕಡೆಗೆ ಎಲ್ಲರೂ ನೋಡುತ್ತಾರೆ. ಯಾರ ಸುಳಿವೂ ಇಲ್ಲ. ಒಂಬತ್ತರ ಸುಮಾರಿಗೆ ದೂರದಲ್ಲಿ ಸಾಯಕಲ್ಲುಗಳ ಮೇಲೆ ಕೆಲವರು ಬರುವಂತೆ ಕಂಡಿತು. ಕೂಲಿಕಾರರು ಹಿಗ್ಗಿದರು. ಈ ಸಂಧಿ ಸಾಧಿಸಿ 'ಹೂಂ! ಇನ್ನ ದಗದಕ್ಕ ಹತ್ತಿರಿ, ಕೂಲಿ ರಕಮು ಬಂತಲ್ಲ!' ಎಂದು ಗ್ಯಾಂಗರರು ಹುರಿದುಂಬಿಸಿ ಎಲ್ಲರನ್ನು ಎಬ್ಬಿಸಿದರು. ಎಲ್ಲರೂ ಎದ್ದು ಒಂದು ಕಡೆ ಕಲೆತರು. ಆದರೆ ಕೈಯಲ್ಲಿ ಕೂಲಿ ಬೀಳುವವರೆಗೆ ಕೆಲಸವನ್ನು ಮೊದಲುಮಾಡಬಾರದೆಂಬ ಸಂಕಲ್ಪದಿಂದ ಅವರು ಹಾಗೇ ನಿಂತರು. ಓವರಸಿಯರೂ ಇತರರೂ ಬಂದರು. 'ಒಂಬತ್ತು ಹೊಡೀತು. ಇನ್ನೂ ಯಾಕ ದಗದಕ್ಕ ಸುರು ಮಾಡಿಲ್ಲ?' ಎಂದು ಗ್ಯಾಂಗರರನ್ನು ಕರೆದು ಒದರಾಡಿದರು. ಅವರು ಕಾರಣ ಹೇಳಿದರು. ಅದು ಅವರಿಗೂ ಗೊತ್ತಿತ್ತು. ನಿನ್ನೆ ಹೇಳಿದಂತೆ ಹಣದ ವ್ಯವಸ್ಥೆ ಮಾಡುವ ಪ್ರಯತ್ನ ಮಾಡಿದ್ದರು. ಅದು ಫಲಿಸಿರಲಿಲ್ಲ. ಬರಿಗೈಯಿಂದ ಬಂದಿದ್ದರು. ಇದು ಕೂಲಿಯಾಳುಗಳಿಗೆ ತಿಳಿಯಿತು. ಮತ್ತೆ ಅವರು ತಮ್ಮ ಹಿರಿಯರನ್ನು ಮುಂದೆ ಮಾಡಿ ಹೆಚ್ಚಿನ ತ್ವೇಷದಿಂದ ಓವರಸಿಯರರನ್ನು ಸುತ್ತುಗಟ್ಟಿ ನಿಂತರು. 'ನಿನ್ನೆ ಏನು ಹೇಳಿದ್ದಿರಿ ರಾವಸಾಹೇಬ್? ನಮಗ ಕೂಲಿ ಕೊಡರಿ, ಕಾಳ ಕೊಡಸರಿ!' ಎಂಬುದೇ ಅವರ ಮಂತ್ರ. ಸಗಾರದ ಕಾರಕೂನರು ಖಜನೀಗೆ ತರಲಿಕ್ಕೆ ಹೋಗಿರತಾರ. ಅವರನ್ನ ಅತ್ತಲಾಗ ಕಳಿಸಿ ಬಂದೀನಿ' ಎಂದು ಓವರಸಿಯರು ತಿರುತಿರುಗಿ ಹೇಳಿದರು. ಅವರಿಗೆ ಖಾತ್ರಿಯಾಗಲಿಲ್ಲ. ದಿನದಿನವೂ ಇದೇ ರೀತಿ ಹೇಳಿ ಮೋಸ ಮಾಡುತ್ತಿರುವರೆಂದು ಮಾತ್ರ ಖಾತ್ರಿಯಾಯಿತು. ಎಲ್ಲರ ಮೋರೆ ಕೆಂಪಾದುವು. ಓವರಸಿಯರನ್ನೂ ಗ್ಯಾಂಗರರನ್ನೂ ನುಂಗಿ ನೀರ್ಕುಡಿಯುವಂತೆ ಜನ ಮುಂದೆ ಮುಂದೆ ದಟ್ಟವಾಗಿ ಕೂಡಹತ್ತಿತು. ಹೆಣ್ಣಾಳುಗಳು ಆ ಗುಂಪಿನ ರೌದ್ರಾವೇಶದಲ್ಲಿ ಒಂದಾದವು. ಸಂಗವ್ವನು

ಮಾತ್ರ ಅವರಲ್ಲಿ ಕಾಣಲಿಲ್ಲ. ತನ್ನ ರುದ್ರನಾಟಕ ಈ ರಸ್ತೆಯು ರಂಗಸ್ಥಲದಲ್ಲಿ ಮುಂದುವರಿಯುವುದು ಸಾಕೆಂದು ಅವಳು ಈ ದಿನ ಕೂಲಿಗೇ ಬರಲಿಲ್ಲವೆಂದು ತೋರುತ್ತದೆ. 'ನಮಗ ಕೂಲಿ ಕೊಡತೀರೊ ಇಲ್ಲೊ ಹೇಳರಿ ? ಕೂಲಿ-ಕಾಳು ! ಕೂಲಿ–ಕಾಳು !' ಎನ್ನುತ್ತ ಜನವೆಲ್ಲ ಏಕಕಂಠದಿಂದ ಗರ್ಜನೆಮಾಡಹತ್ತಿತು. ರಾಜ್ಯದ ಯುದ್ಧ; ಧರ್ಮದ ಯುದ್ಧ, ಹೆಣ್ಣಿನ ಯುದ್ಧ ಇವೆಲ್ಲ ಆಗಿರುವ ಈ ನೆಲದ ಮೇಲೆ ಈವತ್ತು ಹೊಟ್ಟೆಯ ಯುದ್ಧವೊಂದು ಹೊಸದಾಗಿ ನಡೆಯುವಂತೆ ಕಂಡಿತು. ಓವರಸಿಯರರೂ, ಗ್ಯಾಂಗರರೂ ಕಂಗೆಟ್ಟುಹೋದರು. ಅವರು ತಮ್ಮ ಜೀವದ ಮೇಲಿನ ಆಸೆ ತೊರೆದರು. ಹೀಗೆ ಅರ್ಧಗಂಟೆ ನಡೆದಿರಲು ದೂರದಲ್ಲಿ ಎರಡು ಸಾಯಕಲ್ಲು ಬರುವಂತೆ ಕಾಣಿಸಿತು. ಅದನ್ನು ಯಾರೋ ಹೇಳಿದೊಡನೆ ಓವರಸಿಯರಿಗೆ ಧೈರ್ಯ ಬಂತು. 'ಹೌದು. ಅವರೇ ಬಂದರು. ಇನ್ನ ಹೋಗರಿ ದಗದಕ್ಕ' ಎಂದರು. ಜನ ಕೂಗಾಟ ನಿಲ್ಲಿಸಿದರು. ಆದರೆ ಕೆಲಸಕ್ಕೆ ಹೋಗಲಿಲ್ಲ. ಕೈಯಲ್ಲಿ ಕೂಲಿ ಬೀಳುವವರೆಗೆ ಕೆಲಸ ಮಾಡುವಂತಿಲ್ಲ ಎಂಬುದು ಅವರ ದೃಢನಿಶ್ಚಯವಾಗಿತ್ತು. ಐದು ನಿಮಿಷದಲ್ಲಿ ಅಲ್ಲಿಗೆ ಆ ಇಬ್ಬರು ಬಂದರು. ಆದರೆ ಅವರು ಡಾ. ದಾತಾರ ಹಾಗೂ ಅಮೃತ ಮಾತ್ರ. ಸಗಾರದ ಕಾರಕೂನರು ಬರಲಿಲ್ಲ.ಆಯಿತು, ಜನ ಮತ್ತೆ ತಮ್ಮ ಘೋಷಣೆಗಳನ್ನುಜೋರು ಮಾಡಿದರು.ಡಾಕ್ಟರರೂ ಅಮೃತನೂ ಆ ಜನ ಸಮೂಹದ ಅಂಚಿಗೆ ಬಂದುನಿಂತು ನೋಡುತ್ತಾರೆ,ಪರಿಸ್ಥಿತಿ ವಿಕೋಪಕ್ಕೆ ಹೋಗಿದೆಯೆಂದು ಗೊತ್ತಾಯಿತು.ಓವರಸಿಯರನ್ನುಕರೆದು ಎಲ್ಲ ಕೇಳಿದರು.ಕೂಲಿಯ ವ್ಯವಸ್ಥೆ ಆಗಿಲ್ಲವೆಂದು ತಿಳಿಯಿತು. 'ಹೊಟ್ಟೆಗಿಲ್ಲ ಎಂದು ನಿಮ್ಮ ಕಾಮಗಾರಿಗೆ ಬಂದ ಜನಕ್ಕೆ ದುಡಿಯ ಹಚ್ಚಿ ಹದಿನೈದು ದಿನದ ಮೇಲಾದರೂ ಕೂಲಿ ಕೊಡದೆ ಇದ್ದರೆ ಅವರೇನು ಮಾಡಬೇಕು? ಅವರೇನು ನಿಮ್ಮ ಈ ಕಲ್ಲು–ಮಣ್ಣು ತಿಂದು ಕೆಲಸ ಮಾಡಬೇಕೇನು?' ಎಂದು ಡಾಕ್ಟರರು ಓವರಸಿಯರನ್ನು ಕುರಿತು ತುಸು ಸಂತಾಪಿಸಿಯೆ ಮಾತಾಡಿದರು. ಅನೇಕ ಕೂಲಿಯವರಿಗೆ ಡಾಕ್ಟರರ ಪರಿಚಯವಿತ್ತು. ಅವರಲ್ಲಿ ಅತ್ಯಂತ ವಿಶ್ವಾಸವಿತ್ತು. ತಮ್ಮ ಪಕ್ಷ ಹಿಡಿದು ಅವರು ಮಾತಾಡಿದ್ದು ಕೇಳಿದ ಕೂಡಲೆ ಮುಂಭಾಗದಲ್ಲಿ ನಿಂತ ಹಿರಿಯರು ಒಬ್ಬರೊಬ್ಬರನ್ನು ನೋಡಿ ಕಣ್ಸನ್ನೆಯಿಂದ ತಮ್ಮ ಮೆಚ್ಚಿಗೆಯನ್ನು ತಿಳಿಸಿದರು. ಡಾಕ್ಟರರ ಮಾತಿಗೆ ಓವರಸಿಯರಾದರೂ ಏನು ಉತ್ತರ ಕೊಡಬಹುದು ? 'ಮೇಲಿನ ಅಧಿಕಾರಿಗಳಿಗೆ ಎಲ್ಲ ತಿಳಿಸಿದೆ; ಕಾಗದ-ಪತ್ರ ಮಂಜೂರಾಗಿ ಸರಿಯಾಗಿ ಬರಬೇಕಾದರೆ ತಡವಾಗುವದು.

ಎಂದು ಮುಂತಾಗಿ ಅವರ ಹೇಳಿಕೆ. ಅಮೃತನು ಆ ಸಮುದಾಯವನ್ನು ಬೆಕ್ಕಸ ಬೆರಗಾಗಿ ನೋಡುತ್ತ ಸಾಯಕಲ್ಲಿಗೆ ಆತುಕೊಂಡು ನಿಂತನು. ಡಾಕ್ಟರರು ಹಳ್ಳಿ ಗರೊಡನೆ ಹತ್ತು ವರುಷಕಾಲ ಕಳೆದು ಅವರಿಂದ ಕೆಲಸ ತಗೊಂಡು ಅವರ ಸೇವೆ ಯಲ್ಲಿ ನೈ ಸವೆಸಿ ನುರಿತವರು. ಅವರು ಎಲ್ಲ ಪರಿಸ್ಥಿತಿಯನ್ನು ಅರಿತುಕೊಂಡು ಕೂಲಿಕಾರರನ್ನು ಕುರಿತು, 'ನಿಮ್ಮ ಪೈಕಿ ಐವತ್ತು ಜನ ಹಿರಿಯರು ಮುಂದೆ ಬರ್ರಿ!' ಎಂದು ಹೇಳಿದರು. ಅವರು ಹೇಳಿದ ಪ್ರಕಾರ ಸುಮಾರು ಐವತ್ತು ಜನ ಮುಂದೆ ಬಂದರು. ಅವರನ್ನು ಕುರಿತು ಹೇಳಿದರು : 'ಇಕಾ ನೋಡಿರಿ, ನಾ ಯಾರು ನಿಮಗ ಗೊತ್ತೈತಿ. ನಾ ಏನು ಸರಕಾರಿ ನೌಕರ ಅಲ್ಲ, ನಿಮ್ಮ ನೌಕರ ಹೌದಲ್ಲೊ? (ಅಮೃತನನ್ನು ತೋರಿಸಿ) ಇಲ್ಲಿ ನಿಂತಾರಲ್ಲ ಇವರು ಬರಗಾಲ ಸಮಿತಿಯಿಂದ ಎಲ್ಲಾ ತಿಳಕೋಳಿಕ್ಕೆ ಬಂದಾರ. ಇವರು ಇಲ್ಲೇ ನಿಮ್ಮ ಹತೀಲೆ ಇರತಾರ. ನಾ ಈಗ ಸದ್ಯ ಹೋಗಿ ಮೋಟರ ತಗೊಂಡು ಸರಕಾರ ಇದ್ದಲ್ಲೆ ಹೋಗಿ ಸಂಜೆ ಆಗುದರಾಗ ನಿಮ್ಮ ಕೂಲಿ ರಕಮು ತಗೊಂಡುಬರತೀನಿ.ಅಲ್ಲಿಂದ ರಾತ್ರಿ ನಿಮಗ ಕಾಳು ಸಿಗುವ ವ್ಯವಸ್ಥಾ ಮಾಡತೀವಿ. ನಾ ಹೇಳಿದ್ದು ನಂಬ ತೀರೇನು?' 'ನಂಬದಿರಲಿಕ ಹೆಂಗರಿ?' ಎಂಬ ಆದರದ ನುಡಿಗಳು ಕೇಳಿದವು. ಅದೊಂದು ಮಾಯೆ ಬೀಸಿದಂತೆ ಡಾಕ್ಟರರ ಮಾತಿನಿಂದ ವಾತಾವರಣವೇ ಬದ ಲಾಯಿತು. 'ಹೂ! ಹಂಗಾರಿನ್ನ ದಗದ ಸುರು ಮಾಡಿರಿ. ಹೇಳಿರಿ ನಿಮ್ಮ ನಿಮ್ಮ ಮಂದಿಗೆ!' ಎಂದು ತಮ್ಮ ವಶವಾದ ಸೈನ್ಯಕ್ಕೆ ಸೇನಾಪತಿಯಂತೆ ಆಣತಿ ಇತ್ತರು. ಈ ಬಗ್ಗೆ ಮಾತ್ರ ಮೊದಲು ಮಿಜಿಮಿಜಿ ಕಂಡುಬಂತು. ತಮ್ಮ ಪ್ರತಿಜ್ಞೆಯು ಭಂಗವಾಗುವದೆಂದು ಕೆಲವರಿಗೆ ತೋರಿತು. ಆದರೆ ಡಾಕ್ಟರರು ಹೇಳಿದರು, 'ನಿಮ್ಮದೆಲ್ಲಾ ನನಗೆ ಗೊತ್ತದ. ಸರಕಾರ ಕೊಡದಿದ್ದರ ನನ್ನ ಜೀವ ಒತ್ತಿಯಿಟ್ಟು ಸಾವಕಾರ ಕಡಿಂದ ರಕಮು ತಂದು ನಿಮಗ ನಾ ಕೊಡಸತೀನಿ, ಆತಿಲ್ಲೋ? ದಗದ ಬಿಟ್ಟು ಈವತ್ತಿನ ಕೂಲಿ ಯಾಕ ಕಳಕೋತೀರಿ?' ಇದು ಎಲ್ಲರ ಮನಸ್ಸಿನಲ್ಲಿ ನಾಟಿತು. 'ಎಪ್ಪ, ಆಟು ಮಾಡಿರಿ. ನಿಮಗ ನಾವು ಹೊರತಲ್ಲ.' ಎಂದು ಹಿರಿಯರು ಒಪ್ಪಿಕೊಂಡರು. ಹತ್ತು ನಿಮಿಷಗಳಲ್ಲಿಗುಂಪು ಚದುರಿತು; ಕೆಲಸಗಳಿಗೆ ಆರಂಭವಾಯಿತು. ಓವರಸಿಯರರೂ ಗ್ಯಾಂಗರರೂ ಡಾಕ್ಟರರನ್ನು ಹಾಡಿ ಹರಸುತ್ತ ತಮ್ಮ ಮೇಲ್ವಿಚಾರಣೆಯ ಕೆಲಸದಲ್ಲಿ ತೊಡಗಿ ದರು. ಮೊದಲು ಗೊತ್ತುಮಾಡಿದಂತೆ ಡಾಕ್ಟರರು ತಿರುಗಿ ಸಾಯಕಲ್ಲೇರಿ ಹೊರ ಟರು—ಸಂಜೆಯೊಳಗೆ ಕೂಲಿಯ ಹಣ ತಂದೇ ಬಿಡುವ ನಿರ್ಧಾರದಿಂದ.

ಅಮೃತನು ಎಲ್ಲ ನೋಡಲೆಂದು ಅಲ್ಲೇ ಉಳಿದನು.

ಹೊತ್ತೇರಿತು. ಪ್ರತಿದಿನದಂತೆ ಕೆಲಸ ಸಾಗಿತು: ಅಮೃತನು ಈ ದೃಶ್ಯದ ಪಸರವನ್ನು ನೋಡುತ್ತ ಆ ತುದಿಯಿಂದ ಈ ತುದಿಗೆ ತಿರುಗಾಡಿದನು. ಹೊಸಬನಾದರೂ ತಮ್ಮ ಹಿತಸಂಬಂಧಿಯೆಂಬಂತೆ ಎಲ್ಲ ಕೂಲಿಕಾರರು ಅವನನ್ನು ಎಣಿಸಿದರು. ಅವನ ಕೇಳಿಕೆಗೆ ತಮ್ಮ ಸಂಕಷ್ಟಗಳನ್ನು ತೋಡಿಕೊಂಡರು. ಗ್ಯಾಂಗರರ ವಿಷಯಕವಾದ ತಕರಾರು ಹೆಚ್ಚಾಗಿದ್ದವು. ಕೂಳು, ನೀರು, ನೆರಳಿನ ಅವ್ಯವಸ್ಥೆಯಂತೂ ಅವರು ಹೇಳದಿದ್ದರೂ ತಿಳಿಯುವಂತಿತ್ತು. ಎಲ್ಲವನ್ನು ತಾಳ್ಮೆಯಿಂದ ಕೇಳಿ ಬೇಗನೆ ಪರಿಹಾರ ದೊರೆಯುವಂತೆ ಪ್ರಯತ್ನ ಮಾಡುವದಾಗಿ ಬಹಳ ದಿನದ ಸಲಿಗೆಯಿದ್ದವನಂತೆ ಅಮೃತನು ಭರವಸೆಯಿತ್ತನು.ಅವರಿಗೆ ಆಶ್ಚರ್ಯವಾಯಿತು.ಈವರೆಗೆ ತಮ್ಮನ್ನುಮನುಷ್ಯರೆಂದು ತಿಳಿದು ಯಾರಾದರೂ ಸಭ್ಯರೀತಿಯಲ್ಲಿ ಮಾತಾಡಿಸಬಲ್ಲರೇ ಎಂಬ ಅನುಮಾನ ಅವರಿಗೆ ಇತ್ತು. ಇಂದು ಗ್ಯಾಂಗರರು ಸಹ ತುಂಬ ಮೆತ್ತಗಾಗಿದ್ದರು. ‘ಆ ಮಗನೆ, ಈ ಮಗನೆ’ ಎಂಬ ಅವರ ಪ್ರತಿಕ್ಷಣ ಪುಷ್ಪವೃಷ್ಟಿ ಈವೊತ್ತು ಆಗಲಿಲ್ಲ. ಅಮೃತನ ಇದಿರು ಈ ಸೋಗನ್ನು ಹಾಕಿದ್ದರೆಂಬುದು ಅವನಿಗೂಗೊತ್ತು.ಎಲ್ಲವೂ ಅಚ್ಚುಕಟ್ಟಾಗಿ ಗದ್ದರಣೆ- ಗುದ್ದಾಟವಿಲ್ಲದೆ ಸಾಗಿದೆ, ಆಕಾಶದಲ್ಲಿ ಬಿಟ್ಟುಬಿಡದೆ ನಿಯಮಿತವಾಗಿ ನಡೆದ ಗ್ರಹಗತಿಯಂತೆ.ಅಮೃತನು ಬರೀಕೆಲಸವನ್ನು ನೋಡುತ್ತಿರುವಂತೆ ತೋರಿದರೂ ತನ್ನೆಲ್ಲ ಸಹಾನುಭೂತಿ ಬಲದಿಂದ ಆ ಹೆಣ್ಣಾಳು ಗಂಡಾಳುಗಳ ಹೃದಯವನ್ನರಿತುಕೊಳ್ಳಲು ಹವಣಿಸಿದನು. ಅವರ ಚಿಂದಿಬಟ್ಟೆಯನ್ನೂ ಸೋತು ಸೊರಗಿದ ಮೈಯನ್ನೂ ನೋಡಿ ಕೊರಗಿದನು. ಅಲ್ಲಲ್ಲಿ ತಡೆದು ಅವರನ್ನು ಮಾತಾಡಿಸಿ ಅವರ ಊರು, ಹೆಸರುದೆಸೆ ಮುಂತಾಗಿ ಕೇಳಿ ಅವರ ಒಂದೊಂದು ಮಾತಿನಲ್ಲಿ ಇಂದಿನ ಹದಗೆಟ್ಟ ಬಾಳಿನ ಹಲುಬನ್ನು ಕಂಡನು. ಮೇಲೆ ಒಣವೆಂದು ಕಂಡರೂ ತೋಡಿದಲ್ಲಿ ಕಣ್ಣೀರಿನ ಕೋಡಿ ಹರಿಯುವ ಮಳಲಿನಂತೆ ಆ ಜಂಗುಳಿ ಅವನಿಗೆ ತೋರಿತು. ಹೆಚ್ಚು ಮಾತಾಡಿಸಿದರೆ ಕಂಬನಿಗೆ ಕರೆಯೆಂದು ಅರಿತು ಇನ್ನು ಮೂಕನಾಗಿ ತಿರುಗುವುದೇ ಮೇಲೇನೋ ಎಂದವನು ಭಾವಿಸಿದನು. ಹಾಗೆ ಒಂದೆಡೆ ಕೆಲಸ ನಡೆದ ರಸ್ತೆಯ ಮಗ್ಗುಲಿಗೆ ಬಂದನು. ಅಲ್ಲಿ ಮೊದಲನೆಯ ಸಲ ಹಾಯ್ದು ಹೋಗುವಾಗ ಒಬ್ಬ ಹೆಂಗಸಿನ ಮುಖ ಎಲ್ಲಿಯೊ ನೋಡಿದ್ದೆಂದು ಅವನಿಗೆ ಅನಿಸಿತ್ತು. ಆದರೆ ಅದು ತಪ್ಪು ಅನಿಸಿಕೆಯಿರಬಹುದೆಂದು ಮುಂದೆ ಸಾಗಿದ್ದನು. ಈಗ ಹೊರಳಿ ಬರುವಾಗ ಅದೇ ಮುಖ ಇನ್ನಷ್ಟು ಪರಿಚಿತವಾಗಿ ತೋರ

ಹತ್ತಿತು. ಯಾರೋ ಬಹಳ ಸಲ ನೋಡಿ ಸಲುವಳಿಯಾದವರೆಂದು ಅನಿಸುತ್ತದೆ; ಆದರೆ ಯಾರೆಂಬುದು,ಎಲ್ಲಿ ನೋಡಿದ್ದೆನೆಂಬುದು ಧ್ಯಾಸಕ್ಕೆಬರವೊಲ್ಲದು.ಅವನು ಒಂದೆರಡು ಮಿನಿಟು ಬದಿಗೆ ನಿಂತು ಆ ಪ್ರಾಣಿಯನ್ನು ನೋಡಹತ್ತಿದನು. ಇಷ್ಟಾದರೂ ಅವನಿಗೆ ಹೊಳೆಯಲಿಲ್ಲ. ತನ್ನನ್ನೇ ಅವನು ನೋಡುತ್ತಿರುವದನ್ನು ಗುರುತಿಸಿ, 'ಯಾಕ, ಅಮೃತಪ್ಪಾವರು ಬಾಳ ನೋಡಲಾಕ ಹತ್ತೀದಿರಿ ? ಗುರುತು ಹತ್ತವೊಲ್ಲದೇನ್ರಿ ?' ಎಂದು ಆ ಹೆಂಗಸು ತಾನೇ ಬಾಯಿ ಬಿಚ್ಚಿದಳು. ಅವನಿಗೆ ಇಷ್ಟಾದರೂ ಗುರುತು ಹತ್ತಲಿಲ್ಲ; ಆದರೆ ಆಶ್ಚರ್ಯ ಮಿಕ್ಕಿತು. ತನ್ನ ಹೆಸರನ್ನು ಸಹ ಬಲ್ಲ ಈ ಹೆಂಗಸು ಯಾರು ? ಕಲಿತವನಾದ ತಾನು ಇಷ್ಟು ಗುರುತಿನ ಅವಳನ್ನು ಮರೆತಿದ್ದರೆ ಏನೂ ಕಲಿಯದ ಅವಳು ಎಲ್ಲವನ್ನೂ ನೆನೆದಿದ್ದಾಳೆ. ದಾರಿಯ ಬಳಿಯಲ್ಲಿಯೇ ಆಗೆದಿರುವ ಒಂದು ತಗ್ಗಿನ ಕಡೆಗೆ ಆಕೆ ಕೈಯಲ್ಲಿ ಬುಟ್ಟಿ ಹಿಡಿದು ಹೊರಟಿದ್ದಳು. ಅವಳ ವಯಸ್ಸು ೪೫ರ ಒಳಹೊರಗೆ ಇರಬಹುದು. ಅವಳ ಮೈ ಬಡಕಲಾಗಿ ಎಲುಬು ತೆಗೆದಿದೆ; ಮೋರೆ ಕಪ್ಪಿಟ್ಟದೆ. ಅಮೃತನು ಮತ್ತೆ ನಿಟ್ಟಿಸಿ ಗುರುತಿಸುವ ಪ್ರಯತ್ನ ಮಾಡಿದನು. ಕಡೆಗೆ ಸೋತು 'ನೋಡಿದಂಗ ಆಗತದ. ಆದರ ನೀ ಯಾರು ಗೊತ್ತಾಗದವ್ವ!' ಎಂದು ಒಪ್ಪಿಕೊಂಡನು.

'ನೀ ಅರ ಏನು ಮಾಡಿಯೋ ಅಮೃತಪ್ಪ. ಸುಡಗಾಡಗಟ್ಟಿಯಿಂದ ಹೊಳ್ಳಿ ಬಂದಂಗ ಆಗೇತಿ ನಮ್ಮ ಗತಿ. ಏನುಳದತಿ ಈ ಮೈಯ್ಯಾಗ ? ನಾ ಗೌರವ್ವ, ಮುರನಾಳಾಕಿ. ನಿಮ್ಮನಿಗೆ ಮಸರು–ಬೆಣ್ಣಿ ಹಾಕಾಕಿ.' ಎಂದು ಹೇಳಿದೊಡನೆ ಒಮ್ಮೆಲೆ ಅಮೃತನ ಮುಖವರಳಿ ಮರಳಿ ಮುದುಡಿತು. 'ತಿಳೀತು ಬಿಡು, ಗೌರವ್ವ: ಗುರುತು ಹತ್ತಿತು. ಎಷ್ಟು ಸೊರಗೀದಿ ! ಏನು ಸುದ್ದಿ ?'

'ಸುದ್ದಿ ಬಾಳೈತೊ ಎಪ್ಪ ! ಸುಕಾಲ ಹೋತು, ಸುದ್ದಿಗೇನು ಕಮ್ಮಿ ? ಮತ್ತ ಸೊರಗೀದಿ ಅಂತೀ, ಸೊರಗದ ಏನ ಮಾಡ್ಲಿ ಅಮೃತಪ್ಪ ! ಸೊಕ್ಕಲಾಕ ನಾ ಏನು ಇಲ್ಲಿ ತವರಮನಿ ಮಾಡಿಸಿಗೊಳ್ಳಾಕ ಬಂದೀನೇ ? ಮನೀ ಮಾರು ಬಿಟ್ಟು ಇಲ್ಲಿ ಬಂದು ಇದ್ದೀವಿ ಆತು ಹೊಟ್ಟೀ ಕಿಚ್ಚಿಗೆ!' ಎಂದು ಗೌರವ್ವ ನಿಟ್ಟುಸಿರೊಂದನ್ನು ಬಿಟ್ಟು ಕೈಯಲ್ಲಿಯ ಬುಟ್ಟಿಯನ್ನು ಕೆಳಕ್ಕೆ ಒಗೆದು ಕೂತಳು. ಆ ನಿಟ್ಟುಸಿರು ಅಮೃತನಲ್ಲಿ ಹೃದಯಕಂಪನವನ್ನುಂಟುಮಾಡಿ ಹಿಂದಿನ ಋಣಾನುಬಂಧವನ್ನೆಲ್ಲ ನೆನವಿಗೆ ಬರಮಾಡಿತು. ತನ್ನ ಬಳಗದವರಲ್ಲಿ ಒಬ್ಬರೊಡನೆ ಆಡುತ್ತಿರುವಂತೆ ಅವನಿಗೆ ಒಲವುಕ್ಕಿತು. ಗೌರವ್ವ ತಮ್ಮ ಮನೆಯಲ್ಲಿ ಬರೀ ಮೊಸರು ನಾಕೆ ಆಗಿರಲಿಲ್ಲ ಎಂಬುದನ್ನು ಅವನು ನೆನೆದನು. ಅವಳ ಗಂಡನಾದ ಶಂಕ್ರಪ್ಪ

ಅವಳ ಮಕ್ಕಳು ಎಲ್ಲರೂ ಮನೆಯವರಂತೆ ಆಗಿಬಿಟ್ಟಿದ್ದರು. ಅದರಲ್ಲಿ ಅವರ ಮನೆತನದ ಪಾಲಿನ ಸಂಬಂಧದಲ್ಲಿ ತಂಟೆಹುಟ್ಟಿದಾಗ ಶಂಭುರಾಯರು ಸ್ವತಃ ಶಂಕ್ರಪ್ಪನನ್ನು ಒಳ್ಳೇ ವಕೀಲರ ಕಡೆ ಕರಕೊಂಡು ಹೋಗಿ ಎಲ್ಲ ತರದ ಖಟಪಿಟ ಮಾಡಿ ಅವನಿಗೆ ಅವನ ಹಕ್ಕಿನ ಪಾಲು ಸಿಗುವಂತೆ ಮಾಡಿದ್ದರು. ಇದನ್ನು ಬಹಳ ದೊಡ್ಡ ಉಪಕಾರವೆಂದು ತಿಳಿದು ಅವರೆಲ್ಲ ಶಂಭುರಾಯರ ಮನೆ ಎಂದರೆ ಅಷ್ಟು ಹಚ್ಚಿಕೊಂಡಿದ್ದರು. ಅವರ ಸಲುವಾಗಿ ಮನೆಮಂದಿಯೆಲ್ಲ ಬೇಕಾದ್ದು ಮಾಡಲು ಸಿದ್ಧರಾಗಿದ್ದರು. ತಮಗೆ ನಾಲ್ಕು ಒಳ್ಳೇ ಹೊಲ ಬಂದಿದ್ದವು, ಚಲೋ ಮನೆಯಿತ್ತು. ಹೊಲಮನೆ ನೋಡಿಕೊಂಡು ಯಾರದೂ ಹಂಗಿಲ್ಲದೆ ಸುಖವಾಗಿ ಇದ್ದವರವರು. ಶಂಭುರಾಯರ ಮನೆಯನ್ನು ಬಿಟ್ಟು ಬೇರೆಕಡೆ ಮೊಸರು ಮಾರಲು ಹೋಗುತ್ತಿರಲಿಲ್ಲ. ಅದು ಅವರ ಮಾನಕ್ಕೆ ಸಾಲದು, ಅಗತ್ಯವೂ ಇಲ್ಲ. ಇಂಥ ಗೌರವ್ವ ಇಂದು ಕೂಲಿಕೆಲಸಕ್ಕೆ ಬಂದು ಮೇಲಿನವರ ಕಾಲಿನೊದೆತಕ್ಕೂ ಗುರಿಯಾಗಿ ತಿರುಗುತ್ತಿರುವುದನ್ನು ನೋಡಿದ ಕೂಡಲೆ ಅಮೃತನಿಗೆ ಹೊಟ್ಟೆಯಲ್ಲಿ ತಿವಿದಂತಾಯಿತು. ತನ್ನ ತಾಯಿಯೋ ಅಬಚಿಯೋ ಈ ಅವಸ್ಥೆಗೆ ಇಳಿದರೆ ಹೇಗಾಗಬಹುದು ಹಾಗೆಮರುಗಿದನು. ಯಾರಿಗೆಗೊತ್ತು ತಮಗೂ ಈ ದುರ್ಗತಿ ಬರಬಹುದು. ಈ ಘೋರಯೋಚನೆಯೊಡನೆ ಅವನ ಕಣ್ಣೆದಿರು ಬಾಗಿಲುಕೋಟೆಯಲ್ಲಿಯ ಮನೆಯ ಚಿತ್ರ ಸುಳಿಯಿತು. ಈ ಮೂರು ನಾಲ್ಕು ದಿನ ಮರೆತಂತಾಗಿದ್ದ ತಾಪತ್ರಯ ತನ್ನೆಲ್ಲ ರಭಸದಿಂದ ನುಗ್ಗಿತು. ಏನೇನು ಅಡಚಣೆ ಬಂದಿರುವುದೋ, ತನ್ನನ್ನು ಎಷ್ಟು ಶಪಿಸುತ್ತಿರಬಹುದೋ ಎಂದು ಅವನು ವ್ಯಗ್ರನಾಗಿ ಕಂಬದಂತೆ ನಿಂತನು. ಅಷ್ಟರಲ್ಲಿ 'ಏ!' ಎಂದು ಎಳೆದ ಎತ್ತರ ದನಿಯಲ್ಲಿ ಕೂಗಿದ 'ಗಂಗಣ್ಣ'ನ ಸುಪ್ರಸಿದ್ಧ 'ಏಕಾರ'ವು ಅವನ ಲಕ್ಷ್ಯವನ್ನು ಚೆದರಿಸಿತು. ಯಾರ ದನಿಯೆಂದು, ಯಾರಿಗಾಗಿ ಎಂದು ಕಣ್ಣೆತ್ತಿ ನೋಡಿದನು. ಗೌರವ್ವ ಕೆಲಸ ಬಿಟ್ಟು ಕೂತದ್ದಕ್ಕೆ ಆ ಕೂಗಿನ ಎಚ್ಚರವೆಂಬುದು ತಿಳಿಯಿತು. ಅವನ ದೃಷ್ಟಿ ಗ್ಯಾಂಗರನಿಂದ ಗೌರವ್ವನಕಡೆ ಹೋಯಿತು. ಇದನ್ನು ದೂರದಿಂದಲೇ ಗುರುತಿಸಿದ ಆ ಚಾಣಾಕ್ಷ ಗ್ಯಾಂಗರನು ತಿರುಗಿ ಒದರದೆ ಬೇರೆ ಕಡೆ ಮೋರೆ ಹೊರಳಿಸಿದನು. ನೆಲದ ಮೇಲೆ ಕುಳಿತ ಗೌರವ್ವ ಬೆವರಿನ ನೀರಲ್ಲಿ ತೊಯ್ದು ತೊಯ್ದು ಬಣ್ಣ ಕಂದಿದ ಹರಕು ಸೀರೆಯ ಚುಂಗನ್ನು ಕಣ್ಣಿಗೊತ್ತಿ ಉಕ್ಕಿಬರುವ ಕಂಬನಿಗಳನ್ನು ತಡೆಯುವ ಎತ್ತುಗಡೆ ಮಾಡುತ್ತಿರುವಳು. ಅಮೃತನು ಎದೆಗರಗಿ ತುಸು ಹತ್ತಿರ ಹೋದನು.. 'ಹಂಗ ಮಾಡಬಾರದು ಗೌರವ್ವ. ಹಿಂದಿಂದ ನೀನು ಏನು ಆಯಿತೋ!' ಎಂದು ಸಾಂತ್ವನ ಮಾಡಿದನು. ಆದರೆ

ಈ ಮಾತೇ ಇನ್ನಿಷ್ಟು ಅವಳ ನೆನವಿನ ಕಿಚ್ಚನ್ನು ಹೊತ್ತಿಸಿ ಅದರಲ್ಲಿ ಹಾರಿಕೊಂಡು ಸಾಯುವಷ್ಟು ನೋವನ್ನು ಅವಳಿಗೆ ತಂದಿತು. ಅವಳು ಹಿಂದಿನದನ್ನು ನೆನೆದು ಇಂದಿನದಕ್ಕೆ ಹೋಲಿಸಿ ಮೂಕಶೋಕದ ಸಂಕಟಪಡುತ್ತಿರುವಾಗ ಯಾವ ಮಾತಾಡಿದರೆ ಅವಳ ಮೇಲೇನು ಪರಿಣಾಮವಾದೀತೋ ಎಂಬ ಭಯದಿಂದ ಅಮೃತನೂ ಸುಮ್ಮನೆ ನಿಂತನು. ಆಗ ಅವನ ಒಳಗಣ್ಣಿನ ಮುಂದೆ ಹಿಂದಿನ ಗೌರವ್ವ ಬಂದು ನಿಂತಳು, ನಲಿದಳು. ಅವಳು ದಿನಾಲು ಮುಗುಳು ನಗೆ ನಗುತ್ತ 'ಮಸರು ತಗೋರಿ ಯವ್ವ! ಎಂದು ಒಳ ಬಂದು ಮೊಸರು ಹಾಕಿ ಸುತ್ತುಬಂದು ಮುಕುರುವ ಹುಡುಗರ ಕೈತುಂಬ ಪುಕ್ಕಟೆ ಮೊಸರನ್ನಿಷ್ಟು ಸುರಿದು, ನೆಲದ ಮೇಲೆ ಚೆಲ್ಲುತ್ತಲೆ ಅವರು ಬಾಯಿ ಚಪ್ಪರಿಸುತ್ತ ತಿನ್ನುವದನ್ನು ಕಂಡು ಹಿಗ್ಗಿ ಪಾರ್ವತಿಬಾಯಿಯವರೊಂದಿಗೆ ಸುಖದುಃಖದ ಮಾತಾಡಿ ಹೋಗುತ್ತಿದ್ದಳು. ಸಂತೆಯ ದಿನವಂತೂ ಮೊಸರು ಬೆಣ್ಣೆ ತಗೊಂಡು ಅವಳು ಹೊಸತಿಲೊಳಗೆ ಕಾಲಿಡುತ್ತಲೇ 'ಗೌರವ್ವ ಬಂದ್ಲು! ಗೌರವ್ವ ಬಂದ್ಲು!' ಎಂದು ಹುಡುಗರು ಕೇಕೆ ಹಾಕಿ ಕುಣಿದಾಡುವರು. ಯಾಕೆಂದರೆ ಆವೊತ್ತು ಅವಳಿಂದ ಅವರಿಗೆ ಪ್ರತ್ಯೇಕವಾಗಿ ಮೊಸರು ಬೆಣ್ಣೆ ಸಿಗುವದಲ್ಲದೆ ಹೊಲದಲ್ಲಿ ಹಾಕಿದ ಸವತೀಕಾಯಿ, ಅಲಸಂದಿ, ಬಟಗಡ್ಲಿ ಸಿಗುತ್ತಿದ್ದವು. ಅದು ಸಂತೆಯ ದಿನ ದೊರೆಯುವ ಮೇಜವಾನಿ ಅವರಿಗೆ. ಮನೆಯಲ್ಲಿ ಪಲ್ಯಕ್ಕೆಂದು ಬದ್ನೀಕಾಯಿ, ಕುಂಬಳಕಾಯಿ,ಅವರೇಕಾಯಿಗಳನ್ನೂ ತಂದಿರುತ್ತಿದ್ದಳು. 'ಇಷ್ಟ್ಯಾಕ ತರತೀ? ಬ್ಯಾಡ.' ಎಂದು ಎಷ್ಟು ಹೇಳಿದರೂ ಕೇಳುತ್ತಿರಲಿಲ್ಲ. ಗೌರವ್ವನ ಮನಸ್ಸು ರಾಜಮನಸ್ಸು: ಬೇಕಾದರೆ ರಾಣಿಯ ಮನಸ್ಸು ಎನ್ನಬಹುದು. ತೋರಲಿಕ್ಕೆ ಹಳ್ಳಿಯ ಹೆಂಗಸು; ಆದರೆ ರೂಪದಿಂದ ಹೆಸರಿಗೆ ಸರಿಯಾಗಿ ಗೌರಿಯೇ ಅವಳು. ತನ್ನ ಚೆಂದವನ್ನರಿತು ಒಳ್ಳೇ ರಸಿಕೆಯಂತೆ ಉಡಿಗೆ-ತೊಡಿಗೆ ಮಾಡಿರುತ್ತಿದ್ದಳು. ಆದವಾನೀ ಅಂಚಿನ ಕುಂಕುಮಗೆರೆಯ ಸೀರೆಯನ್ನುಟ್ಟು ಗುಳೇದಗುಡ್ಡದ ಕುಪ್ಪಸ ತೊಟ್ಟು ಜರದ ಗೊಂಡೆ ಹಚ್ಚಿದ ಚಪ್ಪಲಿ ಹಾಕಿಕೊಂಡು ಅವಳು ಬಂದರೆ ನಸುಗೆಂಪಾದ ಆ ದುಂಡನ್ನ ಮೋರೆ, ತುಂಬಿದ ಮೈ ಕಣ್ಣಿಗೆ ಹಬ್ಬವಾಗುತ್ತಿದ್ದವು. ತಲೆಯ ಮೇಲಿನ ಗಂಟು ಬಾಗಿಲ ಚೌಕಟ್ಟಿಗೆ ತಾಗಬಾರದೆಂದು ಅವಳು ಬಾಗಿ ಮೆಲ್ಲಗೆ ಬೆಡಗಿನಿಂದ ಕಾಲಿಡುತ್ತಿರುವಾಗ ಪಾರ್ವತಿಬಾಯಿಯ ಶ್ರದ್ಧಾಳುವಾದ ಕಣ್ಣಿಗೆ ತಮ್ಮ ಮನೆಯಲ್ಲಿ ಲಕ್ಷ್ಮೀ ಪ್ರವೇಶವಾಗು

ತ್ತಿರುವದೋ ಏನೊ ಎಂದು ಅನಿಸುತ್ತಿತ್ತು ಒಳಗೆ ಬಂದ ಮೇಲೆ ಎಲ್ಲ ಹುಡುಗರನ್ನು ಕೂಡಿಸಿಕೊಂಡು ಅವರಿದಿರು ಗಂಟುಬಿಚ್ಚಿ ತಾ ತಂದ ತಿನಿಸುಗಳನ್ನು ಅವರಿಗೆಲ್ಲ ಹಂಚುತ್ತಿದ್ದಳು.ಆಗ ಹಾಯಸ್ಕೂಲಿನಲ್ಲಿಓದುತ್ತಿದ್ದ ಅಮೃತನು ಅಭ್ಯಾಸದ ಪುಸ್ತಕಗಳನ್ನು ಇದ್ದಲ್ಲಿಒಗೆದು ಗೌರವ್ವನ ಆತಿಥ್ಯಕ್ಕೆ ಧಾವಿಸಿ ಹೋಗುತ್ತಿದ್ದನು. ಅಡಿಗೆಯ ಮನೆಯಿಂದ ಇದನ್ನು ಪಾರ್ವತಿಬಾಯಿ ನೋಡಿ ' ಎಷ್ಟು ತಂದೀಯೋ ಗೌರವ್ವ ? ನಿನ್ನ ಮಕ್ಕಳಿಗೆ ಕೊಡಬಾರದs'ಎಂದು ಹೇಳುತ್ತಿರುವುದು ವಾಡಿಕೆ. 'ಅವು ಬಾರೀಕಾಲ ತಿಂದs ತಿಂತಾವೇಳ್ರಿ ಬಾಯರ!' ಎನ್ನುವದು ಗೌರವ್ವನ ವಾಡಿಕೆ. ತಾನು ಹಬ್ಬ–ಹುಣ್ಣಿವೆಗೆ ಮಾಡಿದ ಕಡಬು–ಹೋಳಿಗೆಗಳನ್ನೂ ಕಾನೋಲೆ-ಚರೋಟಿಗಳನ್ನೂ ಪಾರ್ವತಿಬಾಯಿ ಗೌರವ್ವನ ಕೂಡ ಅವಳಹುಡುಗರಿಗೆ ಕೊಟ್ಟು ಕಳಿಸುತ್ತಿದ್ದಳು. ಒಂದೆರಡು ವಾರ ಗೌರವ್ವ ಬರಲೇ ಇಲ್ಲ. ನೆರೆಹೊರೆಯವರ ಕೂಡ ಮೊಸರು-ಬೆಣ್ಣೆ ಕಳಿಸಿದಳು.ಅವಳನ್ನು ಕಾಣದೆ ಮನೆಯಲ್ಲಿ ಎಲ್ಲರಿಗೆ ಚಡಪಡ. ಅದೇಕೆಂದು ಕೇಳಲು ಗೌರವ್ವನಿಗೆ 'ಬಯಕೆ' ಎಂದು ತಿಳಿಯಿತು. ಕೂಡಲೆ ಅವಳಿಗಾಗಿ ಹಪ್ಪಳ-ಸಂಡಿಗೆ ಮಾಡಿ ಉಪ್ಪಿನಕಾಯಿ ಸಹಿತ ಪಾರ್ವತಿಬಾಯಿ ಕಳುಹಿಸಿಕೊಟ್ಟಳು. ಈ ಅನ್ಯೋನ್ಯ ಸ್ನೇಹ ಬಳ್ಳಿಬಳ್ಳಿಯಾಗಿ ಹಬ್ಬುತ್ತ ನಡೆದಿತ್ತು.

ಗೌರವ್ವನ ಊರಿಗೆ ವರ್ಷದಲ್ಲಿ ಒಂದೆರಡು ಸಲವಾದರೂ ಶಂಭುರಾಯರು ಸಕುಟುಂಬ ಹೋಗುವ ವಾಡಿಕೆಯಿತ್ತು. ಆಗ ಎಲ್ಲರ ಸಂಭ್ರಮ ಇಷ್ಟೆಂದು ಹೇಳಲಾಸಲ್ಲ. ಒಮ್ಮೆ ತಮಗೆಂದು ಮುನ್ನಾದಿನ ಮುರನಾಳದಿಂದ ಎತ್ತಿನ ಬಂಡಿ ಬಂದಿತ್ತು. 'ಬೆಳಸಿ' ತಿನ್ನಲೆಂದು ಮನೆಮಂದಿಯೆಲ್ಲ ಕೂಡಿ ಹೊರಟರು.ಅಮೃತನಿಗೆ ಆ ಅನುಭವದ ಸವಿನೆನಪು ಇನ್ನೂ ಅಚ್ಚಳಿಯದಿದೆ. ಕೊರಳಲ್ಲಿ ಗೆಜ್ಜೆಸರ ಕಟ್ಟಿದ ಟುಮುಟುಮುಕಾದ ಎತ್ತುಗಳು ಹುರುಪಿನಿಂದ ಓಡೋಡುತ್ತ ಅವರನ್ನು ಮುರನಾಳಿಗೆ ಕರಕೊಂಡು ಹೋದವು. ಊರ ಬಳಿ ಶಂಕ್ರಪ್ಪನೂ ಮನೆಯ ಹೊಸತಿಲಲ್ಲಿ ಗೌರವ್ವನೂ ನಿಂತು ಅವರನ್ನು ಬರಮಾಡಿಕೊಂಡರು.ಅಂದು ರಾತ್ರಿ ಅಲ್ಲಿಯೇ ಮಲಗಿದ್ದಾಯಿತು. ಮರುದಿನ ನಸುಕಿನಲ್ಲಿ ಒಂದು ಮೈಲಿನಮೇಲಿದ್ದ ಬಂಡಿಯಲ್ಲಿ ಎಲ್ಲರೂ ಹೋದರು. ಅಲ್ಲಿ ಜೋಳದ ಬೆಳೆಗಳು ತೆನೆಯೆತ್ತಿರಸದುಂಬಿ ನಿಂತಿವೆ. ಒಂದು ಕಡೆಗೆ ತೆಗ್ಗು ಮಾಡಿ ಕಾಕುಳ್ಳನ್ನು ತುಂಬಿ ಕಿಚ್ಚುಮಾಡಿದೆ ; ಅದರೊಳಗೆ ಆರಿಸಿ ತಂದ ತೆನೆಗಳನ್ನು ತುರುಕಿದೆ. ಸುತ್ತೆಲ್ಲ ಗೊಂಗಡಿ ಹಾಸಿದ್ದರು. ಎಲ್ಲರೂ ಬಂದು ಕೂತ ಮೇಲೆ ಬೆಂದ ತೆನೆಗಳನ್ನು ಹೊರಗೆ ತೆಗೆದು ಕೈಯಿಂದತಿಕ್ಕಿ

ಕಾಳು ಉದುರಿಸಿದರು. ಬಿದ್ದ ಕಾಳನ್ನು ಕೈಯಲ್ಲಿ ಊದಿ ಗೊಂಡೆ ಮತ್ತು ಸುಂಕ ದಿಂದ ಬೇರೆ ಮಾಡಿ ಎಲ್ಲರಿಗೆ ಕೊಟ್ಟರು. ಬಾಡಿಸಿಕೊಳ್ಳಲೆಂದು ಬೆಲ್ಲ, ಚಟ್ನೀಪುಡಿ ಗಳನ್ನು ಇರಿಸಲಾಗಿತ್ತು. ಜೊತೆಗೆ ಹಸಿ ಕೊಬ್ಬರಿ, ಗೋಡಂಬೆ, ಕಲ್ಲುಸಕ್ಕರೆಗಳೂ ಇರುತ್ತಿದ್ದವು. ಇಂಥ ಹಬ್ಬದೂಟಕ್ಕಿಂತ ಹೆಚ್ಚಿನ ಸವಿ ಈ ಬೆಳಸಿಯ ಪಕ್ವಾನ್ನ ದಲ್ಲಿ ಹಿರಿ-ಕಿರಿಯರೆಲ್ಲರಿಗೂ ದೊರೆಯಿತು. ಶಂಕ್ರಪ್ಪ-ಗೌರವ್ವ ಇವರ ಪ್ರೀತಿಯ ಆದರಾತಿಥ್ಯದಿಂದ ಆ ಸವಿ ಇನ್ನೂ ಹೆಚ್ಚಿತು.

ಇದನ್ನೆಲ್ಲ ನೆನೆಯುತ್ತಿರುವಂತೆ ಅಮೃತನಿಗೆ ಆ ಗೌರವ್ವ ಕಣ್ಮರೆಯಾಗಿ ಈ 'ಸೀರವ್ವ' ಕಂಡಳು. ಮತ್ತೆ ವಾಸ್ತವಪ್ರಪಂಚಕ್ಕೆ ಮರಳಿದನು. 'ಗೌರವ್ವ, ಕೆಲ ಸಕ್ಕೆ ಹೋಗು. ಗೈರಹಾಜರಿ ಹಾಕ್ಯಾರು!' ಎಂದು ಅವಳನ್ನು ಎಬ್ಬಿಸಿದನು. ಆದರೆ ಅವಳು ಏಳಲಿಲ್ಲ. ಅವನಿಗೂ ಅಲ್ಲಿಯೇ ಕೂಡಹಚ್ಚಿದಳು. 'ಗೈರಹಾಜರಿ ಹಕ್ಕೊಳ್ಳೀತಿದ್ದರ ಹಕ್ಕೊಳ್ಳಿ ಗೆಂಗಣ್ಣ. ನಿನ್ನೋಡಿ ಮಾತಾಡುಹಂಗ ಆಗೇತಿ ಎದಿ ಬಿಚ್ಚಿ. ಕೂಡು ಅಮೃತಪ್ಪ!' ಎಂಬ ಅವಳ ಆಗ್ರಹಕ್ಕೆ ಒಳಗಾಗಿ ಅಮೃತನು ಹತ್ತಿರದ ಕಲ್ಲು ಕುಟ್ಟರೆಯ ಮೇಲೆ ಕೂತುಕೊಂಡನು. ಕೂಲಿಕಾರರ ತಕರಾರು ಗಳನ್ನು ಕೇಳಲೆಂದೇ ಬಂದ ಅವನ ಸ್ಥಾನಮಾಹಾತ್ಮ್ಯವನ್ನು 'ಗೆಂಗಣ್ಣ' ನು ಅರಿತಿದ್ದನು. ಅಂತೇ ಅಬ್ಬರ ತೋರಿಸದೆ ಸುಮ್ಮನಿದ್ದನು. ಗೌರವ್ವನು ಅಮೃತನ ಮನೆಯ ಕ್ಷೇಮ ಸಮಾಚಾರವನ್ನು ಕೇಳಿ ಅವರಿಗೂ ಕಷ್ಟದ ಕಾಲ ಬಂದಿರುವು ದೆಂದು ತಿಳಿದು ಕೊರಗಿದಳು. ಆಗ ಅಮೃತನು 'ಮುರನಾಳದಾಗ ಎಲ್ಲರೂ ನೆಟ್ಟಗಿ ದ್ದಾರ?' ಎಂದು ಸಹಜವಾಗಿ ಕೇಳಿದನು. ಅದಕ್ಕೆ ಗೌರವ್ವನು ಕರುಳಿರಿಯುವ ಕರುಣ ಕಥೆಯನ್ನೆ ಆರಂಭಿಸಿಬಿಟ್ಟಳು : "ಎಲ್ಲೀ ಮುರನಾಳೋ ಯಪ್ಪಾ; ಮುರನಾಳ ಬಿಟ್ಟ್ಯಾತು ಈಗಾರು ತಿಂಗಳ. ಹಿಂಗs ಪಿರಿಪಿರಿ ಊರು ತಿರಗಲಾಕ ಹತ್ತಿದೀವು. ಎರಡು ಮೂರು ವರ್ಸಾತು ಬೇಳೀನs ಇಲ್ಲ. ಈ ವರಸಂತೂ ಬಿತ್ತಿದ ಬೀಜ ನಾಟಲಿಲ್ಲ. ಸಂಕ್ರಾಂತಿಗೆ ನಮ್ಮ ಹಣೇಬರ ನಮಗ ತಿಳಿದು ಹೋತು. ಮೊದಲ ಗುಳೇ ಕಿತ್ತಿ ಬಂಕಾಪುರ, ಅಲ್ಲಿಂದ ಕಲಘಟಗೀ ಕಡೆ ಹೋದ್ವಿ, ಹಾಂಗೂ ಹಿಂಗೂ ಹೊಟ್ಟೀ ತುಂಬಿಕೋತ ಇದ್ದಿವೇನಪಾ ಯಪ್ಪಾ! ಮುಂದ ಕೋಳೀ ತತ್ತೀ ಹಾಂಗ ಬೆಳ್ಳಗಿದ್ದ ನಮ್ಮೆತಗೋಳ್ನ ನಾವs ಕೂತು ಕಟಕರ ಕೈಗಿ ಕೊಟ್ಟೆವು. ಕಲಘಟಗಿಗೆ ಹೋದ ಮ್ಯಾಗ ಎತಗೋಳು ಮೇವs ಬಿಟ್ಟವು. ಮಲ್ಲಾಡದಾಗಿನ ನೊಣ ಕಡದರ ದನ ಮೇವು ನೀರು ಎಲ್ಲಾ ಬಿಡತಾವೆಪ್ಪಾ." —ಹೇಳುಹೇಳುತ್ತ ಅವಳ ಕಣ್ಣಿಂದ ದಳದಳ ನೀರು ಸುರಿದವು.

ಅಮೃತನಿಗೆ ಕೇಳುವದಾಗಲಿಲ್ಲ. 'ಹೋಗಲಿ ಬಿಡು ಗೌರವ್ವ. ಜೀವಕ್ಕ ತ್ರಾಸ ಮಾಡಿಕೋಬ್ಯಾಡ' ಎಂದು ತಡೆದು ಸಮಾಧಾನಗೊಳಿಸಿದನು. ಆದರೆ ಅವಳಾದರೂ ಯಾರ ಮುಂದೆ ತನ್ನ ಹೃದಯವನ್ನು ತೋಡಿಕೊಳ್ಳಬೇಕು? ಒಂದಿದ್ದರೆ ಒಂದಿಲ್ಲದೆ ಪಟ್ಟ ವನವಾಸವನ್ನು ಎದೆಕರಗುವಂತೆ ಬಣ್ಣಿಸಿ ಹೇಳಿದಳು. ವಿಷಯಾಂತರ ಮಾಡಬೇಕೆಂದು ಅಮೃತನು 'ಈಗ ನಿನ್ನ ಮಗ ಸೋಮ್ಯಾ ದೊಡ್ಡವನಾಗಿದ್ದಾನು?' ಎಂದು ಕೇಳಿದನು. 'ದೊಡ್ಡವನಾಗ್ಯಾನೆಪ್ಪಾ, ಬರಗಾಲ ಕೆಲಸದ ಬುಟ್ಟೀ ಹೊರಾಕ! ಖಬ್ಬು ಆಗಿದ್ದ ಖಬ್ಬು ನನ್ನ ಸೋಮ್ಯಾ. ಪೈಲವಾನ್ ಗಾಮಾ ಪಂಜಾಬಿ ಆಗಾವೇನು ನಿನ್ನ ಮಗ ಅಂತ 'ಹೆರ್‍ಯಾ' ಅನತಿದ್ದ. ಗುಳೇಕ್ಕ ಹೋದ ಮ್ಯಾಗ ಅವಗ ಹೊಟ್ಟ್ಯಾಗ ಒಂದು ಗಂಟು ಹುಟ್ಟಿತು ನೋಡೆಪ್ಪಾ. 'ಹೊಟ್ಟೀ ಡುಮ್ಮಾ ಕೈಕಾಲು ಸಣ್ಣ' ಆಗಿ ಹುಡುಗ ಕೈಬಿಡಲಾಕ ಕುಂತಿತ್ತು. ದೇವರ ದಯದಿಂದ ಇಂದಿನ ತನಕಾ ಬದಕಿ ಬಂದಾನ. ಅಲ್ಲೆ ಬೇವಿನ ಗಿಡದಾಚೀಕ ಮಣ್ಣು ಹೆಡ್ಡತಾನ ಅಕಾ ಅವನ್ಯ ಸೊಮ್ಯಾ' ಎಂದು ತೋರಿಸಿದಳು. ಅಮೃತ ಅವನನ್ನು ನೋಡಿ ಬಹಳ ಪ್ರಯಾಸದಿಂದ ಗುರುತಿಸಿ ವ್ಯಥೆಪಟ್ಟನು. ಕೆಬರಿದಲ್ಲೆಲ್ಲ ಗೋರಿ ಹತ್ತುವಂತೆ ಕೇಳಿದ ಮಾತೆಲ್ಲ ದುಃಖದ ಹೊದರಾಗಿದೆಯೆಂದು ಅಮೃತನು ಕೇಳಲಾರದೆ ಅಲ್ಲಿಂದ ಹೊರಡಲೆದ್ದನು. ಗೌರವ್ವನೆಲ್ಲಿ ಕೇಳುತ್ತಾಳೆ? ತನ್ನ ಕತೆಯನ್ನು ಮುಂದರಿಸಿ 'ಉಗಾದಿ ಪಾಡ್ಡೀ ಆದಮ್ಯಾಗ ಮಲನಾಡಿನಾಗ ಸುಗ್ಗಿ ಆತು. ಅಲ್ಲಿ ಕೆಲಸ ಹತ್ತಲಿಲ್ಲ. ಒಬ್ಬರ ಹಿಂದೆ ಒಬ್ಬರಿಗೆ ಸಣ್ಣಾಗಿ ಉರಿ ಬರಹತ್ತಿದವು. ಈಟರಾಗ ಮೋಟರಿನವರು ರಸ್ತೇದ ಕೆಲಸ ಸುರುವಾಗೇತಿ ಅಂತ ಹೇಳಾಣ ಇತ್ತಾಕ ಹೊಂಟ ಬಂದಿವು ಎಂದು ಶೋಕಪುರಾಣವನ್ನು ಮುಗಿಸಿದಳು. ಇಷ್ಟರೊಳಗೆ ಮುಂಜಾನೆಯ ಕೆಲಸ ಮುಗಿಯುವ ' ಬಾರಾ ' ಹೊಡೆಯಿತು. ಎಲ್ಲ ಕೂಲಿಕಾರರು ಚೆದರಿದರು. ಅಮೃತನು ಎದ್ದು ಹೊರಡಲನುವಾಗಲು, 'ಬಾ ಅಮೃತಪ್ಪ, ಇಲ್ಲೇ ಐತಿ ನಮ್ಮ ಗುಡುಸಲ. ಹಿರ್‍ಯಾ ನಿನ್ನ ನೋಡಿ ಹಿಗ್ಗತಾನು,' ಎಂದು ಗೌರವ್ವ ಕರೆದಳು. ಅವನಿಗೂ ಶಂಕ್ರಪ್ಪನನ್ನು ನೋಡಬೇಕೆಂದು ಬಹಳ ಅಪೇಕ್ಷೆಯಿತ್ತು. ಅವನ ವಿಷಯ ಈವರೆಗೆ ಕೇಳಲು ಧೈರ್ಯವಾಗಿರಲಿಲ್ಲ. ಎಲ್ಲಿ ಏನು ಅನಾಹುತವಾಗಿರುವದೋ ಎಂದವನಿಗೆ ಹೆದರಿಕೆ. ಆದರೆ ಗೌರವ್ವನ ಮಾತು ಕೇಳಿ ಒಳಗಿಂದೊಳಗೆ ಅವನು ಸಮಾಧಾನ ಹೊಂದಿ ಅವಳ ಬೆನ್ನ ಹಿಂದೆ ಹೋದನು.

ಆ ಗುಡಿಸಲು ಎಷ್ಟೋ ಜನರ ಮನೆಗಿಂತ ಚಿಕ್ಕದಾಗಿತ್ತು. ಮಲಗಿ

ಹೋಗುವಂಥ ಬಾಗಿಲ. ಬಾಗಿಲೆದುರಿನಲ್ಲಿಯೇ ಶಂಕ್ರಪ್ಪ ಮಲಗಿದ್ದ. ಅವನಿಗೆ ೩-೪ ನಾರುಗಳಾಗಿದ್ದವು. ಅಮೃತನು ಅವನ ಹತ್ತಿರ ಹೋಗಿ ಕುಳಿತು ಕುಶಲ ಪ್ರಶ್ನೆಯ ಮಾತಾಡಿದನು ; ಬಂದ ಬವಣಿಗೆ ಕನಿಕರ ತೋರಿದನು. ಮತ್ತೊಂದು ಮೂಲೆಯಲ್ಲಿ ಒಲೆಯ ಮೇಲೆ ಒಂದು ಗಡಿಗೆ ಇತ್ತು. ಅಲ್ಲಿಂದ ಹೊಗೆ ಮಾತ್ರ ಸುತ್ತಿ ಬರುತ್ತಿತ್ತು. 'ಅಡಿಗಿ ಏನ ನಡಸದ ?' ಎಂದವನು. ಕೇಳುವದಕ್ಕೆ ಗೌರವ್ವ ಆ ಅಡಿಗೆಯನ್ನೆತ್ತಿ ತಂದು ಅವನ ಮುಂದೆ ಹಿಡಿದಳು. ಅದರಲ್ಲಿ ಸಜ್ಜಿಯ ಗುಗ್ಗರಿ ಕುದಿಯುತ್ತಿತ್ತು 'ಇದs ಏನು ನಿಮ್ಮ ದಿನದೂಟ?' 'ಜ್ವಾಳ, ಸೆಜ್ಜಿ, ಮೂಕಣಿ, ಹೆಸರು ಯಾವದು ಸಿಗತೈತಿ ಅದನ್ನ ತಗೊಂಡು ಗುಗ್ಗರಿ ಕುದಿಸಿ ತಿಂದು ದಿನಾ ಹಾಕತೀವೀ ಅಮೃತಪ್ಪಾ. ಬೀಸೇನು ಅಂದ್ರ ಕಲ್ಲಿಲ್ಲ. ವಾರದಾಗ ಒಂದು ದಿನ ಕೆರೂರಿಗೆ ಹೋಗಿ ಸೇರೆರಡು ಸೇರು ಬೀಸಿ ಗೊಂಡು ಬರತೀವಿ ಆತು. ಆಗ ರೊಟ್ಟಿ, ಇಲ್ಲದಿರಕ ನಮ್ಮ ಹಣೆಬರದಾಗ ಗುಗ್ಗರಿ. ಗುಗ್ಗರಿ ಸುದಾ ಸಿಗಬೇಕಾದರ ಪುಣ್ಯವೆಲ್ಲಾ ಕರ್ಚಾಗತೈತಿ. ಮನ್ನೆ ಎರಡು ದಿನಾ ಬರೇ ಸೇಂಗಾ ತಿಂದಿವಿ. ಅದಕs ಒಂದs ಸವನs ಎಲ್ಲಾರದೂ ಹೊಟ್ಟೆ ಝಾಡಸಾಕ ಹತ್ತ್ಯು. ಆಗ ದೇವರು ನಮ್ಮನ್ನ ಈ ದುಃಖದಾಗಿಂದ ಪಾರ ಮಾಡಿ ಕರೀಲಾಕ ಮಾರೆವ್ವನ್ನ ಕಳಸ್ಯಾನಂತ ಹಿಗ್ಗಿದಿವಿ. ಆದರ ದೇವರಿಗೆ ಎಲ್ಲಿ ಐತಿ ಕರಳು ? ಮತ್ತ ಎಲ್ಲರಿಗೂ ನೆಟ್ಟಗಾತು. ಇನ್ನೂ ನಮ್ಮ ಹಣೇಬರದಾಗ ಈ ಸೆಜ್ಜೀ ಗುಗ್ಗರಿ ಏಸು ದಿನಾ ನಿನ್ನೋದೈತೋ ಯಾರಿ ಗ್ಗೊತ್ತು ?' ಗೌರವನ ಆಗಿನ ನಿಟ್ಟುಸಿರು ಆರಿದ ಒಲೆಗೂ ಬಿಸಿ ತರುವಂತಿತ್ತು. ಅಷ್ಟರಲ್ಲಿ ಅಲ್ಲಿ ಏನೋ ತೊಪ್ಪಲವಿದ್ದದ್ದು ನೋಡಿ ನಾನು ತವಕಕೊಂಡೆ. 'ಈ ತೊಪ್ಪಲ ನೀವು ತಿನತೀರಾ ?' ಎಂದು ಕೇಳಿದೆ. 'ತೊಪ್ಪಲ ಅಂತ ಕೇಳತೀಯ ಯಪ್ಪ ? ಹಸಿವ್ಯಾದರ ಮನಸ್ಸಾ ಬೇಕಾದ್ದು ತಿಂತಾನ. ಹ್ವಾದವಾರ ಹುಣ ಚೀಪಕ್ಕಾ ನೀರಾಗ ನೆನಸಿ ತಿಂದ್ವಿ, ಹೊಟ್ಟ್ಯಾಗ ಏನಾರೂ ಹಾಕಲಾಕ ಬೇಕಲ್ಲ. ಇಲ್ಲದಿರಕ ಕೈಕಾಲಾಗ ತ್ರಾಣ ಹ್ಯಾಂಗ ಉಳೀತೈತಿ?' ಗೌರವ್ವ ಹೀಗೆ ಹೇಳುತ್ತ ಹುಣಸೀಪಕ್ಕವನ್ನು ತಂದು ತೋರಿಸಿದಳು. ಅಮೃತನು ಕಳವಳ ಕೈಮೀರಿತು. ಮಧ್ಯಾಹ್ನದ ಬಿಸಿಲು ತಲೆಸಿಡಿಯುವಂತೆ ಇದ್ದರೂ ತಾಳಿಕೊಂಡ ಅವನು ಈ ದುರ್ದಶೆಯ ಕತೆ ಕೇಳಿ ತಾಳಲಾರದಾದನು.'ಗೌರವ್ವ, ನಿಮ್ಮ ಬಾಳುವಿ ಅಂದರ ಹುಣಸೀಪಕ್ಕದಕ್ಕಿಂತ ಅತ್ತತ್ತ ಮಾಡಿತು ಈ ಬರಗಾಲ. ಎಂಥವರಿಗೆ ಎಂಥ ಸ್ಥಿತಿ ಬಂತಲ್ಲ !' ಎಂದು ತಲೆ ಹಿಡಿದು ಗುಡಿಸಲಕ್ಕೆ ಆತು ಕೂತುಕೊಂಡನು. ಮಲಗಿ

ದಲ್ಲಿಯೇ ಶಂಕ್ರಪ್ಪನು ' ನಿಮ್ಮನ್ನ ಊರಿಗೆ ಕರಸಿ ಬೆಳಸಿ ತಿನಸಿ ಕಳಸತಿದ್ದಿವಿ, ಈಗ ನಿಮಗ ಕೊಡಲಾಕ ಒಂದ ತುಣಕ ರೊಟ್ಟಿ ಇಲ್ಲ ನೋಡು ಅಮೃತಪ್ಪ, ' ಎಂದು ಕಂಬನಿ ತುಂಬಿದನು. 'ಈಗ ಕೊಟ್ಟೇನಂದ್ರ ಬೆಣ್ಣಿಲ್ಲ, ಮಸರಿಲ್ಲ, ಮಣ್ಣಾಗ ಬೆರತ ಕಣ್ಣೀರೊಂದss ನಮ್ಮ ಪಾಲಿಗೆ,' ಎಂದು ಗೌರವ್ವ ದನಿಗೂಡಿಸಿ ಮಿಡುಕಿದಳು. ಕೆಲಹೊತ್ತು ಗಾಳಿಯೆಲ್ಲ ಬಾಳಿನ ಗೋಳನ್ನೆ ಹಾಡುತ್ತಿರುವಂತೆ ತೋರಿತು. ಅಮೃತನು ಎಷ್ಟು ಹೊತ್ತು ಹಾಗೇ ಕೂಡುವನು? ಅಲ್ಲಿಂದ ಎದ್ದು 'ಮಳಿ ಆತಂದರ ಊರಿಗೆ ಹೋಗರಿ. ಈ ನರಕದಾಗ ಇರೂದು ಸಾಕು. ಇಲ್ಲಿರೂ ತನಕ ನಿಮಗ ಛಲೋ ಕಾಳುಕಡಿ ಸಿಗೂಹಂಗ ನಾ ವ್ಯವಸ್ಥಾ ಮಾಡಸತೀನಿ ! ' ಎಂದು ಹೇಳಿ ಹೊರಟನು. ಹೊರಡುತ್ತಲೆ ಅವನಿಗೆ ಗೌರವ್ವನ ಅಕ್ಕರೆಯ ಮಗಳು ರತ್ನಾನ ನೆನಪಾಯಿತು. ಹಿಂದೆ ಅವಳನ್ನು ಕಂಡಾಗ ಐದಾರು ವರ್ಷದವಳಾಗಿದ್ದಳು. ಈಗ ಹದಿನೈದು ವರ್ಷದವಳಾದರೂ ಆಗಿರಬೇಕು. ' ಗೌರವ್ವ, ರತ್ನಾ ಎಲ್ಲಿ ? ಮದುವೆ ಮಾಡಿಕೊಂಡು ಗಂಡನ ಮನೆಗೆ ಹೋಗಿರುವಳೇನು ?' ಎಂದು ಕೇಳಿದನು. 'ಇಲ್ಲ ಯಪ್ಪಾ. ಇಲ್ಲೇ ಇದ್ದಾಳ. ಗುಡಿಸಲ ಹಿಂದ ಅಚ್ಚೀಕೆ ಅಡಗಿಕೊಂಡು ಕುಂತಾಳ. ಏನು ಮಾಡೂದೈತಿ? ಉಟ್ಟ ಸೀರಿ ತೊಡಿಮ್ಯಾಗ ಹರದೈತಿ. ನಾಚಿಕೊಂಡ ಕುಂತಾಳ ಕಾಣತೈತಿ. ಇಲ್ಲಂದರ ಅಮೃತಣ್ಣ ಅಂದರ ನನ್ನ ಮಗಳು ಕುಣಕೋತ ಬರುವಾಕಿ,' ಎಂದು ಗೌರವ್ವ ಹೇಳಿದಳು. ಇದನ್ನು ಕೇಳಿ ಅಮೃತನ ಕೈಕಾಲೇ ತಣ್ಣಗಾದವು, ಕಣ್ಣಿಗೆ ಕತ್ತಲಡಸಿದಂತಾಯಿತು. ಆ ನಡುನೆತ್ತಿಯ ಬಿಸಿಲಿಗಿಂತ ಈ ಬಡತನದ ದಳ್ಳುರಿಯಲ್ಲಿ ಬೆಂದು ಕರಿಕಾದ ಬಳ್ಳಿಯಂತೆ ಅವನು ಎಚ್ಚರುಳಿಯದೆ ಕಂಬದಂತೆ ನಿಂತನು. ಯಾವ ಮಾತಾಡಲೂ ಆಗದೆ ಅವರ ಕಡೆ ಸುಮ್ಮನೆ ನೋಡುತ್ತ ಹೇಗೋ ಹೆಜ್ಜೆ ಹಾಕುತ್ತ ತನಗೆಂದು ಗೊತ್ತಾದ ಚಪ್ಪರದ ಬಿಡಾರಕ್ಕೆ ನಡೆದನು.

ಬಿಡಾರಕ್ಕೆ ಹೋದ ಮೇಲೆ ಡಾಕ್ಟರರ ಮನೆಯಿಂದ ಅವನಿಗೆ ಬಂದ ಊಟದ ಡಬ್ಬಿ ಮುಂದೆ ಬಂದಿತು. ಅದನ್ನು ಹೆಸರಿಗೆ ಮುಟ್ಟಿದನು, ಊಟ ಹೋಗಲೇ ಇಲ್ಲ. ದುಃಖದಿಂದ ಹೊಟ್ಟೆ ತುಂಬಿಯೇ ಹೋಗಿತು. ಹಾಗೇ ಅವನು ಚಾಪೆಯ ಮೇಲೆ ಒರಗಿಕೊಂಡನು. ಗೌರವ್ವನ ಬಾಳಿನ ಚಿತ್ರಗಳು ತಿರುತಿರುಗಿ ಮುತ್ತಿದವು. ತುಸು ಜಂಪು ಹತ್ತಿದಂತಾಯಿತು. ಅದರಲ್ಲಿಯೂ ಅದೇ ಕನಸು. ಅದರೊಂದಿಗೆ ಇನ್ನೊಂದು ಬಗೆಯ ವೈಚಿತ್ರ್ಯವನ್ನು ತೋರಿಸ ಲೆಂದೋ ಏನೋ ಬೇರೊಂದು ದೃಶ್ಯ ಕನಸಿನಲ್ಲಿ ಮೂಡಿತು. ಅದು ಒಬ್ಬ

ಕುರುಬನ ಸಂಸಾರದ ನೋಟ. ಮೊದಲು ಕೂಳಿಲ್ಲದೆ ಸೀರಿಲ್ಲದೆ ಸಾಕು ಸಾಕಾಗಿತ್ತು ಅವನಿಗೆ. ಅದರೆ ಎರಡನೆಯ ಮಹಾಯುದ್ಧ ಬಂತು. ಮಿಲಿಟರಿಗೆಂದು ರಿಕ್ರೂಟ ಭರತಿ ನಡೆಯಿತು. ಅದರಲ್ಲಿ ಅವ ಸೇರಿಬಿಟ್ಟನು. ಒಳ್ಳೇ ತುಂಡುತುಂಡಾದ ಕರಿವ್ಯೆ. ತರಬೇತಿಯ ಶಿಬಿರಕ್ಕೆ ಹೋದ ಕೆಲವು ತಿಂಗಳಲ್ಲಿ ಶ್ರೀಮಂತಿಕೆಯ ಕೂಳು ತಿಂದು ತಯ್ಯಾರಾದನು. ಮನೆಗೆ ತಾಯಿಗೂ ಹೆಂಡತಿಗೂ ಪಗಾರದ ಅರ್ಧ ಭಾಗವನ್ನು ಕಳಿಸುತ್ತಿದ್ದನು. ಮೇಲಿಂದ ಮೇಲೆ ರಜೆ ಪಡೆದು ಬಂದಾಗ ಅವರಿಗೆ ಚೆಂದ ಚೆಂದನ್ನ ಅರಿವೆ ಅಂಚಡಿ ತಂದು ಕೊಡುತ್ತಿದ್ದನು. ಯುದ್ಧಕ್ಕೆ ಹೋದರೆ ಸಾಯುವನೆಂದು ಅವನನ್ನು ಮೊದಲು ಕಳಿಸುವಾಗ ಗೋಳೋ ಎಂದು ಅತ್ತ ಹೆಂಗಸರು ಈಗ ಖುಷಿಯಾದರು. ಒಳ್ಳೆಯ ಬಟ್ಟೆ-ಬರೆ, ವಸ್ತ್ರ-ವಡವೆ ಹಾಕಿಕೊಂಡು ಸಮಾಜದಲ್ಲಿ ಬೆಲೆ ಹೆಚ್ಚಿ ಅವರು ತಿರುಗಹತ್ತಿದರು. ಒಮ್ಮೆ ಅವನು ತನ್ನ ಚೊಚ್ಚಿಲ ಮಗನನ್ನು ನೋಡಲಿಕ್ಕೆ ಬಂದು ನಾಲ್ಕು ದಿನ ಸುಖವಾಗಿ ಇದ್ದು ತಿರುಗಿ ಹೊರಟಿದ್ದಾನೆ. ಅವನನ್ನು ಕಳಿಸಲು ಸ್ಟೇಶನ್ನಿಗೆ ತಾಯಿ, ಹೆಂಡತಿ ಕೂಸನ್ನು ಕರಕೊಂಡು ಬಂದಿದ್ದಾರೆ. ಅವನು ಅರ್ಧ ಚಣ್ಣ, ಎತ್ತರ ಬೂಟು, ಮಿಲಿಟರಿಯ ಖಾಕೀ ವೇಷ ಹಾಕಿ ಡೌಲಾಗಿದ್ದಾನೆ. ಕೂದಲಿಗೆ ಎಣ್ಣೆ ಹಚ್ಚಿದ್ದಾನೆ, ಕೈಯಲ್ಲಿ ಗಡಿಯಾರ ಕಟ್ಟಿದ್ದಾನೆ. ಈಗವನಿಗೆ ಬಢತಿಯೂ ಆಗಿದ್ದರಿಂದ ಇನ್ನೂ ಹೆಚ್ಚಿನ ಸಂತೋಷ. ಗಾಡಿ ಹೊರಡುವ ಸೀಟಿಯಾಯಿತು. ಚೆಂದನ್ನ ಸೀರೆಯುಟ್ಟು ಜರದ ಕುಪ್ಪಸ ತೊಟ್ಟು ನಿಂತ ಮನದನ್ನೆಯ ಕೈಯಿಂದ ಮಕಮಲ ಅಂಗಿಯನ್ನು ಹಾಕಿದ ಮಗುವನ್ನೆತ್ತಿ ಮುದ್ದಿಡುತ್ತ ಅವನು ನಗುತ್ತ ಗಾಡಿಯೇರಿದನು, ಅದು ಹೊರಟಿತು. ಅಮೃತನಿಗೆ ಎಚ್ಚರವಾಯಿತು, ಎದ್ದು ಕುಳಿತು ಎಲ್ಲ ನೆನೆದನು. ಅವನಿಗೆ ತುಂಬ ಅಚ್ಚರಿಯಾಯಿತು. ಮೇಲಿನ ನೆಲೆಯಿಂದ ಕೆಳಗೆ, ಕೆಳಗಿನಿಂದ ಮೇಲೆ ಇದು ಇಂದಿನ ಸಮಾಜದ 'ಚಕ್ರನೇಮಿಕ್ರಮ'ವೆಂದು ಅಂದುಕೊಂಡನು.

ಮಧ್ಯಾಹ್ನದ ಕೆಲಸ ಮುಗಿಯುತ್ತ ಬಂದಿತು. ಇನ್ನೂ ಡಾಕ್ಟರರ ಬರವಿಲ್ಲ. ಈವೊತ್ತು ತಮ್ಮ ಮೋಸವಾಗುವುದೆಂದು ಕೂಲಿಕಾರರು ಗುಜುಗುಜಿಸಹತ್ತಿದರು. ಏನಾಗುವುದೋ ಎಂದು ಅಮೃತನಿಗೂ ಎದೆಗುದಿ. ಆರು ಬಡಿಯಿತು. ಎಲ್ಲರೂ ಕೆಲಸ ಬಿಟ್ಟು ಗುಂಪುಗಟ್ಟಿ ನಿಂತರು. ಎಲ್ಲರ ಲಕ್ಷ್ಯ ರಸ್ತೆಯ ಕಡೆಗೆ. ಯಾರ ಸುಳಿವೂ ಇಲ್ಲ. ತಮ್ಮ ಮೇಲೆ ಜವಾಬ್ದಾರಿಯಿಲ್ಲೆಂಬಂತೆ

ಗ್ಯಾಂಗರರೂ ಓವರಸಿಯರರೂ ತಿರುಗುತ್ತಿದ್ದರು. ಜನವೆಲ್ಲ ಅಮೃತನ ಹತ್ತಿರ ಕಡಲಂತೆ ತೆರೆಮಸಗಿ ಹೋಯಿತು, ಮೊರೆಯಿತು. ಅವನು 'ಶಾಂತಿ' ಎಂದು ಸಮಾಧಾನ ಹೇಳಿದನು. ಆರುವರೆಗೆ ದೂರದಿಂದ ಮೋಟರ ಕಾರೊಂದು ಕಂಡಿತು. ಅದೇ ಡಾಕ್ಟರರನ್ನೂ ಕ್ಯಾಶಿಯರರನ್ನೂ ಕಾರಕೂನರನ್ನು ಕರಕೊಂಡು ಬಂದಿತು. ಚಿಂತೆಯ ಮೋಡ ಚದರಿದವು. ಅಮೃತನಿಗೂ ಮನಸ್ಸಿಗೆ ಹಗುರಾಯಿತು. ಮೋಟರು ನಡುವೆ ಕೆಟ್ಟದ್ದಕ್ಕೆ ತಡವಾಯಿತೆಂದು ಡಾಕ್ಟರರು ಹೇಳಿದರು. ಕೂಡಲೆ ಪಗಾರ ಬಟವಡೆಯ ಕೆಲಸ ಸುರುವಾಗಿ ಮೂರು ನಾಲ್ಕು ತಾಸಿನವರೆಗೆ ಹಾಗೆ ನಡೆಯಿತು. ಆಮೇಲೆ ರಾತ್ರಿ ೧೨ ಘಂಟೆಗೆ ಕಾಳಿನ ಹಂಚಿಕೆ ಕೆರೂರಲ್ಲಿ ನಡೆಯುವುದೆಂದೂ ಎಲ್ಲರೂ ಬರಬೇಕೆಂದೂ ಹೇಳಿ ಡಾಕ್ಟರರೂ ಅಮೃತನೂ ತಿರುಗಿ ಕಾರಿನಲ್ಲಿ ಹೋದರು.

ದಾರಿಯಲ್ಲಿ ತನ್ನ ಅಂದಿನ ಅನುಭವಗಳನ್ನು ಅಮೃತನು ಡಾಕ್ಟರರಿಗೆ ಹೇಳಿದನು. ರಾತ್ರಿ ಗೊತ್ತುಪಡಿಸಿದಂತೆ ಕಾಳಿನ ಹಂಚಿಕೆಯ ಕೆಲಸವು ರಾಮಕೃಷ್ಣ ಮಠದ ಸುಪ್ರಸಿದ್ಧ ಯತಿಗಳಾದ ಪ್ರಬೋಧಾನಂದ ಮತ್ತು ಅವರ ಸಹಕಾರಿಗಳಿಂದ ಅಚ್ಚುಕಟ್ಟಾಗಿ ನಡೆಯಿತು. ಬೆಳಗಿನವರೆಗೆ ನಿದ್ದೆಯಿಲ್ಲದೆ ಅವರು ಕೈಕೊಂಡ ಕೆಲಸವನ್ನು ಪೂರೈಸಿದರು. ಯಾರು ವೇದವೇದಾಂತಗಳ ವ್ಯಾಸಂಗದಿಂದಲೂ ತಪಸ್ಸಿನಿಂದಲೂ ಭಾರತೀಯ ಸಂಸ್ಕೃತಿಯ ಸಾರವನ್ನು ಹೀರಿ ಬುದ್ಧಿವಂತರ ತಲೆಮಣಿಗಳಾಗಿದ್ದರೋ ಅಂಥ ಆ ಯತಿಗಳು ಕಾಣಲಿಕ್ಕೆ ಕಿರುಕಳಾದ ಕಾಳು ಮಾರಾಟದ ಕೆಲಸವನ್ನು ಅದೆಷ್ಟು ಮನಮುಟ್ಟಿ ಮಾಡಿದರೆಂದು ಅಮೃತನು ಕೊಂಡಾಡಿದನು. ಭಾರತೀಯ ಸಂಸ್ಕೃತಿಯ ಸಾರವನ್ನು ಅರಿತದ್ದರಿಂದಲೇ ಅವರು ಹಾಗೆ ಮಾಡಿದರೆನ್ನಬಹುದು. 'ಯಾವನಲ್ಲಿ ಎಲ್ಲ ಭೂತಮಾತ್ರವು ಆತ್ಮವೇ ಆಗಿದೆಯೋ ಆ ಏಕತ್ವವನ್ನು ಅರಿತವನಿಗೆ ಎಲ್ಲಿಯ ಮೋಹ, ಎಲ್ಲಿಯ ಶೋಕ ?' ಎಂಬುದನ್ನು ಅಂದು ಆ ಸಂನ್ಯಾಸಿಗಳು ಆಚರಣೆಯಲ್ಲಿ ತಂದು ತೋರಿಸಿದರು.ಎಲ್ಲರೂ ಬದುಕಬೇಕು,ಚೆನ್ನಾಗಿಬದುಕಬೇಕು.ನಾನೊಬ್ಬ ಬದುಕಿದ ಬದುಕು ಆತ್ಮದ ಬದುಕಲ್ಲ. ಈ ಶ್ರುತಿಯನ್ನು ಹಿಡಿದು ಜೀವನ ಗೀತವನ್ನು ಹಾಡುತ್ತ ನಡೆದವರಿಗೆ ಜನ ಬದುಕಲೆಂದು ಕಾಳು ಹಂಚುವ ಕೆಲಸವೂ ದಿವ್ಯವಾದುದೇ ಸರಿ. ಬಂಗಾಲದಿಂದ ಬಂದು ಕರ್ನಾಟಕದ ಒಂದು ಹಳ್ಳಿಯಲ್ಲಿ ರಾತ್ರ್ರೆಲ್ಲ ಈ ಕೆಲಸ ಮಾಡಿದ ಪ್ರಬೋಧಾನಂದರು ಅಖಂಡ ಭಾರತದ ಆದರ್ಶವನ್ನು ಸಾಧಿಸಿದರು. ಕನ್ನಡ ಜನ ಇಂಥ ಲೋಕಸೇವಕರನ್ನು

ಯಾವಾಗಲೂ ನೆನೆಯುತ್ತಿರಬೇಕಲ್ಲವೆ ?

ಮರುದಿನ ಅಮೃತನೆದ್ದು ಮುಂದಿನ ಕಾರ್ಯಕ್ರಮವೇನೆಂದು ಬಗೆಯುತ್ತಿರುವಾಗ ಬಾಗಿಲುಕೋಟೆಯಿಂದ 'ಜರೂರ ಹೊರಟು ಬಾ' ಎಂದು ತಂದೆಯವರ ಪತ್ರ ಬಂದಿತು. ಅದೇಕೆಂಬುದು ತಿಳಿಯಲಿಲ್ಲ. ಅದರಿಂದ ಅವನಿಗೆ ಕಾತರ ಹೆಚ್ಚಿತು. ಕೂಡಲೇ ಸಿಕ್ಕ ಮೋಟರಿನಿಂದ, ಡಾಕ್ಟರರ ಹಾಗೂ ಉಳಿದ ಮಿತ್ರರ ನಿರೋಪವನ್ನು ಪಡೆದು, ಅವನು ಊರಿಗೆ ಹೊರಟನು.

## ೧೦. ಮನೆವಾಳ್ತಿ

ಅಮೃತನು ಕೆರೂರಿಗೆ ಹೊರಟುಹೋದ ದಿನ ರಾತ್ರಿಯ ಹೊತ್ತು. ದೀಪ ಹಚ್ಚಿದೊಡನೆ ಉಳಿದ ತಂಗಳನ್ನು ಹಾಕಿಸಿಕೊಂಡು ಉಂಡು ಹುಡುಗರೆಲ್ಲ ಜಮಖಾನಿಯ ಮೇಲೆ ಅಸ್ತವ್ಯಸ್ತವಾಗಿ ಮಲಗಿಕೊಂಡಿದ್ದವು. ತನ್ನ ಊಟ-ಕೆಲಸವಾದ ತರುವಾಯ ಅವರಿಗೆಲ್ಲ ಹಳೆಯ ಹರಕು ಗಾದಿಗಳ ಮೇಲೆ ಖಮಟಾದ ಮಗ್ಗುಲಾಸಿಗೆ ಹಾಸಿ ಒಬ್ಬೊಬ್ಬರನ್ನು ತಂದು ಪಾರ್ವತಿಬಾಯಿ ಮಲಗಿಸಿದಳು. ಇಬ್ಬರಿಗೆ ಒಂದೊಂದು ಚಾದರ ಹೊಚ್ಚಿದಳು. ಶಂಭುರಾಯರಿಗೆ ಪಡಸಾಲೆಯಲ್ಲಿ ಅವರ ಹಾಸಿಗೆ ಹಾಸಿ ಕೊಟ್ಟು ನಡುಮನೆಯಲ್ಲಿ ತನಗೆಂದು ಒಂದು ಹಳೇ ಜಾಜೂಮಿನ ಮೇಲೆ ತನ್ನ ಹಳೇ ಮಡಸೀರೆಯನ್ನು ಮಡಿಚಿ ಹಾಸಿದಳು. ಅಲ್ಲಿಂದ ಮಿಣಮಿಣಿ ದೀಪವನ್ನು ತಗೊಂಡು ಹೋಗಿ ಎಲ್ಲ ಬಾಗಿಲ ಹಾಕಿದೆಯೋ ಹೇಗೆ ನೋಡಿ ಬಂದು ತನ್ನ ಹಾಸಿಗೆಯಮೇಲೆ ಕೂತು ಗೋಡೆಯಲ್ಲಿಯ ತಗಣಿ ಒರೆಯುವ ನಿತ್ಯದ ಕೆಲಸವನ್ನು ನಡಸಿದಳು. ಕೈಯಲ್ಲಿ ಯುದ್ಧಕಾಲದ ಸೃಷ್ಟಿಯಾದ ಆ ಬಲ್ಬಿನ ಚಿಮಣೀ ದೀಪ. ಕಂದೀಲುಗಳನ್ನೆಲ್ಲ ಮೂಲೆಗೊತ್ತಿ ಮನೆಮನೆಗೆ ಇಂಥ ಚಿಮಣಿಗಳೇ ಈಗ ಹೆಚ್ಚಾಗಿದ್ದವು. ಇವುಗಳ ಆಹಾರಕ್ಕೆ ಸಿಗುವ ಒಂದು ಬಾಟ್ಲಿ ಚಿಮಣೀ ಎಣ್ಣೆಯನ್ನು ಪ್ರತಿವಾರ ಪೂರಕೆಸುವದೇ ಪ್ರಯಾಸದ ಮಾತಾಗಿತ್ತು. ಮನೆಯಲ್ಲಿ ಜರೂರಿದ್ದಷ್ಟು ಬೆಳಕು, ಹೊಟ್ಟೆಯಲ್ಲಿ ಜರೂರಿದ್ದಷ್ಟು ಅನ್ನ, ಗಾಡಿಗಳಲ್ಲಿ ಜರೂರಿದ್ದಷ್ಟು ಪ್ರವಾಸ ಎಂಬುದು ಈ ಕಾಲದ ಬಿರುದು ವಾಕ್ಯವಾದ ಮೇಲೆ ದೂರಿ ಬರುವದೇನು ? ಪಾಲಿಗೆ ಬಂದದ್ದು ಪಂಚಾಮೃತ ಎಂಬ ಗಾದೆ ಮಾತನ್ನು ನೂರಾರು ವರ್ಷದ ರಾಜಕೀಯ ಹಾಗೂ ಆರ್ಥಿಕ ದಾಸ್ಯದಲ್ಲಿ ಸಿಕ್ಕು ಆಚರಣೆಯಲ್ಲಿ ತಂದ ನಮ್ಮ ಜನ ಬೇರೆ. ಮನೆಯೆಲ್ಲ ಕತ್ತಲೆ ಕತ್ತಲೆಯಾಗಿದೆ. ರಾತ್ರಿ ಹನ್ನೊಂದಾಗಿ ಹೋಗಿದ್ದರಿಂದ ಓಣಿಗಳಲ್ಲಿ

ನಾಯಿಗಳ ಬೊಗಳಿಕೆಯಲ್ಲದೆ ಇನ್ನೇನು ಸದ್ದಿಲ್ಲ. ಗೋಡೆಯ ಮೇಲೆ ಸಂದಿ ಸಂದಿಯಲಿ ಕಂದುಕಸ್ಥಸೈನಿಕರಂತೆ ಹೊಂಚಿ ಕುಳಿತ ತಗಣೆಗಳನ್ನು ಹೆಬ್ಬೆಟ್ಟಿನಿಂದ ಒರೆಯುತ್ತ, ಪಾರ್ವತಿಬಾಯಿ ಗೋಡೆಯನ್ನೆಲ್ಲ ರಕ್ತರಂಜಿತವಾದ ರಣರಂಗವನ್ನೇ ಮಾಡುತ್ತಿದ್ದಳು. ಹೊರಗೆ ದಿನದ ಕೆಲಸದಿಂದಲೂ ಇಲ್ಲದ ಚಿಂತೆಯಿಂದಲೂ ಉಸ್ಸೆನ್ನುತ್ತ ಶಂಭುರಾಯರು ನಿದ್ದೆ ಹತ್ತದ ಹಾಸಿಗೆಯಲ್ಲಿ ಕಾಲುಚಾಚಿದ್ದರು. ಮೇಲೆ ಬೇಸಗೆಯ ಶಕೆ ಬೇರೆ. ಮಳೆಗಾಲ ಹತ್ತಿರ ಬಂದಿದ್ದರೂ ಇನ್ನೂ ಸೆಕೆ ಕುಚ್ಚುವದು ಬಿಟ್ಟಿಲ್ಲ. ಗಾಳಿಗೂ ಕಂಟ್ರೋಲಿನ ದೆವ್ವ ಬಡಿದಂತೆ ಇತ್ತು! ಒಂದು ಸಣ್ಣ ಕಿಡಿಕಿಯಿಂದ ಬರಲೋ ಬೇಡವೋ ಎನ್ನುತ್ತ ನಸುವೆ ಸುಳಿಯುತ್ತಿತ್ತು. ಇಂಥ ಹೊತ್ತಿನಲ್ಲಿ ನಿದ್ದೆ ಬರುವದಾದರೂ ಹೇಗೆ?

'ಛೋಡಿ ನಿದ್ದೀನ ಹತ್ತವಲ್ಲದು!' ಎಂದರು ಶಂಭುರಾಯರು ಮಲಗಿದಲ್ಲಿಯೇ.

'ಯಾಕ? ಅಲ್ಲ್ಯಾ ಕಡಿತಾವೇನು?' ಪಾರ್ವತಿಬಾಯಿ ಕೇಳಿದಳು.

'ಹೂಂ, ಕಡೀತಾವ. ಅವ್ಯಾಕ ಬಿಟ್ಟಾವು? ಕಡಿಯೋದ ಬಿಟ್ಟರ ನಮಗ ನಿದ್ದೆ ಹತ್ತೋದೂ ಅಷ್ಟರಾಗs ಅದ!'

'ಅಂದರ? ಸೆಕಿ ಹೌದಲ್ಲೊ?'

'ಸೆಕಿ, ಹುಳ, ಈ ಹೊಲಸು ಹಾಸಿಗಿ—ಒಂದs ಎರಡs, ನಮಗ ಗಂಟ ಬಿದ್ದದ ಸಾಡೇಸಾತ.'

ನಿಮ್ಮದಂತೂ ಆಗಿಹೋತು. ಹಗಲೆಲ್ಲ ಸಾಡೇಸಾತದ ಧ್ಯಾನ. ಹೊಲಸು ಹಾಸಿಗಂದರ ನಾ‌ಅಿರ ಏನ ಮಾಡಲಿ? ಎರಡು ಮೂರು ದಿವಸಕ್ಕೊಮ್ಮೆ ನಾ‌ಅಿರ ಸುಂದರಾ‌ಅಿರ ಹೋಗಿ ಮುಗ್ಗಲಾಸಿಗಿ, ಚಾದರ ನಡ್ಯಾಗ ಒಕ್ಕೊಂಡು ಬರತೀವಿ. ಹೌದು, ಗಾದಿ ಹಳೇವಾಗಿ ಹರದಾವ, ಅಳ್ಳೆಯೆಲ್ಲಾ ಹೊರಬಿದ್ದದ. ಮುಗ್ಗಲಾಸಗಿ ಚಾದರ ಬಿಸದು ಕೂತಾವ. ಅದಕ್ಕ ನಾ ಏನ ಮಾಡಬೇಕು?—ನಿಮಗ ತಗೊಳ್ಳೊ ಯೋಗ್ಯತಾ ಇಲ್ಲದಿದ್ದರ!'

ಶಂಭುರಾಯರು ತ್ರಸ್ತರಾದರು. 'ಅಲ್ಲ, ನಿನಗ್ಯಾರು ಆಡಿಕೊಂಡರು? ಏನಾರೆ ತಿಳಕೊಂಡು ಏನಾರೆ ಆಡೋದು? ಧೋತರ-ಅಂಗಿ ತಗೊಳ್ಳಿಕ್ಕೆ ಠಿಕಾಣಿಲ್ಲ, ಉಳದ್ದರ ಮಾತಂತೂ ದೂರs ಉಳೀತು. ಎಲ್ಲಾ ಏನು ತುಟ್ಟಿ ಆಗ್ಯಾವ ಏನು ಸುದ್ದಿ? ಬಡವರಿನ್ನ ಬತ್ತಲೆ ತಿರುಗುವ ಹೊತ್ತು ಬಂತು!'

'ಮತ್ತ, ಹೆಂಗಸರು ಕೆರಿ-ಬಾವಿ ಹಾರಿಕೋಬೇಕಾತು—ಮಾನ ಮುಚಿ

ಗೋಳಿಕ್ಕೆ ಇಲ್ಲದ, ಸೀರಿ ತಗೊಂಡು ಎರಡು ವರ್ಷಾತು, ಇನ್ನೂ ತಗೊಂಡಿಲ್ಲ. ಹರಕಾನ್ನ ಊಟಗೋತೀನಿ. ಮನ್ನೆ ಅರಷಣ-ಕುಂಕುಮಕ್ಕ ದೇಸಾಯರ ಮನಿಗಿ ಹೋಗಬೇಕಾದರ ನಾಚಿಕಿ ಬಂತು ತಾಯೀ. ಕತ್ತ್ರಲ್ಯಾದ ಮ್ಯಾಲೆ ಹೆಂಗೇಸೊ ಹೋಗಿ ಬಂದೆ. ಸುಂದರಾ ಅಂತೂ ಹರಹರಕ ಪತ್ತ್ರಲ ಉಡತಾಳ. ಆಕಿ ಸರಿ ಜೋಡಿಯವರೆಲ್ಲ ನೋಡಿ ಆಡಿಸ್ಯಾಡತಾರಂತ!'

'ಸಾಕಿನ್ನ ನನ್ನಹೊಟ್ಟ್ಯಾಗ ಬೆಂಕೀಹಾಕೋ ಮಾತು ಸಾಕು. ಗೊತ್ತಿಲ್ಲs? ಯುದ್ಧ ಬಂದದ ಯುದ್ಧ. ದೂರ ದೇಶದಾಗ ಮಂದೀಗೆ ಮಂದೀ ಯುದ್ಧ, ಯಂತ್ರ ಯಂತ್ರದ ಯುದ್ಧ. ಇಲ್ಲೆ ನಮ್ಮದು ಹೊಟ್ಟೆಬಟ್ಟೇ ಜೋಡಿ ಯುದ್ಧ!'

'ಏನು ಯುದ್ಧೇನೊ ತಾಯಿ. ನಮ್ಮ ಬಾಯಾಗಿನ ತುತ್ತ ಕಸಗೊಂಡು ಬಕಾಸುರನಂಗ ತಿಂತಾವ ಆ ಲಷ್ಕರದಾಗಿನ ಸಿಪಾಯಿ ಮಂದಿ. ಅದರ ಅರವಿ ತಗೊಂಡು ಏನು ಮಾಡತಿದ್ದಾವು ?—ಸುತಿಗೊಂಡು ಸಾಯಲಿಕ್ಕೆ.'

'ಅದೆಲ್ಲಾ ನಿನಗೇನು ತಿಳೀತದ ? ಕೊಲ್ಲೂದುಲ್ಲ ಬದಕಸೂದಿಲ್ಲ ಅಂಬು ಹಂಗ ಬಂದದ ಈ ದುಷ್ಕಾಳ. ಇದ್ದದ್ದರಾಗ ಚಟ್ಣಿ ಭಕ್ಕರಿ ತಿಂದು ಇರಬೇಕಂದರ ನಮ್ಮ ಹುಡುಗ ಒಬ್ಬಾವ ಅಡ್ನಾಡಿ ಆಗಿ ಕೂತ.'

'ಯಾರು? ಅಮೃತ್ಯಾನ? ಹಂಗ್ಯಾಕಂತೀರಿ ಅವಗ ?' ತಡೆದು ಕೇಳಿದಳು ಪಾರ್ವತಿಬಾಯಿ.

'ಹಂಗಾರಿನ್ನೇನು ಅನ್ನಲಿ ? ಅವನ್ನ ನೆನಸಿದರ ನನ್ನ ಮೈಯುರೀತದ. ಎಷ್ಟು ಅಂದರೂ ಸಾಲೂದುಲ್ಲ. ಊರಿಗೆ ಬಂದು ನಮಗಿಷ್ಟು ಸಹಾಯ ಆಗಿ ಊರಾಗಿದ್ದಾನಪ ಅಂಬೂದರಾಗ ಪುಸಕ್ಕನೆ ಬರಗಾಲ ಅಂತ ಸಮಿತಿ ಅಂತ ತಿರಗಿ ಕೋತ ಹೋದ. ಯಾರು ಅವನ ತಲ್ಯಾಗ ಹಾಕಿದರೋ ಏನೋ ಈ ಹುಚ್ಚು ? ಸಿರೂರಿಗೆ ಹೋಗಿ ಬಂದ, ಹೊಲಮನಿ ಕೆಲಸ ಏನಾರೆ ಮಾಡಿದನs ? ಈಗ ಕೆರೂರಿಗೆ ಬ್ಯಾರೆ ಹೋಗ್ಯಾನ, ಇನ್ನವ ನಮ್ಮ ಕೈ ಬಿಟ್ಟಂತ ತಿಳಿ, ಆಗಿಹೋತು.' ಶಂಭುರಾಯರು ಎರಡೂ ಕೈಗಳನ್ನು ದೊಪ್ಪನೆ ಹಾಸಿಗೆಯ ಮೇಲೆ ಚೆಲ್ಲಿ ಹಿಂದೆ ಗೋಡೆಗೆ ಜೋರಾಗಿ ಆನಿದರು.

'ಹಿಂಗ್ಯಾಕ ಆಡತೀರಿ ತಂಪು ಹೊತ್ತಿನ್ಯಾಗ? ಹಂಗ ಮಾಡೂದುಲ್ಲ ಅವ. ತಿರಗಿ ಬಂದು ಕಾಲೇಜಕ್ಕ ಹೋಗತೀನಿ ಅಂತ ಹೇಳ್ಯಾನ.' ಎಂದು ಪಾರ್ವತಿ ಬಾಯಿ ಸಂತವಿಟ್ಟಳು.

'ಹೇಳ್ಯಾನ. ಹೇಳಿಧಂಗ ಎಷ್ಟು ನಡೀತಾನ ನನಗ ಗೊತ್ತದ. ಅವಗ ಈ

ಮನಿ ಸ್ಮಶಾನ ಮಾಡಿ ಭೂತೇಶ್ವರನಂಗ ನಮ್ಮ ಹೆಣ ತುಳಕೋತ ತಿರಗಾಡಬೇಕಾಗೇದ. ನಮ್ಮದೇನದ ಅವಗ ಚಿಂತಿ ?' ಶಂಭುರಾಯರ ಕಂಠ ಉಬ್ಬಿಬಂತು. ತಮ್ಮ ಮಾತಿನ ಆವೇಶದಲ್ಲಿ ತಾವು ನಿಲ್ಲಿಸಿದ ಚಿತ್ರದ ಭೀಕರತೆಯನ್ನು ನೆನೆದು, ಅದು ನಿಜವಾಯಿತೆಂಬಂತೆ ಭಾವಿಸಿ ಕಂಬನಿಗರೆಯ ಹತ್ತಿದರು.

ಪಾರ್ವತಿಬಾಯಿ ದೀಪ ತಗೊಂಡು ಎದ್ದು ಬಂದು ಹತ್ತಿರ ಕುಳಿತು 'ಸುಮ್ಮನ್ಯಾಕ ಇಲ್ಲದ್ದು ಹಚಿಗೋಬ್ಯಾಡರಿ. ನಾ ಎಲ್ಲಾ ಅವಗ ಹೇಳತೀನಿ. ಅವ ನೇನು ನಮ್ಮನ್ನ ಮೀರಿಲ್ಲ.' ಎಂದು ಸಮಾಧಾನದ ಸವಿನುಡಿಗಳನ್ನು ಆಡಿದಳು.

ಹನ್ನೆರಡು ಹೊಡೆದುಹೋಯಿತು. ಒಬ್ಬರೊಬ್ಬರನ್ನು ನೋಡುತ್ತ ನಿದ್ದೆ ಇಲ್ಲದಿದ್ದರೂ ತೂಕಡಿಸುತ್ತ ಬೆಂದೆದೆಯಿಂದ ಆ ದಂಪತಿಗಳು ರಾತ್ರಿ ಕಳೆದರು.

ಮರುದಿನ ಮುಂಜಾನೆ ಬೆಲ್ಲದಚಹಕುಡಿದು ಶಂಭುರಾಯರು ಇಲ್ಲದಉತ್ಸಾಹವನ್ನು ತರಲು ಹೆಣಗುತ್ತ ಪಡಸಾಲೆಯಲ್ಲಿ ತಿರುಗುತ್ತಿದ್ದರು.ಏನೇನೊ ಬಗೆಹರಿಯದ ಯೋಚನೆಗಳು ತಲೆಯಲ್ಲಿ ಸುಳಿಯುತ್ತಿದ್ದವು. ಹಾದಿ ತೋರಿದಂತಾಗಿ ಮತ್ತೆ ಡಬಗಳ್ಳಿಯ ಮುಂದೆ ನಿಂತವರಂತೆ ಅವರ ಸ್ಥಿತಿಯಾಗುತ್ತಿತ್ತು. ದೇಶಸೇವೆಯ ಹುಚ್ಚು ಹಿಡಿದ ಅಮೃತನೇ ಅವರ ಸಮಸ್ಯೆಯ ಕೇಂದ್ರವಾಗಿದ್ದರೂ ಅಂದಂದಿನ ಪ್ರಪಂಚದ ಕಷ್ಟ, ಮಗಳ ಮದುವೆಯ ಚಿಂತೆ ಇಂಥ ನೂರಾರು ಸುಳಿಗಳಲ್ಲಿಯೂ ಅವರ ಮನಸ್ಸು ತಿರುತಿರುಗಿ ದಣಿಯುತ್ತಿತ್ತು.ಒಮ್ಮೆತಿರುಗುವದನ್ನು ನಿಲ್ಲಿಸಿ ತಮ್ಮ ಹರಕು ಜಮಖಾನೆಯ ಮೇಲೆ ಹಾಸಿಗೆ ಸುರುಳಿಗೆ ಆತು ಕೊಂಡು ಕೂತರು. ಆಗ ಯೋಚನೆ ಬಂದಿತು—ಅಮೃತ ಒಪ್ಪಿದಂತೆ ಕಾಲೇಜಕ್ಕೆ ಇನ್ನು ೧೫-೨೦ ದಿನಕ್ಕೆ ಹೋಗಬಹುದೆಂದರೂ ಅವನ ಖರ್ಚಿಗೆ ಕೊಡಲು ಹಣವೆಲ್ಲಿದೆ? ಅದಿಲ್ಲದಿದ್ದರೆ ಅವನಿಗೆ ಯಾಕೆ ದೋಷ ಕೊಡಬೇಕು? ಇದರಿಂದ ಅಮೃತನ ಮೇಲಿನ ಸಿಟ್ಟುತುಸು ಹಿಮ್ಮೆಟ್ಟಿತು. ಆದರೆ ತಮ್ಮ ಸ್ವಂತದ ಬಗ್ಗೆ ಸಂತಾಪ ಹೆಚ್ಚಿತು. ಎಲ್ಲ ಹಾಳುಮಾಡಿ ಹತ್ತೀಬಿತ್ತಿದ ಬಗ್ಗೆ ಮರುಗಿದರು. ಈ ಹೊತ್ತಿಗೆ ಸ್ನಾನಮಾಡಲಿಕ್ಕೆ ಏಳಿರೆಂದ ಪಾರ್ವತಿಬಾಯಿ ಒಳಗಿನಿಂದ ಕೂಗಿಕೊಂಡರೂ ಅವರಿಗೆ ಕೇಳಿಸಲಿಲ್ಲ.ಕೈಯಲ್ಲಿ ತಲೆಯಿಟ್ಟುಕೊಂಡು ಅದೆಷ್ಟೋಹೊತ್ತು ಸುಮ್ಮನೆ ಕೂತುಬಿಟ್ಟರು. ಅವರ ಪಾಲಿಗೆ ಜಗತ್ತೆಲ್ಲ ಯಂತ್ರ ಕೆಟ್ಟ ಮೋಟರಗಾಡಿಯಂತೆ ನಿಂತು ಸ್ತಬ್ಧವಾಗಿತ್ತು ಒಂಬತ್ತು ಬಡಿದು ಹೋಗಿರಬೇಕು. ಆಗ ಅಕಸ್ಮಾತಾಗಿ ವಕೀಲ ಮಾಧವರಾಯರು ಮನೆಯೊಳಗೆ ಕಾಲಿಟ್ಟರು. ಶಂಭುರಾಯರು ಏನೋ ಸಪ್ಪಳವಾಯಿತೆಂದು ತಲೆಯೆತ್ತಿ ನೋಡಿ ಲಕ್ಷ್ಯವಿಲ್ಲದೆ ಮತ್ತೆ ಕೆಳಬಾಗಿದರು.

ವಕೀಲ್ಲರ ಹತ್ತರ ಬರುತ್ತ 'ಏನು ಶಂಭುರಾವ,ವ್ಯೆಯಾಗ ಬರಾಬರಿ ಇಲ್ಲೇನು ?' ಎನ್ನಲು ಅವರ ಧನಿಯನ್ನು ಗುರುತಿಸಿ ಶಂಭುರಾಯರು ಗಡಬಡಿಸಿಕೊಂಡೆದ್ದು 'ಅ್ರದೇನಿಲ್ಲ, ಬರ್ರಿ ಕೂಡರಿ. ಇತ್ತಲಾಗ ಎಲ್ಲಿ ಹೋಗಿದ್ದಿರಿ ?' ಎಂದು ತಮ್ಮ ಮುನ್ನಿನ ಅಲಕ್ಷ್ಯವನ್ನು ತಿದ್ದಿಕೊಳ್ಳುವಯತ್ನದಲ್ಲಿ ಆತಿಥ್ಯದ ಅತಿರೇಕದ ಪ್ರವೃತ್ತಿ ತೋರಿದರು. ಹರಕು ಜಮಖಾನಿಯ ಮೇಲೆ ಕೂಡಿಸಲಿಕ್ಕೆ ಮನಸಾಗದೆ ಒಳಗೆ ಹೋಗಿ ಝೂರ್ಝೂಮು ತಂದು ಹಾಸಬೇಕೆಂದು ಹೋಗಲು ಅದೂ ಮೂರು ನಾಲ್ಕು ಕಡೆ ಹರಿದದ್ದು ಕಂಡಿತು. ಮಾಧವರಾಯರಿಗೂ ಅದು ದೃಷ್ಟಿಗೆ ಬಿತ್ತು. ಅವರು 'ಇರಲಿ ಬರ್ರಿ, ಶಂಭುರಾವ. ಇಲ್ಲೇ ಜಮಖಾನಿ ಮ್ಯಾಲೆ ಕೂಡೋಣಬರ್ರಿ. ನಮಗ್ಯಾಕಷ್ಟು ಉಪಚಾರ? ನಮದೂ ನಿಮದೂ ಸಂಬಂಧ ಇಂದಿನದಲ್ಲಏನಲ್ಲ!' ಎಂದು ದೊಡ್ಡಸ್ತಿಕೆಯ ಮಾತಾಡಿದರು.ಶಂಭುರಾಯರಿಗೆ ಸಮಾಧಾನವಾಗಲಿಲ್ಲ. 'ಇಲ್ಲೆ ನಿಂದರ್ರಿ ಬಂದೆ!' ಎಂದು ಒಳಗೆ ಹೋಗಿ ಅದೇ ಝೂರ್ಝೂಮನ್ನು ನಾಲ್ಕು ಪದರು ಮಾಡಿ ಹರಕೆಲ್ಲ ಮುಚ್ಚುವಂತೆ ಮಾಡಿ ತಂದು ಹಾಸಿದರು. ಅಂತೂ ಇಬ್ಬರೂ ಕೂಡುವದಾಯಿತು. ಮೊದಲು ಕ್ಷೇಮಸಮಾಚಾರದ ಮಾತಾಯಿತು. ಹತ್ತಿಪ್ಪತ್ತುವರ್ಷದಿಂದ ಇಬ್ಬರದೂಋಣಾನುಬಂಧ.ಆದರೂ ಮಾಧವರಾಯರು ಈವರೆಗೆ ಈ ಮನೆಗೆ ಬಂದಿರಲಿಲ್ಲ. ಶಂಭುರಾಯರೇ ಕೋರ್ಟು-ಕಛೇರಿಯ ಕೆಲಸ ವಿದ್ದಾಗ ಅವರಲ್ಲಿ ಹೋಗುತ್ತಿದ್ದರು. ಆ ಮುರನಾಳ ಶಂಕ್ರಪ್ಪನ ಕೆಲಸವನ್ನು ಮಾಡಿಸಿಕೊಟ್ಟದ್ದು ಮಾಧವರಾಯರಿಂದಲೇ. ಅದರಲ್ಲಿ ಅವರಿಗೆ ಬಕ್ಷೀಸೆಂದು ಶಂಭುರಾಯರು ನೂರಿನ್ನೂರು ರೂಪಾಯಿ ಕೊಡಿಸಿದ್ದರು. ಮಾತು ಮುಂದರಿಯಲು ಅಮೃತ ಎಲ್ಲಿರುವನೆಂಬ ಪ್ರಶ್ನೆಯನ್ನು ಮಾಧವರಾಯರು ಕೇಳಿದರು. ಅವನ ಹೆಸರೆತ್ತಿದೊಡನೆ ಶಂಭುರಾಯರಿಗೆ ಸಾವಿರ ಚೇಳು ಕಡಿದಂತಾಯಿತು. ಹುದುಗಿಸಿಟ್ಟ ಕುದಿಯೆಲ್ಲ ಹೊರನುಗ್ಗಲೆಂದಿತು. ಅದು ಹೇಗೋ ತಡಕೊಂಡು ಅವನು ಕೆರೂರಿಗೆ ಹೋದ ಸಂಗತಿಯನ್ನು ಹೇಳಿದರು.

'ಮುಂದೇನು ಮಾಡತಾನೆ ?' ಎಂದು ಪ್ರಶ್ನೆ ಬಂತು.

'ಏನೋ ಅಂದಂತೂ ಅಂತಾನ, ಕಾಲೇಜಕ್ಕ ಮತ್ತ ಹೋಗಿ ಕಲೀತೀನಿ, ಈ ಸಾರೆ ಖಾತ್ರೀಲೆ ಪರೀಕ್ಷಾಕ್ಕೆ ಕೂಡತೀನಿ ಅಂತ!' ಎಂದು ಶಂಭುರಾಯರು ಒಳಕುದಿಯನ್ನು ಒತ್ತಿಕೊಂಡು ಹೇಳಿದರು.

ಇದೇ ಸಮಯವೆಂದು ಮಾಧವರಾಯರು ತಮ್ಮ ಬತ್ತಳಿಕೆಯಿಂದ ಸಿದ್ಧಗೊಳಿಸಿ ತಂದ ಬಾಣಗಳನ್ನು ಎಸೆಯತೊಡಗಿದರು. ವಕೀಲೀ ಯುಕ್ತಿ ವಾದದಲ್ಲಿ

ನುರಿತ ಅವರಿಗೆ ತಮ್ಮ ಬಾಣ ಗುರಿತಪ್ಪಲಾರವೆಂದು ತಿಳಿದಿತ್ತು. ‘ಶಂಭುರಾವ. ನಮ್ಮದೂ ನಿಮ್ಮದೂ ಭಾಳ ದಿನದ ಸಂಬಂಧ ಅದ ಅಂತ ಹೇಳತೀನಿ. ಹಿಂಗs ಬಿಟ್ಟರ ನಿಮ್ಮ ಅನ್ನುತ ಅಡ್ಡ ಹಾದೀ ಹಿಡೀತಾನ ನೋಡ್ರಿ. ಕೈಗ ಬಂದ ಹುಡುಗ ಮುಂಬಯಿಯಲ್ಲೆ ಬಂಗಾಲೆಲ್ಲೆ ತಲೆತಿರುಕನಂಗ ಪರೀಕ್ಷಾದಭ್ಯಾಸ ಬಿಟ್ಟು ನಿಮಗ ಹೇಳದ ಕೇಳದ ಹೋಗಿಬಿಟ್ಟ. ಇವ ಹೋದದ್ದಕ್ಕ ಸಾಯೋ ಮಂದಿ ಏನಾರ ಬದಕಿದ್ದರ? ತಾ ಮಾತ್ರ ಪರೀಕ್ಷಾ ಕಳಕೊಂಡ. ಈ ಪುಡಾರೀ ಮಂದೀ ಲೆಕ್ಚರು ಕೇಳಿ ಹುಡುಗರು ಹೀಂಗs ಕೆಡತಾರ,ಶಂಭುರಾಯರ.ಅವರಿಗೆ ಸೈಲುಬಿಡಬಾರದು’

ಶಂಭುರಾಯರಿಗೆ ಇದು ಹದಿನಾರಾಣೆ ಒಪ್ಪಿತವಾದ ವಿಚಾರ ಸರಣಿ. ಮಗನ ವಿಷಯಕ್ಕೆ ಚಿಂತಾತುರರಾಗಿದ್ದರೂ ತಮ್ಮಂತೇ ಮಾಧವರಾಯರು ಆಡುತ್ತಿರುವರೆಂದು ಅವರಿಗೆಷ್ಟೋ ಹಗುರೆನಿಸಿತು. ‘ನಾಲಿಂಬೂದು ಇದ್ದs ರಾಯರ. ಸೈಲು ಬಿಡಬಾರದು ಖರೇ. ಏನು ಮಾಡಬೇಕು ಹೇಳಿರಿ. ಏನು ಪಂಜರದಾಗ ಹಾಕಿಡೋದದ ಬೆಳೆದ ಹುಡಗರ್ನ ?’

‘ಪ್ರಸಂಗ ಬಂದರ ಪಂಜರದಾಗ ಹಾಕಿಡಬೇಕು. ತನ್ನದು ತನಗ ಖಬರಿಲ್ಲದ ಸಿಕ್ಕಸಿಕ್ಕಲ್ಲೆ ಹಾರಾಡೂ ಗಿಳಿಗೆ ಪಂಜರದಾಗ ಹಾಕಿಡದ ಮತ್ತೇನು ಮಾಡಬೇಕು. ?’

‘ಅದೆಲ್ಲಾ ವಾಜವಿ, ರಾಯರ. ಮನ್ಯಾಗ ಇರೂತನಕ ಅಜ್ಜಗಾವಲಿಟ್ಟೇವು ಅಂಥ ತಿಳೀರಿ. ನಾಳೆ ಕಾಲೇಜಕ್ಕ ಮುಂಬಯಿದಂಥ ಶಾರದೂರಿಗೆ ಹೋದ ನಂದರ ಆಲ್ಲಾ್ಯರು ಅವನ ಬೆನ್ನು ಹತ್ತಿ ತಿರಗಬೇಕು. ?’

ತಮ್ಮ ಪ್ರಸ್ತಾಪಕ್ಕೆ ಯೋಗ್ಯ ಸಮಯ ಬಂತೆಂದು ಒಳಗೊಳಗೆ ಹಿಗ್ಗುತ್ತ ಮಾಧವರಾಯರು ಹೊರಗೆ ಹಿತಚಿಂತಕರ ಶೀವಿಯಲ್ಲಿ ಹೇಳಿದರು ; ‘ಛೇ, ಹಂಗೆಲ್ಲಾ ಮಾಡಿದರ ಈ ಹೊಸಕಾಲದ ಹುಡುಗರಿಗೆ ಹುಚ್ಚು ಹಿಡದೀತು. ನಾ ಹೇಳೂ ಪಂಜರ ಅದಲ್ಲ, ಶಂಭುರಾವ. ಮದವಿ, ಮದವೀ ಪಂಜರದಾಗ ಹಾಕಿಡಬೇಕು. ಅಲ್ಲಿಂದ ನೋಡತೀನಿ ಅಥೆಂಗ ಹಾರ್ಯಾಡತಾನ..’

ಶಂಭುರಾಯರು ಕಡತಂದಂತೆ ಬಾಯಿ ತೆರೆಯದ ನಗೆ ತೋರಿದರು, ಹೊಸ ಸೂಚನೆಯಿಂದ ತುಸು ಭಾರವಿಳಿದಂತೆ ಮಾಡಿದರು. ಆದರೆ ಮದುವೆಯಂದ ಕೂಡಲೆ ಅದರೊಡನೆ ಬರತಕ್ಕ ಚಿಂತೆಯ ಪರಿವಾರವೆಲ್ಲ ಓಡಿ ಬಂತು. ‘ ಮದವಿ ಮಾಡಬೇಕಂತೀರಾ ? ಒಂದು ರೀತಿಯಿಂದ ನೀವಂಬೂದು ಸುಳ್ಳಲ್ಲ. ಆದರ, ರಾಯರ, ಮಗಳು ಬೆಳದ ಕೂತಾಳ. ಇನ್ನೂ ಆಕೀ ಮದವಿಗೇ ಠಿಕಾಣಿಲ್ಲ.

ಇವಗ ಕಲಸೋದರಾಗ ಛಲೋ ಹೊಲ ಎಲ್ಲಾ ಕಳಕೊಂಡಿವಿ. ಈ ವರ್ಷಂತೂ ದುಷ್ಕಾಳದಾಗ ಲಾವಣಿ ಒಂದು ಪೈ ಸೈತ ವಸೂಲಿಲ್ಲ. ಅವಗ ಕಲಸಲಿಕ್ಕೆ ಕಳಿಸಬೇಕಂದರ ಮತ್ತ ಸಾಲ ಮಾಡೋ ಪ್ರಸಂಗದ. ಪಗಾರದಾಗ ತಿಟಿಪಿಟಿ ಸಂಸಾರ ಸಾಗಿಸೋದಂದರ ಜೀವದ ಸುತ್ತು ಬಂದದ. ಏನ ಕೇಳತೀರಿ ರಾಯರ ನಮ್ಮ ಕಥಿ ?'

ಈ ಕರುಣಕಥನವು ತಮ್ಮ ಮುಂಬರುವ ಹೊಂಚಿಗೆ ಸರಿಯಾದ ಹಿನ್ನೆಲಿಯೆಂದು ವಕೀಲರು ಅರಿತುಕೊಂಡರು ; ಅಂತೇ ಅವರು ಮೇಲೆ ತುಂಬ ಕಸಿಕತವನ್ನು ತೋರಿದರೂ ತ್ರಸ್ತರಾಗಲಿಲ್ಲ. 'ಶಂಭುರಾವ, ನನಗೆ ಗೊತ್ತಿಲ್ಲೇನು ? ನೀವಂತ ಈ ಕಠಿಣ ಕಾಲದಾಗ ಹೆಂಗೋ ನಡೆಸಿಕೊಂಡು ಹೊಂಟೇರಿ ನಮ್ಮದರ ಏನಂತೀರಿ ? ಎಲ್ಲಾ ಮುರಕಳಿಗೆ ಬಂಧಂಗ ಅನ್ನರಿ. ನಿಮಗ ಎಷ್ಟು ಆಗಲಿ, ಪಗಾರರ ಸಿಗತದ. ವಕೀಲರಿಗೆ ಅದೂ ಠ್ಯಾ. ಈವತ್ತು ವಕೀಲಿ ಮಾಡಿ ಸಂಸಾರ ಮಾಡುವವರಿಗೆ ಆ ಪುರಂದರದಾಸ, ತುಕಾರಾಮ ಅವರಂಥ ಸಾಧು ಸಂತರ್ಹಂಗ ಧೈರ್ಯ, ದೇವರ ಮ್ಯಾಲ ವಿಶ್ವಾಸ ಬೇಕು ನೋಡರಿ. ಹೋಗಲಿ ನಾ ಹೇಳೂದಂದರ, ಅದೇನೋ ಅಂತಾರಲ್ಲ ಎಲ್ಲಾ ರೋಗಕ್ಕ ಒಂದೇ ಔಷಧ ಅಂತ, ಹಂಗ, ವರದಕ್ಷಿಣೆ ತಗೊಂಡು ನಿಮ್ಮ ಹುಡುಗನ ಮದವಿ ಮಾಡಬಿಡ್ರಿ ; ಅವಗ ಕಲಿಸೋದಕ್ಕೂ ಆತು, ನಿಮ್ಮ ಹುಡಗೀ ಮದವಿಗೂ ಆದೀತು. ಮುಖ್ಯ ನಿಮ್ಮ ಅಮೃತ ಚತುರ್ಭುಜ ಆದಂದ್ರ ಅವಗ ಜವಾಬ್ದಾರಿ ಬೆನ್ನಿ ಹತ್ತದ. ಅಲ್ಲಿಂದ ದೇಶಸೇವಾದ ಹುಡುಗಾಟಕಿ ತಾನs ಹಾರಿಹೋಗ್ತದ. ಮದವಿ ಮಾಡಿ ನೀವವನ್ನ ಮುಂಬಯಿಗೆ ಕಳಿಸಿರಿ, ಬೇಕಾದರ ದಿಲ್ಲಿಗೆ ಕಳಿಸಿರಿ, ಅವ ಅಲ್ಲಿಂದಹೆಂಗ ಬಂಗಾಲಕ್ಕ ಹೋಗತಾನ ನೋಡತೀನಿ. ಬಹಳಾದರ ಹೇಣ್ತಿ ಧ್ಯಾನ ಮಾಡಿ ಕೋತ ಅಭ್ಯಾಸ ಮಾಡಿ ಪರೀಕ್ಷಾಕ್ಕ ಕೂಡತಾನ, ಮುಂದ ಡಾಕ್ಟರ ಆಗಿ ಬಂದ ಅಂದರ ನಿಮ್ಮನೀ ಭಾಗ್ಯ ತೇರೀತಂತ ತಿಳೀರಿ.'

ಈ ಭವಿಷ್ಯಚಿತ್ರ ಶಂಭುರಾಯರಿಗೆ ಅಮೃತದಷ್ಟು ಮಧುರವಾಯಿತು. ಅವರು ದಿನಾಲು ಕನವರಿಸುತ್ತಿರುವದನ್ನೇ ಒಂದು ಕ್ಷಣದಲ್ಲಿ ಚಲಚಿತ್ರದಲ್ಲಿ ಕಂಡಂತೆ ಮಾಧವರಾಯರ ಶಬ್ದಜಾಲದಲ್ಲಿ ಕಂಡರು, ಹಿಗ್ಗಿದರು. ಆದರೆ ಒಂದು ಕ್ಷಣಮಾತ್ರ. 'ಅಲ್ಲ ರಾಯರ. ನೀವು ಹೇಳಿಧಂಗ ಆಗೂದು ಯಾರಿಗೆ ಬ್ಯಾಡ? ಕುರುಡ ಬೇಡೋದು ಎರಡು ಕಣ್ಣು, ಆದರ ಅವು ಸಿಗಬೇಕಲ್ಲ ಅವಗ ?'

'ಅಂದರ? ನೀವನ್ನೂದರ ಏನು? ಅಮೃತನಂಥ ಹುಡಗ್ಗ ಕನ್ಯಾ ಸಿಗೂ ದುಲ್ಲಂತೀರೇನು? ನೀವು ಈವತ್ತ ಮದವಿ ಮಾಡತೀವನ್ರಿ ನಾಳೆ ನೂರು ಕನ್ಯಾ ಬರತಾವ. ಅದರಾಗ ವರದಕ್ಷಿಣೆ ಯಾರು ಒಳೆ ಹೆಚ್ಚು ಕೊಡತಾರ ನೋಡಿ— ಸಾಧಾರಣ ಹುಡಗಿ ನೆಟ್ಟಗಿದ್ದರಾತು—ಅವರದು ಗೊತ್ತುಮಾಡಬೇಕು.'

ಈ ರೀತಿ ಮಾಧವರಾಯರು ಅದೆಷ್ಟೊ ಮನವೊಲಿಕೆಯ ಮಾತು ಹೇಳಿದ ಮೇಲೆ ಶಂಭುರಾಯರು ಹಾಗೇಆಗಲಿ ಎಂದು ಒಪ್ಪಿಕೊಂಡರು. ಆದರೂ ಅಮೃತ ಇದಕ್ಕೆ ಏನನ್ನುವನೋ ಎಂಬ ಹುರಹುರ ಅವರ ಮನಸ್ಸಿನಲ್ಲಿ ಇದ್ದೇ ಇತ್ತು. ಹತ್ತುವರೆಯಾಯಿತು. ಮಾಧವರಾಯರು ಹೊತ್ತಾಯಿತೆಂದು ಎದ್ದರು.ಎಂದಿಲ್ಲ ಒಮ್ಮೆ ಬಂದಾರೆ, ಅವರಿಗೆ ಚಹ ಕೊಡಬೇಕೆಂದು ಶಂಭುರಾಯರು ಹಾತೊರೆ ದರು. ಆದರೆ ಮನೆಯ ಅಂತರಂಗ ಅವರಿಗೆ ಗೊತ್ತು. ಸಕ್ಕರೆಯಿಲ್ಲ, ಹಾಲು ಇದ್ದಷ್ಟು ತೀರಿದೆ.ಆದರೂ ತರಿಸಬಹುದೆಂದುಯೋಚಿಸಿ ಧೈರ್ಯತಂದುಕೊಂಡು 'ಕೂಡರಿ ರಾಯರ, ಚಹಾ ಮಾಡಸತೀನಿ' ಎಂದು ಬೇಡಿಕೊಂಡರು. 'ಬ್ಯಾಡ, ನಾ ತಗೊಂಡು ಬಂದೀನಿ' ಎಂದು ಮಾಧವರಾಯರು ನಿರಾಕರಿಸಿದರು. 'ಅಂದರಕೀ ಬಾತ' ತಿಳಿಯುವಷ್ಟು ಅವರು ಚಾಣಾಕ್ಷರೇ ಇದ್ದರು! ಶಂಭು ರಾಯರಿಗೆ ಮಾತ್ರ ಅವರ ಅಂತರಂಗ ಇನ್ನೂ ತಿಳಿದಿರಲಿಲ್ಲ.

ಮಾಧವರಾಯರು ಎದ್ದು ಹೊರಟರು. ಶಂಭುರಾಯರು ಬೀದಿಯವರೆಗೆ ಅವರನ್ನು ಕಳಿಸಲು ಹೋದರು.

'ಹಂಗಾರs ನಿಮ್ಮದು ಠರಾವ ಹೌದಲ್ಲೊ? ಕನ್ಯಾಪಿತರಿಗೆ ಇನ್ನ ನಾ ಹೇಳ ಲಿಕ್ಕೆ ಅಡ್ಡಿ ಇಲ್ಲ?' ಮಾಧವರಾಯರೆಂದರು.

'ಆಗಲಿ, ಹೇಳರಿ. ಆದರ...' ಎಂದು ಶಂಭುರಾಯರು ಮಿಜಿಮಿಜಿ ತೋರಿಸಿದರು.

'ಹಂಗಾರ ನಿಮ್ಮ ಮಗ್ಗ ಪತ್ರಾ ಬರೆದು ಕರಸಿಕೊಂಡು ಕೇಳರಿ. ಅವನ ಕಬೂಲಿ ತಗೊಂಡ ಮ್ಯಾಲೆ ನನಗ ಹೇಳರಿ. ಆತಿಲ್ಲೊ?' ಅವರರ್ಥ ತಿಳಿದು ಮಾಧವರಾಯರು ಅವಕಾಶ ಕೊಟ್ಟರು.

ಶಂಭುರಾಯರು ಅದಕ್ಕೊಪ್ಪಿ ಪತ್ರ ಬರೆಯುವೆನೆಂದರು. ಅಲ್ಲದೆ 'ನೀವು ನಮ್ಮ ದಸಿಂದ ಇಷ್ಟು ಹಚಿಗೊಂಡು ಯೋಗ್ಯ ಉಪದೇಶ ಮಾಡಿದಿರಿ. ನನ್ನ ಮ್ಯಾಲೆ ಭಾಳ ಉಪಕಾರಾತು!' ಎಂದು ಕೈಮುಗಿದರು.

'ಎಲ್ಲೀ ಉಪಕಾರ? ನಮ್ಮನಮ್ಮವರ ದಸಿಂದ ಇಷ್ಟು ಮಾಡಬಾರದೇನು?'

ಎಂದು ತಾವೂ 'ನಮಸ್ಕಾರ' ಎಂದು ಕೈಮುಗಿಯುತ್ತ ಮಾಧವರಾಯರು ನಾಲ್ಕು ಹೆಜ್ಜೆ ಮುಂದೆ ಹೋಗಿ, ಅದೇನೊ ನೆನಪಾದಂತಾಗಿ ತಿರುಗಿ ಬಂದು 'ಶಂಭುರಾವ, ನಾ ಏನ ನಿಮುಗ ಹೇಳಿದೆ ಭಾಳ ದಿನದ ಋಣಾನುಬಂಧ ಅಂತ ಹೇಳಿದೆ. ತಪ್ಪ ತಿಳೀಬ್ಯಾಡ್ರಿ. ನಮಗೇನು ಸ್ಮಾರ್ತ-ವೈಷ್ಣವ ಅಂತ ಭೇದ ಇಲ್ಲ. ಸಂಬಂಧ ಬೆಳಸಬೇಕಂತ ಇಬ್ಬರಿಗೂ ಅನಿಸಿದರೆ ನನ್ನ ಮಗಳೂ ಮದವಿಗೆ ಆಗ್ಯಾಳು ನಿಮ್ಮ ಮಗ ಬಂದ ಮ್ಯಾಲೆ ಮುಂದಿನ ವಿಚಾರ ಮಾಡೋಣ!' ಎನ್ನುತ್ತ ಹೊರಟರು.'ಶಂಭುರಾಯರು 'ಹಂಗs ಆಗಲಿ,' ಎಂದು ತಿರುಗಿದರು. ಮಾಧವರಾಯರ ಕೊನೆಮಾತಿನಿಂದ ಅವರಿಗೆ ಆಶ್ಚರ್ಯವಾಯಿತು. ಆದರೆ ಅದರ ಅಪಾರ್ಥವನ್ನು ಮಾತ್ರ ಮಾಡಲಿಲ್ಲ.

ಮನೆಯಲ್ಲಿ ಪಾರ್ವತಿಬಾಯಿಗೆ ಎಲ್ಲ ತಿಳಿಸಿ ಅವಳ ಅನುಮೋದನೆ ದೊರೆತ ಮೇಲೆ ಶಂಭುರಾಯರು ಅಮೃತನಿಗೆ ಜರೂರ ಹೊರಟು ಬರಲು ಪತ್ರಬರೆದರು. ಆ ಪ್ರಕಾರ ಅಮೃತನು ಏನು ಅನಾಹುತವಾಗಿರುವದೋ ಎಂದು ಗಾಬರಿಯಾಗಿ ಕೆರೂರಿಂದ ಬಂದನು. ಮನೆಯ ಹತ್ತಿರ ಬಂದಂತೆ ಅವನೆದೆ ಹಾರಹತ್ತಿತು.ಆದರೆ ನರಳಿಕೆ–ಗೋಳಾಟ ಯಾವುದೂ ಕೇಳಿಸಲಿಲ್ಲ. ಮನೆಯೊಳಕ್ಕೆ ಕಾಲಿಟ್ಟನು. ಮಧ್ಯಾಹ್ನದ ಹೊತ್ತು,ಶಂಭುರಾಯರು ಊಟಮಾಡಿ ಮುನಿಸಿಪಾಲಿಟಿಗೆ ಹೋಗಿದ್ದರು. ದೊಡ್ಡ ಹುಡುಗರೆಲ್ಲ ಶಾಲೆಗೆ ಹೋಗಿದ್ದವು. ಪಾರ್ವತಿಬಾಯಿಯೊಬ್ಬಳೇ ಅಡಿಗೆಮನೆಯಲ್ಲಿ ಎಂಜಲ ತೆಗೆದು ಗೋಮಯಹಚ್ಚುತ್ತಿದ್ದಳು. ಆಗಿನ ಸಹಜವಾದ ಸಪ್ಪೋ ಅವನಿಗೆ ಅಶುಭಸೂಚಕವಾಯಿತು. ಮೆಲ್ಲನೆ ಹೆಜ್ಜೆಯಿಡುತ್ತ ಒಳಗೆ ಹೋಗಿ ತಾಯಿಗೆ ನಮಸ್ಕಾರ ಮಾಡಿ ನಿಂತನು.

'ಯಾವಾಗ ಬಂದಿ? ಈಗ ಬಂದ್ಯಾ? ನೆಟ್ಟಗಾತು. ಮುಚ್ಚಿಟ್ಟೇನಿ ಊಟ ಮಾಡೇಳು' ಎಂದವಳು ಎಂದಿನ ಮಮತೆಯಿಂದ ಆಡಿದಳು. ಆದರೂ ಅವನ ಸಂಶಯ ಹೋಗಲಿಲ್ಲ. 'ಎಲ್ಲಾರು ನೆಟ್ಟಗಿದ್ದಾರ?' ಎಂದು ಕೇಳಿಬಿಟ್ಟನು.

'ಯಾರಿಗೇನಾಗೇದ? ಎಲ್ಲಾರೂ ಇರುಹಂಗ ಇದ್ದಾರ.'

'ಹಂಗಾರ ಜರೂರ ಬಾ ಅಂತ ಯಾಕ ಪತ್ರ ಹಾಕಿದ ಅಪ್ಪ?'

'ಯಾಕಂದರ? ಹಂಗ ಬರೀದಿದ್ದರ ನೀ ಊರ ಕಡೆ ಬರೂದು ಹೆಂಗ?'

'ಹಿಂಗs? ತಿಳೀತು ಬಿಡು!' ಎಂದು ಅಮೃತನು ಮುಗುಳು ನಕ್ಕು ತಲೆಯ ಮೇಲಿನ ಹಿರಿ ಭಾರವೊಂದು ಇಳಿದಂತಾಗಿ ಊಟಕ್ಕೆ ಎದ್ದನು. ಅವನನ್ನು ಕರಸಿದ್ದರ ಮುಖ್ಯ ಕಾರಣವನ್ನು ಪಾರ್ವತಿಬಾಯಿ ಆಗ ಹೇಳಲೇ ಇಲ್ಲ. ಅವನಿಗೂ

ಅದು ಹೊಳೆಯುವಂತಿರಲಿಲ್ಲ. ತನ್ನ ಅನೇಕಾನೇಕ ಅನುಭವಗಳನ್ನು ತಾಯಿಯ ದಿರು ಹೇಳುತ್ತ ಅಂದು ಸಂಜೆಯವರೆಗೆ ಹೊತ್ತು ಕಳೆದನು. ವಿಶೇಷವಾಗಿ ತಾನು ಕಂಡ ಗೌರವ್ವನ ಸಂಸಾರದ ದುಃಸ್ಥಿತಿಯನ್ನು ಬಣ್ಣಿಸಿ ಹೇಳಿದನು. ಶಾಲೆಯಿಂದ ಬಂದ ಹುಡುಗರು, ನೆರೆಮನೆಯಿಂದ ತಿರುಗಿದ ಸುಂದರಾ ಎಲ್ಲರೂ ಅಣ್ಣ ಬಂದ ನೆಂದು ಹಿಗ್ಗಿದರು.

ತನ್ನ ಮೇಲ್ವಿಚಾರಣೆಯ ವರದಿಯನ್ನು ಒಪ್ಪಿಸಲು ಬರಗಾಲಸಮಿತಿಯ ಕಚೇರಿಯ ಕಡೆಗೆ ಅಮೃತನು ಹೋದನು. ಮೂರುಸಂಜೆಗೆ ಶಂಭುರಾಯರು ಬಂದು ಮಗ ಬಂದದ್ದನ್ನು ಕೇಳಿ ಹರುಷಗೊಂಡರು. ಇನ್ನವನು ಎಲ್ಲಿಯೂ ಹೋಗದಂತೆ ಕಟ್ಟಿಹಾಕುವ ಸಂಚು ಕೈಗೂಡುವದೆಂದು ಎಣಿಸಿದ್ದರು. ಅವನು ತಿರುಗಿ ಬಂದಮೇಲೆ ರಾತ್ರಿ ಎಲ್ಲರ ಊಟವಾಯ್ತು. ಆಗ ಶಂಭುರಾಯರು ಎಂದಿಲ್ಲದ ಆಸ್ಥೆಯಿಂದ ಅವನ ಬರಗಾಲಸಮಿತಿಯಬಗ್ಗೆ ಪ್ರಶ್ನೆ ಕೇಳುತ್ತ ಬಿಚ್ಚು ಮನದಿಂದ ಮಾತಾಡಿದರು. ತನ್ನ ಮನಸ್ಸು ತಂದೆಗೆ ಅರ್ಥವಾಯಿತು, ತನ್ನ ಕೆಲಸ ಅವರಿಗೆ ಸೇರಿತು ಎಂದು ಭಾವಿಸಿ ಅಮೃತ ಹುರುಪುಗೊಂಡನು. ಮಲಗುವ ಹೊತ್ತಾಯಿತು. ಎಲ್ಲ ಕೆಲಸ ತೀರಿಸಿಕೊಂಡು ಪಾರ್ವತಿಬಾಯಿ ಮಲಗುವ ಸಿದ್ಧತೆ ಮಾಡಿದಳು. ಪಡಸಾಲೆಯಲ್ಲಿ ಯಜಮಾನರಿಗೂ ಮಗನಿಗೂ ಹಾಸಿ ಕೊಟ್ಟು ನಡುಮನೆಯಲ್ಲಿ ಹುಡುಗರ ನಡುವೆ ತನ್ನದನ್ನು ಹಾಸಿಕೊಂಡಳು. ಇಂದು ಎಷ್ಟು ತಗಣಿ ಕಡಿದರೂ ತನಗೆ ಸುಖವಾಗಿ ನಿದ್ದೆ ಬರಬಹುದೆಂದು ಅಮೃತ ಹಾಸಿಗೆಯ ಮೇಲೆ ಹೋಗಿ ಕುಳಿತನು. ಶಂಭುರಾಯರು ತಮ್ಮ ಹಾಸಿಗೆ ಯಲ್ಲಿ ಕುಳಿತರು. ತಾವು ಯೋಚಿಸಿಕೊಂಡಂತೆ ಕ್ರಮೇಣ ಪ್ರಸ್ತಾಪ ತೆಗೆದರು :
'ಅಲ್ಲ ಅಮೃತ, ನೀ ಕಾಲೇಜಕ್ಕ ಹೋಗೋದು ಸಮೀಪ ಬಂತಲ್ಲs.'

'ಹೌದು, ಜೂನ ತಿಂಗಳ ಸುರುವಾತು. ಏನಂದರೂ ಇನ್ನೂ ಹದಿನೈದು ಇಪ್ಪತ್ತು ದಿನ ಅವ.'

'ಅಂದರೂ ಭಾಳ ದಿನ ಇಲ್ಲ.'

ಪಾರ್ವತಿಬಾಯಿ ತನ್ನ ಹಾಸಿಗೆಯ ಮೇಲೆ ಅಡ್ಡಾಗತಕ್ಕವಳು, ಮುಖ್ಯ ವಿಷಯವಿನ್ನು ಹೊರಡುವದೆಂದು ಅರಿತು ಎದ್ದು ಬಾಗಿಲಹತ್ತಿರ ಹೋಗಿ ನಿಂತಳು 'ಹಂಗಾರ ಅಮೃತ ಲಗೂನ ಹೋಗಬೇಕೇನು?' ಎಂದು ಬಾಯಿಹಾಕಿದಳು.

'ಹೋಗದಿದ್ದರೆ ಹೆಂಗs? ಆದರ ಹೋಗೋದಕ್ಕ ಇದರ ವ್ಯವಸ್ಥಾ ಏನು ಎಂದು ನನಗ ಹತ್ತೇದ.' ಶಂಭುರಾಯರು ಹಣೆಯಲ್ಲಿ ಮಡಿಕೆ ಹಾಕಿದರು.

'ಏನಾರ್ರ ಮಾಡಬೇಕು. ಅದನ್ನ ಅವನ ಮುಂದ ಹೇಳಿದರ ಅವನೇನು ಮಾಡ್ಯಾನು?'

'ಅದೂ ಖರೇ ಅನ್ನು. ನಾವೆಲ್ಲ ಕೈಯೂರಿ ಕೂತೀವಿ. ದಿವಸ ಈಗ ಹಿಂಗವ, ನಮಗ ಲಾವಣೀನೂ ವಸೂಲಾಗುದುಲ್ಲ, ಯಾರೂ ಹೊಲ ಬರಸಿ ಕೊಂಡು ಸೈತ ಸಾಲಾ ಕೊಡುದುಲ್ಲ.'

ಈ ಸಂವಾದ ನಡೆದಂತೆ ಅಮೃತನಿಗೆ ತೋರಿತು, ಪಣದ ವ್ಯವಸ್ಥೆ ಆಗ ಲಾರದೆಂದು ತಿಳಿಸಲು ತನ್ನ ಈಗ ಕರೆಸಿಕೊಂಡರೆಂದು ಸ್ವಲ್ಪ ಹೊತ್ತು ತಲೆ ಯನ್ನು ಕೆಳಗೆ ಹಾಕಿ ಕೂತನು. ಆಮೇಲೆ 'ಅಪ್ಪ ಯಾಕಷ್ಟು ಕಾಳಜೀ ಮಾಡ ತೀರಿ ? ದುಡ್ಡು ಸಿಕ್ಕರ ಹೋಗ್ತೀನಿ, ಇಲ್ಲದಿದ್ದರ ಎಲ್ಯಾರ ನೌಕರೀ ಹಿಡೀತೇನಿ' ಎಂದು ಸಾರಿದನು.

'ಛೆ, ಹಂಗನಬ್ಯಾಡ ಅಮೃತ. ನಿನ್ನ ದಸಿಂದ ನಾ ಜೀವ ಒತ್ತಿ ಇಟ್ಟು ತಂದೇನು. ನೀ ಹೋಗಲಿಕ್ಕೆ ಬೇಕು.' ಶಂಭುರಾಯರು ಆವೇಶದಿಂದ ಹೇಳಿದರು.

ಈ ಸಮಯ ನೋಡಿ ಬಹಳ ಸಹಜವೆನ್ನುವಂತೆ ಪಾರ್ವತಿಬಾಯಿ 'ಜೀವ ಒತ್ತೆಯಿಡುವಂಥ ಪ್ರಸಂಗೇನು ಬಂದದ? ಅವನ ಮದುವಿ ಮಾಡಿಬಿಟ್ಟರಾತು. ವರದಕ್ಷಿಣ್ಯಾಗ ಎಲ್ಲಾ ಆಗ್ತದ' ಎಂದು ಸೂಚಿಸಿದಳು.

ಮದುವೆಯೆಂದು ಕೇಳಿದೊಡನೆ ಅಮೃತ ತಲೆಯೆತ್ತಿ ತಾಯಿಯ ಮುಖ ನೋಡಿ, ಏನೋ ಹೊಸ ಬೇತು ನಡೆದಿದೆಯೆಂದು ತಿಳಿದು ತ್ರಸ್ತನಾದನು ಆದರೆ. ಚೇಷ್ಟೆಯ ಮಾತಿರಬಹುದೆಂದು 'ಛಲೋ ಅದ ವಿಚಾರ !' ಎಂದು ನಗೆಯ ಮೇಲೆ ಹಾಕಿ ಮುಗಿಸಬೇಕೆಂದನು.

ಆದರೆ ಅವನ ಮನಸ್ಸು ತಿಳಿಯದೆ ಅವನ ಮಾತಿಗೆ ಹುರಿಗೊಂಡು ಶಂಭು ರಾಯರು 'ನೋಡಿದ್ಯಾ, ನೀ ಹೇಳಿದ್ದು ಅವಗೂ ಮನಸಿಗೆ ಬಂತು. ನೀವೆಲ್ಲಾ ಕಬೂಲಿದ್ದರ ಮದವೀ ಹೂಡಿಬಿಡೋಣ. ಕಾಲೇಜ ಸುರುವು ಆಗೂದರೊಳಗ ಬೇಕಾರ ಮುಗಿಸಿಕೊಂಡು ಹೋಗಿಬಿಡಲಿ;' ಎಂದು ಮುಂತಾಗಿ ಆಡಿದರು.

ಆಗ ಇದು ತಾಯಿ-ತಂದೆ ಇಬ್ಬರದೂ 'ಸಂಯುಕ್ತ ಮುಖ' ವಿರಬಹು ದೆಂದು ಅಮೃತನಿಗೆ ತೋರಹತ್ತಿತ್ತು. ತಿರುತಿರುಗಿ ಅ ವಿಷಯವನ್ನು ಕುರಿತು ಅವರಿಬ್ಬರೂ ಮಾತಾಡಹತ್ತಿದರು. ಅವನು ಐದು ಮಿನಿಟು ಸುಮ್ಮನೆಕುಳಿತು ಕೇಳಿದ. ಅವನ ಮೂಕ ಸಮ್ಮತಿಯಿರುವುದೆಂದು ತಿಳಿದಿರಬೇಕು.

ಕೊನೆಗೆ 'ಹಂಗಾರ ಇದನ್ನ ಮಾಡೋಣ?' ಎಂದು ಶಂಭುರಾಯರು ನೇರ

ವಾಗಿ ಅವನನ್ನು ಕೇಳಿದರು.

ಆಗ ಅಮೃತ ಉತ್ತರ ಕೊಡಬೇಕಾಯಿತು. 'ಅಪ್ಪ, ಇದೇನು ವಿಚಾರ ನಡಸೀರಿ ಇಬ್ಬರೂ ? ಈಗೇನು ತಾಪತ್ರಯ ಮನ್ಯಾಗ ಕಡಿಮೆ ಅದ ಅಂತ ಹೇಳಿ ಇನ್ನೊಂದು ಹೆಚ್ಚು ಮಾಡಿಕೋತೀರೇನು ? ಇದ್ದಷ್ಟು ಮಂದಿಗೆ ಹೊಟ್ಟೆಗೆ ಹಾಕೋದರಾಗ ನೀವು ಸೋತು ಸುಣ್ಣಾಗೀರಿ. ಆ ಸೊಸಿಯೊಬ್ಬಾಕಿನ್ನ ತಂದು ಒದ್ದಾಡಬೇಕಂತೀರ ? ನನ್ನ ಪರೀಕ್ಷಾ ಮುಗದು ಡಾಕ್ಟರ ಆಗಿ ನಾ ಗಳಿಸೋ ತನಕ ಮದವಿ ಅಂಬೂದು ಮರೋ ಬ್ಯಾಡ' ಎಂದು ಸ್ಪಷ್ಟವಾಗಿ ಹೇಳಿದನು.

ಇದರಿಂದ ಅವರಿಬ್ಬರಿಗೂ ಸಿಡಿಲು ಬಡಿದಂತಾಯಿತು. ಆದರೂ ತರತರ ದಿಂದ ಅವನನ್ನು ಹಾದಿಗೆತರುವ ಯುಕ್ತಿಗಳನ್ನು ಹೂಡಿದರು. ಇಬ್ಬರೂ ನಡುವೆ ಗೊಳೋ ಎಂದು ಅತ್ತರು. ಅವರಿಗೆ ಅಳು ತರಿಸಿದೆನಲ್ಲ ಎಂದು ಅಮೃತನ ಕಂಠ ಉಬ್ಬಿಬಂತು. ಅಪರಾತ್ರಿಯಾದರೂ ಯಾರಿಗೂ ನಿದ್ದೆಯಿಲ್ಲ. ಒಪ್ಪಲೇಬೇಕೆಂದು ಅವರು, ಒಪ್ಪಲಾರೆನೆಂದು ಅವನು, ಹೀಗೆ ಜಗ್ಗಾಟ ನಡೆಯಿತು. ಅಮೃತನ ಚಿತ್ತರಂಗದಲ್ಲಿ ಹೊಸ ಸಮಸ್ಯೆಯ ಭೂತ ಹೊಕ್ಕು ಬಯಲಾಟದ ಕುಣಿತ ಮಾಡ ಹತ್ತಿತು.

ಮರುದಿನ ಸಂಜೆಯ ಅಂಚೆಗೆ ಅಮೃತನಿಗೆ ವೀಣೆಯ ಪತ್ರ ಬಂದಿತು. ತನ್ನದೇ ತನಗೆ ಹೆಚ್ಚಾಗಿ ಕೊರಗುತ್ತಿದ್ದ ಅವನಿಗೆ ತ್ರಿಶೂಲವನ್ನು ತಿವಿದಂತಾ ಯಿತು. ತಾನು ತನ್ನ ಕೊನೆಯ ಪತ್ರದಲ್ಲಿ ತಿಳಿಸಿದಂತೆ ಅವಳು ಪತ್ರ ಬರೆಯದೆ ಸುಮ್ಮನಿರುವಳಲ್ಲ ಎಂದವನು ಈವರೆಗೆ ಸಮಾಧಾನದಿಂದ ಇದ್ದನು. ಈಗ ಪತ್ರ ಬಂತು ಮಾತ್ರವಲ್ಲ, ಮರುದಿನ ಬೆಳಗಿನ ಗಾಡಿಗೆ ಅವಳು ಅಲ್ಲಿಗೆ ಬರುವ ಳೆಂದು ಸಾರುತ್ತ ಬಂತು ! ಆಯಿತು, ಅವನು ತಪ್ಪಿಸಬೇಕೆಂದ ಅನಾಹುತ ತಪ್ಪ ಲಿಲ್ಲ. ತನ್ನಷ್ಟಕ್ಕೆ ಕುಳಿತು ತೀರ ಚಿಕ್ಕದಾದ ಆ ಪತ್ರವನ್ನು ಓದಿಕೊಂಡನು. ಮೈ ಬೆವತುಹೋಯಿತು, ತಲೆ ದಿಮ್ಮೆಂದಿತು. ಬರಬೇಡವೆಂದು ತಾರಿನಿಂದ ತಿಳಿ ಸಲು ಕೂಡ ಅವಕಾಶವಿಲ್ಲ. ಈಗಾಗಳೆ ಅವಳು ಹುಟಗಿಯ ಹತ್ತಿರಕ್ಕೆ ಬಂದಿರ ಬಹುದು. ಎಲ್ಲಿಗೆಂದು ತಾರು ಕಳಿಸಬೇಕು ? ಅವಳ ಈ ಅವಿಚಾರಕ್ಕೆ ಅವನು ಸಂತಾಪಗೊಂಡನು. ಅವಳ ಪತ್ರದಲ್ಲಿ ಬರುವದೇಕೆಂಬ ಮಾತಿಲ್ಲ, ಬರಲಿಯೋ ಹೇಗೆಂಬ ಪ್ರಶ್ನೆಯಿಲ್ಲ. 'ಮದನಾಪುರದಲ್ಲಿ ಇರುವದು ಅಶಕ್ಯವಾಗಿ, ಸಾಯುವ ದಾದರೆ ನಿನ್ನ ಹತ್ತಿರವೇ ಸಾಯಲೆಂದು ಅಲ್ಲಿಗೆ ಬರಲು ಹೊರಟಿರುತ್ತೇನೆ. ಸ್ಟೇಶ ನ್ನಿಗೆ ಕರೆದೊಯ್ಯಲು ಬಾ' ಎಂಬುದೇ ಆ ಪತ್ರದ ತಾತ್ಪರ್ಯ. ಮನೆಯಲ್ಲಿ ಇದ್ದವ

ರಿಗೆ ತುತ್ತು ಅನ್ನ ಸಿಗಬೇಕಾದರೆ ಸಾಕುಬೇಕಾಗುತ್ತದೆ, ಮೇಲೆ ಈ ಪ್ರಾಣಿ ಬಂದು ತಳವೂರಿದರೆ ಗತಿಯೇನು ? ಅಲ್ಲದೆ ಅವನ ಮದುವೆಯು ಚರ್ಚೆ ಜೇರಿ ಸುರುವಾಗಿದೆ. ಈಗ ವೀಣೆ ಬಂದರೆ ಆಗಿಹೋಯಿತು.ತಾನು ಮದುವೆ ಒಲ್ಲೆನ್ನು ವದಕ್ಕೆ ಕಾರಣಗೊತ್ತಾಯಿತೆಂದು ಮನೆಯವರೂ ಊರವರೂ ಹೂಲಿಯೆಬ್ಬಿಸು ವರು. ಬಂಗಾಲಕ್ಕೆ ತಾನು ಹೋದದ್ದು ದೇಶಸೇವೆಗಲ್ಲ,ಸೇವೆಯ ಸೋಗು ಹಾಕಿ ವೀಣೆಯಂಥ ಹುಡುಗಿಯ ಗಂಟುಹಾಕಿಕೊಂಡು ಬರುವದಕ್ಕೆ ಎಂದೆಲ್ಲರೂ ಆಡಿ ಕೊಳ್ಳುವರು. ಇದೆಲ್ಲಿಯ ಶನಿ ಗಂಟುಬಿದ್ದಿತೆಂದು ಅಮೃತನು ತಪ್ತನಾದನು. ಆದರೆ ಏನು ಮಾಡಬೇಕು ತಿಳಿಯಲಿಲ್ಲ. ಕೆಲಹೊತ್ತಿನ ಮೇಲೆ ಊರ ಹೊರಗೆ ಕೆಳಮೋರೆ ಹಾಕಿಕೊಂಡು ತಿರುಗುತ್ತ ಹೊರಟನು. ತಲೆಯಲ್ಲಿ ವಿಚಾರಗಳ ತುಮುಲ ನಡೆದಿರುವದು. ಕಲಾದಗಿ ರಸ್ತೆಯ ಗುಂಟ ಹಾಗೇ ಅವನು ಏಳನೇ ಪೂಲಿನಾಚೆ ಹೋಗಿಯೇ ಹೋದನು. ಅಲ್ಲಿಂದ ಕಣ್ಣೆತ್ತಿ ನೋಡಿದನು, ಇದಿರಿಗೆ ಪಶ್ಚಿಮ ದಿಗಂತದಲ್ಲಿ ಮುಳುಗುವ ಸೂರ್ಯನ ಕೆಂಪು ಗೋಲಕಂಡಿತು. ರಸ್ತೆ ಯನ್ನು ಬಿಟ್ಟು ಬದಿಯ ಒಂದು ಹೊಲದ ಒಡ್ಡಿನ ಮೇಲೆ ಕಾಲು ಚಾಚಿ ಆ ನೋಟವನ್ನು ನೋಡುತ್ತ ಕುಳಿತನು. ಸ್ವಲ್ಪಸ್ವಲ್ಪಾಗಿ ಕೆಳಗಿಳಿದು ಕಾಣ ದಾಗುತ್ತ ಇಡೀ ಸೂರ್ಯ ಗೋಲವು ಕಣ್ಮರೆಯಾಯಿತು. ಯಾರ ಒಡಲ ಲ್ಲಿಯೋ ಉರಿಯುಂಡೆಯೊಂದನ್ನು ಎತ್ತಿಹಾಕಿದಂತೆ ಅದು ಅವನಿಗೆ ತೋರಿತು. ಈ ಕಲ್ಪನೆಯಿಂದ ಅವನ ಒಡಲುರಿ ಇನ್ನೂ ಹೆಚ್ಚಿತು. ಸೂರ್ಯ ಅಸ್ತವಾದರೂ ಬೆಳಕಿನ್ನೂ ಸಿಚ್ಛಳವಾಗಿತ್ತು. ಅಲ್ಲಲ್ಲಿ ಮುಗಿಲಲ್ಲಿ ಕಪ್ಪುಮೋಡದ ತುಂಡುಗಳು ನಿಂತಿದ್ದವು. ಮಳೆಗಾಲಸೂಚಕವಾದ ತಂಪುಗಾಳಿ ತೀಡುತ್ತಿತ್ತು. ಇನ್ನೆರಡು ಮೂರು ದಿನಗಳಲ್ಲಿ 'ಮೃಗಪ್ರವೇಶ' ವಾಗುವುದಿತ್ತು. ಇಂಥ ಶಾಂತ ಹವೆಯಲ್ಲಿ ಮೆಲ್ಲನೆ ಅವನ ಮನಸ್ಸು ಗೊಂದಲದಿಂದ ಹೊರಬಂದಿತು. ಎಂಥ ಕಷ್ಟದ ಪರಿ ಸ್ಥಿತಿಯಲ್ಲಿಯೂ ಹಾದಿಯನ್ನು ಹುಡುಕಬೇಕು, ಬಂದದ್ದನ್ನು ಇದಿರಿಸಬೇಕು ಎಂದು ಅವನಿಗೆ ಯಾರೋ ತಿವಿತಿವಿದು ಹೇಳಿದಂತಾಯಿತು. ಅದರಿಂದ ಅವನು ಹುರಿಗೊಂಡು ಶಾಂತವಾಗಿ ಯೋಚನೆಮಾಡಿದನು. ಯುಕ್ತಿ ಹೊಳೆಯಿತು. ಆ ಯುಕ್ತಿಯಿಂದ ತಾನು ಸುಳ್ಳಿನ ಸುಳಿಯಲ್ಲಿ ಸಿಲುಕಬಹುದು ಎಂದವನು ಹಿಂಜರಿ ದನು. ಆದರೆ ತನ್ನ ಶೀಲ ಕಾಯುವ ಸತ್ಯಕ್ಕೆ ಆ ಸುಳ್ಳು ಸಹಾಯಕವಾದರೆ ತಪ್ಪಿಲ್ಲ ಎಂದುಕೊಂಡು ಮಬ್ಬುಗತ್ತಲೆಯಾದ ಮೇಲೆ ಅಲ್ಲಿಂದ ಹೊರಟು ಮನೆ ಸೇರಿ ದನು. ರಾತ್ರಿಯಲ್ಲಿ ಸರಿಯಾಗಿ ಊಟ ಮಾಡಲಿಲ್ಲ. ತನ್ನ ವಿಚಾರದಲ್ಲಿ ಮುಳು

ಗಿದ್ದನು. ತಾವು ಮದುವೆಯ ವಿಷಯ ತೆಗೆದ ಸಮಯದಿಂದ ಹೀಗೆ ಮಾಡುತ್ತಿ ಕುವನೆಂದು ತಾಯ್ತಂದೆ ತಿಳಿದರು. 'ನಿನಗೆ ಮದವಿ ಬ್ಯಾಡಾದರ ಬಿಟ್ಟುಬಿಡು ಅತಿಲ್ಲೊ ?' ಎಂದು ಶಂಭುರಾಯರು ಅಕ್ಕಸದಿಂದ ಆಡಿದರು. 'ಹಿಂಗs ಎರಡು ದಿವಸ ಮಾಡತಾನ' ಎಂದು ಪಾರ್ವತಿಬಾಯಿ ಗಂಡನನ್ನು ಸಂತವಿಸಿದಳು, ಅವನ ಸಂಕಟ ಅವರಿಗೇನು ಗೊತ್ತು ? ನಿದ್ದೆಯಿಲ್ಲದೆ ಹಾಸಿಗೆಯಲ್ಲಿ ಹೊರಳುತ್ತ ತನ್ನ ಯೋಜನೆಯನ್ನು ಗೊತ್ತುಪಡಿಸುತ್ತಾ ರಾತ್ರಿ ಕಳೆದನು. ಬೆಳಗುಮುಂಜಾನೆ ಐದು ಗಂಟೆಗೆ ಎದ್ದು ತಿರುಗಾಡಲಿಕ್ಕೆಂದು ಹೇಳಿ ಸ್ಟೇಶನ್ನಿಗೆ ಹೋದನು.

ಆರು ಗಂಟೆಗೆ ಬೆಳಗಿನ ಗಾಡಿ ಬಂದಿತು. ಅಮೃತನ ಎದೆ ಹಾರಹತ್ತಿತು. ಆದರೂ ಗಟ್ಟಿಮನದಿಂದ ವೀಣೆಯನ್ನು ನೋಡುತ್ತ ಅವನು ಅತ್ತಿಂದಿತ್ತ ಅಲೆ ದನು. ಹೇಗೆ ಅವಳನ್ನು ಬರಮಾಡಬೇಕೆಂಬುದು ಅವನಿಗೆ ಇನ್ನೂ ನಿರ್ಧಾರ ವಾಗಿರಲಿಲ್ಲ. ಅವಳ ಚಿತ್ರವನ್ನು ಕಲ್ಪಿಸಿ ಈವರೆಗೆ ಒಮ್ಮೆ ನಿತಾಂತ ಕೋಪ, ಇನ್ನೊಮ್ಮೆ ಅತ್ಯಂತ ಮರುಕ ಎರಡನ್ನೂ ಅನುಭವಿಸಿದ್ದನು. ಅರ್ಧ ತಾಸು ಮುಂಚೆ ಬಂದು ನಿಲ್ದಾಣದ ಮೇಲೆ ತಿರುಗುತ್ತಿರುವಾಗ ಅವಳನ್ನು ಒಮ್ಮೆ ಮುಗುಳುನಗೆಯಿಂದ, ಒಮ್ಮೆ ಹುಬ್ಬುಗಂಟಿನಿಂದ ಸ್ವಾಗತಿಸಿದ್ದನು. ಈಗವಳು ಪರಿಚಿತಜಾಗಕ್ಕೆ ಬಂದವರ ಹಾಗೆ ತನ್ನ ಸಾಮಾನು ಸಹಿತ ಕೆಳಗಿಳಿದು ನಿಂತಳು, ಅಮೃತ ಅವಳಿನ್ನೂ ಗಾಡಿಯಲ್ಲಿರಬಹುದು ಎಂದು ಹಣಿಕುತ್ತ ಒಂದು ಸುತ್ತು ಹಾಕಿ ಬಂದನು. ಬರಲಿಲ್ಲ ಗುಣವಾಯಿತೆಂದು ಅಂದುಕೊಂಡನು. ಅಷ್ಟರಲ್ಲಿ 'ಅಮೃತ್, ಅಮೃತ್' ಎಂಬ ಕೂಗು ಕೇಳಿತು; ಅದು ವೀಣೆಯ ದನಿಯೆಂದು ಅವನಿಗೆ ಗೊತ್ತು. ಹಿಂದಿರುಗಿ ನೋಡಿದನು ; ಬಂದವಳು ವೀಣೆಯೆ ಹೌದು. ಹತ್ತಿರ ಹೋಗಿ 'ಬಂದಿಯಾ ?' ಎಂದು ಹಿಂದಿಯಲ್ಲಿ ಕೇಳಿದನು.

'ಹೂ.' ಎಂದಳವಳು.

'ಇದೇ ಸ್ಟೇಶನ್ನೆಂದು ಹೇಗೆ ಗೊತ್ತಾಯಿತು ?'

'ಯಾಕೆ ನನಗೆ ಬಾಯಿಯಿಲ್ಲೇನು ? ಕಣ್ಣಿಲ್ಲೇನು ? ನಿಮ್ಮೂರು ಹತ್ತಿರ ಬಂದಿತೆಂದು ಹಿಗ್ಗಿ ನಾ ರಾತ್ರಿಯೆಲ್ಲ ಎದ್ದು ಕೂತಿದ್ದೆ.'

ಅಮೃತನಿಗೆ ತಡೆಯುವದಾಗಲಿಲ್ಲ. 'ಹೌದು, ನಿನಗೆಲ್ಲ ಹಿಗ್ಗು. ನನ್ನ ಸಂಕಟ ನಿನಗೆ ಗೊತ್ತಿರುವದೇ ? ಬರಬೇಡವೆಂದರೆ ಯಾಕೆ ಬಂದಿ ? ಇನ್ನೊಂದು ಪತ್ರ ಬರೆದು ಕೇಳಲಿಲ್ಲವೇಕೆ ?' ಎಂದು ಕೋಪಾವೇಶದಿಂದ ಆದರೂ ಕೆಳದನಿ ಯಲ್ಲಿ ಆಡಿದನು. ವೀಣೆಯ ಮುಖ ಸಣ್ಣದಾಯಿತು, ನೆಲ ನೋಡುತ್ತ ಸುಮ್ಮನೆ

ನಿಂತಳು. 'ಇನ್ನೊಂದು ಗಾಡಿಗೆ ನೀ ತಿರುಗಿ ಹೋಗಬೇಕು, ಊರೊಳಗೆ ಬರುವದು ಶಕ್ಯವಿಲ್ಲ' ಎಂದು ಅಮೃತ ಗದರಿಸಿದನು. ಅವಳ ಕೊರಳುಬ್ಬಿತು; ದೈನ್ಯದಿಂದ ಅಮೃತನನ್ನು ನೋಡಿದಳು; ಕಣ್ಣುಕಟ್ಟೊಡೆಯಲಿರುವ ಕೆರೆಯಾಗಿತ್ತು. ಏನು ಆಡಬೇಕು ಅಮೃತನಿಗೆ ತಿಳಿಯದಾಯಿತು. ಇಬ್ಬರೂ ಕೆಲನಿಮಿಷ ಸುಮ್ಮನಿದ್ದರು. ಆಮೇಲೆ ಅವನೇ ಸಮಾಧಾನದಿಂದ 'ನನಗೆ ಮೊದಲು ಬರೆದು ಕೇಳಬೇಕಾಗಿತ್ತು, ವೀಣಾ,' ಎಂದನು.

'ಕೇಳುವದು ಸಾಧ್ಯವಿರಲಿಲ್ಲ. ಆಮೇಲೆ ಹೇಳುವೆ. ನನ್ನ ನಂಬು, ಅಮೃತ್' ಎಂದವಳು ತಡೆತಡೆದು ಹೇಳಿದಳು.

'ಆಗಲಿ, ನಡೆ. ಆದರೆ ಒಂದು ಮಾತು. ನೀ ನಮ್ಮ ಮನೆಯಲ್ಲಿ ಇಳಿಯಲಾರಿ. ಬರಗಾಲಸಮಿತಿಯ ಛತ್ರದಲ್ಲಿ ನಿನ್ನ ಇಳಿಸುವೆ. ಬಂಗಾಲದ ಕಾರ್ಯಕರ್ತೆ ಎಂದು ಹೇಳುವೆ. ನೀ ಇದಕ್ಕೆಲ್ಲ ಒಪ್ಪಬೇಕು.'

'ನಿನ್ನಿಚ್ಛೆ' ಎಂದು ವೀಣೆ ಅವನ ಬೆನ್ನು ಹತ್ತಿದಳು. ಟಾಂಗಾವೊಂದರಲ್ಲಿ ಅವಳನ್ನು ಹಿಂದೆ ಕೂಡಿಸಿ ತಾ ಮುಂದೆ ಕುಳಿತು ಅಮೃತನು ಅನ್ನ ಛತ್ರಕ್ಕೆ ಕರಕೊಂಡು ಹೋದನು. ಅಲ್ಲಿ ಕೋಣೆಯೊಂದರಲ್ಲಿ ಇಳಿಸಿ ಅವಳಿಗಾಗಿ ಎಲ್ಲ ವ್ಯವಸ್ಥೆ ಮಾಡಿದ. ಸಮಿತಿಯ ಮೇಲ್ವಿಚಾರಕರಾದ ಕಲ್ಯಾಣಿಯವರು ಅಲ್ಲಿಗೆ ಬಂದರು. ಅವರಿಗೆ ವೀಣಾನ ಗುರುತು ಮಾಡಿಕೊಟ್ಟನು. ಬಂಗಾಲದ ನೆರೆ ಹಾವಳಿಯ ಉರುಬಿಗೆ ಸಿಕ್ಕು ಮೊದಲು ರೋಗಿಯಾಗಿ ಆಮೇಲೆ ದಾದಿಯಾಗಿ ಕೆಲಸ ಮಾಡಿದವಳೆಂದೂ ಈಗ ವಿಜಾಪುರದ ದುಃಸ್ಥಿತಿಯನ್ನೂ ಸಮಿತಿಯ ಕಾರ್ಯಕಲಾಪಗಳನ್ನೂ ನೋಡಲು ಬಂದವಳೆಂದೂ ಹೇಳಿದನು. ಇದರಲ್ಲಿ ಸತ್ಯ-ಅಸತ್ಯ ಬೆರೆತಿದ್ದುವು. ಆತ್ಮ ಸಂರಕ್ಷಣೆಗಾಗಿ ಬೇರೆ ಗತಿಯಿರಲಿಲ್ಲ. ಛತ್ರದಲ್ಲಿ ಅವಳನ್ನು ಬಿಟ್ಟು ಮನೆಗೆ ಹೋದನು. ಕಲ್ಯಾಣಿಯವರು 'ವೀಣಾದೇವಿ'ಗೆ ಛತ್ರದ ಊಟ-ಉಡಿಗೆಯ ಏರ್ಪಾಡನ್ನು ತೋರಿಸಿದರು, ಅನೇಕ ಸಂಗತಿಗಳನ್ನು ಬಣ್ಣಿಸಿದರು. ಈ ವಿಷಯದಲ್ಲಿ ಅವಳಿಗೆ ಸಹಜವಾದ ಆಸ್ಥೆಯಿತ್ತು; ಎಲ್ಲ ಕೇಳಿ ತಿಳಿದಳು. ಆದರೆ ಅಮೃತನ ಊರಿಗೆಬಂದು ಅವನಿಂದಗಲಿ ಇರುವುದೆಂದರೆ ಹೇಗೇಗೋ ಆಗಹತ್ತಿತು. ಅವನ ತಾಯಿ-ತಂದೆ, ತಂಗಿ-ತಮ್ಮ ಇವರನ್ನು ತಾನು ನೋಡಕೂಡದೇ ? ಇದೆಂಥ ನಿರ್ಬಂಧ! ಆದರೂ ಅವನ ಮಾತನ್ನು ಮೀರಲಾರದೆ ತನ್ನ ಪ್ರಬಲ ಅಪೇಕ್ಷೆಗಳನ್ನು ತಡೆದಿದ್ದಳು.

ಊಟವಾಯ್ತು, ಆಮೇಲೆ ಸಂಜೆ ಐದರವರೆಗೆ ರಾತ್ರಿಯಲ್ಲಿ ಆಗದೆ ಉಳಿದ

ನಿದ್ದೆಯಾಯಿತು. ಅಮೃತನು ಬಂದಾಗ ಅದೇ ಅವಳು ಎದ್ದು ಮುಖ ತೊಳೆದಿದ್ದಳು ಊರನ್ನು ತೋರಿಸುವೆನೆಂದು ಅವಳೊಂದಿಗೆ ಹೊರಟು ಪೇಟೆಯಲ್ಲಿ ತಿರುಗಿಸಿದನು. ಜನವೆಲ್ಲ ಕಣ್ಣುಬಿಟ್ಟು ನೋಡುತ್ತಿದ್ದರು. ಗುರುತಿನವರು ನಮ್ಮ ಭಯವಿಲ್ಲದೆ ಯಾರಿವರೆಂದು ಕೇಳಿದರು. ತನ್ನ ಠರಾವಿಕ ಉತ್ತರವನ್ನು ಅವರಿಗೆ ಹೇಳಿ ಹೇಳಿ ಅವನು ಬೇಸತ್ತನು. ಕೊನೆಗೆ ಕಿಲ್ಲೆಯ ಹಿಂದಿನ ಬೀದಿಯಲ್ಲಿ ಹಾಯ್ದು ಅವಳೊಡನೆ ಘಟಪ್ರಭಾನದಿಯ ಕಡೆಗೆ ಹೊರಟನು. ನದಿಯ ನೋಟ ನೋಡಿ ಅವಳು ಹಿಗ್ಗಿದಳು. ನದಿಗೆ ಹೋಗಿ ಬರುತ್ತಿರುವ ಗಂಡು-ಹೆಣ್ಣಿನ ಉಡುಪು-ತೊಡಪು, ಮಾತುಗೀತು ಅವಳಿಗೆ ಹೊಸ ಅನುಭವವನ್ನು ಒದಗಿಸಿದವು. ಕ್ಷಣ ಹೊತ್ತು ತನ್ನ ಚಿಂತೆಯನ್ನು ಮರೆತು ಕಣ್ಣು ಪಿಳುಕಿಸದ ಗೊಂಬೆಯಂತಾಗಿ ಎಲ್ಲವನ್ನೂ ನೋಡುತ್ತ ನಡೆದಳು. ಇಬ್ಬರೂ ನದಿಯ ದಂಡೆಗೆ ಬಂದರು. ಅಲ್ಲಿ ಜನದ ಗದ್ದಲವಿನ್ನೂ ಇತ್ತು. ಮೂಡಣದ ಕಡೆ ನದಿಯಗುಂಟ ಕೆಲವು ಹೆಜ್ಜೆ ಹೋದರು. ಅಲ್ಲಿ ಯಾವ ಗದ್ದಲವೂ ಇರಲಿಲ್ಲ. ನೀರಲ್ಲಿ ಕಾಲು ಬಿಟ್ಟು ಇಬ್ಬರೂ ಒಂದು ಕಲ್ಲ ಬಂಡೆಯಮೇಲೆ ಕೂತರು. ಆಗ ಸೂರ್ಯನು ಮುಳುಗುವುದಕ್ಕೆ ಇನ್ನೊಂದು ಮಾರು ಮೇಲಿದ್ದನು. ನದಿಯ ನೀರ ಮೇಲೆ ಅವನ ಕಿರಣಗಳು ಹೊಳೆಯುತ್ತಿದ್ದವು. ತನ್ನ ಅಂತರಂಗವನ್ನೆಲ್ಲ ಬಿಚ್ಚಿಡಲು ಸಮಯವೀಗ ದೊರಕಿತೆಂದು ವೀಣೆಗೆ ಅದೆಷ್ಟು ಸಮಾಧಾನವಾಯಿತು! ಅಮೃತನು ಮಾತ್ರ ಅವಳ ಹೃದ್ಗತವನ್ನು ಕೇಳಬಯಸಿದರೂ ತಮ್ಮ ಮಾತನ್ನು ಯಾರಾದರೂ ಕೇಳಿ ತನ್ನ ಹರಲಿಯನ್ನು ಎಲ್ಲಿ ಮಾಡುವರೋ ಎಂಬ ಎದೆಗುದಿಯಿಂದ ಕೂಡಿದ್ದನು. ಜೊತೆಗೆ, ತನ್ನ ಮನಸ್ಸು ನಿರ್ಮಲವಾಗಿರುವಾಗ ಯಾರ ಭಯವೇನು ಎಂಬ ವೃತ್ತಿಯೂ ಇದ್ದಿತು. ಸ್ವಲ್ಪ ತಡೆದು ಅವನೇ ಮಾತಿಗೆ ಮೊದಲುಮಾಡಿದನು.

'ನೋಡು ವೀಣಾ, ನಮ್ಮೂರ ನದಿ ಎಷ್ಟು ಚೆಂದಾಗಿದೆ?'

'ಹೌದು. ಅಂತೇ ನಾನು ಓಡಿಬಂದೆ ಇದನ್ನು ನೋಡಲಿಕ್ಕೆ.'

'ಹೀಗೇನು? ನಿಮ್ಮ ದೇಶದಲ್ಲಿ ನದಿಗಳಿಗೇನು ಕಡಿಮೆ? ಇದನ್ನು ನೋಡಲು ಬರಲಿಕ್ಕೆ.'

'ಅಮೃತ್, ನಮ್ಮ ದೇಶದಲ್ಲಿ ಬೇಕಾದಷ್ಟು, ಅದೇಕೆ ಬೇಡಾದಷ್ಟು ನದಿಗಳಿರುವುವು. ಜನರಿರುವರು. ಆದರೆ ಅಲ್ಲಿ ನನ್ನವರೆಂಬವರು ಯಾರಿರುವರು? ನನ್ನ ದೇಶದಲ್ಲಿ ನಾ ಪರದೇಸಿ.'

'ಗೊತ್ತಿದೆ ವೀಣಾ. ಆದರೆ ಪರದೇಶದಲ್ಲಿ ಇನ್ನಿಷ್ಟು ಪರದೇಶಿ. ಇಲ್ಲಿ ಯಾದರೂ ಏನಿದೆ ?'

'ಇಲ್ಲಿ ನೀನಿರುವಿ, ಅಮೃತ್. ನನಗಿನ್ನೇನೂ ಬೇಡ. ನೀನಿದ್ದರೆ ಸಾಕು' ಎಂದು ಕಣ್ಣೆತ್ತಿ ನೋಡಿ ಭಾವನೆಯ ತೆರೆಗಳನ್ನು ಕಣ್ಣೋಟದ ಗುಂಟ ಹರಿಯಿ ಸಿದಳು.

'ವೀಣಾ! ಇಲ್ಲಿ ನೋಡು. ಈ ಊರಲ್ಲಿ ನಾನಿದ್ದರೂ ಇಲ್ಲದಂತೆ. ಕಾಲೀಚರಣಪುರದಲ್ಲಿ ನಿನ್ನೊಡನೆ ಸಲಿಗೆಯಿಂದ ಮಾತಾಡುತ್ತಿದ್ದೆ. ಇಲ್ಲಿ ಇದು ಬಾಗಿಲುಕೋಟೆ. ನನ್ನ ಬಾಯಿಯ ಕೋಟೆಗೆ ಬಾಗಿಲು ಹಾಕಿಬಿಟ್ಟಿದೆ. ತೆರೆಯಬೇಕಾದರೆ ಇಂಥ ಏಕಾಂತ ಸ್ಥಳಕ್ಕೆ ಬರಬೇಕು.'

'ಅಮೃತ್, ಅಷ್ಟೇಕೆ ಹೆದರಿಕೆ ? ನಿನಗೆ ತಂಗೆಂದಿರಿಲ್ಲವೆ ? ಅವರ ಕೂಡ ನೀ ಮಾತಾಡುವದಿಲ್ಲವೇನು ?'

'ಅಗಿಹೋಯಿತು, ಒಡಹುಟ್ಟಿದ ತಂಗೆಂದಿರ ಕೂಡ ಮಾತಾಡಿದರೆ ತಿರು ಗಾಡಿದರೆ ಟೀಕೆ ಮಾಡುವ ಜನ ಇಲ್ಲಿದ್ದಾರೆ. ನಿನ್ನಂಥ ತಂಗಿಯಾದರೆ ಕೇಳುವಿ ಯೇನು ? ಹೋಗಲಿ ನೀ ಯಾಕೆ ಇಷ್ಟು ಧಾವಿಸಿ ಬಂದೆ ಹೇಳು. ನನ್ನ ಪತ್ರ ಮುಟ್ಟಿತಲ್ಲವೇ ?'

'ಮುಟ್ಟಿತು. ಅಂತೇ ಬಂದೆ. ಪತ್ರ ಬರದಿದ್ದರೆ ಹಾದಿ ಕಾಯುತ್ತ ಇನ್ನೂ ಅಲ್ಲಿಯೇ ಇರತಿದ್ದೆನೇನೊ. ಅಮೃತ್, ಯಾಕೆ ಬಂದೆ ಎಂದು ಕೇಳುವಿ. ಏನು ಹೇಳಲಿ ? ಯಾಕೆ ಬದುಕಿರುವಿ ಎಂದೇಕೆ ಕೇಳಲೊಲ್ಲೆ ? ಕಾಲೀಚರಣಪುರದಲ್ಲಿ ಅಲ್ಲಿಯ ತರುಣ ಡಾಕ್ಟರರ ಮತಭೇದವಾಯಿತು. ಮೇಲಾಗಿ ನಿನ್ನ ಭಾವೀಪತ್ನಿ ಯೆಂದು ಅವರು ನನ್ನ ಚೇಷ್ಟೆ ಮಾಡಹತ್ತಿದರು...'

'ಹೀಗೊ ? ಎಂಥ ಕುಚೇಷ್ಟೆಯಿದು !'

'ಅದರಿಂದ ಜೀವ ಬೇಸತ್ತು ಅಲ್ಲಿಂದ ಹೊರಟು ಮಿದನಾಪುರಕ್ಕೆ ಬಂದೆ. ಅಲ್ಲಿ ಅಬಚಿಯ ಮನೆಯಲ್ಲಿ ಅನ್ನಕ್ಕೆ ಮೂಲವಾಗಿ ಇದ್ದೆ. ಆದರೆ ಅವರು ಬಡ ವರು. ಈಗಂತೂ ಅಕ್ಕಿ ಸಿಗದಂತಾಗಿದೆ. ಸಿಕ್ಕರೂ ಧಾರಣಿ ಮಣಕ್ಕೆ ೨೫ ರಿಂದ ೩೦ ರೂಪಾಯಿವರೆಗೆ ಏರಹತ್ತಿದೆ. ತಮ್ಮ ಹೊಟ್ಟೆಗೇ ಸಾಲದೆ ಅವರು ಒದ್ದಾಡುವಾಗ ನನಗೆ ಸುಮ್ಮನೆ ಕೂಡಿಸಿ ಎಷ್ಟು ದಿನ ಹಾಕುತ್ತಾರೆ ? ಖಾದೀ ಕೇಂದ್ರದಲ್ಲಿ ದಿನಾಲು ನೂತು ತಿಂಗಳಿಗೆ ೧೦-೧೫ ರೂಪಾಯಿ ಗಳಿಸಹತ್ತಿದೆ. ಅದೂ ಸಾಲದಾಯಿತು. ಅವರಿಗೆ ಭಾರವಾಗಿ ಅವರ ಮಕ್ಕಳ ಅನ್ನ

ಕಸಿದುಕೊಂಡು ನಾ ಬದುಕುವದು ಅಸಹ್ಯವಾಯಿತು. ನನ್ನ ಹೊಟ್ಟೆಗೆ ಹಾಕುವವರಿಲ್ಲ, ನನ್ನ ಮಾತಾಡಿಸುವವರಿಲ್ಲ, ನನ್ನ ಸುಖದುಃಖ ಕೇಳುವವರಿಲ್ಲ. ಮೂಲೆಯಲ್ಲಿ ಕೂತು ಅತ್ತರೆ ಹತ್ತಿರ ಬಂದು ಕಣ್ಣು ಒರಸಿ ಮಮತೆಯ ಸವಿ ಮಾತಿನಿಂದ ನನ್ನ ತಣಿಸುವವರಿಲ್ಲ. ಎಲ್ಲರನ್ನು ಕಳಕೊಂಡ ನಾನು, ಅಮೃತ್ ಹೆಜ್ಜೆಹೆಜ್ಜೆಗೆ ನಿನ್ನ ನೆನಸಿದೆ. ಆದರಿಂದಲೇ ಅದು ಹೇಗೋ ಜೀವ ಹಿಡಿದೆ. ಒಮ್ಮೆ ನಿನ್ನ ಬಳಿ ಬರಬೇಕೆಂದು ಹೊರಟು ಸ್ಟೇಶನ್ ವರೆಗೆ ಬಂದು ತಿರುಗಿದೆ. ಎರಡನೆಯ ಸಲ ನೀ ಬೇಡವೆಂದು ಎಷ್ಟು ಬರೆದರೂ ಇರಲಾರದೆ ಹುಚ್ಚಿಯಂತೆ ಬಂದುಬಿಟ್ಟೆ.'

'ವೀಣಾ! ತಿಳಿಯಿತು. ನಿನ್ನ ಸ್ಥಿತಿ ನನಗೆ ಗೊತ್ತಿಲ್ಲವೇ? ಆದರೆ ನನ್ನ ಸ್ಥಿತಿಯ ಬಗ್ಗೆ ನೀ ಏನಾದರೂ ವಿಚಾರ ಮಾಡಿರುವಿಯ ? ಬಡತನ ನಮ್ಮ ಮನೆಯಲ್ಲಿ ಎಷ್ಟೆಂದು ಹೇಳಲಾಸಲ್ಲ. ನಾನು ಬರಗಾಲಸಮಿತಿಯಲ್ಲಿ ಕೆಲಸ ಮಾಡುವೆನೆಂದು ತಾಯಿ-ತಂದೆ ಸಿಟ್ಟಿಗೆ ಬೇರೆ ಎದ್ದಿರುವರು. ಮೊನ್ನೆ ನನ್ನ ಕರಸಿಕೊಂಡು, ಮದುವೆ ಮಾಡಿಕೊಳ್ಳಬೇಕೆಂದೂ ಆಮೇಲೆ ಕಾಲೇಜಿಗೆ ಹೋಗಬೇಕೆಂದೂ ಅಲ್ಪರಿಯುತ್ತಿರುವರು. ಈಗ ನಿನ್ನ ನೋಡಿದರೆ ನನ್ನ ಅವಸ್ಥೆಯೆ ಆಗುವುದು.'

'ಅದೇಕೆ ಅಮೃತ್? ನಾನವರ ಸಂಶಯ ಕಳೆಯುವೆ. ನನ್ನ ಹೊಟ್ಟೆಗೆ ಅವರ ಮೇಲೆ ಭಾರ ಹಾಕುವದಿಲ್ಲ. ಎಲ್ಲಿಯಾದರೂ ದುಡದು ತಿಂದೇನು. ಆದರೆ ನೀನಿದ್ದಲ್ಲಿ ನಾನಿರಬೇಕು.'

'ಅದು ಸಾಧ್ಯವಿಲ್ಲ, ವೀಣಾ, ಎಷ್ಟೂ ಸಾಧ್ಯವಿಲ್ಲ. ನೀ ಇಲ್ಲಿಂದ ಹೊರಡಲೇ ಬೇಕು.'

'ಅದೆಲ್ಲಿಗೆ ಅಮೃತ್ ?'

'ತಿರುಗಿ ಬಂಗಾಲಕ್ಕೆ.

'ಹೂಂ. ಮೃತ್ಯುವಿನ ಮನೆಗೆ ಅನ್ನು.'

'ಹಾಗೇಕೆ ಆಡುವಿ ವೀಣಾ ?'

'ಮತ್ತೇನು? ಬಂಗಾಲದಲ್ಲಿ ಈಗ ಮೃತ್ಯು ದೇವನು ಮನೆಮಾಡಿದ್ದಾನೆ, ತನ್ನ ದೂತರನ್ನು ಪ್ರಾಂತದ ತುಂಬ ಕಳಿಸಿ ಮನುಷ್ಯಜೀವದ ಬೇಟೆ ನಡಸಿದ್ದಾನೆ. ನನ್ನ ಜಿಲ್ಹೆಯಂತೂ ನೆರೆಹಾವಳಿಯ ಕಾಲದಿಂದ ಅವನ ತುತ್ತಾಗಿದೆ. ಈಗಾಗಳೆ ಪೂರ್ವ ಬಂಗಾಲದ ಜಿಲ್ಹೆಗಳಲ್ಲಿ ಉಪವಾಸ ಬಳಲಿ ಸಾಯುವವರ ಜನಸಂಖ್ಯೆ

ಹೆಚ್ಚುತ್ತಿದೆ. ಭಯಂಕರವಾದ ಸಾವು ಊರೂರಿನ ಜನಕ್ಕೆ ಲಕ್ಷಾವಧಿಯಾಗಿ ಬರವದೆಂದು ಎಲ್ಲರೂ ಹೆದರಿದ್ದಾರೆ. ಅದರ ಕರಿನೆರಳು ನಾಡಿನ ತುಂಬ ಪಸರಿಸಿದೆ, ಅಮೃತ್. ಅಲ್ಲಿಗೆ ನನ್ನ ಕಳಿಸುವದಕ್ಕಿಂತ...'

'ಏನು ಮಾಡಬೇಕು.

ವೀಣೆ ಅಮೃತನ ಹತ್ತಿರ ಸರಿದು 'ಏನು ಮಾಡಬೇಕು ಹೇಳಲೇ? ಹೇಳಿದಂತೆ ಮಾಡುವಿಯ ?' ಎಂದು ಹರಿಯುವ ನದಿಯ ಕಡೆಗೊಮ್ಮೆ ಅವನ ಕಡೆಗೊಮ್ಮೆ ನೋಡುತ್ತ ಮುಖವನ್ನು ಗಂಭೀರ ಮಾಡಿದಳು.

'ಆದರೆ ನೀನನ್ನುವದಾದರೂ ಏನು ?'

ವೀಣೆ ಅವನ ಕೈಯನ್ನು ತಗೊಂಡು ತನ್ನ ಕೈಯಲ್ಲೊತ್ತಿ ಭಾವನಾವಶವಾಗಿ ಕುಳಿತಳು. ಹೇಳಬೇಕೆಂಬುದನ್ನು ಹೇಳಲು ಆಗಲೊಲ್ಲದು. ತನ್ನ ಕೈ ಹಿಡಿದು ತನ್ನೊಡನೆ ಸಂಸಾರ ಹೂಡಬೇಕೆಂದು ಹೇಳಬಯಸಿ ನಾಚಿಕೆಯಿಂದ ಅವಳು ಹೇಳದಿರಬಹುದೇ ಎಂಬ ವಿಚಾರವು ಅಮೃತನ ತಲೆಯಲ್ಲಿ ನುಸುಳಿತು. ಕೂಡಲೇ ಅವನು ಕೈ ಸಡಲಿಸಿಕೊಂಡು ಅತ್ತಿತ್ತ ನೋಡಿದನು. ಅಷ್ಟರಲ್ಲಿ ಮಬ್ಬುಗತ್ತಲೆಯಾಗಿತ್ತು. ನದಿಯ ಸಳಸಳವೂ ಜೀರುಂಡೆಗಳ ಚೀರಾಟವೂ ಅಲ್ಲದೆ ಇನ್ನೇನೂ ಸದ್ದಿರಲಿಲ್ಲ.

ವೀಣೆ ಮತ್ತೆ ಅವನ ಕೈಹಿಡಿದು ಹೇಳಿದಳು : 'ಅಮೃತ್, ನನಗಿನ್ನೇನು ಬೇಡ. ನನ್ನ ಆಯುಷ್ಯ ಸಾರ್ಥಕವಾಯಿತು. ಇಕೋ, ನಿನ್ನ ಕೈಯಿಂದ ನನ್ನನ್ನು ಈ ನೀರಲ್ಲಿ ಮುಗಿಸಬಿಡು. ಇದಕ್ಕಾಗಿ ನಾ ಇಲ್ಲಿಗೆ ಬಂದೆ.' ಇಷ್ಟೆನ್ನುತ್ತಲೇ ಅವಳು ಕಂಬನಿದುಂಬಿ ಇನ್ನಿಷ್ಟು ಹತ್ತಿರ ಸರಿದು ಅಮೃತನ ಎರಡೂ ಕೈಯಲ್ಲಿ ತನ್ನ ತಲೆಯಿಟ್ಟು ಅಳಹತ್ತಿದಳು. ಅಮೃತನಿಗೆ ಕರುಳು ಕಿತ್ತಿಬಂದಷ್ಟು ಕಳವಳವಾಯಿತು. ಏನು ಮಾಡಬೇಕೆಂಬುದು ತೋಚಲಿಲ್ಲ.

' ಹೀಗೆ ಮಾಡಬೇಡ ವೀಣಾ' ಸಮಾಧಾನ ತಾಳು ' ಎಂದು ಹೇಳಿ ಅವಳ ಮೊಗವೆತ್ತುವ ಪ್ರಯತ್ನ ಮಾಡುತ್ತಿದ್ದನು. ಅವಳ ಅಳುವಿನ ಸರುವು ಹಾಗೇ ನಡೆದಿತ್ತು.

ಕೆಲವು ನಿಮಿಷ ಕಳೆದವು. ಅಳುವಿನ ಭರವಿಳಿಯಿತು. ಅಮೃತ ಅವಳ ಕಣ್ಣೊರಸಿ ಕೂದಲನ್ನು ನೇವರಿಸಿ ಎತ್ತಿ ಕೂಡಿಸಿದನು. ಸ್ವಲ್ಪ ಸಂತವಾದ ಮೇಲೆ ಹೇಳಿದನು: ' ವೀಣಾ, ಹೀಗೆಲ್ಲಾ ಮಾಡಬೇಡ. ಇಲ್ಲಿರುವ ಹಟ ತೊಡಬೇಡ. ಅದರಿಂದ ಇಬ್ಬರಿಗೂ ಸುಖವಿಲ್ಲ. ನಿನ್ನ ಸಲುವಾಗಿ ನಾನೆಲ್ಲ

ವ್ಯವಸ್ಥೆ ಮಾಡುತ್ತೇನೆ. ನನ್ನ ಮೇಲೆ ನಿನಗೆ ನಂಬಿಕೆ ಇರುವದಲ್ಲವೇ ?'

'ಅಮೃತ್, ನಂಬಿಕೆಯೆಂದೇನು ಕೇಳುವಿ? ಈ ಹಾಳು ಜಗತ್ತಿನಲ್ಲಿ ನೀನೇ ನನಗೆ ಆಧಾರ. ನನ್ನ ತಾಯಿ–ತಂದೆ ಅಣ್ಣ–ಅಕ್ಕ ಎಲ್ಲ ನೀನೇ.'

'ಹಾಗಾದರೆ ನಾ ಹೇಳಿದಂತೆ ಕೇಳು. ನಾಳೆ ಕಲಕತ್ತೆಯ ರಾಮಕೃಷ್ಣಾಶ್ರಮದ ಸ್ವಾಮಿಜಿಯವರಿಗೆ ತಾರು ಕೊಟ್ಟು ಅಲ್ಲಿಯ ಸೇವಾವಿಭಾಗಕ್ಕೆ ನಿನ್ನ ತಗೊಳ್ಳಬೇಕೆಂದು ಬಿನ್ನವಿಸುತ್ತೇನೆ. ಅವರ ಉತ್ತರ ಬಂದ ಮೇಲೆ ನೀಇಲ್ಲಿಂದ ಹೊರಡು.'

'ಅಂದರೆ ? ನಿನ್ನನ್ನು ಬಿಟ್ಟು ನಾನಿರಬೇಕೆ ?'

'ಇರಬೇಕು. ಇಲ್ಲಿದ್ದರೂ ನೀ ನನ್ನನ್ನು ಬಿಟ್ಟೇ ಇರಬೇಕಾಗುತ್ತದೆ. ಅದೇ ಅಲ್ಲಿದ್ದರೆ ನಾ ಇನ್ನೊಮ್ಮೆ ನಿನ್ನ ಹತ್ತಿರ ಕಲಕತ್ತೆಗೆ ಬಂದರೂ ಬರಬಹುದು.'

'ಬರಬಹುದೇ? ನನ್ನ ಸಮಾಧಾನಕ್ಕೆಂದು ಹೇಳುವಿ. ನೀ ಬರುವದಿಲ್ಲ ನನಗೆ ಗೊತ್ತು.'

'ಮುಂದೇನಾಗುವುದೋ ಯಾರಿಗೆ ಗೊತ್ತು ? ಈಗಂತೂ ನೀ ಹೋಗಲೆಬೇಕು.'

'ಆದರೆ ಅಮೃತ್, ಹೀಗೆ ಹೇಳುವುದು ನಿನಗೆ ಬಹಳ ಸುಲಭ. ಬದುಕುವದಾದರೆ ಯಾವಾಗಲೂ ನಿನ್ನ ಜೊತೆಗಿರಬೇಕೆಂದು ನನಗೆನಿಸುತ್ತದೆ.'

'ಅಂದರೆ ? ನಿನ್ನ ಮನಸ್ಸಿನಲ್ಲಿ ಇರುವದಾದರೂ ಏನು? ಮದುವೆಯಾಗದೆ ನಾವು ಕೂಡಿ ಹೇಗೆ ಇರಬಲ್ಲೆವು ?

'ಹಾಗಾದರೆ...ಅಮೃತ್...'

ವೀಣೆ ಕಣ್ಣಗಲಿಸಿ ಅಮೃತನ ಮುಖವನ್ನು ನಿಟ್ಟಿಸಿ ಏನನ್ನೋ ಬೇಡುವಂತಾದಳು.

'ಸಾಕು ವೀಣಾ, ನಿನ್ನ ಹುಚ್ಚು ಮೇರೆವರಿಯಿತು. ನನ್ನ ತಲೆಯಲ್ಲಿ ಇಲ್ಲದ್ದು ಹಾಕಬೇಡ. ಇಬ್ಬರೂ ಅದರಲ್ಲಿ ಕೊಚ್ಚಿಹೋದೇವು.' ಈ ಸರಣಿಯಲ್ಲಿ ಮಾತು ಮುಂದುವರಿಸುವುದು ಅಮೃತನಿಗೆ ಸರಿಕಾಣಲಿಲ್ಲ. ಅಲ್ಲದೆ ಅವನು ಕತ್ತಲೆ ಹೆಚ್ಚುತ್ತಿರುವುದನ್ನು ನೋಡಿ ದಾರಿ ಕಾಣದಂತಾದೀತೆಂದು ಎದ್ದು ನಿಂತು 'ಹೂ., ಏಳಿನ್ನು' ಎಂದು ಅವಳೊಡನೆ ಮೆಲ್ಲಗೆ ನದಿಯ ಹಾದಿಗೆ ಬಂದನು. ಇಬ್ಬರೂ ಭಾವವಿವಶರಾಗಿದ್ದರು. ಆದರೆ ಅಮೃತನು ಬೇಗ ಸ್ತಿಮಿ

ತಕ್ಕೆ ಬಂದು ಆಗಳೆ ಉದಯವಾದ ಭಾವವನ್ನು ಹೊಡೆದೋಡಿಸಿ, 'ಹೂ, ನಾ ಹೇಳಿದಂತೆ ಕೇಳುವಿಯಾ ?' ಎಂದನು. ವೀಣೆ ಆಗಲಿ ಎಂದು ದನಿಯೆಳೆಯುತ್ತ ಒಪ್ಪಿದಳು. ಸರಿ, ನಾಳೆ ತಾರು ಕೊಡುವೆನೆಂದು ಅವನು ಹೇಳಿದನು.

ಅಮೃತನು ಅವಳನ್ನು ಅನ್ನಛತ್ರದಲ್ಲಿ ಬಿಟ್ಟು ತನ್ನ ಮನೆಗೆ ಬಂದನು: ಅವನ ಮಟ್ಟಿಗೆ ಕತ್ತಲೆಯಲ್ಲಿಯೂ ಮಿಣುಕು ದೀಪ ಕಂಡಹಾಗೆ ಆಯಿತು. ಮನೆಯಲ್ಲಿ ಸುದ್ದಿ ಹತ್ತಿತ್ತು. ಯಾರೋ ಶಂಭುರಾಯರಿಗೆ ಹೇಳಿರಬೇಕು. ಆ ಹೆಂಗಸು ಯಾರೆಂದು ಕೇಳಿದರು. ಅಮೃತನು ಅವಳಿಗೆ ತಾನು ಕಟ್ಟಿದ ವೇಷವನ್ನು ವರ್ಣಿಸಿ ಹೇಳಿದನು. ಇರಬಹುದೆಂದು ಅವರು ಸುಮ್ಮಗಾದರು. ಆದರೆ ಮದುವೆಯ ಬಗ್ಗೆ ಮತ್ತೆ ಮಾತೆತ್ತಿದರು. ವಕೀಲ ಮಾಧವರಾಯರು ದಿನಾಲು ಕರಸಿ ಕೇಳುತ್ತಿದ್ದ ಕಾರಣ ಶಂಭುರಾಯರು ಸುಮ್ಮನಿರುವದು ಶಕ್ಯ ವಿರಲಿಲ್ಲ. ಮೊದಲು 'ಸರ್ವಥಾ ಬೇಡ' ಎಂದವನು ಈಗ 'ವಿಚಾರ ಮಾಡತೇನೆ' ಎಂದು ಹೇಳಿದನು. ಅದು ಅವರ ಸಮಾಧಾನಕ್ಕಾಗಿ ಎಂಬುದು ಅವರಿಗೆ ಹೊಳೆಯಲಿಲ್ಲ. ಬೇಗ ವಿಚಾರ ಮಾಡಿ ತಮಗೆ ಅನುಕೂಲ ಅಭಿಪ್ರಾಯವನ್ನು ಕೊಡುವನೆಂದು ಆಶಿಸಿದರು. ಮರುದಿನ ಅಮೃತನು ಕಲಕತ್ತೆಗೆ ತಾರು ಕೊಟ್ಟು ವೀಣೆಯನ್ನು ಕಂಡು ಅವಳಿಗೆ ಅದನ್ನು ತಿಳಿಸಿದನು. ಅವಳ ಮೋರೆ ಸಪ್ಪಗಾಯಿತು; ಆದರೆ ಒಪ್ಪದೆ ಗತಿಯಿರಲಿಲ್ಲ. ಒಂದು ಮಾತಿಗಾಗಿ ಮಾತ್ರ ಹಟ ತೊಟ್ಟಳು. ಮನೆಯನ್ನೂ ಮನೆಯ ಜನವನ್ನೂ ತೋರಿಸಬೇಕು, ಇಲ್ಲದಿದ್ದರೆ ಇಲ್ಲಿಂದ ಕದಲುವದಿಲ್ಲ ಎಂದು. ಅಮೃತ ಮನೆಗೆ ಹೋಗಿ ಕೇಳಿ ಬಂದು ಮಧ್ಯಾಹ್ನ ಊಟಕ್ಕೆ ಅವಳನ್ನು ಕರಕೊಂಡು ಹೋದನು. ಅವನ ತಾಯಿ ತಂದೆಗೆ ಅವಳು ಬಾಗಿ ನಮಸ್ಕಾರ ಮಾಡಿದಳು. ಎಲ್ಲ ಹುಡಗರನ್ನೂ ನೋಡಿ ಸಂತೋಷ ಪಟ್ಟಳು. ಅವಳ ಮಾತು ಅಮೃತನ ಹೊರತು ಯಾರಿಗೂ ಚೆನ್ನಾಗಿ ತಿಳಿಯದು. ಹೆಚ್ಚಾಗಿ ಸನ್ನೆಯಿಂದ ನಡೆಯಿತು. ಅಂದಿನ ಊಟ ಅಮೃತದಷ್ಟು ಅವಳಿಗೆ ರುಚಿಯಾಯಿತು. ಯಾಕೆಂದರೆ ಅದು ಅಮೃತನ ಮನೆಯೂಟ. ತಿಳಿದಷ್ಟು ತಿಳಿಯಲಿ ಎಂದ ಅಮೃತನ ತಾಯಿಯ ಮುಂದೆ ಕೂತು ಹಿಂದಿಯಲ್ಲಿ ತನ್ನ ಕಥೆ ಹೇಳುತ್ತ, ಅಮೃತನ ಆರೈಕೆಯಿಂದ ತಾನು ಸಾವಿನ ಕೈಯಿಂದ ಪಾರಾಗಿದ್ದ ಸಂಗತಿಯನ್ನೂ ಅವನ ಸ್ನೇಹಬಲದಿಂದಲೇ ಬದುಕಿದ್ದನ್ನೂ ಕಣ್ಣೀರು ತಂದು ಹೇಳಿದಳು. ಆಗ ಯಾವುದೋ ಸಂಶಯದ ಊಹೆ ಪಾರ್ವತಿಬಾಯಿಯ ಮನದಲ್ಲಿ ತಲೆದೋರಿತು. ಆದರೆ ಅದಕ್ಕೆ ಬಹಳ

ಹೊತ್ತು ಅವಳು ಆಸರೆ ಕೊಡಲಿಲ್ಲ. ವೀಣಾ ಸಂಜೆಯವರೆಗೆ ಅಲ್ಲಿದ್ದು ಹೊರಡು ವಾಗ ತಾನು ತಂದು ಮಿಠಾಯಿಗಳನ್ನು ಹುಡುಗರಿಗೆ ಕೊಟ್ಟು ಇಳಿದ ಜಾಗಕ್ಕೆ ಹೋದಳು.

ಮರುದಿನ ಸಂಜೆಯೊಳಗಾಗಿ ಅಮೃತನ ತಾರಿಗೆ ಸ್ವಾಮಿಜಿಯವರಿಂದ ಉತ್ತರ ಬಂದಿತು. ವೀಣೆಯನ್ನು ಕೂಡಲೇ ಕಳಿಸಬೇಕೆಂದು ಬರೆದು ಅವಳ ಪ್ರವಾಸದ ವೆಚ್ಚಕ್ಕೆಂದು ಐವತ್ತು ರೂಪಾಯಿಗಳನ್ನು ತಾರಿನಿಂದ ಕಳಿಸಿದ್ದರು. ಅವನಿಗೆ ಸ್ವಾಮಿಜಿಯವರ ಬಗ್ಗೆ ಕೃತಜ್ಞತೆ, ಆದರ ಹೆಚ್ಚಿದವು. ವೀಣೆಗೆ ಎಲ್ಲ ಹೇಳಿದನು. ಅವಳಿಗೆ ಹೋಗಲು ಮನಸ್ಸಿಲ್ಲ; ಆದರೆ ಹೋಗದೆ ವಿಧಿಯಿಲ್ಲ. ಅವನ ಹೇಳಿಕೆಯಂತೆ ರಾತ್ರಿಗಾಡಿಗೆ ಹೊರಡುವದನ್ನು ಗೊತ್ತು ಮಾಡಿದಳು. ಛತ್ರದ ಕೆಲಸಗಾರರ ನಿರೋಪ ತಗೊಂಡಳು. ಅವನು ಅವಳನ್ನು ಸ್ಟೇಷನ್ನಿಗೆ ಒಂದು ಗಂಟೆ ಮುಂಚಿತವಾಗಿ ಕರಕೊಂಡು ಹೋಗಿ ಅಲ್ಲಿಯ ಬೆಂಚಿನಮೇಲೆ ಕೂತುಕೊಂಡು ಎಷ್ಟೋ ಹಿತದ ಮಾತು ಹೇಳಿದನು. ತಾನು ಎಲ್ಲಿದ್ದರೂ ಅವಳನ್ನು ನೆನೆಸುತ್ತಿರುವೆನೆಂದನು. ಸ್ವಾಮಿಜಿಯವರು ತನಗಿಂತ ಮಿಗಿಲಾಗಿ ಅವಳನ್ನು ನೋಡಿಕೊಳ್ಳುವರೆಂದನು. ಎಲ್ಲದಕ್ಕೂ ಧಾರೆಯಾದ ಕಂಬನಿಯೇ ಅವಳ ಉತ್ತರ. ಅಮೃತನನ್ನು ಬಿಟ್ಟು ಬಹುದೂರ ನಿರ್ಜನವಾದ ದಟ್ಟಡವಿ ಯಲ್ಲಿ ಹೊರಟ್ಟಿದ್ದೇನೆ, ಇನ್ನೆಂದಿಗೂ ಅವನನ್ನು ಕಾಣಲಾರೆ ಎಂಬ ಭಾವೋ ದ್ರೇಕವು ಅವಳನ್ನು ಆವರಿಸಿಬಿಟ್ಟಿತ್ತು. ಗಾಡಿ ಬಂತು; ನಿರ್ವಾಹವಿಲ್ಲದೆ ಭಾರವಾದ ಹೃದಯದಿಂದ ಗಾಡಿಯಲ್ಲಿ ಕುಳಿತುಕೊಂಡಳು; ಗಾಡಿ ಬೇಗ ಹೊರಡಲಿಲ್ಲ. ಅಷ್ಟೇ ಅಮೃತನನ್ನು ನೋಡಲು ದೊರೆಯಿತೆಂದು ಅವಳಿಗೆ ಹಿರಿಹಿಗ್ಗು. ಈ ಗಾಡಿ ಇಲ್ಲಿಯೇ ಯಾಕೆ ನಿಂದಿರಬಾರದೆಂದು ಅವಳಿಗೆ ತೋರಿತು. ಇಷ್ಟರಲ್ಲಿಗಾರ್ಡನ ಸೀಟಿ ಸಿಳ್ಳುಹಾಕಿತು; ಗಾಡಿ ಸರಿಯಿತು. ಅಮೃತನ ಕೈಯನ್ನು ಗಟ್ಟಿಯಾಗಿ ಹಿಡಿದು ಕುಲುಕಿ, 'ನೀ ಹೇಳಿದಂತೆ ಹೊರಟೆರತೇನೆ; ನಾಲ್ಕು ದಿನಕ್ಕೊಮ್ಮೆ ಪತ್ರ ಬರೆ ಅಂದರೇ ನಾ ಬದುಕುವೆ' ಎಂದು ಹೇಳು ತ್ತಿರುವಾಗ ಎರಡೂ ಕಣ್ಣಿನಿಂದ ದಳದಳ ಅಶ್ರುಗಳ ತಡಸಲವಿಳಿಯಿತು. ಅವನು 'ಒಳ್ಳೇದು' ಎಂದನು. 'ನೀ ಒಮ್ಮೆಯಾದರೂ ಕಲಕತ್ತೆಗೆ ಬರಬೇಕು' ಎಂದು ಗಾಡಿ ತುಸು ಮುಂದೆ ಹೋದಮೇಲೆ ಕೂಗಿ ಹೇಳಿದಳು. ಅವನು ಅದಕ್ಕೂ 'ಆಗಲಿ' ಎಂದನು. ಕಣ್ಮರೆಯಾಗುವವರೆಗೆ ಇಬ್ಬರೂ ನೋಡುತ್ತಿದ್ದರು. ಅಮೃತನ ಅಂತಃಕರಣ ಉಕ್ಕಿ ಬಂದಿತು, ಅವಳು ಕಾಣದಾದಮೇಲೆ ತಿರುಗಿ

ಮನೆಗೆ ಹೋಗುವಾಗ ಅವನು ಕಂಬನಿಯಿಂದ ದಾರಿಯನ್ನು ಸಿಂಪಡಿಸುತ್ತಲಿದ್ದನು. 'ನನ್ನದೇ ನನಗೆ ರಗಡಾಗಿರುವಾಗ ಕೆಟ್ಟ ದೈವ ಈ ಸಮಸ್ಯೆಯನ್ನು ಯಾಕೆ ನನ್ನ ಕೊರಳಿಗೆ ಹಾಕಿತು? ನನ್ನ ಮರುಕವೇ ನನಗೆ ಮುಳುವಾಯಿತೇ?' ಎಂಬ ಉದ್ಗಾರಗಳು ಅವನಿಂದ ಹೊರಬಿದ್ದವು. ಮನೆ ಸೇರಿ ಮಲಗಿದನು; ಆದರೆ ವೀಣೆಯ ಸಂಬಂಧವಾದ ವಿಚಿತ್ರ ಕನಸುಗಳಿಂದ ಅವನ ನಿದ್ದೆಯೆಲ್ಲ ಭಂಗವಾಯಿತು.

ವಕೀಲ ಮಾಧವರಾಯರ ಪ್ರಚಾರತಂತ್ರ ಮುಂದರಿಯಿತು. ಇನ್ನೊಮ್ಮೆ ಶಂಭುರಾಯರನ್ನು ಅವರ ಮನೆಯಲ್ಲಿಯೇ ಕಂಡು ಮದುವೆಯ ವಿಷಯ ಗಟ್ಟಿ ಮಾಡಿಕೊಂಡು ಹೋಗಬೇಕೆಂದು ಮುಂಜಾನೆ ಹೋದರು. ಮಾಮೂಲಿಯ ಮಾತುಗಳಾದ ಮೇಲೆ 'ಏನಂತಾನ ನಿಮ್ಮ ಚಿರಂಜೀವ?' ಎಂದು ವಿಷಯ ತೆಗೆದರು.

ಆಗವನು ಮನೆಯಲ್ಲಿರಲಿಲ್ಲ. ಸಮಿತಿಯ ಕಚೇರಿಗೆ ಹೋಗಿದ್ದನು. ಶಂಭುರಾಯರು ಸೋತ ದನಿಯಲ್ಲಿ ಹೇಳಿದರು; 'ಏನ್ ರಾಯರ. ನಿಮಗ ಹೇಳಲಿಕ್ಕೆ ನನಗ ನಾಚಿಕಿ ಬರತದ. ಇನ್ನೂ ಸರಳ ಉತ್ತರಾನ್ಸ ಕೊಡವಲ್ಲ. ಈ ಕಾಲದ ಹುಡಗೂರು, ಹೇಳಿದಂಗ ಕೇಳೂದಿಲ್ಲ.'

'ಅದನ್ಯಾಕ ಹಚಿಗೋತೀರಿ ಶಂಭುರಾಯರ? ನೀವು ಹೇಳುವಷ್ಟು ಹೇಳಿದಿರಿ. ಇನ್ನ ಮುಂದಿನದು ಅವನ ನಸೀಬ. ಏನ ಮದವೀನ್ಸ ಒಲ್ಲಂತಾನೊ ಏನಮುಂದ ಮಾಡಿಕೋತೀನಿ ಅಂತಾನೊ?'

'ಏನೂ ಹೇಳವಲ್ಲ. ಮದವಿ ಮಾತ ತಗಿಯೂಣ ಮಾರಿ ಇಷ್ಟು ಮಾಡಿ ಕೂಡತಾನ. ಭಾಳ ಗಂಟುಬಿದ್ದರ, ಒಮ್ಮೆ ಹೇಳೀನಲ್ಲ, ಪರೀಕ್ಷಾ ಆಗಿ ಡಾಕ್ಟರ ಆಗೂತನಕ ಮದವಿ ಸುದ್ದಿ ತಗೀಬ್ಯಾಡರಿ ಅಂತ ಅಂತಾನ.'

'ಓಹೋ. ಬರಾಬರಿ. ಈಗಿನ ಎಲ್ಲಾ ಹುಡುಗರ ಯುಕ್ತಿ ಇದು. ನನಗ ಗೊತ್ತಿಲ್ಲೇನು? ಆದರ ಪರೀಕ್ಷಾ ಆಗೋದಕ್ಕು ದುಡ್ಡರ ಬೇಕಂತಾನೋ ಬ್ಯಾಡಂತಾನೊ? ಕಡೀಕ ಪರೀಕ್ಷಾನೂ ಇಲ್ಲ, ಮದವೀನೂ ಇಲ್ಲ ಆದೀತು.'

'ನೀವು ಹೇಳೂದು ವಾಜಮಿ. ಅವಗ ಕಲಿಸಲಿಕ್ಕೆ ಕೊಡಬೇಕಂದರ ನನಗಿನ್ನು ತಾಖತಿಲ್ಲ. ವರದಕ್ಷಿಣೆ ಬಂದರ್ಸ ಅದು ಶಕ್ಯ ಆಗೋ ಮಾತು. ಏನ ಹೇಳಲಿ ರಾಯರ. ಗಿಳಿಹಂಗ ಎಲ್ಲ ಕೂಡಿಸಿಕೊಂಡು ಹೇಳಿದೆ. ಏನ ತಲ್ಯಾಗ ಹೊಕ್ಕದೋ ಏನೋ ಇದರ ಸಂಬಂಧಿ ಮಾತೇ ಆಡೂದಿಲ್ಲ. ಈಗಂತೂ ಎರಡು

ದಿನ ಅದೇನೋ ಬಂಗಾಲದ ಬರಗಾಲದಾಗ ಕೆಲಸ ಮಾಡುವಾಕಿ ಅಂತ ಒಬ್ಬ ಹೆಂಗಸು ಬಂದಿದ್ದಳು. ಆಕಿ ಜೋಡಿ ತಿರಗಾಡತಿದ್ದ. ಇಂತಾ ಕಾರಭಾರ ಹೆಚ್ಚಾಗ್ಯಾವ ಆತು.'

ಮಾಧವರಾಯರಿಗೂ ಈ ವಿಷಯ ತಿಳಿದಿತ್ತು. ತಾವಾಗಿ ಯಾಕೆ ತ್ರೆಗೆಯಬೇಕೆಂದು ಈವರೆಗೆ ಅವರು ಸುಮ್ಮಗಿದ್ದರು. ಈಗ ಅನಾಯಾಸವಾಗಿ ಚುಂಗು ಸಿಕ್ಕಿತು, ಇನ್ನು ಬಿಡುತ್ತಾರೇ? 'ಶಂಭುರಾವ್, ಆ ಹೆಂಗಸು ಬಂದದ್ದು ನಾನೂ ಕೇಳೀನಿ. ದೂರದಿಂದ ಇಬ್ಬರೂ ಕೂಡಿ ಹೋಗೋದು ನೋಡೀನಿ. ನೀವು ತಪ್ಪುತಿಳಕೊಳ್ಳದಿದ್ದರ ಒಂದು ಮಾತು ಹೇಳತೀನಿ.'

'ಏನದು ಹೇಳರಿ. ನೀವು ಮನೀ ಹಿರಿಯರ್ಹಾಂಗ ಇದ್ದೀರಿ.'

'ಏನಿಲ್ಲ. ನನಗ ಒಂದು ಸಂಶಯ ಬರತದ. ನಿಮ್ಮ ಹುಡುಗ ಅತ್ತಲಾಗ ಹೋಗಿದ್ದನಲ್ಲ, ಆಗ ಈ ಹುಡುಗೀ ಮ್ಯಾಲ ಪ್ರೇಮ ಮಾಡತಿರಬೇಕು. ಇದಕ್ಕs ಇಲ್ಲಿ ಕರಸಿಕೊಂಡಂಗ ಕಾಣತದ. ಬರಗಾಲ ಕೆಲಸಗಿಲಸ ಎಲ್ಲಾ ಸೋಂಗಿರಬೇಕು ಅಂದೆ.'

'ಹಿಂಗಂತೀರಾ ?' ಎಂದು ಶಂಭುರಾಯರು ಕಣ್ಣು ಅಗಲಿಸಿ ಹಣೆಗೆ ಮಡಿಕೆ ಹಾಕಿದರು.

'ನಾ ಹೇಳಿದ್ದು ಸುಳ್ಳಿರಬಹುದು. ಆದರ ನನಗ ಏನೋ ಅನಸತದ ನೋಡರಿ. ಇಲ್ಲಂದರ ನೀವು ಇಷ್ಟು ಪರಿಯಿಂದ ಹೇಳಿದರೂ ತನ್ನ ಹಿತದ ದಸಿಂದ ಮಾಡೂ ಮದವಿಗೆ ಯಾವ ಹುಡುಗ ಒಲ್ಲೆನತಿದ್ದ? ಆ ಹುಡಗಿ ಯಾವ ಜಾತಿಯಾಕ್ಯೋ ಏನೊ ? ಒಂದ ಹೋಗಿ ಒಂದಾದೀತು. ಲಗೂನೆ ಮದವಿ ಮಾಡಿಬಿಡೋದು ನೆಟ್ಟಗಲ್ಲs ?'

ಶಂಭುರಾಯರಿಗೆ ಎಲ್ಲಾ 'ಪಟಾಯಿಸಿ'ದಂತಾಯಿತು. ನೀವು ಹೇಳೂದು ಖರೇ ಕಾಣಸ್ತದ. ಆಕಿನ್ನ ಮನ್ನೆ ಮನಿಗೆ ಕರಕೊಂಡು ಬಂದಿದ್ದ. ಆಕಿ ಮ್ಯಾಲೆ ಮನಸ್ಸು ಕೂತಂಗ ಕಾಣಸ್ತದ. ಏನಿಲ್ಲ. ಈವತ್ತ ಅವಗ ಝುಬರಿಸಿ ಹೇಳಿ ಮದವಿಗೆ ಒಪ್ಪಿಸಿ ಬಿಡತೀನಿ. ಇನ್ನ ಅಣ್ಣ ಅಪ್ಪ ಅಂದು ನಡಿಯೂದುಲ್ಲ.

'ಅದೇನು ಮಾಡಬೇಕು ನೀವು ನೋಡಿರಿ. ಮತ್ತ ಅವ ಕಬೂಲಾದರ ಒಂದೆರಡು ದಿನದಾಗ ನಮ್ಮ ಹುಡಗಿನ್ನ ನೋಡಲಿಕ್ಕೆ ನೀವೆಲ್ಲಾ ಕೂಡಿ ಬರ್ರಿ. ಗುಣ ಎಲ್ಲಾ ಕೂಡಿ ಬರತಾವ. ಪಸಂತಾದರ ಮೂಹೂರ್ತ ನೋಡಿ ಮಾಡೋಣ. ಆಗದಿದ್ದರ ಮತ್ತೊಂದು ನೋಡಿರಂತೆ. ನಮ್ಮದೇ ತಗೊಳ್ಳ

ಬೇಕೆಂದು ನಮ್ಮದೇನು ಹಟ ಇಲ್ಲ ಆ.'

'ಅದು ಬರಾಬರಿ. ನೀವು ಹೇಳಿದ್ಹಂಗ ಮಾಡೋಣ.'

ಮಾಧವರಾಯರು ಹೊರಡಲೆದ್ದರು. ಶಂಭುರಾಯರು ಬೀದಿಯ ತುದಿಯ ವರೆಗೆ ಹೋಗಿ ಕಳಿಸಿಬಂದರು.

ತಿರುಗಿ ಬಂದ ಮೇಲೆ ಶಂಭುರಾಯರು ನಡೆದ ಸಂವಾದವನ್ನು ಮನೆ ಯಾಕೆಗೆ ಹೇಳಿದರು. ಅಮೃತನ ಮೇಲೆ ಸಿಟ್ಟುಬೆಂಕಿಯಾದರು. ಊಟದ ಹೊತ್ತಿಗೆ ಅವ ಬರಲು ಮಾತಿನ ಕಿಡಿ ಹಾರಹತ್ತಿದವು. ಅದೆಲ್ಲಾ ಸುಳ್ಳು ಆರೋಪವೆಂದು ಅಮೃತನು ಸಾಧಿಸಿದನು. ಶಂಭುರಾಯರು ಬಿಡಲಿಲ್ಲ. ಪಾರ್ವತಿ ಬಾಯಿ ಮಧ್ಯಸ್ತಿಕೆ ಮಾಡಿ ನೋಡಿದಳು; ಬಗೆಹರಿಯಲಿಲ್ಲ. ಊಟವೆಲ್ಲ ಕಣ್ಣೀರಿನ ಉಪ್ಪು ಬೆರಸಿಕೊಂಡು ನಡೆಯಿತು. ರಾತ್ರಿಯವರೆಗೆ ಮನೆಯ ವಾತಾವರಣ ಹೀಗೆ ಕದಡಿತ್ತು. ಅಮೃತ ಮುಸುಗು ಹಾಕಿ ಮಲಗಿಬಿಟ್ಟಿದ್ದನು. ತನ್ನ ಮೇಲಿನ ಆಪಾದನೆಯನ್ನು ಹೇಗೆ ಇಲ್ಲದಾಗಿಸಬೇಕೆಂದು ಯೋಚಿಸಿದನು. ಯಾವ ಯೋಚನೆಯೂ ತೋಚಲಿಲ್ಲ. ಕಡೆಗೆ ಹೇಳಿದನು, 'ನಿಮ್ಮ ಸಂಶಯ ಕಳೆಯುವ ಸಲುವಾಗಿ ಮದವಿಗೆ ಒಪ್ಪತೀನಿ, ಆದರೆ ನಾ ಒಪ್ಪಿದ ಹುಡಗಿ ಮಾತ್ರ ಗೊತ್ತುಮಾಡಬೇಕು' ಎಂದು. ಅವ್ವ-ಅಪ್ಪ ಅದಕ್ಕೆ ಸಂತಸದಿಂದ ಹೂಗುಟ್ಟಿದರು. ಮರುದಿನ ಮಾಧವರಾಯರಿಗೆ ಇದನ್ನು ತಿಳಿಸಲು ತಮ್ಮ ವಕೀಲಿವೃತ್ತಿ ದಿಗ್ವಿಜಯವಾಯಿತೆಂದು ಅವರು ಉಬ್ಬಿ ಮುಂದಿನ ಸಿದ್ಧತೆ ನಡೆಸಿದರು.

ನಾಳೆ ಬೆಳಗ್ಗೆ ಮಗಳನ್ನು ನೋಡಲಿಕ್ಕೆ ಶಂಭುರಾಯರು ಮಗ ಮುಂತಾದ ಪರಿವಾರಸಹಿತ ಬರುವರೆಂದು ಮಾಧವರಾಯರು ತಮ್ಮ ಹೆಂಡತಿಗೆ ಹೇಳಿದರು; ಉತ್ತಮ ಫರಾಳ ಮಾಡಬೇಕೆಂದು ಆಜ್ಞಾಪಿಸಿದರು. ಬೇಡಿದ ಎಲ್ಲ ಸಾಮಾನು ತರಬೇಕೆಂದು ಕಾರಕೂನನಿಗೆ ಹುಕುಮು ಕೊಟ್ಟರು. ಹುಡುಗ ಬಲೆಯಲ್ಲಿ ಬೀಳುವನೆಂದು ಅವರಿಗೆ ಖಾತ್ರಿ ಆಗಿತ್ತು. ಬೇಕಾದಷ್ಟು ವರದಕ್ಷಿಣೆ, ಉತ್ತಮ ಉಪಚಾರ ಇವುಗಳ ಮೋಹಕ ಎಳೆಗಳಿಂದ ಆ ಬಲೆಯನ್ನು ಹೆಣೆದರಾಯಿತು. ಎರಡಕ್ಕೂ ಅವರಲ್ಲಿ ಕೊರತೆಯಿರಲಿಲ್ಲ. ದೇಶಕ್ಕೆ ಬರಗಾಲ ಬಂದಿರ ಬಹುದು,ಆದರೆ ಅವರ ಮನೆಯ ಒಳನಾಡಿನಲ್ಲಿ ಎಲ್ಲ ಸುಭಿಕ್ಷವೇ.ಗಂಡ-ಹೆಂಡತಿ ಇಬ್ಬರೂ ಗೊತ್ತುಮಾಡಿದ ಹಾಗೆ ಒಂದು ಸಮಾನ ಧೋರಣೆಯನ್ನು ಮಾತ್ರ ಅನುಸರಿಸುತ್ತಿದ್ದರು. ಅದೆಂದರೆ ಬಂದವರ ಹೋದವರ ಮುಂದೆ ಬರಗಾಲದ

ನಿಟ್ಟುಸಿರು-ಮಾತುಕತೆ ನಡಸುವುದು. ಆದರೆ ಯಾವುದಕ್ಕೂ ಕೊರತೆಯಾಗದಂತೆ ಮನೆಯಲ್ಲಿ ಎಲ್ಲದರ ಸಂಗ್ರಹಮಾಡುವುದು. ಈ 'ದ್ವಿದಳ ರಾಜ್ಯಪದ್ಧತಿ'ಯಿಂದ ಅವರಂತೆ ಇನ್ನೂ ಅನೇಕ ಪ್ರತಿಷ್ಠಿತರು ಸಂಸಾರ ಸಾಗಿಸಿದ್ದರು. ಅಂದ ಮೇಲೆ ಇವರು ಮಾಡಿದ ತಪ್ಪೇನು? ಅವರ ಮನೆಯು ಕೋಟೀಖೋಲಿ ನೋಡು ವಂಥದು. ಆದರೆ ನೋಡಲಿಕ್ಕೆ ಬೆಳಕೆಲ್ಲಿ? ಎಲ್ಲ ಕಡೆಗೆ ಕತ್ತಲೆಯು ಏರ್ಪಾಡಿತ್ತು! ಯಾವುದು ಎಲ್ಲಿ ಎಂಬುದನ್ನು ಒಡೆಯ-ಒಡತಿ ಇಬ್ಬರೇ ಬಲ್ಲರು. ಅಲ್ಲಿಯ ಹಗೆಯಲ್ಲಿ ಬೇಕಾದಷ್ಟು ಜೋಳವಿತ್ತು. ಅಕ್ಕಿಗೋದಿಗಳ ಡಬ್ಬಿಗಳಂತೂ ಸಾಲು ಸಾಲಾಗಿ ಸೆಲ್ಫಿನಲ್ಲಿ ನಿಂತಿದ್ದವು. ಸಿಕ್ಕಲ್ಲಿಂದ ಸಂಪಾದಿಸಿದ ಸಕ್ಕರೆ, ರವೆ, ಪಿಠ್ಠಿ ಮುಂತಾದ ದುರ್ಮಿಳವಾದ ಪದಾರ್ಥಗಳ ಸಂಗ್ರಹವು ಒಂದು ಕಡೆಗಿತ್ತು. ಎಲ್ಲ ತರದ ಬೇಳೆಗಳಿಗೊಂದು ವಿಭಾಗವಿತ್ತು. ತಮ್ಮ ರೈತರಿಂದ, ಪಕ್ಷಗಾರರಿಂದ, ಆಪ್ತೇಷ್ಟರಿಂದ ದೊರೆತಷ್ಟು ಧಾನ್ಯ ಮುಂತಾದ ಪದಾರ್ಥಗಳನ್ನು ಕೂಡಿ ಹಾಕಿದ್ದರು. ಸುತ್ತುಮುತ್ತಲಿನ ಜನವೆಲ್ಲ ಹೊಟ್ಟೆಗೆ ತುಣುಕು ರೊಟ್ಟಿಯಿಲ್ಲ ವೆಂದು ಹಾಹಾಕಾರ ಮಾಡುತ್ತಿರುವಾಗ, ತಮಗೂ ಅಂಥ ಸ್ಥಿತಿ ಕಾಲತ್ರಯ ದಲ್ಲಿಯೂ ಬರಬಾರದೆಂದು ಇರುವೆಯಂತೆ ಉದ್ಯೋಗಪರತೆಯಿಂದಲೂ ಮುಂಧೋರಣೆಯಿಂದಲೂ ಸಂಗ್ರಹಿಸಿದ ಮಾಧವರಾಯರನ್ನು ಕೊಂಡಾಡದವ ರಾರು? ಇನ್ನೂ ನಮ್ಮ ನಾಡಿನಲ್ಲಿ ಇಂಥ 'ವ್ಯವಹಾರಜ್ಞಾನಿ'ಗಳು ಇರುವ ರೆಂದೇ ಬರಗಾಲವು ಸರ್ವವ್ಯಾಪಿ ಆಗದೆ ಉಳಿದಿರಬೇಕು!

ಅಂತೂ ಎಲ್ಲ ತಯ್ಯಾರಿ ಆಯಿತು. ಮುಂಜಾನೆ ಎಂಟು ಗಂಟೆಗೆ ಶಂಭುರಾಯರು ಎಲ್ಲರೊಡನೆ ಮಾಧವರಾಯರ ಮನೆಗೆ ಬಂದರು. ಉಪಚಾರದ ಕೆಲವು ಮಾತುಗಳಾದ ಮೇಲೆ ಹುಡುಗಿಯನ್ನು ತೋರಿಸಲು ಕರಕೊಂಡು ಬಂದರು. ಅವಳು ನೆರೆದ ಎಲ್ಲ ಹಿರಿಯರಿಗೆ ಬಾಗಿ ಎರಡೆರಡು ನಮಸ್ಕಾರ ಮಾಡಿ ತನಗೆಂದು ನಿಯಮಿಸಿದ ಸ್ಥಳದಲ್ಲಿ ಮುಖವನ್ನು ಸಾಕಷ್ಟು ಕೆಳಗೆ ಹಾಕಿ ಕುಳಿತಳು. ಗಂಡಸರೆಲ್ಲ ನೋಡಹತ್ತಿದರು. ಒಳಗಿನಿಂದ ಬಾಗಿಲಲ್ಲಿ ನಿಂತು ಪಾರ್ವತಿಬಾಯಿಯೂ ಸುಂದರಾನೂ ಕಣ್ಣೆವೆಯಿಕ್ಕದೆ ನೋಡಿದರು. ಅಮೃತ ಮಾತ್ರ ತಲೆಬಾಗಿಲ ಕಡೆ ನೋಡುತ್ತ ಗಂಭೀರವಾಗಿ ಕುಳಿತಿದ್ದನು. ಹೆಸರುದಸೆ ಪ್ರಶ್ನೆ ಕೇಳುವದಾಯಿತು; ಓದಿಸುವದಾಯಿತು. ಹಾಡಲಿಕ್ಕೂ ಬರುವದೆಂದು ಪೇಟಿಯನ್ನು ಮುಂದೆ ಸರಿಸಿ 'ರಾಧೆಕೃಷ್ಣ ಬೋಲ ಮುಖಸೆ' ಹಾಡಿಸುವದಾಯಿತು. ಇದೆಲ್ಲ ನಡೆದಾಗ ಅಮೃತ ಹುಡುಗಿಯನ್ನು ನೋಡಿದ ಮಾತ್ರ. ಆಗ ಆ ದಪ್ಪನ್ನ ಮೈ, ಉಬ್ಬಿದ ಮೋರೆ, ಕರಿಬಣ್ಣ,

ಅದನ್ನು ಮರೆ ಮಾಡಲು ಸಿಡಿಸಿದ ಬಿಳಿಪುಡಿ, ವಸ್ತ್ರಗಳ ಭಾರ, ಸೀರೆ ಕುಪ್ಪಸದ ಥಳಕು ಇವು ಕಣ್ಣು ಕಟ್ಟಿದವು. ನೋಡುವುದು ಸಾಕೆಂದು ಅವನು ಕಣ್ಣು ಮುಚ್ಚಿದನು. ಮತ್ತೆ ನಮಸ್ಕಾರ ಮಾಡಿ ಕನ್ಯಾರತ್ನ ಒಳಗೆ ಹೋದಳು.

ಆಮೇಲೆ ಫರಾಳದ ಕಾರ್ಯಕ್ರಮ ನಡುಮನೆಯಲ್ಲಿ ನಡೆಯಿತು. ಅದೇನು ಹೆಸರಿಗೆ ಫರಾಳ, ನೋಡಿದರೆ ಊಟಕ್ಕಿಂತ ಹೆಚ್ಚೇ ಎನ್ನುವಂತಿತ್ತು. ಪುರಿ, ಶ್ರೀಖಂಡ, ಸಿರ, ಅವಲಕ್ಕಿ, ಹಪ್ಪಳ ಸಂಡಿಗೆ, ಬುರಬುರಿ, ಒಂದೆರಡು ಪಲ್ಯ, ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು. ಎಲ್ಲರೂ ಬಂದು ಕೂತರು. ಮಾಧವರಾಯರ ವಕೀಲ ಸ್ನೇಹಿತರೂ ಕೆಲವರಿದ್ದರು. ಫರಾಳಕ್ಕೆ ಸುರುವಾಯಿತು.

'ಏನು ಜಂಗೀ ಮಾಡಸೀರಿ, ರಾಯರ!' ಎಂದು ಸ್ನೇಹಿತರೊಬ್ಬರು ಪ್ರಶಂಸಿಸಿದರು.

'ಮತ್ತ ಡಾಕ್ಟರ ಅಳಿಯ ಸಿಕ್ಕಮ್ಯಾಲೆ ಇಷ್ಟಾರ ಮಾಡಬಾರದೇನು ?' ಇನ್ನೊಬ್ಬರ ಉತ್ತರ.

ಶಂಭುರಾಯರು ವಿನಯದಿಂದ 'ಇದು ನಮ್ಮ ಯೋಗ್ಯತಾಕ್ಕ ಹೆಚ್ಚಾಯ್ತು' ಎಂದರು.

'ಅಂದರ ರಾಯರ ಯೋಗ್ಯತಾಕ್ಕ ಇನ್ನೂ ಕಡಿಮೀನ' ಎಂದರು ಪುರೋಹಿತರು.

'ಇಂಥಾ ಕೆಟ್ಟ ಬರಗಾಲದಾಗ ಇಷ್ಟು ಮಾಡಸಿದ್ದು ಅದ್ಭುತರೆಪಾ' ಎಂದು ವಕೀಲ ಮಿತ್ರರೊಬ್ಬರು ರಾಯರನ್ನು ಉಬ್ಬಿಸುತ್ತ ಶ್ರೀಖಂಡಪುರಿಯ ತುತ್ತೊಂದು ಬಾಯಲ್ಲಿ ಹಾಕಿದರು.

'ರಾಯರ ಮನೀ ಅಂದರ ವೈಕುಂಠ ಇದ್ದಂಗ ನೋಡಿರಿ. ಇಲ್ಲಿ ಬರಗಾಲ ಅಂಬೂ ಸುದ್ದಿ ಕೇಳಬ್ಯಾಡರಿ.' ಇನ್ನೊಬ್ಬರ ಕೊಂಡಾಟ.

'ಹೌದು ಹೌದು, ತಿರುಪತ್ಯಾಗ ಎಲ್ಲೀ ಏಕಾದಶೀರಿ, ಇಷ್ಟು ತಿಳಿಯೂದಿಲ್ಲೇನು ?'

ಎಲ್ಲರೂ ಖೊಳ್ಳೆಂದು ನಕ್ಕರು. ಮಾಧವರಾಯರು ಚಾಣಾಕ್ಷತನದಿಂದ ಆಡಿದರು : 'ಏನಂತೀರಿ ಅನ್ರಿ. ದೇಶಕ್ಕ ಬರಗಾಲ ಬಂದದ್ದು ಹೆಂಗ ಸುಳ್ಳಾದೀತು ? ಕಾಳು ಕಡಿ ಸಿಗೋದಂದರ ಎಂಥಾ ಫಜೀತಿ ನಡದದ ? ಹಿಂಗs

ಅವರ ಕಾಲಿಗೆ ಇವರ ಕಾಲಿಗೆ ಬಿದ್ದು ಇವತ್ತಿನ ದಸಿಂದ ಸಂಗ್ರಹ ಮಾಡಿ ದಿವಿ ಆತು. ಮೊದಲು ರೂಪಾಯಕ್ಕ ಎಂಟು ಸೇರು ಇದ್ದವು ಈಗ ಒಂದು ಸೇರು ಆಗ್ಯಾವ.'

'ಹೌದು, ಭಾರೀ ತುಟ್ಟಿ ಆಗ್ಯಾವ ಬಿಡಿರಿ. ನೀವಂತ್ಯ ಇಷ್ಟು ಖರ್ಚು ಮಾಡಿದಿರಿ.' ಅವರ ಸ್ನೇಹಿತರಿಂದ ಪ್ರಶಸ್ತಿ ದೊರೆಯಿತು.

'ನಿನ್ನೆ ವೃಗಪ್ರವೇಶದ ಛಲೋ ಮಳಿ ಆತರಿ. ಇನ್ನೆಲ್ಲಾ ಬರಗಾಲ ಹೋತೇಳರಿ. ಅದಕಂತ್ಯ ಸಂತೋಷಕೂಟ ಇದು, ಯಾಕರಿ ರಾಯರ ?' ಎಂದು ಇನ್ನೊಬ್ಬರ ಪೃಚ್ಛೆ.

ಈ ರೀತಿ ಆಡುತ್ತ ಎಲ್ಲರೂ ಕೈ ಸಡಿಲುಬಿಟ್ಟು ಹಾಕಿಸಿಕೊಂಡು ಹೊಡೆಯುತ್ತಿರುವರು. ಅಮೃತನಿಗೆ ಅಸಹ್ಯವೇದನೆಯಾಯಿತು. ಯಾವ ತಿನಿ ಸನ್ನೂ ಮುಟ್ಟಲಾಗಲಿಲ್ಲ. ತನ್ನೊಳಗೆ ಕುದಿಯುವ ಜ್ವಾಲಾಮುಖಿಯಾಗಿ ಸುಮ್ಮನೆ ಕೂತನು. 'ಹೌದು ಇದು ವೃಗಪ್ರವೇಶದ ಸಂತೋಷದ ಕೂಟ ! ಮನುಷ್ಯವೃಗಪ್ರವೇಶ!' ಎಂದು ತನ್ನಷ್ಟಕ್ಕೆ ತಾನು ಅಂದುಕೊಂಡನು.

'ಯಾಕ ಅಮೃತರಾಯರು ಏನೂ ಮುಟ್ಟಲ್ಲ, ಹೊಟ್ಟೆ ನೆಟ್ಟಗಿಲ್ಲೇನು? ' ಮಾಧವರಾಯರು ನೋಡಿ ಕೇಳಿದರು. ಅಮೃತ 'ಹೌದು' ಎಂದು ಇಳಿದನಿ ಯಲ್ಲಿ ಹೇಳಿದನು. 'ಸ್ವಲ್ಪ ನೋಡಿರಿ' ಎಂದು ಮಾವಂದಿರು ಆಗ್ರಹ ಮಾಡಲು ಕೈಹಚ್ಚಿದಂತೆ ಮಾಡಿದನು. ಆದರೆ ಎತ್ತಿ ಬಾಯಲ್ಲಿ ಹಾಕುವದಾಗಲಿಲ್ಲ. ಮತ್ತೆ ಆಗ್ರಹ ಬಹಳಾಗಲು ಹೆಸರಿಗೆ ಸ್ವಲ್ಪ ತಿಂದಂತೆ ಮಾಡಿದನು. ಎಲ್ಲ ಮುಗಿ ಯಿತು. ಅಮೃತ ಎಲ್ಲರೊಡನೆ ತಿರುಗಿ ಮನೆಗೆ ಹೋದನು ಕಾರ್ಯ ಕೈಗೂಡಿ ತೆಂದು ಮಾಧವರಾಯರು ಬಲು ಹಿಗ್ಗಿ ಬಾರ ರೂಮಿನಲ್ಲಿ ತಮ್ಮ ಆಳಿಯಂದಿರ ವರ್ಣನೆಯನ್ನು ಮಾಡಿಯೇ ಮಾಡಿದರು.

ಶಂಭುರಾಯರ ಮನೆಯಲ್ಲಿ ಅಂದು ಕನ್ಯಾಪರೀಕ್ಷೆಯಾದದರ ಮೇಲೆ ಟೀಕೆ ಟಿಪ್ಪಣಿ ನಡೆದವು. ಪರೀಕ್ಷೆಯ ಪರಿಣಾಮವನ್ನು ತಡೆಮಾಡದೇ ಜಾಹೀರ ಮಾಡ ಬೇಕಾಗಿತ್ತು. ಹುಡುಗಿ ಕರ್‍ರಗಿರುವಳೆಂದೂ ಲಠ್ಠ ಇರುವಳೆಂದೂ ಅಮೃತನಿಗೆ ಸರಿಯಾಗುವದಿಲ್ಲೆಂದೂ ಪಾರ್ವತಿಬಾಯಿ-ಸುಂದರಾ ಇವರ ಸ್ಪಷ್ಟ ಅಭಿಪ್ರಾಯ ವಾಯಿತು. ರೂಪ ತಗೊಂಡೇನು ಮಾಡುವದು? ಗುಣ, ಮನೆತನ ನೋಡ ಬೇಕೆಂಬುದು ಶಂಭುರಾಯರ ವಾದ. ಅಲ್ಲದೆ ಮದುವೆಯ ಎಲ್ಲ ಖರ್ಚನ್ನು ತಾವೇ ವಹಿಸಿಕೊಂಡು ಎರಡು ಸಾವಿರ ವರದಕ್ಷಿಣೆ ಕೊಡುವದಾಗಿ ಮಾಧವ

ರಾಯರು ಆಶ್ವಾಸನವನ್ನು ಕೊಟ್ಟಿದ್ದರು. ಈ ಆರ್ಥಿಕ ಬಾಬೇ ಶಂಭುರಾಯರ ನಿರ್ಣಯಕ್ಕೆ ಮುಖ್ಯ ಕಾರಣವಾಯಿತು. ಅಮೃತನಿನ್ನೂ ಈ ವಿಷಯಕ್ಕೆ ತುಟಿ ಬಿಚ್ಚಿರಲಿಲ್ಲ. ಅವನಾಗಿ ಏನೂ ಹೇಳಲಿಲ್ಲ. ರಾತ್ರಿ ಊಟವಾದ ಮೇಲೆ ಎಲ್ಲರೂ ಕೂತುಕೊಂಡು ಕೆದರಿತೆಗೆದರು.ಶಂಭುರಾಯರ ಯುಕ್ತಿವಾದಕ್ಕೆ ಪಾರ್ವತಿಬಾಯಿ ಮನಸೊತು ಒಪ್ಪಿಗೆ ಕೊಟ್ಟಳು. ಅಣ್ಣನಿಗೆ ಬರುವ ವರದಕ್ಷಿಣೆಯ ಅರ್ಧದಲ್ಲಿ ತನ್ನ ಮದುವೆಯಾಗಬಹುದೆಂದು ಆಶಿಸಿಯೊ ಏನೊ ಮೊದಲಿನ ವಿರೋಧವನ್ನು ಹತ್ತಿಕ್ಕಿ ಸುಂದರಾ ಕನ್ಯೆಯ ವೇಷ ಭೂಷಣಗಳ ವರ್ಣನೆ ಮಾಡಿದಳು. ಇನ್ನು ಅಮೃತನೊಬ್ಬನು ಉಳಿದನು. ಅವನು ಹೇಳಿಕೇಳಿ ಅಳಿಯ. ಇಂಥ ವಿಷಯ ಗಳನ್ನು ಬಾಯಿಬಿಚ್ಚಿ .ಹೇಗೆ ಹೇಳುತ್ತಾನೆ? ಮೌನವೆಂದರೆ ಈ ಸಮಯದಲ್ಲಿ ಅರ್ಧವಲ್ಲ, ಪೂರ್ಣ ಸಂಮತಿಯೆಂದೇ ತಿಳಿಯುವ ಪರಿಪಾಠವಿರುತ್ತದೆ. ಹಾಗೆ ಶಂಭುರಾಯರು ತಿಳಿದು ನಾಳೆ ಮಾಧವರಾಯರಿಗೆ ತಿಳಿಸಿ ಮುಂದಿನ ತಯ್ಯಾರಿ ಮಾಡುವ ಮಾತಾಡಹತ್ತಿದರು. ಈಗ ಮಾತ್ರ ಅಮೃತ ಮೌನದ ಕೋಟೆಯ ನ್ನೊಡೆದು ಹೊರನುಗ್ಗಬೇಕಾಯಿತು. ಹುಡುಗಿ, ಮನೆತನ ಯಾವುದೂ ತನಗೆ ಸೇರಿಲ್ಲವೆಂದೂ ಬರೀ ದುಡ್ಡಿನ ಮೋರೆ ನೋಡಿ ಮದುವೆ ಮಾಡಿಕೊಳ್ಳಲು ತನ್ನ ಸಂಮತಿಯಿಲ್ಲವೆಂದೂ ಸ್ವಚ್ಛವಾಗಿ ಹೇಳಿಬಿಟ್ಟನು. ಆಯಿತು, ಶಂಭುರಾಯರ ನಿರ್ಣಯದ ಮೇಲೆ ಬಾಂಬನ್ನು ಒಗೆದಂತಾಯಿತು. ಬೇಕಾದಷ್ಟು ಅಂಗಲಾಚಿ ಹೇಳಿದರು, ಅವನೇನು ಒಪ್ಪಲಿಲ್ಲ. ಕೊನೆಗೆ ಅವರು ರೇಗಿಗೆದ್ದು 'ಹಂಗಾರ ನಿನ್ನ ಮದವಿ ನೀನs ಮಾಡಿಕೊ. ನಮ್ಮನ್ನ ಕೇಳಬ್ಯಾಡ, ಕಲೀಲಿಕ್ಕೆ ದುಡ್ಡೆಲ್ಲಿಂದ ತರತೀ ತಗೊಂಬಾ' ಎಂದು ಮುಂತಾಗಿ ಒದರಾಡಿದರು. ಅಪರಾತ್ರಿಯವರೆಗೆ ಹೀಗೆ ರಸಕಸಿ ನಡೆಯಿತು. ಮರುದಿನ ಮಾಧವರಾಯರೇ ಮನೆಯವರೆಗೆ ಬಂದರು. ಆಗ ನಿರಾಶೆಯ ಉತ್ತರವನ್ನು ಹೇಳಬೇಕಾಯಿತು. ಉಳಿದ ಮಾತನ್ನೇನೂ ಹೇಳದೆ, ತಂಗಿಯ ಲಗ್ನವಾಗುವವರಗೆ ತನ್ನ ಮದುವೆಯ ವಿಚಾರ ಬೇಡವೆಂದು ಅನ್ನುತ್ತಿರುವನೆಂದು ಶಂಭುರಾಯರು ಹೇಳಿದರು. ಇಂಥ ಮಾತಿನ ಅಂತರಂಗ ಮಾಧವರಾಯರಿಗೆ ತಿಳಿಯದೆ? ಅವರಿಗೆ ತೀವ್ರನಿರಾಶೆಯಾಯಿತು; ಆದರೂ ಎದೆಗೆಡಲಿಲ್ಲ. ಆಗಲಿ ಹಿಂದಾಗಡೆ ಮಾಡಕೋಳಿ, ಹಾದಿ ನೋಡಲಿಕ್ಕೆ ನಮ್ಮ ತಯ್ಯಾರಿ ಅದ' ಎಂದು ತಿರುಗಿದರು.

ಸುಂದರಾಗೆ ವರ ನೋಡಿ ಗೊತ್ತುಮಾಡಬೇಕೆಂಬುದು ಇಷ್ಟುದಿನ ತಡೆದು ನಿಂತಿತ್ತು. 'ಅದನ್ನಾದರೂ ಮಾಡು' ಎಂದು ಅಮೃತನಿಗೆ ಶಂಭುರಾಯರು

ಗಂಟುಬಿದ್ದರು. ಅವನಿಗೆ ಅದು ಸರಿ ಎನಿಸಿ ಅಲ್ಲಲ್ಲಿ ಹುಡುಕಾಡಹತ್ತಿದನು. ಆಗ ತನ್ನ ಇಂಗ್ಲಿಷ್ ಶಾಲೆಯ ಶಿಕ್ಷಕರಾದ ಸೋಮನಾಥರಾಯರ ಮಗ ಮ್ಯಾಟ್ರಿಕ್ ಪಾಸಾಗಿ ರೇಲ್ವೆಯಲ್ಲಿ ನೌಕರಿ ಮಾಡುತ್ತಿರುವನೆಂದೂ ಮದುವೆಗಾಗಿರುವನೆಂದು ತಿಳಿಯಿತು. ಅವರನ್ನು ಕಂಡು ಅಮೃತ ಮಾತುಕತೆ ನಡಸಿದನು. ಅಮೃತನಲ್ಲಿ ಅವರ ಮಮತೆ ಎಂದಿನಿಂದಲೂ ಬಹಳ. ಮನೆತನವೂ ಅವರಿಗೆ ಗೊತ್ತಿದ್ದುದು. ಎರಡೂ ಮಧ್ಯಮ ತರಗತಿಯ ಒಳ್ಳೆಯ ಕುಟುಂಬಗಳು. ಗೋತ್ರಾದಿಯನ್ನು ನೋಡಿದಮೇಲೆ ವರನನ್ನು ಕರಸಿ ಹುಡುಗಿಯನ್ನು ತೋರಿಸುವದಾಯಿತು. ಮನಸ್ಸಿಗೆ ಬಂದಿತು. ವರದಕ್ಷಿಣೆ ಐನೂರೆಂದು ಗೊತ್ತಾಯಿತು; ಎಲ್ಲ ಮಾತುಕತೆಗಳಾದವು. ಶಂಭುರಾಯರು ಮಗನ ಕರ್ತೃತ್ವವನ್ನು ನೋಡಿ ಕೊಂಡಾಡಿದರು. ತಮ್ಮ ಒಡಲಲ್ಲಿಯ ಕರಗಲಾರದ ಗಂಟನ್ನು ಅವನು ಕರಗಿಸಿದನೆಂದು ಸಂತೋಷಪಟ್ಟರು. ಆದರೆ ಮದುವೆಯ ಖರ್ಚಿಗೆ ದುಡ್ಡೆಲ್ಲಿದೆ? ಎಲ್ಲ ಕೂಡಿ ಒಂದು ಸಾವಿರದಷ್ಟು ರಕಮು ಬೇಕು. ಈಗ್ಯಾರು ಸಾಲ ಕೊಡುವರು ? ಹೊಲಗಳಿಗಂತೂ ಬೆಲೆಯಿಲ್ಲದಾಗಿದೆ. ಗೊತ್ತುಮಾಡಿದ ಮದುವೆಯನ್ನು ಬೇಗ ಮಾಡದಿದ್ದರೆ ಕೈಗೆ ಬಂದ ತುತ್ತು ಬಾಯಿಗೆ ಬಾರದೆ ಹೋದೀತು. ಹೀಗಾಗಿ ಮತ್ತೆ ಮೋಡ ಕವಿಯಿತು. ಮನೆಯಲ್ಲಿ ಎಲ್ಲರೂ ತ್ರಸ್ತರಾದರು. ತನ್ನ ಮದುವೆಯ ಕನಸಿನ ಹೊಂಬಿಸಿಲಲ್ಲಿ ಮಿಾಯುತ್ತಿದ್ದ ಸುಂದರಾ ಈಗ ಮೂಲೆ ಹಿಡಿದು ಬಿಚ್ಚಿದ ಕೂದಲ ಕತ್ತಲೆಯಲ್ಲಿ ಮುಳುಗಿದಳು.

ಇಷ್ಟರಲ್ಲಿ ಅಮೃತನಿಗೆ ಅವನ ಸ್ನೇಹಿತ ಕೆಳಮನಿಯಿಂದ ಒಂದು ಪತ್ರ ಬಂತು. ಹುಬ್ಬಳ್ಳಿಯಲ್ಲಿ ತನ್ನ ಲಗ್ನವಾಗುವದೆಂದೂ ಅದಕ್ಕೆ ಬರಲೇಬೇಕೆಂದೂ ಆಗ್ರಹದ ಆಮಂತ್ರಣವಿತ್ತು. ಮದುವೆಯನ್ನು ನೋಡುವ ಸಂಭ್ರಮ ಅವನಿಗಿರಲಿಲ್ಲ. ಆದರೂ ಅವನು ಹೋಗಲಣಿಯಾದನು. ತಂಗಿಯ ಮದುವೆಗೂ ತನ್ನ ಶಿಕ್ಷಣಕ್ಕೂ ಬೇಕಾಗುವ ಹಣದಷ್ಟು ಸಾಲ ಕೆಳಮನಿಯಂಥ ಶ್ರೀಮಂತ ಗೆಳೆಯನಿಂದ ದೊರೆಯಬಹುದೇ ಎಂಬ ಆಶೆ ಪ್ರಬಲವಾಗಿ ಅವನನ್ನು ತಿವಿದು ಕಳಿಸಿ ಕೊಟ್ಟಿತು.

## ೧೧. ಕುರುಡು ಕಾಂಚಾಣ

ಮರುದಿನವೇ ಕೆಳಮನಿಯ ಮದುವೆ. ಮುನ್ನಾದಿನ ರಾತ್ರಿ ಹತ್ತು ಗಂಟೆಯ ಗಾಡಿಗೆ ಅಮೃತನು ಬಾಗಿಲುಕೋಟೆಯಿಂದ ಹುಬ್ಬಳ್ಳಿಗೆ ಬಂದನು.

ಮೊದಲೇ ತಿಳಿಸಿದ್ದರಿಂದ ಕೆಳಮನಿ ನಿಲ್ದಾಣಕ್ಕೆ ಬಂದು ಅವನನ್ನು ಇಳಿಸಿಕೊಂಡನು; ಗೆಳೆಯ ಬಂದನೆಂದು ಸಂತೋಷಪಟ್ಟನು. ಇಬ್ಬರೂ ಕಾರಿನಲ್ಲಿ ಮನೆಗೆ ಹೊರಟರು. ದಾರಿಯಲ್ಲಿ ಬಂಗಾಲದಿಂದ ತಿರುಗಿ ಬಂದ ಮೇಲೆ ತಾನು ನಡಸಿದ ಸೇವೆಯನ್ನು ಅಮೃತ ಕೆಳಮನಿಗೆ ಸ್ವಲ್ಪದರಲ್ಲಿ ಹೇಳಿದನು. ಮತ್ತೆ ಕಾಲೇಜಿಗೆ ಹೋಗಬೇಕೆಂಬ ವಿಚಾರವನ್ನೂ ತಿಳಿಸಿದನು. ಮೊದಲನೆಯ ಮಾತಿಗೆ ಏನೂ ಅನ್ನದೆ ಎರಡನೆಯದಕ್ಕೆ ಕೆಳಮನಿ 'ಈಗ ಬುದ್ಧಿ ಬಂತಲ್ಲ' ಎಂದನು. ಕೆಲವು ಮಿನಿಟ್ಟಿನಲ್ಲಿ ಮನೆ ಮುಟ್ಟಿದರು.

ಮನೆಯೇನು ಅರಮನೆಯೇ ಆಗಿತ್ತು. ಈಗಂತೂ ಅದು ಮದುವೆಯ ಮನೆಯಾಗಿದ್ದ ಕಾರಣ ಬಳಗದವರೆಲ್ಲ ಕೂಡಿದ್ದಾರೆ. ಹುಡುಗರ ಕೇಕೆಯಿಂದ, ಜನರ ಓಡಾಟದಿಂದ ಹುಬ್ಬಳ್ಳಿ ನಿಲ್ದಾಣದ ಮೇಲಿನ ಗದ್ದಲವನ್ನು ಮೀರುವಂಥ ಗಲಾಟೆ ನಡದಿದೆ. ಅಮೃತನನ್ನು ಕೆಳಮನಿ ಮೂರನೆಯ ಅಂತಸ್ತಿನ ಒಂದು ಕೋಣೆಗೆ ಕರೆದುಕೊಂಡು ಹೋಗಿ 'ಇದು ನಿನಗಾಗಿ ಕಾದಿಟ್ಟ ಗೆಸ್ಟ್ ರೂಮು' ಎಂದು ಹೇಳಿದನು. ಹಾಗೂ ತಮ್ಮ ಅಂಗಡಿಯ ಒಬ್ಬ ಗುಮಾಸ್ತೆಯನ್ನು ಕರೆದು 'ಇವರ ವ್ಯವಸ್ಥಾ ನೋಡಿಕೋ' ಎಂದು ಬಜಾಯಿಸಿ ಹೇಳಿದನು.

'ಇದೇನು ಕೆಳಮನಿ, ನೀ ಪಾರಾಗುವ ಸಲುವಾಗಿ ಈ ವ್ಯವಸ್ಥಾ ಏನು ?' ಎಂದು ಅಮೃತನು ಅಣಕವಾಡಿದನು.

'ಹೌದು, ರಾಯರೀಗ ಇದಿರುಗೊಳ್ಳುವ ದಸಿಂದ ತಯ್ಯಾರಾಗಬೇಕು' ಎಂದು ಗುಮಾಸ್ತೆ ಹೇಳುವಷ್ಟರಲ್ಲಿ ರಾಯರಿಗೆ ಕೆಳಗಿನಿಂದ ಕರೆ ಬಂದಿತು.

'ನಿನಗೇನು ಬೇಕು ಎಲ್ಲಾ ಸಿದರಾಮಪ್ಪಗ ಹೇಳಿ ಇಸಗೋ. ನೀ ಭಾಳ ಭಿಡೇದ ಪ್ರಾಣಿ. ಮದವ್ಯಾಗ ಮೂರು ನಾಲ್ಕು ದಿನ ಅರ ಸುಡಗಾಡ ಆ ಬರಗಾಲದ ವಿಚಾರ ಬಿಟ್ಟು ಆರಾಮ ಇರು ಮಾರಾಯ' ಎಂದು ಕೆಳಮನಿ ಅಮೃತನಿಗೆ ನಗುನಗುತ್ತ ಹೇಳಿ ಹೊರಟುಹೋದನು. ಅವನ ಕೊನೆಯ ವಾಕ್ಯ ಅಮೃತನ ಎದೆ ಹೊಕ್ಕು ಕಲಕಿತು. ಆದರೆ ಅದು ನಗೆಮಾತಿರಬಹುದೆಂದು ಅವನು ಕಡೆಗಣಿಸಿದನು. ಸಿದರಾಮಪ್ಪ ಕೂಡಲೆ ತನ್ನ ಆದರಾತಿಥ್ಯದ ಕಾರ್ಯಕ್ರಮವನ್ನು ಹುರುಪಿನಿಂದ ಮೊದಲು ಮಾಡಿದನು. ಅಟ್ಟದಲ್ಲಿಯ ಬಚ್ಚಲಕ್ಕೆ ಕರೆದೊಯ್ದು ಕಾಲು ತೊಳೆಯಲು ನೀರು ಕೊಟ್ಟನು! ಒರಸಿಕೊಳ್ಳಲು ಟಾವೆಲ್ಲು ನೀಡಿದನು. ತಿರುಗಿ ಕೋಣೆಗೆ ಬರುವಷ್ಟರಲ್ಲಿ ಸಣ್ಣ

ಟೀಪಾಯದ ಮೇಲೆ ಮದುವೆಯ ಫರಾಳ ಮತ್ತು ಬೆಳ್ಳಿಯ ಕಪ್ಪಿನಲ್ಲಿ ಹಾಲು ಸಿದ್ಧವಾಗಿತ್ತು. ಅಮೃತನಿಗೆ ಆಶ್ಚರ್ಯವಾಯಿತು, 'ಏನು ಸಿದರಾಮಪ್ಪ, ಇಷ್ಟೆಲ್ಲ ಈಗ ಯಾಕೆ ?' ಎಂದನು.

'ಇದಿರುಗೊಂಡ ಮ್ಯಾಲೆ ಊಟಂದರ ತಡ ಆಕ್ಕತಿ ರಾಯರ. ನೀವು ಚಾ ಕುಡಿಯೂದುಲ್ಲಂತ ಹಾಲು ತರಿಸೀನಿ.'

ಅಂತೂ ಕೆಳಮನಿ ತನ್ನ ಬಗ್ಗೆ ಏನೇನೋ ಹೇಳಿದ್ದಾನೆ ಎಂದು ಅಮೃತ ನಿಗೆ ತೋರಿತು. ಸಿದರಾಮಪ್ಪನನ್ನು ಹತ್ತಿರ ಕೂಡಿಸಿಕೊಂಡು 'ಇಬ್ಬರೂ ಕೂಡಿ ಬಗೆಹರಿಸೋಣ ಬರ್ರಿ' ಎಂದು ಆರಂಭ ಮಾಡಿದನು. ಆಗ ಸಹಜ ವಾಗಿ ಸಿದರಾಮಪ್ಪನ ವೇಷದ ಕಡೆ ಅಮೃತನ ಲಕ್ಷ್ಯ ಹೋಯಿತು. ಕೆಳಗಿ ನಿಂದ ಮೇಲಿನವರೆಗೆ ಎಲ್ಲ ಖಾದಿ ! ಖಾದಿಯ ಧೋತರ, ಖಾದಿಯ ಅಂಗಿ, ಖಾದಿಯ ರುಮಾಲು. ಅವನ ಮುಖವರಳಿತು : 'ಏನು ಸಿದರಾಮಪ್ಪ, ನೀವು ನಖಶಿಖಾಂತ ಖಾಧೀಧಾರಿಗಳಾಗೀರಿ. ನಿಮ್ಮನ್ನ ನೋಡಿ ಸಂತೋಷ ಆತು.'

'ಹೌದು, ನಾ ಸಾಲೀ ಕಲಿಯುವಾಗಿನ ತೊಟ್ಟು ಮುಖಂಡರ ಉಪದೇಶ ಕೇಳಿ ಖಾದಿ ವ್ರತ ಹಿಡದೀನಿ. ಇಂದಿಗೂ ಬಿಟ್ಟಿಲ್ಲ. ನೀವೂ ಖಾದಿ ಹಾಕೀರಿ. ನಮ್ಮದೂ ನಿಮ್ಮದೂ ಕೂಡಿತು.'

'ಬರಾಬರಿ, ನೀವು ಎಷ್ಟ ಕಲತರಿ ?' ಸಿದರಾಮಪ್ಪನ ವಿಷಯಕ್ಕೆ ಆಸ್ಥೆ ಹೆಚ್ಚಿ ಅಮೃತ ಕೇಳಿದನು.

'ಇಂಗ್ರೇಜಿ ನಾಕೆತ್ತಾ ಕಲ್ತೆ, ಮುಂದ ಬಿಟ್ಟೆ. ಇವರಂಗಡ್ಯಾಗ ನಮ್ಮ ಅಪ್ಪ ಗುಮಾಸ್ತೆ ಇದ್ದರು, ಅವರು ಪಟಕ್ಕನ ಕಾಲ ಆದರು. ಮತ್ತೇನು ಮಾಡೋದೈತಿ ? ನಾನೂ ಇವರಲ್ಲೇ ಗುಮಾಸ್ತೆ ಕೆಲಸಕ್ಕೆ ಸೇರಿದೆ.'

'ಹಿಂಗs ? ಮನ್ಯಾಗ ಈಗ ಯಾರ್ಯಾರು ಇದ್ದಾರ ?'

'ಮುದಕಿ ಅವ್ವ, ಹೆಣ್ತಿ ಇಬ್ಬರು ಅದಾರ.'

ಮತ್ತಿವರೇನು ಪಗಾರ ಕೊಡತಾರ ?'

'ಎಡ್ಡನೂರು,'

'ಹಾ ! ಎರಡುನೂರು ?' ಅಮೃತ ತಿನ್ನುವವನ್ನು ಬಿಟ್ಟು ಚಕಿತನಾಗಿ ಕೇಳಿದನು.

'ಹೌದು ರಾಯರ. ಆದರ ವರಸಕ್ಕ ಎಡ್ಡನೂರು.'

'ಹಿಂಗs, ಇಷ್ಟರಾಗ ಹೊಟ್ಟೆ ಹೆಂಗ ತುಂಬಬೇಕರಿ ?'

'ಹೆಂಗರ ತುಂಬಬೇಕು, ಕಾಟಕಸರ ಮಾಡಿಕ್ಯಾಸ. ಮನ್ಯಾಗ ಹೆಂಗಸರು ಈಟು ದುಡೀತಾರ.'

'ಏನು ದುಡೀತಾರ ?'

'ಚರ್ಕಾ ಸಂಘದ ಹಂಜಿ ಕೊಡಸತೀನಿ. ರಾಟೀ ಮ್ಯಾಲೆ ದಿನಾ ಸವಡೀ ಪ್ರಕಾರ ನೂತು ತಿಂಗಳಿಗೆ ಹತ್ತುಹದಿನೈದು ರೂಪಾಯಿ ತಗೀತಾರ.'

ಅಮೃತನಿಗೆ ಇದನ್ನೆಲ್ಲ ಕೇಳಿ ಸಿದರಾಮಪ್ಪನ ವಿಷಯದಲ್ಲಿ ಮಮತೆ ಹೆಚ್ಚಿತು. 'ನೀವು ಖರೇ ಗಾಂಧೀ ಭಕ್ತರು ಸಿದರಾಮಪ್ಪ. 'ಕಾಯಕವೇ ಕೈಲಾಸ' ಅಂಬೂ ಮಾತು ಮಾಡಿ ತೋರಿಸತಿದ್ದೀರಿ.'

ಆಮೇಲೆ ಸಿದರಾಮಪ್ಪನ ಪ್ರಶ್ನೆಗಳಿಗೆ ಅಮೃತ ತನ್ನ ಮನೆತನದ ಬಡತನವನ್ನೂ ತನ್ನ ಶಿಕ್ಷಣ ಹಾಗೂ ಬಂಗಾಲ ಸಾಹಸ ಮುಂತಾದ್ದನ್ನೂ ಬಣ್ಣಿಸಿದನು. ಇಬ್ಬರೂ ಒಂದು ತಾಸಿನಲ್ಲಿ ಆತ್ಮೀಯರಾದರು; ದೇಶೀ ಚಳವಳಿಯ ವಿಷಯವಲ್ಲದೆ ತಮ್ಮ ಸುಖದುಃಖಗಳ ಬಗ್ಗೆ ಸಹ ಮಾತಾಡಲಣಿಯಾದರು. ಮನೆಯ ಮುಂದೆ ಅಷ್ಟರಲ್ಲಿ ಬ್ಯಾಂಡು ಬಜಂತ್ರಿಗಳ ಕಲಕಲಾಟ ಸುರುವಾಯಿತು. ಇದಿರುಗೊಳ್ಳುವ ಸ್ಥಳಕ್ಕೆ ಹೊರಡುವ ಸಂವರಣೆ ನಡೆದಿತ್ತು. ಆಗ ಸ್ವಾಭಾವಿಕವಾಗಿ ಮದುವೆಯ ಮಾತು ಹೊರಟಿತು. ಹೆಣ್ಣಿನ ಊರಲ್ಲಿ ಮದುವೆ ಮಾಡದೆ ಇಲ್ಲಿ ಯಾಕೆ ಮಾಡಿದ್ದಾರೆ ಎಂಬುದು ಅಮೃತನಿಗೆ ಗೂಢವಾಗಿತ್ತು. ಸಿದರಾಮಪ್ಪ ಹೇಳಿದ ಮೇಲೆ ಎಲ್ಲ ಅರ್ಥವಾಯಿತು. ಶಂಕರರಾಯರಿಗೆ ಕೆಳಮನಿ ಅಂದರೆ 'ಕುಮಾರ' ಒಬ್ಬನೇ ಗಂಡಸುಮಗ. ಅವನ ಮದುವೆಯನ್ನು ಬಹಳ ವೈಭವದಿಂದ ಇದ್ದೂರಲ್ಲಿಯೇ ಮಾಡಬೇಕೆಂಬುದು ಅವರ ಬಹಳ ದಿನದ ಹಟವಿತ್ತು. ಕುಮಾರನನ್ನು ಜೋಕುಮಾರನಂತೇ ಅವರು ಬೆಳೆಸಿದ್ದರು. ಕೆಳಮನಿಯ ಸ್ವಭಾವದಲ್ಲಿಯ ಹೊಣೆಗೆಟ್ಟ ಹುಡುಗುತನಕ್ಕೆ ಅದೇ ಕಾರಣ. ಹೆಣ್ಣಿನ ಕಡೆಯವರು ಹೊಸಪೇಟೆಯ ದೊಡ್ಡ ಶ್ರೀಮಂತರು ; ಹತ್ತು ಸಾವಿರ ವರದಕ್ಷಿಣೆ ಕೊಡಲೊಪ್ಪಿದ್ದಾರೆ; ಮೇಲೆ ಮದುವೆ ಹುಬ್ಬಳ್ಳಿಯಲ್ಲಿಯೇ ಆಗಬೇಕೆಂಬುದಕ್ಕೂ ಒಪ್ಪಿದ್ದಾರೆ. ಬೀಗರಿಗಾಗಿ ಅಲ್ಲೇ ಹತ್ತಿರದಲ್ಲಿ ಒಂದು ದೊಡ್ಡ ಬಂಗಲೆಯನ್ನು ಹಿಡಿದು ಅಕ್ಕಿಕಾಳಿಗೆಂದು ಅದರ ಮುಂದೆ ದೊಡ್ಡ ಮಂಟಪವನ್ನು ಹಾಕಲಾಗಿದೆ. ಇದನ್ನೆಲ್ಲ ವರ್ಣಿಸಿ ತನಗೆ ಕೆಲಸವಿರು

ವದೆಂದೂ ಆಮೇಲೆ ಮತ್ತೆ ಬರುವೆನೆಂದೂ ಹೇಳಿ ಸಿದರಾಮಪ್ಪ ಹೋದನು. ಅಮೃತನೊಬ್ಬನೇ ಉಳಿದನು. ಕೋಣೆಯಲ್ಲಿ ಅತ್ತಿಂದಿತ್ತ ಶತಪತ ತಿರುಗಿದನು; ಆಗ ಹಿನ್ನೆಲೆಯಲ್ಲಿ ಅವಿತುಕೊಂಡಿದ್ದ ಮನೆಯ ಯೋಚನೆ ಮುಂಬಂದಿತು. ಬೇಗನೆ ಊರಿಗೆ ತಿರುಗಬೇಕು ಎಂದು ಜೋರಾಗಿ ಅನಿಸಿತು. ಆದರೆ ಕೆಳಮನಿ ಬಿಡುವನೋ ಇಲ್ಲವೊ ? ಅವನ ಪರವಾನಿಗೆ ಸಿಕ್ಕರೂ ಅವನನ್ನು ಬಂದ ಕೆಲಸದ ಬಗ್ಗೆ ಕೇಳದೆ ಹೇಗೆ ಹೋಗುವದು? ಅದಕ್ಕೆ ಮದುವೆಯ ಗದ್ದಲ ದಲ್ಲಿ ಅವಕಾಶ ಸಿಗಬಹುದೇ ? ಛೇ, ಇಂಥ ಹೊತ್ತಿನಲ್ಲಿ ಬಂದದ್ದೇ ತಪ್ಪು. ಈ ಮುಂತಾಗಿ ಅವನಲ್ಲಿ ಯೋಚನೆಯ ಅಲೆಗಳು ಒಂದರಮೇಲೊಂದು ಬಂದವು. ಇದಲ್ಲದೆ ಈ ಶ್ರೀಮಂತಿಕೆಯ ವಾತಾವರಣವೂ ಅವನಿಗೆ ಒಗ್ಗದಾಗಿತ್ತು. ಹೇಗೋ ಎರಡು ದಿನ ಅನುಭವಿಸಬಹುದೆಂದು ಅಂದುಕೊಂಡನು. ಇಷ್ಟರಲ್ಲಿ ವಾದ್ಯಗಳ ನಾದ ಹೆಚ್ಚಿತು, ಎಲ್ಲರೂ ಹೊರಟರೋ ಹೇಗೆಂದು ನೋಡುವ ಸಲುವಾಗಿ ಅವನು ಎರಡನೆಯ ಅಟ್ಟಕ್ಕೆ ಇಳಿದು ಕಟಾಂಜನದಲ್ಲಿ ನಿಂತುಕೊಂಡನು. ಅವನಿಗೂ ಬರಲಿಕ್ಕೆ ಕುಮಾರ ಹೇಳಿಕಳಿಸಿದನು ; ಅವನು ಬರುವದಿಲ್ಲ ಎಂದು ತಿಳಿಸಿದನು. ಆಗಳೆ ರಾತ್ರಿ ಹನ್ನೊಂದಾಗಿ ಹೋಗಿತ್ತು ; ಅಷ್ಟೇ ನೆವ ಸಾಕಾತ್ತು ಅವನಿಗೆ. ಬಂಧುಬಳಗದವರೆಲ್ಲ ಮನೆಯಿಂದ ಹೊರಬಿದ್ದರು. ಹೆಂಗಸರು ಥಳಕುಪಳಕಿನ ಜರದ ಸೀರೆ-ಕುಪ್ಪಸಗಳನ್ನು ಧರಿಸಿ ವಸ್ತ್ರ, ಒಡವೆಗಳಿಂದ ಅಲಂಕರಿಸಿಕೊಂಡು ನಡೆದರು. ಗ್ಯಾಸಬತ್ತಿಗಳನ್ನು ನೂರಾರು ಸುತ್ತರಿದವು. ಕುಮಾರನು ಉದ್ದನ್ನ ರೇಶಿಮೆಕೋಟು, ಜರದ ರುಮಾಲು ಹಾಕಿಕೊಂಡು ಕಾರಿನಲ್ಲಿ ಕೆಲವು ಸಣ್ಣ ಹುಡುಗರೊಡನೆ ಕೂತನು. ರಾತ್ರಿಯ ಸ್ತಬ್ಧತೆಯ ಮೇಲೆ ದಾಳಿಯಿಡುತ್ತ ಮಲ ಗಿದವರನ್ನು ಎಬ್ಬಿಸಿ, ಕಣ್ಣು ಹೊಸೆಯುತ್ತಾ ಅವರು ನೋಡುವಂತೆ ಮಾಡಿ, ಎದುರು ಗೊಳ್ಳುವ ಈ ಮೇಳ ವಾದ್ಯದ ಮುಂದಾಳುತನದಲ್ಲಿ ಸಾಗಿತು. ಅಮೃತ ನೋಡಿದನು, ಅದೇನೊ ನೆನಪಾಗೆ ಕಣ್ಣು ಮುಚ್ಚಿದನು. ತತ್‌ಕ್ಷಣ ಹೊಟ್ಟೆ ಯಲ್ಲಿ ಕಸಿ ವಿಸಿಯಾಗಲು, ತನ್ನ ಕೋಣೆಗೆ ತಿರುಗಿ ಬಂದನು. ಆ ಸದ್ದು ಬರ ಬರುತ್ತ ದೂರವಾಯಿತು ; ಆದರೆ ಅದರ ಪ್ರತಿಧ್ವನಿ ಮಾತ್ರ ಅವನ ಕಿವಿಯಲ್ಲಿ ನಿಚ್ಚಳವಾಗಿ ನೆಲಸಿತು. ಆ ಚಿತ್ರವೂ ಅಷ್ಟೇ ನಿಚ್ಚಳವಾಗಿ ಮೂಡಿತು! ಅವನಿಗನಿ ಸಿತು. ಜಗತ್ತಿನಲ್ಲಿ ಎಲ್ಲವೂ ನಡೆದಿದೆ—ಮದುವೆಯ ಮೆರವಣಿಗೆ, ಬರಗಾಲದ ಉರವಣಿಗೆ! ಆದರೆ ಕೆಳಮನಿಯಂಥ ಕಲಿತವನು ಇಂಥ ಸಂಗಡರ-ಸಂಭ್ರಮಗಳಿಗೆ ಮನಸೋಲಬೇಕೆ ? ಮರುಕ್ಷಣ ಅನಿಸಿತು—ಕೆಳಮನಿಯಂಥ ಕಲಿತವರೇ ಹೀಗೆ

ಸೋತಿದ್ದಾರೆ' ಸೋಲುತ್ತಾರೆ. ಸಾವಿರಾರು ವರ್ಷದ ಸಂಪ್ರದಾಯ ಎಲ್ಲರನ್ನು ಗೆದ್ದು ಮೀರಿ ನಿಂತಿದೆ. ಅವನ ಮನಸ್ಸು ಖಿನ್ನವಾಯಿತು. ನಾಳೆ ತಾನೂ ಹೀಗೇ ಮಾಡಬಹುದೇ ? 'ಛೆ, ಎಂದಿಗೂ ಇಲ್ಲ' ಎಂದು ನಿಶ್ಚಯಾತ್ಮಕವಾಗಿ ತಲೆಕೊಡ ಹಿದನು. 'ಯಾರಿಗೆ ಗೊತ್ತು, ನೋಡೋಣ' ಎಂದು ಯಾರೋ ಸಣ್ಣ ದನಿ ಯಲ್ಲಿ ಮೂದಲಿಸಿದಂತಾಯಿತು. ಎಲ್ಲವನ್ನು ಮರೆಗೆ ಹಾಕಿ ಹಾಸಿಗೆಯಲ್ಲಿ ಮಲಗಬೇಕೆಂದನು. ಅವನ ಕೋಣೆಯಲ್ಲಿ ಆಳು ಬಂದು ಒಂದು ಮಂಚದ ಮೇಲೆ ದಪ್ಪನ್ನ ಗಾದಿ ಹಾಕಿ ಒಗೆದ ಮುಗ್ಗಲಾಸಿಗೆ ಹಾಸಿ ಚಾದರವಿಟ್ಟು ಮೇಲೆ ಸೊಳ್ಳೆಪರದೆ ಕಟ್ಟಿ ಸಿದ್ಧಮಾಡಿದ್ದಾನೆ. ಇದೆಲ್ಲಾ ಸಿದರಾಮಪ್ಪನ ಯೋಜನೆ ಇರಬೇಕೆಂದು ತೋರಿತು. ಬೇರೆ ಹಾಸಿಗೆಯನ್ನು ತಾನು ತಂದಿರಲಿಲ್ಲ. ಆದರೆ ಇಂಥ ಹಾಸಿಗೆಯನ್ನು ಆಯುಷ್ಯದಲ್ಲಿ ಎಂದೂ ಕಂಡಿರಲಿಲ್ಲ. ಪರದೆಯೊಳಗೆ ಹಣಿಕಿ ನೋಡುತ್ತಾನೆ, ಅದೊಳ್ಳೆ ಆಕರ್ಷಕವಾಗಿತ್ತು. ಮನಸ್ಸು ಹಿಂಜಗ್ಗಿತು. ವೇಶ್ಯೆಯರ ಬೀದಿಯಲ್ಲಿ ಹೋಗಿ ಎಳವೆಣ್ಣಿನ ಮೊಗನೋಡಿ ಮನೆಯೊಂದರಲ್ಲಿ ತಲೆಯಿಕ್ಕಿದಂತೆ ಸ್ವಲ್ಪ ಮಟ್ಟಿಗೆ ಅವನಿಗೆ ಆಗಿರಬೇಕು. ಪರದೆ ಮುಚ್ಚಿ ದೂರ ಸರಿದನು. ಆದರೆ ಕೆಳಗೆ ಏನೂ ಹಾಸಿಕೊಳ್ಳಲಿಲ್ಲ. ಮಲಗುವುದಾದರೂ ಎಲ್ಲಿ ? ಸರಿ, ನಿರ್ವಾಹವಿಲ್ಲವೆಂದು ಮಂಚದ ಮೇಲೆ ಹತ್ತಿ ಕಾಲು ಚಾಚಿದನು. ಬುಡದ ಸ್ಪ್ರಿಂಗು ಚರ್‌ಚರ್ರೆಂದಿತು, ಗಾದಿ ಮಿದುವಾಗಿ ಘಲ್ಲಿಸಿತು. ಯಾರಿ ಗಾದರೂ ಹಾಸಿಗೆ ಮೇಲೆ ಬಿದ್ದೊಡನೆ ಸುಖವಾಗಿ ನಿದ್ದೆ ಬರಬೇಕು. ಅವನು ಕಣ್ಣು ಮುಚ್ಚಿ ಪ್ರಯತ್ನ ಮಾಡಿದನು. ಆದರೆ ಆ ಸ್ಪ್ರಿಂಗಿನ ಸಪ್ಪಳ 'ಇದು ನಿನ್ನ ಜಾಗವಲ್ಲ' ಎಂದು ಕರಕರೆ ಮಾಡುವಂತೆ ಅನಿಸಿತು. ಆ ಆರಿಂಚು ದಪ್ಪನ್ನ ಗಾದಿಯು ಸಹ ಅವನಿಗೆ ಮುಳ್ಳಿನ ಹಾಸಿಗೆಯಂತೆ ಚುಚ್ಚತೊಡಗಿತು. ಇಂಥದರಲಿ ನಿದ್ದೆ ಬರುವುದೇ ? ಆಯಿತು, ಚಟ್ಟನೆ ಎದ್ದು ಹೊರಬಂದು ಸುಮ್ಮನೆ ತಿರುಗಾಡಹತ್ತಿದನು. ಬಂಗಾಲದಲ್ಲಿ, ವಿಜಾಪುರದಲ್ಲಿ, ಸ್ವಂತ ಮನೆ ಯಲ್ಲಿ ದಾರಿದ್ರ್ಯದ ದಾರುಣ ಯಾತನೆಯನ್ನು ಕಂಡ ಅವನಿಗೆ ಒಂದು ದಿನವೂ ಕೂಡ ಎಲ್ಲವನ್ನೂ ಮರೆತು ಸುಖಬಡುವ 'ಭಾಗ್ಯ'ವಿರಲಿಲ್ಲ. ಭಾಗ್ಯಹೀನವಾದ ಭಾರತ ದೇಶದಲ್ಲಿ ನಿತ್ಯ ಸೂತಕವನ್ನಾಚರಿಸುವಷ್ಟು ವ್ಯಥೆ ಮಹಾಮನರಿಗಾ ದಂತೆ ಇವನ ರೀತಿಯಲ್ಲಿ ಇವನಿಗೆ ಆಗಿದೆ. ಸ್ವಲ್ಪ ಹೊತ್ತು ಹಾಗೇ ತಿರುಗಿ ದನು. ಆಮೇಲೆ ಆ ಮಂಚದ ಮೇಲಿನ ಜಮಖಾನೆಯನ್ನು ಹೊರಗೆಳೆದು ಕೆಳಗೆ ಹಾಸಿ ಅದರ ಮೇಲೆ ಮಲಗಿದನು. ಕಂಡ ಚಿತ್ರಗಳ ಕನಸುಗಳಲ್ಲಿ, ಸೊಳ್ಳೆಗಳ

ಸಂಗೀತದಲ್ಲಿ ನಿದ್ರೆ ಚೆನ್ನಾಗಿ ಹತ್ತಲಿಲ್ಲ. ರಾತ್ರಿ ಮೂರಕ್ಕೆ 'ಬಿಸಿಲೂಟ'ಕ್ಕೆಂದು ಕರೆಯಬಂದರು! ಅದಕ್ಕೆ ಒಲ್ಲೆಂದನು. ಮರುದಿನ ಬೆಳಗ್ಗೆ ಅವನನ್ನು ನೋಡಲು ಕುಮಾರನೇ ಬಂದನು. 'ಏನು, ರಾತ್ರಿ ಯಾವದಕ್ಕೂ ಬರಲಿಲ್ಲ, ಸಿರೂರ. ಈವತ್ತ ಅಕ್ಕೀಕಾಳಿಗರ ಬರತೀ ಹೌದಲ್ಲೊ ?' ಇದು ಅವನ ಚುಚ್ಚು ಮಾತಿನ ಬಗೆ.

ಅಮೃತನು ನಗೆಚಾಟಿಗೆಯಲ್ಲಿಯೇ ಉತ್ತರಿಸಿದನು; 'ಅಕ್ಕೀಕಾಳಿಗೆ ಬರ ಬೇಕಂತೇ ರಾತ್ರಿ ಯಾವುದಕ್ಕೂ ಬರಲಿಲ್ಲಪ. ಮುಂಜಾನೆ ಹತ್ತು ಘಂಟೆಕ್ಕಲ್ಲ ?'

'ಹೌದು. ನಿನಗೇನು ವ್ಯವಸ್ಥಾ ಬರಾಬರಿ ಆಗೇದ ಹೌದಲ್ಲೋ ? ಏನಾರ ಬೇಕಾರ ಹೇಳು. ಸಿದರಾಮಪ್ಪಗ ಹೇಳತೀನಿ.'

'ಸಿದರಾಮಪ್ಪ ಲಾಯಖ ಮನಸ್ಯಾ ಇದ್ದಾನ. ಅವನಿಂದ ಉತ್ತಮ ವ್ಯವಸ್ಥಾ ಆಗೇದ. ಅಷ್ಟು ನನಗೆ ಬ್ಯಾಡಂತ ಅವಗ ಹೇಳತಿದ್ದರ ಹೇಳು !'

ಸುರಿಗೆಯೆರಕೊಂಡು ಅಕ್ಕೀಕಾಳಿನ ವರಾತಕ್ಕೆ ಸಿದ್ಧರಾಗಬೇಕಾಗಿತ್ತು, ಅದರಿಂದ ಕುಮಾರ ಎದ್ದು ಹೋದನು. ಅಮೃತ ಸಿದರಾಮಪ್ಪನ ನೆರವಿನಿಂದ ಜಳಕ ತೀರಿಸಿ ಬಂದನು. ಬಡಗೆಳೆಯನ ಮದುವೆಕಾಣಿಕೆಯೆಂದು ತಾ ತಂದ ಪುಸ್ತಕವನ್ನು ತೆಗೆದಿಟ್ಟುಕೊಂಡನು. ಅದು ತರುಣರನ್ನು ಕುರಿತು ಗಾಂಧೀಜಿ ಯವರು ಮಾಡಿದ ಉಪದೇಶ ವಚನಗಳ ಸಂಗ್ರಹವಿತ್ತು. ಅದರಿಂದ ಅಮೃತ ಪಡೆದ ಸ್ಫೂರ್ತಿ ಇಷ್ಟೆಂದು ಹೇಳಿ ತೀರದು.ಆದರೆ ಕೆಳವನಿಗೆ ಅದು ಸೇರಬಹುದೇ ಎಂದೀಗ ವಿಚಾರ ಬಂದಿತು. ಗಾಂಧೀ ತತ್ವಜ್ಞಾನ, ಅದೇಕೆ ಯಾವ ತತ್ವ ಜ್ಞಾನವೂ ಅವನಿಗೆ ಸೇರದು. ಮೊನ್ನೆ ಡಾಕ್ಟರ ಪರೀಕ್ಷೆ ಮುಗಿದಿದೆ, ಕೆಲವು ದಿನದಲ್ಲಿ ಪಾಸಾದ ಪರಿಣಾಮ ತಿಳಿಯುವುದು. ಅಲ್ಲಿಂದ ಡಾಕ್ಟರನಾಗಿ ಸುಖಸಂತೋಷದಲ್ಲಿ ಕಾಲಕಳೆಯಬೇಕೆಂಬುದೊಂದೇ ಅವನಿಗೆ ತಿಳಿಯುವ ತತ್ವ ಜ್ಞಾನ. ಇಂಥ ಗೆಳೆಯನಿಗೇ ಈ ಪುಸ್ತಕದ ಕಾಣಿಕೆ ಕೊಡುವದು ಯೋಗ್ಯ ಎಂದು ಆಮೇಲೆ ತೋರಿತು. ಉಪಯೋಗವಾದರೆ ಆದೀತು, ಇಲ್ಲದಿದ್ದರೆ ಇಲ್ಲ. ಬಂದ ಬೇರೆ ಅತಿಥಿಗಳ ಸಮಾಚಾರ ಕೇಳುವುದಕ್ಕೆಂದು, ಯಜಮಾನ ರಾದ ಶಂಕರರಾಯರು ಅಷ್ಟಕ್ಕೆ ಬಂದರು. ಸಿದರಾಮಪ್ಪನೂ ಅವರೊಡನೆ ಇದ್ದ. ಅವರಿಗೆ ಅಮೃತನ ಗುರುತನ್ನು ಮಾಡಿಕೊಟ್ಟ. 'ನಿಮ್ಮ ಹೆಸರು ಕುಮಾರ ಹೇಳತಿದ್ದ. ನೀವು ಗಾಂಧೀ ಭಕ್ತರು' ಎಂದು ರಾಯರು ನಕ್ಕರು.

ಅಮೃತನು ಸುಮ್ಮನೆ ನೋಡುತ್ತ ನಿಂತನು. ಅವರ ಕೆಂಪನ್ನ ಕುಳ್ಳಮೈ, ಮುಂದೆ ಬಂದ ಹೊಟ್ಟೆ, ಸುಮಾರು ಪ್ರತಿಯೊಂದು ಬೆರಳಲ್ಲಿ ಹೊಳೆಯುವ ಹರಳುಂಗುರುಗಳು, ಕೊರಳಲ್ಲಿಯ ಬಂಗಾರದ ಪದಕ, ಎದ್ದು ಕಂಡವು. ಶ್ರೀಮಂತಿಕೆಯ ಕಳೆ ಮೋರೆಯ ಮೇಲೆ ಉಕ್ಕುತ್ತಿತ್ತು. 'ನೀವು ಬಂಗಾಲಕ್ಕ ಹೋಗಿದ್ದಿರಂತ, ಅದಕ್ಕs ಪರೀಕ್ಷಾ ಕಳಕೊಂಡಿರಂತ' ಎಂದರು. 'ಹೌದು'. ಎಂದಿಷ್ಟೇ ಅಮೃತ ಆಡಿದ. 'ದೇಶಸೇವಾ ಅಂಬೂದನ್ನ ಎಲ್ಲಾ ಮುಗಿಸಿ ಕೊಂಡು ಮಾಡಬೇಕು. ಅಲ್ಲs ಈ ಸಾರೆ ಹೋಗರಿ ಕಾಲೇಜಕ್ಕ.' 'ಒಳ್ಳೇದು' ಎಂದು ಅಮೃತ ಕೂಡಲೆ ಉತ್ತರ ಕೊಟ್ಟನು. ಅವರು ಕೆಳಗಿಳಿದು ಹೋದರು. ಎಲ್ಲ ಮುಗಿಸಿಕೊಂಡು ದೇಶಸೇವಾ ಮಾಡಬೇಕು ಎಂಬ ಅವರ ವ್ಯವಹಾರಜ್ಞಾನದ ಮಾತು ಅಮೃತನ ಕಿವಿಯಲ್ಲಿ ಕಟ್ಟಿತು, ಅವನ ಭಾವನೆಯನ್ನು ಕೆರಳಿಸಿತು. ಎಲ್ಲ ಮುಗಿಸಿಕೊಂಡು ಅಂದರೇನು ? ಎಲ್ಲ ಕಡೆ ಉರಿಹತ್ತಿ ಸುಡುತ್ತಿರುವಾಗ ದೇಶವೆಲ್ಲಾ ನಾಶವಾಗಿ ನಿರ್ನಾಮವಾದ ಮೇಲೆ ಅದರ ಸೇವಾ ಮಾಡಬೇಕೇ ? ನಮ್ಮದೆಲ್ಲಾ ಮುಗಿಯುವವರೆಗೆ ನೆರೆ ಹಾವಳಿ, ಬರಗಾಲ ನಿಲ್ಲುವವೇ ? ನಾವು ತಡಮಾಡಿದಷ್ಟು ಪಾರತಂತ್ರ್ಯದ ಬೇಡಿ ಇನ್ನೂ ಬಿಗಿಯಾಗುವದಿಲ್ಲವೇ ? ಈ ಬಗೆಯ ವಿಚಾರಗಳಿಂದ ಅವನು ಕೆಲ ಹೊತ್ತು ತ್ರಸ್ತನಾದನು.

ವರಾತ ಹೊರಟಿತು. ಮುಂದೆ ಬಣ್ಣಬಣ್ಣದ ಸಮವೇಷದಲ್ಲಿದ್ದ ಬ್ಯಾಂಡಿನ ವರು, ಅವರ ಹಿಂದೆ ಬಜಂತ್ರಿಯವರು, ಅವರ ಹಿಂದೆ ಎಂಟು ಹತ್ತು ಕಾರುಗಳು, ಒಂದರಲ್ಲಿ ಕಳಸಗಿತ್ತಿಯ. ಕೂಡ ಅಳಿಯದೇವರ ಮೂರ್ತಿ, ಅವುಗಳ ಹಿಂದೆ ವೇಷಭೂಷೆಯ ಸಂಚಾರಿ ಪ್ರದರ್ಶನದಂತಿದ್ದ ಸ್ತ್ರೀ ಪುರುಷರ ಮೇಳ ಈ ಪರಿವಿಡಿಯಿಂದ ಉತ್ಸವ ಸಾಗಿತು. ಅಮೃತ ಸಿದರಾಮಪ್ಪನ ಕೂಡ ಎಲ್ಲರ ಹಿಂದೆ ನಾಲ್ಕು ಮಾರು ಅಂತರ ಬಿಟ್ಟು ನಡೆದಿದ್ದನು. ಮೆರವಣಿಗೆಯ ಒಳಒಳಗೆ ಸೇರಿ ಅದರ ಸಂತಸದಲ್ಲಿ ಒಂದಾಗುವುದೆಂದರೆ ಅವನಿಗೆ ಹೇಗೆ ಹೇಗೋ ಆಗುತ್ತಿತ್ತು. ಇದ್ದುದರಲ್ಲಿ ಸಿದರಾಮಪ್ಪನ ಸಹವಾಸ, ಅವನ ಕೂಡ ಸಂಭಾಷಣೆ ಅವನಿಗೆ ಹಿತವಾಗಿದ್ದುವು. ವಿವಾಹ ಮಂಡಪಕ್ಕೆ ಎಲ್ಲರೂ ಬಂದರು. ಬಾಳೆಹಣ್ಣು ನಿವಾಳಿಸಿ ಒಗೆದು ಅಳಿಯನನ್ನು ಒಳಗೆ ಕರೆದೊಯ್ದರು. ಅಕ್ಕಿಕಾಳಿನ ತಯ್ಯಾರಿ ಮುಗಿಯುತ್ತ ಬಂದಿದೆ. ಆಮಂತ್ರಿತರು ಬಂದು ತಂತಮ್ಮ ಸ್ಥಾನದಲ್ಲಿ ಕೂಡುತ್ತಿದ್ದಾರೆ. ವಾದ್ಯಗಳ ಕಲಕಲ, ಧ್ವನಿಗಳ ಸಂಕುಲ

ಇದರಲ್ಲಿ ಒಬ್ಬರ ಮಾತು ಒಬ್ಬರಿಗೆ ಕೇಳುವಂತಿಲ್ಲ. ಮಂಡಪವಂತೂ ರಾಜಸಭೆಯಂತೆ ಅಲಂಕೃತವಾಗಿದೆ. ಯಾವುದಕ್ಕೆ ಕೊರತೆಯಿದೆ? ಶಂಕರರಾಯರಂಥ ಪುಬ್ಬಳ್ಳಿಯ ಕುಬೇರರ ಮಗನ ಮದುವೆ. ಬೀಗರೂ ಅಷ್ಟೇ ಶ್ರೀಮಂತರು. ದೊಡ್ಡ ದೊಡ್ಡ ಅಧಿಕಾರಿಗಳೂ ವರ್ತಕರೂ ಇತರ ಪ್ರತಿಷ್ಠಿತರೂ ಮುಂದಿರಿಸಿದ ಕುರ್ಚಿಗಳಲ್ಲಿ ಬಂದು ಕೂತಿದ್ದಾರೆ. ಕಲೆಕ್ಟರ, ಡಿ. ಎಸ್. ಪಿ. ಯವರು ಸಹ ಧಾರವಾಡದಿಂದ ಅದೇ ಬಂದರು. ಅವರನ್ನು ಶಂಕರರಾಯರು ಸ್ವಾಗತಿಸಿ ಅವರಿಗಾಗಿ ಕಾದಿಟ್ಟ ಕುರ್ಚಿಗಳಲ್ಲಿ ಕೂಡಿಸಿದರು. ಉಳಿದನೇಕರು ಹಾಸಿದ ಜಮಖಾನೆಯ ಮೇಲೆ ಕೂತರು. ಆಮಂತ್ರಣವಿಲ್ಲದೆ ಇದ್ದರೂ ನೋಡಬೇಕೆಂಬ ಉಬ್ಬಿನಲ್ಲಿ ಆಮಂತ್ರಣ ಪಡೆದವರ ಜರಬಿನಿಂದ ಒಳನುಗ್ಗಿದ ಕೆಲವರು ಸುತ್ತುಗಟ್ಟಿ ನಿಂದರು. ಸಮಾಜದಲ್ಲಿದ್ದ ಭೇದಗಳು, ಸಮಾಜದಲ್ಲಿಯ ವೃತ್ತಿಗಳು ಎಲ್ಲವೂ ಆ ಮಂಡಪದಲ್ಲಿ ಸಂಗ್ರಹವಾಗಿ ತೋರಿದವು. ಅಕ್ಕೀಕಾಳಿನ ಹೊತ್ತಾಯಿತು.ಜಗಲಿಯ ಮೇಲೆ ಕುಮಾರ, ಅವನಿದುರು ಅಂತಃಪಟದಾಚೆ 'ಕುಮಾರಿ' ಇಬ್ಬರೂ ನಿಂತಿದ್ದಾರೆ. ಇಬ್ಬರೂ ಇನ್ನೈದು ಮಿನಿಟಿನಲ್ಲಿ ಪತಿಪತ್ನಿಯರಾಗುವರು. ಸುಮುಹೂರ್ತೆ ಸಾವಧಾನ'ದ ಮಂತ್ರಘೋಷ ಮೊದಲಾಯಿತು. ಎಲ್ಲದರಲ್ಲಿ ತಮ್ಮದೂ ಇಷ್ಟು ಅಕ್ಕೀಕಾಳು ಇರಲೆಂದು ಬಂದ ಆಗಂತುಕ ಜನ ಅಕ್ಕೀಕಾಳಿಗಾಗಿ ಕಚ್ಯಾಡಿ ಆ ತಾಟನ್ನೇ ನೆಲಕ್ಕೆ ಕೆಡವಿದರು. ಅದರಿಂದ ವಾದಿಸ್ಯಾಟ–ಗುದ್ದಾಟವಾಯಿತು; ಎಲ್ಲ ನೋಡುತ್ತ ಮಂಡಪದ ತುದಿಗೆ ಅಮೃತ ನಿಂತಿದ್ದನು. ಅವನ ವರೆಗೆ ಅಕ್ಕಿಕಾಳು ಬರಲಿಲ್ಲ; ಅವನೇನು ಮರುಗಲಿಲ್ಲ. ಮುಹೂರ್ತ ಬಂದಿತು. ಎಲ್ಲರೂ ದಿಕ್ಕು ದಿಕ್ಕಿನಿಂದ ಮಂತ್ರಾಕ್ಷತೆ ತೂರಿದರು, ಚಪ್ಪಾಳೆ ತಟ್ಟಿದರು. ವಾದ್ಯಗಳು ಮೊಳಗಿದವು. ವಧೂವರರು ಅಕ್ಕೀಕಾಳಿನ ಮಳೆಗೆ ಸಿಕ್ಕು ಕಕ್ಕಾವಿಕ್ಕಿಯಾದರು. ಜನ ಮಾತ್ರ ಸಂತೋಷದಿಂದ ಕೇಕೆ ಹಾಕಿತು. ಮಂಡಪದ ತುಂಬೆಲ್ಲ ಅಕ್ಕೀಕಾಳಿನ ಸೂರ್ಯಾಟ. ಯಾರಿಗೂ ಇದೆಲ್ಲ ವ್ಯರ್ಥವೆಂದು ಒಂದು ಕ್ಷಣ ಕೂಡ ತೋರಲಿಲ್ಲ. 'ಇಷ್ಟು ಅಕ್ಕಿಯ ಅನ್ನದಿಂದ ಎಷ್ಟು ಒಡಲುಗಳು ತಣಿಯಬಹುದಾಗಿತ್ತಲ್ಲ!' ಈ ಯೋಚನೆಯಿಂದ ಅಮೃತನ ಚಿತ್ತ ಕಲಕಿತು. ಅದೇ ಸಮಯಕ್ಕೆ ಒಂದು ನೋಟ ಕಂಡಿತು. ಒಬ್ಬ ಬಾವಾಜಿಯು ಮಂಡಪದ ತುದಿಯವರೆಗೆ ಹೇಗೊ ನುಗ್ಗಿ ತನ್ನೆರಡು ಬಾಲಬ್ರಹ್ಮಚಾರಿಗಳನ್ನು ಕರೆದುಕೊಂಡು ಬಂದು ನಿಂತಿದ್ದ. ಅವರ ಗಮನವೆಲ್ಲ ನೆಲದ ಕಡೆಗೆ, ಅಲ್ಲಿ ಸೂರೆಯಾದ ಅಕ್ಕೀಕಾಳಿನ ಕಡೆಗೆ.

'ಲೇವೊ ಲೇವೊ' ಎಂದು ಬಾವಾಜಿ ಮೆಲ್ಲಗೆ ಕೂಗುತ್ತಿರಲು ಆ ಹುಡುಗರು ಜನರ ಕಾಲುಬುಡಕ್ಕೆ ಸಾಗಲಬಿದ್ದು ಅಕ್ಕೀಕಾಳನ್ನು ಬಳಿದು ತಂದೆಯ ಕೈಯಲ್ಲಿಯ ಭಿಕ್ಷಾಪಾತ್ರೆಯಲ್ಲಿ ಹಾಕುತ್ತಿದ್ದರು. ಅವನದನ್ನು ಮರೆಗೆ ಹಿಡಿಯುತ್ತಿದ್ದ. ತಾಟಿನಿಂದ ಕೆಳಗೆ ಚೆಲ್ಲಿದ ಅಕ್ಕಿಯ ಕೆಲಭಾಗ ಅವರಿಗೆ ಸಿಕ್ಕಿತು; ಜನ ತೂರಾಡಿದ್ದೂ ದೊರೆಯಿತು. ಒಳ್ಳೇ ಸಂತುಷ್ಟರಾಗಿ ಒಬ್ಬರನ್ನೊಬ್ಬರು ನೋಡುತ್ತ ಅವರು ಮೆಲ್ಲನೆ ಹಿಂಜರಿದರು. ಅಮೃತ ಇದನ್ನೆಲ್ಲ ಕಣ್ಣಿಟ್ಟು ನೋಡಿದ. ಅವನಿಗೆ ಸಂಕಟವಾಯಿತು. ಇದು ನಮ್ಮ ದೇಶದ ಜನ! ಈ ಗತಿಗೆ ಬಂದಿಳಿದ ಜನ! ಕೆಂಪು ಬಣ್ಣ ತೊಡೆದುಕೊಂಡು ಜನರ ಕಾಲ ತುಳಿತಕ್ಕೆ ಸಿಕ್ಕು ಹೊಲಸಾದ ಅಕ್ಕೀಕಾಳು ಸಹ ಇವರಿಗೆ ಕುದಿಸಿ ತಿನ್ನಲು ಬೇಕು. ಕಳ್ಳತನದಿಂದ ಪಡೆದರೂ ಚಿಂತೆಯಿಲ್ಲ, ತಿಂದು ಬದುಕಬೇಕು. ಆ ಬಾವಾಜಿಯ ವೇಷ ಸಂನ್ಯಾಸಿಯದು, ಕೃತಿ ಹೊಲಸು ಹುಳದ್ದು. ಹೌದು, ಅವನೂ 'ಅಕ್ಕೀಕಾಳಿಗೆ' ಬಂದಿದ್ದ, ಆಶೀರ್ವಾದ ಮಾಡಿ ಹೋದ!

ಪಾನಸುಪಾರಿ, ಅತ್ತರದಾಣಿ-ಗುಲಾಬದಾಣಿ, ಹೂಗುಚ್ಛ ಇವುಗಳನ್ನು ಕೊಡುವ ಕಾರ್ಯಕ್ರಮ ನಡೆಯಿತು. ಕೆಲವು ಶಿಷ್ಟರಿಗೆ ಚಹಫಳಾರವೂ ಒಂದು ಕಡೆಗೆ ಆಯಿತು. ಗದ್ದಲವೆಲ್ಲ ಕರಗಿತು. ಅಮೃತ ಜಗಲಿಯ ಹತ್ತಿರ ಬಂದು ಕೆಳಮನಿಯನ್ನು ಕಂಡು ತನ್ನ ಪುಸ್ತಕವನ್ನು ಅವನ ಕೈಯಲ್ಲಿಟ್ಟು 'ಇದು ನಿನ್ನ ಬಡಮಿತ್ರನ ಕಾಣಿಕೆ' ಎಂದನು. ಕೆಳಮನಿ ಅದನ್ನು ನೋಡಿದನು. ಗಾಂಧಿಯ ಪುಸ್ತಕವಾಗಿತ್ತು. ಮುಖ ಸೊಟ್ಟಗೆ ಮಾಡಿದ. 'ಗಾಂಧಿನ್ನ ತಂದು ಅಮರಿಸಿದೇನಪಾ ನಮಗ?' ಎಂದು ಚೇಷ್ಟೆ ಮಾಡಿದ.

'ಅದನ್ನ ನೀ ಓದಿ ಆದರೂ ನೋಡು' ಅಮೃತ ಆಡಿದ,

'ಹೂಂ. ಈಗ ಸುರುಮಾಡಲೇನು? ಅಂದರ ನಾಳೆ ನಾನೂ ನಿನ್ಹಂಗ ಬಂಗಾಲಕ್ಕ ಹೊರಡಬಹುದು.'

'ಹೌದು, ಹೊರಟರೇನು ತಪ್ಪು?'

ಇಬ್ಬರೂ ಅಲ್ಲಿಗೇ ಮಾತು ಮುಗಿಸಿದರು. ವಿವಾಹದ ವಿಧಿಗಳು ಮುಂದರಿದವು. ಅಮೃತ ತನ್ನ ಬಿಡಾರಕ್ಕೆ ಬಂದುಬಿಟ್ಟನು. ಪಾನುಸುಪಾರಿಯ ಕೆಲಸ ಮುಗಿದ ಮೇಲೆ ಸಿದರಾಮಪ್ಪನೂ ಅಲ್ಲಿಗೆ ಬಂದನು. ಅಮೃತನಿಗೆ ಫರಾಳ ತಂದುಕೊಟ್ಟನು. ಇಬ್ಬರೂ ಮಾತಾಡುತ್ತ ಕುಳಿತರು:

'ಹೆಂಗಾತು ರಾಯರsa ಮದವಿ?' ಸಿದರಾಮಪ್ಪ ಕೇಳಿದನು.

'ಕೇಳತೀರೇನು ಸಿದರಾಮಪ್ಪ. ಅಕ್ಕೀಕಾಳು ಸೂರ್ಯಾಗಿ ಹೋದವು. ನಿಮ್ಮ ರಾಯರ ಶ್ರೀಮಂತಿಕೆಯನ್ನು ಅದರಿಂದಲೇ ಅಳೀಬೇಕು.'

'ಅಕ್ಕೀಕಾಳು ತಗೊಂಡೇನು ಸುಡತೀರಿ ? ಅಷ್ಟು ಮುತ್ತಿನ ಕಾಳು ಅವ ಇವರ ಹತೀಲೆ.'

'ಆ ? ಇಷ್ಟು ಶ್ರೀಮಂತರಲ್ಲ ? ಎದರಿಂದ ಆದರು ?'

'ಶ್ರೀಮಂತರಂದರ ಏನು ಹೇಳಲಿ? ಯುದ್ಧಕ್ಕಿಂತ ಮೊದಲ ಬರೇ ಸಾವಿರ ಗಟ್ಲೆ ಗಳಿಸಿದ್ದರು. ಯುದ್ಧ ಬಂತು, ಕಂಟ್ರೋಲ ಬಂತು, ಅದರ ಜೋಡಿ ಕಾಳಾ ಬಜಾರ ಬಂತು. ಮತ್ತೇನು ಕೇಳತೀರಿ ? ಈಗ ಲಕ್ಷಾಧೀಶ ಆಗ್ಯಾರಂದೆ ಶಂಕರರಾಯರು. ದುಡ್ಡಿನ ಕಿಮ್ಮತ್ತs ಇಲ್ಲ. ಇವರೂ ದೊಡ್ಡ ದೊಡ್ಡ ಕಿರಾಣಿ-ಜವಳಿ ಅಂಗಡಿ ಅವ. ಇವರ ಶೇರಿಲ್ಲದ ಛಲೋ ಕಂಪನೀನ ಇಲ್ಲನ್ನರಿ. ನಮ್ಮಪ್ಪ ಹೇಳತಿದ್ದ ನೋಡರಿ : ಇವರು ಮೊದಲ ಹುಡಗಿದ್ದಾಗ ಒಂದು ಹರಕ ಧೋತರ—ಹೊಲಸು ಅಂಗಿಮ್ಯಾಲೆ ಹುಬ್ಬಳ್ಳಿಗೆ ಬಂದರಂತ. ಹಾರುವರ ಮನ್ಯಾಗ ವಾರ ಹಚಿಗೊಂಡು ಸಾಲೀ ಕಲತು ಆ ಕಾಲದ ಮ್ಯಾಟ್ರಿಕ್ ಆದರಂತ. ಒಳ್ಳೆ ಸ್ವಾಭಿಮಾನದ ಮನಸ್ಯಾ. ನೌಕರಿ ಚಾಕರಿ ಬ್ಯಾಡಂತ ಹೇಳಿ ಒಬ್ಬರ ಔಷಧದಂಗಡ್ಯಾಗ ಕೆಲಸ ಹಿಡಿದು ಹುಡುಗರಿಗೆ ಕಲಿಸಿ ರೊಕ್ಕಮಾಡಿ ಮಾಡಿ ತಮ್ಮದs ಒಂದು ಕಿರಾಣಿ ಅಂಗಡಿ ತಗದರು. ಆಮ್ಯಾಗ ಜವಳಿ ಅಂಗಡಿ ತಗದರು. ಮೊದಲನೇ ಯುದ್ಧ ಬಂತಲ್ಲ ಆಗ ಜಗ್ಗಿ ಫಾಯದೇ ಆತು. ಈಗ ಬೆಳಸಿಗೋತ ಬಂದು ಲಕ್ಷಾಧೀಶ ಆಗ್ಯಾರ ಅಲ್ಲಿಕ್ಕೆ ಹರಕತ್ತಿಲ್ಲ.'

'ಹಿಂಗs ? ಮೊದಲನೇ ಯುದ್ಧಕ್ಕ ಸಹಸ್ರಾಧೀಶ, ಎರಡನೇದ್ದಕ್ಕ ಲಕ್ಷಾಧೀಶ ಆದರು. ಮೂರನೇ ಯುದ್ಧಕ್ಕ ಕೋಟ್ಯಾಧೀಶ ಆಗತಾರ ಅನಬಾರದs ?'

ಇಬ್ಬರೂ ಮನವಾರೆ ನಕ್ಕರು. ಇದೇ ರೀತಿ ಸಣ್ಣ ಆರಂಭದಿಂದ ಈ ಯುದ್ಧಕಾಲಕ್ಕೆ ಭಾರೀ ಶ್ರೀಮಂತರಾದ ಇತರ ಅನೇಕ ವ್ಯಾಪಾರಿಗಳ ಉದಾಹರಣೆಯನ್ನು ಸಿದರಾಮಪ್ಪನು ಅಮೃತನಿಗೆ ಹೇಳಿದನು. ಎಲ್ಲರ ಕತೆ ಕೇಳಿದಂತೆ ಬಡಬಗ್ಗರ ಎದೆತುಳಿದು ಅದರ ತಳಹದಿಯ ಮೇಲೆ ಸಿರಿವಂತಿಕೆ ಎಲ್ಲಕಡೆಗೆ ಮನೆ ಕಟ್ಟಿಕೊಂಡ ಹಾಗೆ ಒಂದು ಚಿತ್ರ ತಲೆದೋರಿತು. ಅಂಥದೇ ಒಂದು ಮನೆಯಲ್ಲಿ ತಾನೀಗ ಮೇಲಟ್ಟದಲ್ಲಿ ಕುಳಿತಿರುವೆನೆಂದು ನೆನೆದು ಅವನ ಮೈಯುಮುಳ್ಳಾಯಿತು, ಮೋರೆ ಸಣ್ಣದಾಯಿತು. ಸಿದರಾಮಪ್ಪನು ಬೇರೆ ಕೆಲಸಕ್ಕೆಂದು ಅಲ್ಲಿಂದ

ಹೊರಟುಹೋದನು.

ಮದುವೆಯ ಸಾಂಪ್ರದಾಯಿಕ ವಿಧಿಗಳೆಲ್ಲ ಸಾಂಗವಾಗಿ ನಡೆದವು. ಹೋಮಗಳೂ ಭೂಮಗಳೂ ಮುಗಿದು ಮರುದಿನ ರಾತ್ರಿ ಸಾಡೇದ ಮೆರವಣಿಗೆ ಅದ್ಭುತವಾದ ವಿಜೃಂಭಣೆಯಿಂದ ಸುಮಾರು ಬೆಳತನಕ ಸಾಗಿತು. ಹುಬ್ಬಳ್ಳಿ ಊರಿಗೆ ಊರೇ ನಿದ್ದೆಗೆಟ್ಟು ಕಣ್ತೆರೆದು ನೋಡಿತು. ಅವೇನು ವಾದ್ಯಗಳು, ದೀಪಗಳು, ಬಿರುಸು ಬಾಣಗಳು, ಮದ್ದುಕುಳ್ಳಿಗಳು! 'ಟಾಪು' ತೆಗೆದ ಮೋಟರ ಕಾರಿನಲ್ಲಿ ಐಟಾಗಿ ಕುಳಿತ ಕೆಳಮನಿ ದಂಪತಿಗಳು ಅಂದು ಜನಕ್ಕೆ ಆ ವೈಭವದಲ್ಲಿ ರತಿ ಕಾಮರಂತೇ ಕಂಡಿರಬೇಕು. ಹೊಟ್ಟೆಯ ತೊಳಲಾಟ ವನ್ನೆಲ್ಲ ಮರೆತು ಬಡಜನ ನೋಡಲು ಮಾಳಿಗೆಯೇರಿತ್ತು. ಇಲ್ಲಿವೆ ಹೊಟ್ಟೆಗೆ ದೊರೆಯುದ ಹಬ್ಬವನ್ನು ಕಣ್ಣಿಗೆ ಪಡೆಯಿತು. ಇದನ್ನು ನೋಡಿದವ ರಾರಾದರೂ ಈ ದೇಶದಲ್ಲಿ ದಾರಿದ್ರ್ಯವಿದೆ, ದುಃಖರಾಶಿಯಿದೆ ಎಂದು ಅನ್ನಬಹುದಾಗಿತ್ತೇ ?

ಮದುವೆಯ ಮೂರನೆಯದಿನ ಕೆಳಮನಿಯ ಮನೆಯಲ್ಲಿ ಹೆಣ್ಣಿನ ಕಡೆಯ ಬೀಗರಿಗೆ, ಊರಿನ ಅತಿಥಿಗಳಿಗೆ ಪಂಚಪಕ್ವಾನ್ನದ ಮೇಜವಾನಿ. ಬುಂದೇ, ಜಿಲೇಬಿ, ಖೀರು, ಹೋಳಿಗೆ, ಘಾರಿಗೆ ಮುಂತಾದ ಪಕ್ವಾನ್ನ ಮಾಡಿಸಿದ್ದಾರೆ. ರಂಗೋಲಿಯ ಅಲಂಕಾರ, ಊದಬತ್ತಿಯ ಮೇಘಾಕಾರ ಕಣ್ಣಿಗೆ ಕಟ್ಟಿದೆ, ಮೂಗಿಗೆ ಇಡುಗಿದೆ. ದೊಡ್ಡ ಬಾಳೆಲೆಯ ಮೇಲೆ ಸ್ವಲ್ಪವೂ ಜಾಗ ಬಿಡದಂತೆ ಎಲ್ಲ ಬಡಿಸಿ ನಡುವೆ ಅನ್ನದ ರಾಶಿಯನ್ನು ಹಾಕಿದರು. ಎಲ್ಲರೂ ಊಟಕ್ಕೆ ಕುಳಿತರು. ರಾಯರನ್ನು ಹೊಗಳುತ್ತ ಹೊಟ್ಟೆ ಹರಿಯುವವರೆಗೆ ಉಂಡರು. ಆಗ್ರಹಕ್ಕೆ ಆರಂಭವಾಯಿತು. ಶಂಕರರಾಯರು ಸ್ವತಃ ಎಲ್ಲ ಕಡೆ ತಿರುಗಾಡಿ ಆಗ್ರಹ ಮಾಡಿ ಜಿಲೇಬಿ-ಬುಂದೆಗಳನ್ನು ಹಾಕಿಸಿದರು. ಅವನ್ನು ತಿಂದವರು ಕೆಲವರು, ಚೆಲ್ಲಿದವರೇ ಬಹಳ. ಊಟ ಮುಗಿಯಿತು. ಎಲೆಗಳನ್ನೆಲ್ಲ ನೋಡಿದರೆ ಚೆಲ್ಲಿದ ಅನ್ನ ಪಕ್ವಾನ್ನ ಗಳೇ ಎಲ್ಲ ಕಡೆ ಕಾಣುತ್ತವೆ. ಯಾರಿಗೂ ಅದರ ಕಾಳಜಿಯಿಲ್ಲ. ಹಾಳು ಮಾಡು ವುದೂ ಮಾಡಿದ್ದಾರ ಬಗ್ಗೆ ದರಕಾರ ಮಾಡದಿರುವುದೂ ಶ್ರೀಮಂತಿಕೆಯ ಒಂದು ಲಕ್ಷಣವಲ್ಲವೇ ? ಅಮೃತನಿಗೆ ಊಟಕ್ಕಿಂತ ಈ ನೋಟವೇ ತಲೆಚಿಟ್ಟು ಹಿಡಿಸಿತು. ಅವನು ಎದ್ದು ಕೈತೊಳೆದು ತನ್ನ ಕೋಣೆಗೆ ಹೋದ. ಅಲ್ಲಿ ತಿರುಗುತ್ತಿರಲು ಮನೆಯ ಮುಂದೆ ಗಲಿಬಿಲಿ ಕೇಳಿಸಿತು. ಕಟಾಂಜನದಲ್ಲಿ ನಿಂತು ನೋಡಿದ— ಒಂದು ದೊಡ್ಡ ಸೈನ್ಯವೇ ಮುಕುರಿದೆ. ಕುರುಡರು, ಕುಂಟರು,

ರೋಗಿಗಳು, ಬಾವಾಗಳು, ಹರಿಣಶಿಕಾರಿಗಳು ಇವರದೊಂದು ದೊಡ್ಡ ತಂಡ ಅನ್ನದ ಕೋಟೆಗೆ ಮುತ್ತಿಗೆ ಹಾಕಲು ಬಂದಂತೆ ಬಂದಿದೆ. ಊಟ ಮುಗಿದು ಜನ ಹೊರಬೀಳಲು, ಅವರ ಕೀಸರಬಾಸರ ಜೋರಾಯಿತು. 'ರಾವಸಾಯೇಬ, ರಾವಸಾಯೇಬ, ನನಗೆ ಹಾಕರಿ, ನನಗೆ ಹಾಕರಿ.' ಒಂದೇ ಸವನೆ ಇದೇ ಜಪ. ಕೆಲವರು ಗೇಟಿನ ಒಳಗೆ ನುಗ್ಗಿ ತಲೆಬಾಗಿಲ ಹತ್ತಿರ ಹೋಗಿ ಹಣೆಯಿಕ್ಕಿ ಬಾಯಿ ತೆಗೆಯುತ್ತಿದ್ದಾರೆ. ಶಂಕರರಾಯರು ಆಕಸ್ಮಾತ್ ಅಲ್ಲಿಗೆ ಬಂದು ನೋಡಿದರು, ಕೆರಳಿದರು. 'ಏ ಸೂಳೀಮಕ್ಕಳ, ಎಲ್ಲೀತನಕ ಬರತೀರಿ? ಇವನ್ನ ಹೊರಗೆ ಹಾಕಿರೊ. ಹಂಗs ನಿಂತೀರಲ್ಲ ನೋಡಿಗೋತ ಕತ್ತೀಹಂಗ' ಎಂದು ಆಳುಗಳಿಗೆ ಆಜ್ಞಾಪಿಸಿದರು. ಆಯಿತು, ಲಾಠೀಪ್ರಹಾರವಾಯಿತು. ಆ ಜನ ಸರಿದು ಗೊಳೋ ಎನ್ನುತ್ತ ಗೇಟಿನ ಹೊರಗೆ ಹೋಯಿತು. ಹೆಂಗಾಯಿತೆಂದು ಹೊರಗಿದ್ದ ತಂಡ ಅವರನ್ನು ನೋಡಿ ನಕ್ಕಿತು. ಆದರೆ ಒಳಗೆ ಹೋಗಿ ಓಡಿ ಬಂದ ಜನಕ್ಕೆ ಯಜಮಾನರು ಬಯ್ದರೆಂದು ಮಾನಮುಕ್ಕಾಗಲಿಲ್ಲ, ಸಹವ್ಯವಸಾಯಿಗಳು ಅಣಕಮಾಡಿದರೆಂದು ಕ್ರೋಧ ಬರಲಿಲ್ಲ. ಅವರು ಶುದ್ಧಬ್ರಹ್ಮರು, ಅನ್ನಬ್ರಹ್ಮನ ಆರಾಧನೆಯಲ್ಲಿ ತಲ್ಲೀನರು. ಹೇಗಾದರೂ ಹೊಡಸಿ ಬಡಸಿಕೊಂಡಾದರೂ ಎಂಥದಾದರೂ ಎಂಜಲನ್ನ ಸಿಗಲಿ ಎಂಬುವಕ್ಕಾಗಿ ಬಂದವರು. ಅನ್ನದೇವನ ಮಂದಿರದ ಮುಂದೆ ದಾರಿಕಾಯುತ್ತ ನಿಂತ ಏಕಾಂತ ಭಕ್ತರಂತೆ ನಿಂದರು. ಉಂಡು ಹೊಟ್ಟೆಯುಬ್ಬಿಸಿ ತೇಗುತ್ತ ತಾಂಬೂಲ ತಿಂದು ಉಗುಳುತ್ತ ನಿಮಂತ್ರಿತರು ಹಾದುಹೋದರು. ಈ ತಿರುಕರಿಗೆ ಕಳವಳವಾಗಲಿಲ್ಲ. ತಮ್ಮ ಪಾಲಿನದು ಮೊರೆತೇ ದೊರೆಯುವುದೆಂದು ಖಾತ್ರಿ ಅವರಿಗೆ. ಎಲೆಬಳಿಯುವವರು ಚೆಲ್ಲಿದ್ದನ್ನು ಬುಟ್ಟಿಗಳಲ್ಲಿ ತುಂಬಿ ಒಳಗಿಟ್ಟು ಹೆಚ್ಚುಕಡಿಮೆ ತೆರವಾದ ಎಲೆಗಳನ್ನು ಚೆಲ್ಲಲು ಹೊರಗೆ ಬಂದರು. ಬಂದದ್ದನ್ನು ನೋಡಿದ್ದೇ ತಡ ಎಲ್ಲ ತಿರುಕರು ಒಬ್ಬರಮೇಲೊಬ್ಬರು ಬೀಳುತ್ತ ಮುಂದೆ ಬಂದರು. ಅವರು ನಿರೀಕ್ಷಿಸಿದ ಅಮೃತ ಗಳಿಗೆ ಬಂದಿತು. 'ಸರೀರಿ ಸರೀರಿ' ಎಂದು ಕೂಗಿಕೊಳ್ಳುತ್ತ ಬಳಿದವರು ಎಲೆತಂದು ಗಟಾರದಲ್ಲಿ ಬೀಸಿದರು. ಅಷ್ಟರಲ್ಲಿ ಕೆಲವು ಚಾಣಾಕ್ಷರು ಚಲಾಖಿಯಿಂದ ಗಟಾರದ ಬುಡಕ್ಕೆ ತಮ್ಮ ಕೊಳಕು ಬಟ್ಟೆ ಹರವಿ ಸಿಕ್ಕ ಎಲೆಗಳನ್ನು ಮಡಿಚಿ ಇಟ್ಟುಕೊಂಡರು. ಗಟಾರದಲ್ಲಿ ಸೂರೆಯಾದ ಕೆಲವನ್ನು ಬೇರೆ [illegible] ಬಳಕೊಂಡರು. ಗಟಾರದ ತೀರ್ಥದಿಂದ ಅದು ಪವಿತ್ರವಾದಂತೆ [illegible] ತೋರಿರಬೇಕು. ಮತ್ತೊಂದು ಪುಡಕಿ ಬಂದಿತು, ಅದಕ್ಕೆ ಮತ್ತೆ

ಭಿಕ್ಷುಕರು ಮುತ್ತಿಗೆ ಹಾಕಿದರು. ಮೊದಲು ಸಲ ತಗೊಂಡವರ ಯುಕ್ತಿ ಇತರರಿಗೆ ಗೊತ್ತಾಗಿತ್ತು, ಹೊಟ್ಟೆಕಿಚ್ಚಿನಿಂದ ಅವರ ಪ್ಯೈಯುರಿಯುತ್ತಿತ್ತು. ಮತ್ತೆ ಅವರು ಅದೇ ಯುಕ್ತಿ ಮಾಡಲಾಗಿ, ಅವರ ಕುತ್ತಿಗೆಗೆ ಕೈಕೊಟ್ಟು ಹಿಂದೆ ಸರಿಸಿ ಬೇರೆ ಪುಂಡರು ತಮ್ಮ ಅರಿವೆ ಹಾಸಿದರು. ಅವೆರಡೂ ಪಕ್ಷಗಳಲ್ಲಿ ಯಾದವೀ ಯುದ್ಧ ಸುರುವಾಯಿತು. ಒಬ್ಬರಿಗೊಬ್ಬರು ಬಯ್ದರು, ಗುದ್ದಿದರು, ನುಗಿಸಿದರು. ಒಬ್ಬಿಬ್ಬರು ಹೋಗಿ ಗಟಾರದಲ್ಲಿ ಬಿದ್ದರು, ತಲೆಯೊಡಕೊಂಡರು. ಒಂದು ಮುದುಕಿ ಈ ನುಗ್ಗಾಟದಲ್ಲಿ ಸಿಕ್ಕು 'ಅಯ್ಯಯ್ಯಯ್ಯರೋ' ಎಂದು ಹೊಯ್ಯ್‌ಕೊಳ್ಳಹತ್ತಿತು. ಈ ನಡುವೆ ಎಲೆಗಳೆಲ್ಲ ಗಟಾರದ ಪಾಲಾದವು. ಬಡದಾಟದಲ್ಲಿ ಸೇರದ ತಂಡದವರು ಅವನ್ನು ಆರಿಸಿಕೊಂಡು ಕಟ್ಟಿಕೊಂಡರು, ಖುಷಿಯಾದರು. ಸುಮ್ಮನೆ ಕೂತು ಗುದ್ದಾಡದವರಿಗೆ ದೇವರು ಒಲಿಯುತ್ತಾನೆ ಎಂದು ದೇವರಲ್ಲಿ ಅವರ ವಿಶ್ವಾಸ ಅಂದು ಹೆಚ್ಚಿರಬೇಕು. ಆದರೆ ಆ ಜಗಳಗಂಟರು ಸುಮ್ಮನೇ ಕುಳಿತರೇ ? ಜಗಳಾಡುತ್ತಲೇ ಎಲೆಗಳಿಗೆ ಕೈ ಹಾಕುತ್ತಿದ್ದರು, ಅದರಿಂದ ಮತ್ತಿಷ್ಟು ಜಗಳ. ಈ ರೀತಿ ನಡೆದದ್ದನ್ನು ನೋಡುತ್ತ ಮೇಲೆ ನಿಲ್ಲಲಾರದೆ ಅಮೃತ ಕೆಳಗಿಳಿದು ಬಂದನು. ಅವನ ಹೃದಯ ನೊಂದು ಬೆಂದಿತು. ಆದರೆ ಮಾಡಬೇಕೇನು ತಿಳಿಯಲಿಲ್ಲ. ಅವನ ಉಪದೇಶವನ್ನು ಅಲ್ಲಿ ಯಾರು ಕೇಳುವವರು ? ಆ ಗಟಾರದಲ್ಲಿ ಬಿದ್ದ ಮುದುಕಿಯನ್ನು ಮಾತ್ರ ಮೆಲ್ಲಗೆ ಎಬ್ಬಿಸಿ ದೂರ ಒಯ್ದು ನಿಲ್ಲಿಸಿದನು. ಇಷ್ಟಾದರೂ ಅದು ತನ್ನ ಪಾಲು ಸಿಗದೆ ಹೋಗುವುದೆಂದು ಕುರುಕುರು ಮಾಡುತ್ತಲೇ ಇತ್ತು. 'ನಾ ಆಮೇಲೆ ಕೊಡಸತೀನಿ' ಎಂದು ಹೇಳಿ ಅವನು ಅವಳನ್ನು ಅತ್ತ ಕೂಡಿಸಿದನು. ಇವನ್ಯಾವನೋ ಬಳಿದು ಚೆಲ್ಲುವವ ಮುಖಂಡನಿರಬಹುದೆಂದು ತಿಳಿದು, ತಮಗೆ ದೊರೆಯದ ಅಸಂತುಷ್ಟರು 'ಯಪ್ಪ ನಮಗೀಟು ಹಾಕಸರಿ' ಎಂದು ಅವನ ಮುಂದೆ ಬಾಯಿತೆರೆದು ಹಲುಬಹತ್ತಿದರು. ಅವನಿಗೆ ಸಾಕುಬೇಕಾಗಿ ಒಳಗೆ ಬಂದನು. ಎಲ್ಲ ಒಗೆಯುವವರೆಗೆ ಹೀಗೇ ನಡೆಯಿತು. ಸಿಕ್ಕವರು ಧನ್ಯರಾದರು, ಇಲ್ಲದವರು ಮೋರೆ ಒಣಗಿಸಿಕೊಂಡು ಹೋದರು. 'ನಮ್ಮ ದೇಶದಲ್ಲಿ ಅನ್ನ ಸಿಗುವುದರಲ್ಲಿ ಅಷ್ಟೇ ಅಲ್ಲ. ಅನ್ನದ ಎಂಜಲು ಸಿಗುವದರಲ್ಲಿಯೂ ಅದೇ ವಿಷಮತೆ, ಅದೇ ಅವ್ಯವಸ್ಥೆ, ಅದೇ ಕುಸಿಗೆ ಹಿಚುಕಾಟ' ಎಂದು ಅಮೃತನು ಅಂದುಕೊಂಡನು. ಮೇ[illegible]ನ ಕೋಣೆಗೆ ಹೋದನು, ಅಲ್ಲಿಂದ ಕಿಡಿಕಿಯಲ್ಲಿ ನೋಡಿದನು. ಬೀದಿಯ

ತುದಿಗೆ ಕುಳಿತ ತಿರುಕರ ಒಂದು ತಂಡ ಗಟಾರದಿಂದ ಎತ್ತಿ ತೆಗೆದ ಎಂಜಲೆಲೆಗಳಿಂದ ಅನ್ನದಗುಳುಗಳನ್ನು ಪಲ್ಯವನ್ನು ಬುಂದೆಯ ಚೂರುಗಳನ್ನು ಹರಿವಾಣವೊಂದರಲ್ಲಿಬೆರಸಿ ಎಲ್ಲರೂ ಅದರಲ್ಲಿ ಕೈಹಾಕಿ ಬಾಯಿ ಚಪ್ಪರಿಸುತ್ತ ತಿನ್ನುತ್ತಿದೆ. ಅಮೃತನ ಮೈಯೆಲ್ಲ ಜ್ವಲಜ್ಯೋತಿಯಾಯಿತು. 'ಅಯ್ಯೋ ಸುಟ್ಟ ಒಡಲೇ! ಅನ್ನಕ್ಕಾಗಿ ಅಧೋಗತಿಗಿಳಿದ ಈ ದೇಶದ ಜನವೇ!' ಎಂದು ಮರಮರ ಮರುಗಿದನು.

ಸಿದರಾಮಪ್ಪನು ವೀಳ್ಯದೆಲೆಯ ತಾಟನ್ನು ತಂದು ಅಮೃತನ ಮುಂದೆ ಇಟ್ಟನು. ಅವನದನ್ನು ಕಣ್ಣೆತ್ತಿ ನೋಡಲೇ ಇಲ್ಲ.

'ಯಾಕ ರಾಯರ ತಗೋರಿ?'

'ನಾ ಹಕ್ಕೊಳ್ಳುದಿಲ್ಲ ಸಿದರಾಮಪ್ಪ, ಬ್ಯಾರೆ ಮಂದಿಗೆ ಕೊಡು' ಎಂದು ಕಳಿಸಿದನು.

ಸಿದರಾಮಪ್ಪ ಹೋಗಿ ಮತ್ತೆ ಬಂದನು. 'ಏನು ರಾಯರ ಮೈಯ್ಯಾಗ ಬೇಸಿಲ್ಲೇನು?'

'ನನಗೇನಾಗೇದ?' ಹೀಗೆ ಮಾತು ನಡೆಯಲು ತನ್ನ ಕಳವಳವನ್ನು ಅಮೃತ ಸಿದರಾಮಪ್ಪನಿಗೆ ತೋಡಿಕೊಂಡನು. ಅವನೂ ಕೊರಗಿದನು.

'ಏನು ಸಿದರಾಮಪ್ಪ, ಎಷ್ಟು ಹಾಳು ಏನು ಸುದ್ದಿ ಒಂದು ಮೇಜವಾನಿ ಅಂದರ!'

'ಕೈಯಾಗ ಕಾಂಚಾಣ ಕುಣೀತದ. ಏಟು ಹಾಳಾದರೂ ಅದಕೇನು ದಣಿವಿಲ್ಲ ರಾಯರ.'

'ಕಾಂಚಾಣ! ಕುರುಡು ಕಾಂಚಾಣ! ಬಡವರ ಕಾಲಾಗೆ ತುಳಕೋತ ಕುಣೀತದ ಇಂತ ಕವಿ ಹೇಳಿಧಂಗ ಆತು. ಈ ಮೇಜವಾನಿಗೆ ಎಷ್ಟರ ಅಜಮಾಸು ಖರ್ಚಾತು?'

'ಅದಕ್ಕೇನು ಲೆಕ್ಕಾನs ಇಲ್ಲ ಬಿಡರಿ. ನಾಕೈದು ಸಾವಿರ ಆಗಿರಬೇಕು. ಯಾಕಂದರ ಎಲ್ಲಾ ಸಾಮಾನು ಕಾಳಾಬಜಾರದಾಗಿಂದ ತರಬೇಕು.'

'ಅಂದರ ನಿಮ್ಮ ರಾಯರವೇ ಅಂಗಡಿ ಅವಲ್ಲ?'

'ರಾಯರ ಅಂಗಡ ಇದ್ದರೇನಾತು? ಕಾಳಾಬಜಾರದಿಂದs ಮಾಲ ಬಂದು ಬೀಳೋವು ಅವರ ಉಗ್ರಾಣದಾಗ. ಮುಂದಿಗೂ ಅದೇ ಕಿಂಮತ್ತಿಗೆ ತಮಗೂ ಆದೇ ಕಿಂಮತ್ತಿಗೆ ಮಾರಬೇಕು.'

'ಓಹೋ ಎಲ್ಲರಿಗೂ ಒಂದೇ ನ್ಯಾಯ. ಅಲ್ಲ, ದೇಶಕ್ಕ ದೇಶೆಲ್ಲ ಅಕ್ಕಿ ಅಕ್ಕಿ ಅಂತ ಬಾಯ್ಬಿಡತದ. ಅನ್ನದ ಊಟಾನs ಅನೇಕ ಮಂದಿ ಬಿಟ್ಟಾರ. ರಾಯರು ಈ ಮದುವಿಗೆ ಇಷ್ಟೆಂಗ ಸಂಗ್ರಹಿಸಿದರು ಅಂತೀನಿ.'

'ಈಗ ಹಿಂಗದ ನೋಡರಿ. ಬಾಜಾರದಾಗ ಬೇಕಾದ ಹೊತ್ತಿನಾಗ ಬೇಕಾದ ಮಾಲು ಬೇಕಾದಟು ಕೇಳರಿ, ಬೇಲಾಶಕ್ ಸಿಗತದ. ಇಷ್ಟs ಫರಕು, ಯಾರಿಗೂ ತಿಳೀಧಂಗ ಹೋಗಿ ಕೇಳಬೇಕು. ಮತ್ತ ಹಮ್ಮಿಣಿಗಟ್ಲೆ ರೂಪಾಯಿ ಸುರುವಬೇಕು. ಯಾಕಂದ್ರ ಕಂಟ್ರೋಲದ. ಸರಕಾರಕ್ಕೆ ತಿಳೀಬಾರದು. ಆತs ಸರಕಾರ ಅಂದರ ಯಾರು ? ಪೋಲೀಸರು. ಅವರಿಗೆ ತಿಳಿಯುು ಹಂಗಾತs, ಅವರ ಕೈ ಬೆಚ್ಚಗ ಮಾಡಿ ಬಾಯಿ ಬಂದ ಮಾಡೋದಕ್ಕ ಎಷ್ಟೊತ್ತರಿ ? ಈಗ ನೋಡರಿ, ನಿಮಗಂತ ಖಾಸಗಿ ಮಾತು ಹೇಳತೀನಿ. ಈ ಊರ ಪ್ಯಾಟ್ಯಾಗ ಹೊರಗ ಮಳಿಗ್ಯಾಗ ಅಕ್ಕಿ ಕಾಣೂದುಲ್ಲ, ಒಳಗ ವಖಾರದಾಗ .ಚೀಲಗಟ್ಲೆ ಇರತಾವ.'

'ಹಿಂಗs ? ಅವ್ಹೆಂಗ ಸಿಗತಾವ ಅವರಿಗೆ ?'

'ಬ್ಯಾರೆ ಸರಹದ್ದಿನಿಂದ. ಸುತ್ತೇನು ಕಡಿಮಿ ? ಇಂಗ್ರೇಜಿ ರಾಜ್ಯದ ಸುತ್ತೆಲ್ಲಾ ಸಂಸ್ಥಾನ ಅವ, ಶಿರಹಟ್ಟಿ ಶಾಪುರ್ದ್ಹಂಗ ನಡಗಡ್ಡಿ ಆಗಿ ಅವ. ಅಲ್ಲೀದ ಕಳವೀಲೆ ತರೋದು, ಮಾಲು ಒಟ್ಟೋದು. ಗರಜಿದ್ದ ಮಂದಿ ನಾಕಪಟ್ಟು ಕೊಟ್ಟು ಕೊಟ್ಟು ತಾವs ಝುಕ್ಕಸ್ತ ಒಯ್ಯುತಾರ.'

'ಅಂದರ ಇದನ್ನ ಯಾರೂ ನೋಡೋದಿಲ್ಲೇನು ?'

'ನೋಡಿ ಏನ ಮಾಡತಾರ ? ನೋಡುವವರಿಗೂ ಬೇಕಲ್ಲ. ನಿಮಗೊಂದು ಉದಾಹರಣೆ ಹೇಳತೀನಿ. ಇಲ್ಲೇ ಸಮಿಾಪದಾಗ ಮೈಸೂರು ಸಂಸ್ಥಾನದ ಸರಹದ್ದಿನ ಮ್ಯಾಲ ಒಂದು ಹಳ್ಳಿ ಅದ. ನಡುವೆ ಒಂದು ನದೀ ಹರೀತದ. ಅಚ್ಚೀ ದಂಡಿಗೆ ಮೈಸೂರು, ಇಚ್ಚೀ ದಂಡಿಗೆ ಇಂಗ್ರೇಜಿ. ಎರಡೂ ಹಳ್ಳ್ಯಾಗ ಹಗಲ ರಾತ್ರಿ ಬಿಚ್ಚಗತ್ತಿ ಪಾರೇ ಅದ, ಸ್ಪೇಶಲ್ ಪೋಲೀಸ ಪಾರ್ಟಿ ಇಟ್ಟಾರ, ಕಳವಿನ ಮಾಲು ಹೋಗಬಾರದು ಅಂತ. ಅಂಥಾದರಾಗ ದಿನಾ ಸಹಜ ಸಾವಿರ ಚೀಲ ಅಕ್ಕಿ ಅತ್ತಲಾಗಿಂದ ಇತ್ತಲಾಗ ಬರತಾವ. ಇತ್ತಲಾಗಿನ ಜ್ವಾಳ-ಗೋದಿ ಅತ್ತಲಾಗ ದಾಟತಾವ. ಇದಕ್ಕೇನಂತೀರಿ ?'

'ಅಧೆಂಗದು ಸಿದರಾಮುಪ್ಪ? ದಂತಕಥಿ ಕೇಳಿಧಂಗ ಆಗ್ತದ.'

'ದಂತಕಥಿ ಝುಕ್ಕಿಸಿತು ರಾಯರ. ಇದೆಲ್ಲಾ ಉದ್ಯೋಗ ನಡಿಯೋದು ರಾತ್ರಿ ಬಾರಾದಿಂದ ನಸಕು ಹರಿಯೂ ತನಕ. ಚೀಲ ಹಾಕೂ ಹಮಾಲರು, ನಾವ ಹಾಕೋ ಅಂಬಿಗೇರು, ಅಷ್ಟ್ಯಾಕ, ಪಾರೇದ ಪೋಲಿಸರು ಎಲ್ಲಾರೂ ಇದ ರಾಗ ಸಾಮಿಲು. ದಿನಾ ಈ ಮಂದಿ ಎಷ್ಟು ಗಳಿಸತಾರ ಅಂದ್ರಿ? ಕಮ್ಮಿ ಅಂದರ ತಲಿಗೆ ಹತ್ತು ರುಪಾಯಿ. ಇನ್ನೇನ ಬೇಕರಿ? ಬಡಮಂದಿ ಅಂತ ನಾವು ನೀವು ಬಡಕೋತೀವಲ್ಲ, ಈ ಕಾಲದಾಗ ಇಂಥಾ ಬಡಮಂದಿನೇ ಧನ್ಯ ಆಗ್ಯಾರ. ಇಷ್ಟೆಲ್ಲಾ ಲಂಚ-ಖುಷಿ ಕೊಟ್ಟು, ದಲಾಲಿಗಳಿಷ್ಟು ಸುಲಿಗಿ ಮಾಡಿ ಶಾರದೂರಿಗೆ ಮಾಲ ಬಂದು ಬೀಳೋದಕ್ಕ, ಅದರ ಮ್ಯಾಲೆ ತಮ್ಮ, ಖರ್ಚು, ಫಾಯದೆ ಸಿಕ್ಯಾಪಟ್ಟೆ ಹಾಕಿ ಕಾಳಾಬಾಜಾರದಾಗ ಮಾರತಾರ ವ್ಯಾಪಾರಸ್ತರು.'

'ಅಸಾಧ್ಯ ಪ್ರಕರಣ ಸಿದರಾಮುಪ್ಪ. ಹಿಂಗೆಲ್ಲಾ ನಮ್ಮಂದಿ ನಡದರ ಹಿಂದುಸ್ಥಾನಕ್ಕ ಸ್ವಾತಂತ್ರ್ಯ ಸಿಕ್ಕರಸಹ ಅದರ ಕಾಳಾಬಾಜಾರ ಮಾಡದೆ ಬಿಡುವದಿಲ್ಲ!'

ಈಬ್ಬರೂ ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ಅಮೃತ ಹೊರಗೆ ಮುಳುಗುತ್ತಿರುವ ಸೂರ್ಯನನ್ನು ನೋಡುತ್ತ ವಿಚಾರಮಗ್ನನಾದನು. ಸೂರ್ಯ ಕಾದ ಕೆಂಡವಾಗಿದ್ದಾನೆ, ಸುತ್ತೆಲ್ಲಾ ಕೆಂಪು ಹಳದಿ ಮೋಡಗಳ ಪಟ್ಟೆಗಳಿವೆ. ಮುಗಿಲೆಲ್ಲ ರಕ್ತರಂಜಿತವಾದ ದೃಶ್ಯ ತೋರಿತು. ಅದೇಕೊ ಕಲ್ಪನೆಯೊಂದು ಹೊಳೆದು ಹೋಯಿತು. ದೇಶದ ತುಂಬೆಲ್ಲ ರಕ್ತಪಾತವಾಗಿ ಎಲ್ಲ ಈಗಿನ ಕೊಳೆ ತೊಳೆದು ಹೋದ ಮೇಲೇ ನಾಳಿನ ಸ್ವಾತಂತ್ರ್ಯದ ಸೂರ್ಯ ಮೂಡಬಹುದೇ? ಅವನ ಮೈ ಮುಳ್ಳಿಡಿಯಿತು, ಕಣ್ಣು ಮುಚ್ಚಿ ತೆರೆದನು. ಅಷ್ಟಕ್ಕೆ ಅಲ್ಲಿಗೊಬ್ಬ ಮಹನೀಯರು ಬಂದರು. ಅವರು ಖಾದೀ ಬಟ್ಟೆಯನ್ನು ಸಂಪೂರ್ಣ ಧರಿಸಿ, ಗಾಂಧೀ ಟೊಪ್ಪಿಗೆ ಹಾಕಿದ್ದರು, ಸಿದರಾಮುಪ್ಪ ಅಮೃತನಿಗೆ ಅವರ ಗುರುತು ಮಾಡಿಕೊಟ್ಟ : 'ಇವರು ಈ ಊರಿನ ಪ್ರಸಿದ್ಧ ದೇ. ಭ. ರಾಚಯ್ಯನವರು. ಅಸಹಕಾರ ಚಳವಳಿ ಸುರುವಾದ ಹಿಡಿದು ಕಾಂಗ್ರೆಸ್ ಸೇವಾ ಮಾಡ್ಯಾರ.'

ಅಮೃತ ಎದ್ದು ನಿಂತು ಭಕ್ತಿಯಿಂದ ಅವರಿಗೆ ನಮಸ್ಕಾರ ಮಾಡಿದನು. ಅವನಾರೆಂಬುದನ್ನು ಸಿದರಾಮುಪ್ಪ ರಾಚಯ್ಯನವರಿಗೆ ಹೇಳತೊಡಗಿದ. ಅವರು ಅವನನ್ನು ನಡುವೆ ತಡೆದು 'ಗೊತ್ತದೋ ಸಿದರಾಮು. ನಮ್ಮ ರಾಯರ ಕುಮಾರನ ಗೆಳಿಯ. ನೀವ ಹಾದಲ್ಲೋ ಆ ಗಾಂಧಿಜಿಯವರ ಪುಸ್ತಕ ಅವಗ ಉಡಪರಿ

ಅಂತ ಕೊಟ್ಟದ್ದಿರಿ?'

'ಹೌದು. ನಿಮಗ ಹೆಂಗ ಗೊತ್ತಾತು ?' ಅಮೃತ ಕೇಳಿದನು.

'ಗೊತ್ತಾಗದ ಏನು ? ಆ ಪುಸ್ತಕ ಅಲ್ಲೇ ಜಗಲೀಮ್ಯಾಲೆ ಬಿಟ್ಟು ಹೋಗಿದ್ದ ಅವ. ಸಹಜ ನಾ ಅಲ್ಲಿಗೆ ಹೋಗಿ ನೋಡಿ ತಗೊಂಡೆ ; ಈಗ ನಾನೇ ಅದನ್ನ ಓದಲಿಕ್ಕೆ ಹತ್ತೀನಿ. ಜೇಲಿನಾಗ ಇದ್ದಾಗ ನಾವೂ ಇಂಗ್ರೇಜಿ ಕಲತೀವಿ ಈಟು ; ನಿಮ್ಮಂಗ ಸಾಲೀಕಾಲೇಜಕ್ಕ ಹೋಗಿ ಅಲ್ಲ.'

'ಇಂಗ್ರೇಜಿ ಕಲತರೇನು ದೊಡ್ಡಸ್ತಿಕಿ ಬಿಡಿರಿ. ತಮ್ಮಂಥವರ ಸೇವಾ ದಿಂದ ತ್ಯಾಗದಿಂದ ನಮ್ಮ ದೇಶ ಮುಂದ ಬರಬೇಕು.' ಅಮೃತ ಸ್ತುತಿಪೂರ್ವಕ ವಾಗಿ ಆಡಿದನು.

'ಎಲ್ಲೀ ತ್ಯಾಗ, ಎಲ್ಲೀ ಸೇವಾ ? ಏನೊ ಕೈಲಾದಟು ಮಾಡತೀವಿ, ಆತು.'

ಸಿದರಾಮಪ್ಪ ಅದೇಕೊ ರಾಚಯ್ಯನವರನ್ನೂ ಅಮೃತನನ್ನೂ ನೋಡುತ್ತ ಒಂದು ನಗೆಹೂವನ್ನು ತುಟಿಯಲ್ಲಿ ಮುಚ್ಚಿಕೊಳ್ಳುವ ಪ್ರಯತ್ನ ನಡೆಸಿದ್ದನು.

'ನೀವು ಬಂಗಾಲಕ್ಕ ಹೋಗಿ ಸಂಕಟಗ್ರಸ್ತರಿಗೆ ಸಹಾಯ ಮಾಡಿ ಬಂದಿ ರಂತ ಕೇಳಿದೆ. ಭಾಳ ಸಂತೋಷಾತು. ತರುಣರಂದರ ಹಿಂಗಿರಬೇಕು' ರಾಚಯ್ಯನವರಾಡಿದರು.

'ಅಲ್ಲಿಯ ಕೂಗು ಕೇಳಿ ನಿಲ್ಲಲಾರದೆ ಹೋದೆ. ಆದರೇನು ಪೂರಾ ಇರೋದಾಗಲಿಲ್ಲ.'

'ಪೂರಾ ಕೆಲಸ ಆಂದರ ಎಲ್ಲಿ ಆಕ್ಕೈತಿ? ಮನಿಮಾರು ನೋಡಿಕೊಂಡು ಮನಸ್ಯಾ ದೇಶಸೇವಾ ಮಾಡಬೇಕಾಕ್ಕತಿ. ನೋಡಿರಿ, ಮನ್ನಿನ ಆಗಸ್ಟ ಚಳವ ಳ್ಯಾಗ ಒಳಗೊಳಗ ಕೆಲವು ದಿವಸ ಮಾಡಿ ಕಡೀಕೆ ಸಿಕ್ಕು ನಾವು ಜೇಲಿಗೆ ಹೋಗಿದ್ದಿವಿ. ಐದಾರು ತಿಂಗಳ ಇರೋದರಾಗ ಹೆಣ್ತಿಗೆ ಕ್ಷಯ ಅಂತ ಸುದ್ದಿ ಬರಾಣ ಗಾಬರ್‍ಯಾಗಿ ತಿರುಗಿ ಬಂದಿವಿ. ಈಗ ಮನಿ ಹಿಡಕೊಂಡು ಕೂತೀವಿ ಆತು.'

'ಹಿಂಗೇನು? ಈಗ ಗುಣ ಆದನ್ಸ?'

'ಈಗಿಟು ಗುಣ ಕಾಣತೈತಿ.'

ಹೀಗೆ ಕೆಲವು ಮಾತುಗಳಾದವು. ಆಮೇಲೆ ರಾಚಯ್ಯನವರು ಎದ್ದು ಹೋದರು. ಅಮೃತ ಸಿದರಾಮಪ್ಪನನ್ನು ಕುರಿತು 'ಒಳ್ಳೆಯ ಮನುಷ್ಯರೆಂದು

ಕಾಣತಾರೆ. ಕಾಂಗ್ರೆಸಿನ ಏಕನಿಷ್ಠ ಸೇವಕರಲ್ಲs?'

'ಹೌದು. ಬಹಳ ಏಕನಿಷ್ಠರು, ಒಳ್ಳೆಯವರು...'

'ಅಂದರ, ನೀವೇನೋ ಹೇಳಬೇಕಂತೀರಿ ಕಾಣತದ ಸಿದರಾಮಪ್ಪ?'

'ಎನಿಲ್ಲ. ದುಡ್ಡಂದರ ಬಹಳ ಕೆಟ್ಟ ಅಂದೆ.'

'ಅಂದರ ಇದಕ್ಕೇನು ಸಂಬಂಧ ?'

'ಸಂಬಂಧ ಇದ್ದದ್ದು ಹೇಳಿದರ ನಿಮ್ಮದೀನs ಒಡದೀತು ಅಮೃತರಾವ!'

'ಹಿಂಗs? ನೀವೇನಂತೀರಿ ತಿಳಿವೊಲ್ಲದು, ಹೇಳಿಬಿಡಿರಿ.'

'ಕಾಳಾಬಜಾರ ಅಂತ ಆಗಳೆ ಮಾತಾಡತಿದ್ದೆವಲ್ಲ. ಅದರಾಗ ಮಹಾ ಶೂರರು ಅಂದೆ ಇವರು!'

'ಯಾರು? ದೇ. ಭ. ರಾಚಯ್ಯನವರs? ಕಾಂಗ್ರೆಸಿನ ಸೇವಕರs?'

'ಇನ್ನೇನು ಹೇಳಲಿ? ಇವರು, ಇವರ ಅಣ್ಣತಮ್ಮಂದಿರು ವ್ಯಾಪಾರದಾಗ ಹಿಂಗ ಗಳಿಸ್ಯಾರ, ಕಾಳು ಬಳಿಯೋ ಸೇರಿಲೆ ರೊಕ್ಕ ರೂಪಾಯಿ ಬಳೀತಾರ.'

'ಇಷ್ಟು ಸಾವಕಾರ ಆಗ್ಯಾರs?' ಅಮೃತ ಹುಬ್ಬೇರಿಸಿ ಕೇಳಿದನು.

'ಆಗದೆ ಏನು? ಇವರ ಅಂಗಡ್ಯಾಗಿನ ಹಮಾಲರು ಆಗ್ಯಾರ. ಇವರಾಗೋ ದೇನ ಹೇಳತೀರಿ?'

'ಯೋಗ್ಯ ರೀತಿಯಿಂದ ಘಳಿಸಿರಬಹುದು. ಕಾಂಗ್ರೆಸ್ ವ್ಯಾಪಾರಕ್ಕೇನು ವಿರುದ್ಧ ಇಲ್ಲ.'

'ಎಲ್ಲೀ ಯೋಗ್ಯ ರೀತಿ? ಈ ಕಾಲದಾಗ ಘಳಿಸಬೇಕಂದರ ಅಯೋಗ್ಯ ರೀತಿ ಹೊರತು ಹಾದೀನೆ ಇಲ್ಲ. ಇವರ ವ್ಯವಹಾರ ಮುಂಬಯಿ ತನಕ ಹಬ್ಬೇದ. ಅಲ್ಲಿ ಬೇಕಾಗುವ ಅಕ್ಕಿ-ಜ್ವಾಳಾ-ಅರಿಸಿಣ-ತಂಬಾಕ-ಸೇಂಗಾ ಎಲ್ಲಾ ಇವರು ಹೊತ್ತು ಹಾಕತಾರ. ಅಲ್ಲೀ ಸಾಮಾನು ಇಲ್ಲಿಗೆ ತರತಾರ,'

'ಕಂಟ್ರೋಲದ ಹೆದರಿಕೀನs ಇಲ್ಲೇನು ಇವರಿಗೆ '

'ಎಲ್ಲೀ ಕಂಟ್ರೋಲು ಅದೆಲ್ಲಾ ಕಾಯದೇದಾಗ, ಕಾಗದದ ಮ್ಯಾಗ. ಕಾಯದೆ ಮುರೀಬೇಕಂತ ಬ್ಯಾರೆ ಕಾಂಗ್ರೆಸ್ ಕಲಿಸೇದಲ್ಲ ರಾಯರ; ಕೆಳತೀ ರೇನು ? ಇವರ ಗುಮಾಸ್ತರು ಠರಾವಿಕ ಟ್ರಕ್ಕಿನಾಗ ಮಾಲು ಹಾಕ್ಕೊಂಡು ನೂರಾಎಂಟು ಸರಹದ್ದಿನಾಗಿಂದ ಧಡಧಡೀತ ಪೋಲಿಸರ ಕಣ್ಣು ಮುಂದೆ ಹೊಡ ಕೊಂಡು ಹೊಕ್ಕಾರ. ಆ ಟ್ರಕ್ಕಿನ ನಂಬರು ನೋಡಿದರಾತು ಪೋಲಿಸರು 'ಹೊಂ ಹೋಗಲಿ, ಅಂತಾರ. ಅವರಿಗೆ ಮುಟ್ಟೋದು ತಿಂಗಳಾ ಮುಟ್ಟದರಾತು. ಇಷ್ಟೂ

ಮೊರಿ ಯಾರಾರ ಹೊಸ ಪೋಲೀಸ ಅದಲುಬದಲಾಗಿ ಬಂದಿದ್ದನ್ರ, ಮೋಟರ ನಿಂದರಸಿ ಝುಬರಸತಾನ, ನಂಬರು ಹೆಸರು ಬರಕೊಂಡು ಖಟ್ಲೆ ಹಾಕತೀನಿ ಅಂತಾನ.ಆದರಿಂದ ಯಾರೂ ಗಾಬರಿ ಆಗೂದುಲ್ಲ. ದಿನದ ಉದ್ಯೋಗ.ಟ್ರಕ್ಕಿನ ಜೋಡಿ ಹೋದ ಗುಮಾಸ್ತೆ ಒಳಕಿಸೇದಾಗಿಂದ ತಗದು ಐದೇನು ಹತ್ತೇನು ರೂಪಾಯಿ ನೋಟು ಕೈಯಾಗ ಇಡತಾನ. ನೋಟೊಂದು ಈಗ ತಿಪ್ಪ್ಯಾಗಿನ ಪತ್ರಾವಳಿ ಹಂಗ ಹೆಚ್ಚಾಗಿ ಹಾರ್‍ಯಾಡತಾವಲ್ಲ. ಇವನ್ನ ಕೊಟ್ಟ ಕೂಡಲೆ ಎಲ್ಲಾ ಥಣ್ಣಗ-ಗುಡಗು ಮಿಂಚಾಗೆ ಮಳಿಗಿಳಿ ಆಗದ ಆಕಾಶ ಸ್ವಚ್ಛ ಆದಂಗ. ಮುಂದ ಹೊಡೀರಿ ಅಂತಾನ ಪೋಲೀಸ. ಪುಣೆದಂಥಾ ಊರಾಗ ಹೋಗಿ ಪೋಲೀಸ ನಾಕೇದ ಮುಂದ ಸಿಲ್ಲಸತಾರ. ಫೌಜದಾರ, ಜಮಾದಾರ ಎಲ್ಲರೂ ಕೂತಿರ ತಾರ. ಭಾಳ ಸಜ್ಜನ ಮಂದಿ, ನಮಗ್ಯಾಕ ಉಸಾಬರಿ ಅಂತ ಬಿಟ್ಟನ್ನೂ ದುಲ್ಲ! ಇಷ್ಟೆಲ್ಲಾ ಲಂಚ ಕೊಟ್ಟು ಕೊಟ್ಟು ಒಯ್ದ ಮಾಲು ಚೀಲಕ್ಕೆ ಎಂಟು ಹತ್ತು ರೂಪಾಯಿ ಕಿಂಮತ್ತಿನದು ಎಂಬತ್ತು ನೂರು ಆಕಾರಣಿ ಆಗೋದೇನು ಹೆಚ್ಚಿನದರಿ ? ಎಲ್ಲಾರೂ ಹೊಡೀತಾರ, ನಾನ್ಯಾಕ ಬಿಡಬೇಕು, ಇಷ್ಟು ದುಡೀತೀವಿ, ಇಷ್ಟು ಬುದ್ಧಿ ಚಲಾಖಿ ತೋರಿಸತೀವಿ, ನಮ್ಮದೂ ಖರ್ಚು ದುಬಾರಿ ಆಗೇದ ಅಂತಾರ ವ್ಯಾಪಾರಸ್ಥರು. ದುಡಿಯೋ ಕಾಲಕ್ಕ ದುಡಕೋಬೇಕು. ಮುಂದ ಅಳಕೋತ ನೊಣ ಝಾಡಿಸಿಗೋತ ಕೂಡೋ ದೈತೆಲ್ಲ. ಫಾಯದೆ ಆದಾಗ ಕಣ್ಣಕೀಸರಾಕ್ಕೈತಿ, ಲುಕ್ಸಾನಾದಾಗ ಯಾರೂ ಕೈಯೆತ್ತಿ ಕೊಡಾಕ ಬರತಾರೇನು ? ಇದು ನೋಡರಿ ಕಾಳಾಬಜಾರ ಮಾಡೋ ಮಂದೀ ಬುದ್ಧಿ.'

ಅಮೃತ ಇದನ್ನೆಲ್ಲ ಕೇಳಿ ದಂಗಾದನು. 'ತಿಳೀತು ಸಿವರಾಮಪ್ಪ. ವ್ಯಾಪಾರ ಮಾಡೋ ಮಂದೀಗೇನು ತತ್ವ ಇಲ್ಲ, ಗಿತ್ವ ಇಲ್ಲ.ಅವರದು ಹೋಗಲಿ, ಕಾಂಗ್ರೆಸ್ಸಿನ ಮಂದಿ ಹಿಂಗ ಮಾಡಿದರ ಬೇಲಿಯೆದ್ದು ಹೊಲ ಮೇದಂಗ ಆಗೂ ದಲ್ಲ? ಹಿಂಗಾದರ ದೇಶ ಹೆಂಗ ಮುಂದ ಬರಬೇಕು ?'

'ನೀವಂಬೂದೆಲ್ಲ ರಾಸ್ತ ಮಾತು. ಆದರ ಇದ್ದದ್ದು ಖರೆ. ರಾಚಯ್ಯ ನವರ್ಹಂಗ ರಗಡು ಮಂದಿ ಇದ್ದಾರ ಕಾಂಗ್ರೆಸ್ಸಿನಾಗ. ಖರೋ ನಿಸ್ವಾರ್ಥ ಮಂದಿ ಕಡಿಮೆನ್ರ ನೋಡರಿ. ನೀವಂತ ಖರೇ ಇದ್ದ ಸಂಗತಿ ಹೇಳಿದೆ. ಕೆಲವರಿಗೆ ರೊಕ್ಕ ಬೇಕು, ಕೆಲವರಿಗೆ ಅಧಿಕಾರಬೇಕು, ಕೆಲವರಿಗೆ ಕೀರ್ತಿ ಬೇಕು,ಕೆಲವರಿಗೆ ತಮ್ಮದೇ ನಡೀಬೇಕು ಅಂಬೂ ಪ್ರತಿಷ್ಠಾ ಬೇಕು. ಹತ್ತಿಪ್ಪತ್ತು ವರ್ಷಾತು,

ಈ ಮಂದ್ಯಾಗ ಓಡಾಡಿ ನಾನೂ ತಿಳಕೊಂಡೆ.'

'ಇರಬಹುದು. ಹಿಂಗಿದ್ದರ ನಮ್ಮ ದೇಶದ ಮತ್ತು ಪ್ರಾಂತದ ದುರ್ದೈವನs ಸರಿ. ಮತ್ತೇನು ?'

'ಇಂತಾ ಮಂದಿ ಚಳವಳಿ ಮಾಡತಾರ. ಜೇಲಿಗೆ ಹೊಕ್ಕಾರ. ಆದರ ತಮ್ಮ ಕಾಯಕ ಬಿಡೂದುಲ್ಲ.'

'ಕಾಯಕ ? ಎಂಥ ಶಬ್ದಕ್ಕ ಎಂಥ ಅರ್ಥ ಬಂದಬಿಟ್ಟದ ನೋಡರಿ ಸಿದರಾಮಪ್ಪ. ಬಸವಣ್ಣನವರು ಉಪಯೋಗ ಮಾಡಿದ ಅರ್ಥ ದಲ್ಲಿ 'ಕಾಯಕವೇ ಕೈಲಾಸ' ಆತು, ಕರ್ಮಯೋಗದ ಬೀಜಮಂತ್ರ ಆತು. ಈಗ ಅದೇ ಕಾಯಕ ಅಂದರ ಸುಳ್ಳುಮೋಸದ ಮೊಟ್ಟೆಯಾದ ಕಾರಸ್ಥಾನ, ಹೊಲಸು ಕೃತಿಯು ನರಕ ಆಗಿಬಿಟ್ಟದ. ಒಂದು ಶಬ್ದದ ಇತಿಹಾಸದಾಗ ಒಂದು ಜನದ ಸಂಸ್ಕೃತಿಯ ಏರು-ಇಳಿತ ಗೊತ್ತಾಗತದ ಅಂಬೂದು ಖರೇ ನೋಡರಿ.'

'ಬರಾಬರಿ. ನೀವು ಹೇಳಿದ ಮ್ಯಾಲ ನನಗೂ ಈಗ ಹೊಳೀತು, ರಾಯರ. ಮಹಾತ್ಮ ಬಸವಣ್ಣನವರ ತತ್ವ ಎಲ್ಲಾ ಬೀದಿಗೆಳದು ಕೆಡಸಿದವರು ನಾವs !'

ಅಮೃತ ಕೆಲಹೊತ್ತು ಸುಮ್ಮನೆ ಕುಳಿತನು. ಸಂಜೆಗತ್ತಲೆಯಾಗಿತ್ತು. ಹೊರಗೆ ಸ್ವಲ್ಪ ತಿರುಗಿ ಬರೋಣ ಎಂದು ಇಬ್ಬರೂ ಹೊರಟರು. ಕರ್ನಾಟಕದ ಭಾವೀ ರಾಜಧಾನಿಯೆಂದು ಸುಪ್ರಸಿದ್ಧವಾದ ಹುಬ್ಬಳ್ಳಿಯ ಗಟಾರಗಳಿಂದಲೂ ಶೌಚಕೂಪಗಳಿಂದಲೂ ದುರ್ಗಂಧ ಸೂಸಿ ಬರುತ್ತಿತ್ತು. ಮಳೆಗಾಲ ಸುರುವಾಗಿ ಒಂದೆರಡು ಜೋರಾದ ಸರುವು ಬಂದಿದ್ದ ಕಾರಣ ರಸ್ತೆಗಳೆಲ್ಲ ಕೆಂಪು ರಾಡಿ ಯನ್ನು ಧರಿಸಿದ ಮುಸಿಗಳಾಗಿದ್ದುವು. ಹೋದವರಿಗೆ ಬಂದವರಿಗೆ ಕೆಂಪು ಕಲೆಗಳ ಪ್ರಸಾದ ಕೊಡುತ್ತಿದ್ದವು.

ದಾರಿಯಲ್ಲಿ ಹೋಗುತ್ತ ಅಮೃತ ಅಂದನು : 'ನಿಮ್ಮಂಥಾ ಒಳ್ಳೇಮಂದಿ ಈ ಕಾಳಾಬಜಾರದ ಕಾರಖಾನ್ಯಾಗ ಕೊಳೀಬೇಕಾತು!'

'ಅಲ್ಲ ರಾಯರ. ಈ ರಾಡಿ ಆದ ರಸ್ತೇದಾಗ ತಿರುಗಾಡು ಅವರಿಗೆ ಎಲ್ಲಾ ರಿಗೂ ರಾಡಿ ಸಿಡಿಯೋದ. ರಸ್ತೆ ಬಿಟ್ಟು ಹವಾದಾಗ ತಿರಗಾಡುದಂತೂ ಸಾಧ್ಯ ಇಲ್ಲ. ನಮಗೂ ಹೊಟ್ಟೆ ಅದ, ಆದರೂ ನಾನೂ ಲೆಕ್ಕಪತ್ರ ನೋಡೋದು, ಉಳಿದ ಕಾರಭಾರ ಮಾಡುಹಂಗಿಲ್ಲ ಅಂತ ಠರಾಯಿಸಿಕೊಂಡು ಇದ್ದೀನಿ. ಸಾ

ಕಾರರಿಗೆ ನನ್ನ ಸ್ವಭಾವ ಗೊತ್ತದ, ಇಲ್ಲದ ಕಂತ್ರಾಟದಾಗ ನನ್ನ ಹಾಕೂದುಲ್ಲ ಅವರು.'

'ತಿಳೀತು. ಈ ಕಾಳಾಬಜಾರ ಹಿಂಗs ಶಾಶ್ವತ ಇರೋದೇನು ?'

'ಇರೋದs. ನಾವೂ ನೀವೂ ಸೈತ ಅದನ್ನ ಮಾಡಾಕ ಹತ್ತಿದಮ್ಯಾಗ!'

ಅಮೃತ ಬೆಚ್ಚಿಬಿದ್ದನು. 'ಅಂದರ ? ನಾವೇನು ಮಾಡಿದೀವಿ ?' ಎಂದು ಕೇಳಿದನು.

'ರಾಯರ, ನಾ ಹೇಳೂದು ಮಜಾಕ್ಕಲ್ಲ. ಕಟ್ಟಕಡೇ ಅಂದರ ಈ ಕಾಳಾ ಬಾಜಾರ ಹೆಚ್ಚಾಗಲಿಕ್ಕೆ ವ್ಯಾಪಾರಸ್ಥರು ಎಷ್ಟು ಕಾರಣೋ ಅಷ್ಟ ನಮ್ಮಂಥ ನಿಮ್ಮಂಥ ಎಲ್ಲಾ ಗಿರಾಕೀನೂ ಕಾರಣ. ನಮ್ಮನ್ಯಾಗ ಹಬ್ಬ-ಹುಣ್ಣಿವಿ ಬಂತು, ಮದವಿ ಕಾರ್ಯ ಬಂತು ಅಂದರ 'ಹೆಂಗರ ಮಾಡಿ ಅಕ್ಕಿಕೊಡು, ಸಕ್ರಿಕೊಡು' ಅಂತ ವ್ಯಾಪಾರಸ್ತಗ ಗಂಟಬೀಳತೀವಿ. ಅವ ಹೇಳಿದ ಕಿಂವತ್ತಿಗೆ ತಗೋತೀವಿ. ಅದರಿಂದ ಅವಗ ಉತ್ತೇಜನ ಸಿಗತದ. ಮಂದಿ ಹಿಂಗಮಾಡೋದು ನೋಡಿ ಸಾಮಾನು ತರಿಸಿಟ್ಟು ಪ್ರಚಾರ ಮಾಡಾಕ ಹತ್ತಾನ. ಅಲ್ಲರಿ, ಮನಸ್ಯಾಗ ಹೊರ ಚಟ ಇದ್ದಲ್ಲೇ ಪಾತರದವರು ಅಂಬೊವರು ಊರೂರಿಗೆ ಆಗಿ ಕೂತಾರಲ್ಲs ? ಅದರ್ಹಂಗs ಇದು.'

'ಸಿದರಾಮಪ್ಪ, ನೀವು ಹೇಳೋದು ಸುಳ್ಳಲ್ಲ. ಜಗತ್ತಿನ ಭಟ್ಟೀನs ಕೆಟ್ಟದ. ಯಾರೊಬ್ಬರಿಗೂ ದೋಷ ಕೊಟ್ಟೇನು ಉಪಯೋಗ ?'

ಇಬ್ಬರೂ ತಿರುಗಿ ಮನೆಗೆ ಹೊರಟರು. ಈವರೆಗಾಡಿದ ಮಾತುಗಳ ಝಳ ದಿಂದ ಅಮೃತನ ತಲೆ ಕಾದಿತ್ತು. ಅನ್ನದ ಸಮಸ್ಯೆಯನ್ನು ಬಿಡಿಸುವ ದಾರಿಯೇ ಇಲ್ಲವೇ ? ಇದನ್ನು ಬಿಡಿಸಬಲ್ಲ ನಾಡಿನ ಹಿರಿಯರು ಬಂಧನದಲ್ಲಿರುವರೆಂದು ಹೀಗಾಗಿರುವದೇ ? ಎಂದವನು ಯೋಚಿಸುತ್ತಿದ್ದನು. ಅವನಿಗೆ ಏನೋ ನೆನಪಾಯಿತು. 'ಅಲ್ಲ. ಸಿದರಾಮಪ್ಪ. ಮುಂಬಯಿಗೆ ಈಗ ರೇಶನಿಂಗ ಬಂದ ದಂತ. ಬಹಳ ಯಶಸ್ವಿ ಆಗೇದಂತ. ಅದು ಎಲ್ಲಾ ಕಡೆ ಬಂತಂದರ ಈ ಪ್ರಶ್ನೆ ಬಿಡಿಸಬಹುದು.'

'ಅದೆಂಗ ನಡದತಿ ನನಗ ಗೊತ್ತಿಲ್ಲ. ಆದರ ನಾ ಹೇಳತೀನಿ ರಾಯರ, ರೇಶನ್‌ಬಂದರೂ ಕಾಳಾಬಜಾರ ನಿಂದರಾಣೆಲ್ಲ. ರೇಶನ್ ಶಾಪದಾಗs ಅದು ಸುರು ಆಕ್ಕೈತಿ ನೋಡಿರಿ.' ರೇಶನ್ ಶಾಪ ಎಂದು ತಪ್ಪು ಉಚ್ಚರಿಸಿದ್ದನ್ನು ಕೇಳಿ ಮೊದಲು ಚಕ್ಕಾಗಿ ಆ ತಪ್ಪು ಉಚ್ಚಾರದಲ್ಲಿಯೇ ಸತ್ಯವಡಗಿರಬಹುದು ಎಂದು

ಅವನು ತಿಳಿದನು.

'ಹಿಂಗಂತೀರಿ ? ಯಾರಿಗೆ ಗೊತ್ತು ? ರೇಶನ್ ಶಾಪ ನೀವು ಅನ್ನೂ ಹಂಗ ಶಾಪ ಆಗೇ ಬರ್ತದೋ ಏನೊ !'

ಮನೆ ಮುಟ್ಟಿದ ಮೇಲೆ ಅಮೃತನನ್ನು ಅವನ ಕೋಣೆಯಲ್ಲಿ ಬಿಟ್ಟು ಸಿದರಾಮಪ್ಪ ಶಂಕರರಾಯರ ಅಪ್ಪಣೆ ತಗೊಂಡು ತನ್ನ ಮನೆಗೆ ಹೋದನು. ಅಮೃತ ತನ್ನೊಳಗೆ ವಿಚಾರ ಮಾಡುತ್ತ ತಾನಿಳಿದ ಕೋಣೆಯಲ್ಲಿ ಸುತ್ತು ಹಾಕುತ್ತಿದ್ದನು. ಇಲ್ಲಿಗೆ ಬಂದು ಎರಡು ಮೂರು ದಿನಗಳಾದವು, ಊಟ ಉಡಿಗೆ ಎಲ್ಲ ಚಕ್ಕಂದವಾಯ್ತು, ಆದರೆ ಬಂದ ಕಾರ್ಯ ಆಗಲಿಲ್ಲ. ಅದಕ್ಕೇನು ಮಾಡಬೇಕು ? ಈಗ ತನ್ನ ಗೆಳೆಯ ಅಳಿಯನಾಗಿಬಿಟ್ಟಿದ್ದಾನೆ. ಅವನಿಗೆ ಮದುವೆ ಮನೆಯಲ್ಲಿ ಬೇರೆ ಕರೆದು ಮಾತಾಡಿಸುವದೆಂದರೆ ಅಸಾಧ್ಯವಾಗಿದೆ. ಅಲ್ಲದೆ ತನ್ನ ಬೇಡಿಕೆಗೆ ಅವನೇನನ್ನುವನೋ ತಿಳಿಯದು. ಯಾವುದಕ್ಕೂ ಕುಚೇಷ್ಟೆ ಯಿಂದ ಹಾರಿಸಿಬಿಡುವುದು ಅವನ ಪದ್ಧತಿ ಬೇರೆ. ಹೀಗೆನ್ನುತ್ತ ಅಟ್ಟದ ಮುಂದಿನ ಕಟಾಂಜನಕ್ಕೆ ಬಂದು ನಿಂತನು. ದೀಪಗಳಿಂದ ಝಗ ಝಗಿಸುವ ಆ ಭವ್ಯಮನೆ ಕಣ್ಣುತುಂಬಿತು. ಜೊತೆಗೆ ಈ ಮೂರು ದಿನದ ಅನುಭವಗಳೆಲ್ಲ ಹಿಂಡುಗಟ್ಟಿ ಬಂದವು. ಈವರೆಗೆ ಒಳಗೆ ಹೊಂಚಿಕೊಂಡಿದ್ದ ಭಾವನೆ ಯೊಂದು ಈಗ ಹೊರನೆಲೆಗೆ ನುಗ್ಗಿತು. ತನಗೆ ತೀರ ಅಗತ್ಯವಾಗಿ ಬೇಕಾದ ಸಾಲ ಇಲ್ಲಿ ಎರಡು ಸಾವಿರವೇಕೆ, ಹತ್ತು ಸಾವಿರ ದೊರೆಯಬಹುದೆಂದು ಗ್ರಹಿಸಿ ದರೂ ಅದನ್ನು ತಗೊಳ್ಳಬೇಕೆ ? ಅದರ ಬಲದಿಂದ ತನ್ನ ತಂಗಿಯ ಮದುವೆ ಯನ್ನು ಮಾಡಬೇಕೆ ? ತನ್ನ ಶಿಕ್ಷಣವನ್ನು ಮುಗಿಸಬೇಕೆ ? "ಛೇ ಬೇಡ" ಎಂದು ಅವನು ನಿಶ್ಚಯ ಮಾಡಿದಂತೆ ಮಾಡಿದನು. ಮರುಕ್ಷಣ ಅನಿಸಿತು, ಯಾವ ಹಣ ಜಗತ್ತಿನಲ್ಲಿ ನಿಷ್ಕಲಂಕವಾಗಿದೆ - ಅದೆಲ್ಲ ನ್ಯಾಯವಾಗಿ ದುಡಿದು ಗಳಿಸಿದ್ದೆ ? ಅಂಥ ನ್ಯಾಯನಿಷ್ಠರೆಷ್ಟು ಜನ ಭೂಮಿಯ ಮೇಲಿರುವರು ? ನ್ಯಾಯವಾಗಿ ದುಡಿಯುವವರಸಂಖ್ಯರಿದ್ದಾರೆ, ಆದರೆ ಅವರ ಗಳಿಕೆ ಅವರಿಗೆ ಸಲ್ಲುವುದಕ್ಕಿಂತ ಕಡಿಮೆ. ಅದು ಬಂದೊಡನೆ ಬಳಕೆಯಾಗುತ್ತದೆ. ಅದು ಗಳಿಕೆಯೂ ಅಲ್ಲ ಉಳಿಕೆಯೂ ಅಲ್ಲ. ಏನೂ ದುಡಿಯದೆ ಇಲ್ಲವೆ ಸಾಕಷ್ಟು ದುಡಿಯದೆ ಲೆಕ್ಕಮೀರಿ ಗಳಿಸುವವರೇ ಲೋಕದಲ್ಲಿ ಹೆಚ್ಚು. ಹಣವೆಲ್ಲ ಅವರ ಕೈಯಲ್ಲಿ. ಅವರಿಂದಲೇ ಎಲ್ಲ ವ್ಯವಹಾರ. ಕೈಯೊಡ್ಡಿ ಸಾಲ ಬೇಡಿದರೂ ಅದೇ ಹಣೇಬರವೇ ಅಲ್ಲವೇ ? ಹೀಗೆಂದು ತಾನು ಕೆಳಮನಿಯಿಂದ ಸಾಲ ತಗೊಳ್ಳ

ಬೇಕೆ ? ಅಮೃತನು ವ್ಯಗ್ರಮನದಿಂದ ತನ್ನ ಕೋಣೆಗೆ ಬಂದು ಕುರ್ಚಿಯಲ್ಲಿ ಕುಳಿತನು. ಎಷ್ಟೋ ಹೊತ್ತಿನ ಮೇಲೆ "ಬೇಡ, ಸಾಲದ ಮಾತೇ ಬೇಡ" ಎಂದು ತನ್ನಷ್ಟಕ್ಕೆ ಗುಣುಗುಟ್ಟಿದನು.

ರಾತ್ರಿ ಒಂಬತ್ತಾಯಿತು. ಮಧ್ಯಾಹ್ನದ ಪ್ರಸ್ಥದೂಟ ಜಡವಾಯಿತೆಂದು ಮದುವೆ ಮನೆಯು ರಾತ್ರಿಯೂಟವನ್ನಾದರೂ ಮಾಡಲಿಲ್ಲ. ಆದರೆ ಯಾರ ತಲೆಯಲ್ಲಿಯೋ ಹೊಕ್ಕಿತು. ಹೇಗೂ ಬೆಳದಿಂಗಳು ನೆಟ್ಟಗೆ ಬಿದ್ದಿದೆ. ಮೂರನೆಯ ಅಟ್ಟದ ಮಾಳಿಗೆಯ ಮೇಲಿನ ಟೆರೇಸದಲ್ಲಿ ಎಲ್ಲರೂ ಕೂತುಕೊಂಡು ಹಣ್ಣು ಹಂಪಲದ ಫರಾಳ ಮಾಡಬೇಕು. ಮದುವೆಯ ಸಂಭ್ರಮದಲ್ಲಿ ಇಂಥ ರಮ್ಯ ಕಲ್ಪನೆಗಳು ಬರುವುದಕ್ಕೂ ತಡವಿಲ್ಲ, ಗಂಡು-ಹೆಣ್ಣು ಕೂಡಿ ಅವನ್ನು ಜಾರಿಯಲ್ಲಿ ತರುವದಕ್ಕೂ ತಡವಿಲ್ಲ; ಮೇಲಾಗಿ ಶ್ರೀಮಂತಿಕೆಯ ಹಾಲುಗಡಲಿನಲ್ಲಿ ಮುಳುಗಿ ಏಳುತ್ತಿರುವ 'ಶೇಷಶಾಯಿ'ಗಳ ಮನೆತನವದು. ಕಾರ್ಯಕ್ರಮದ ಸಿದ್ಧತೆ ನಡೆಯಿತು. ಹತ್ತು ಗಂಟೆಗೆ ಎಲ್ಲರೂ ಮೇಲೆ ಹಾಸಿದ ಸತರಂಜಿಗಳ ಮೇಲೆ ತೆಕ್ಕೆಗಳಿಗೆ ಆತುಕೂತರು. ಶಂಕರರಾಯರೂ ಲಗ್ನಕ್ಕೆ ಬಂದ ಕೆಲವು ಶ್ರೀಮಂತ ಅತಿಥಿಗಳೂ ಅಗ್ರಸ್ಥಾನವನ್ನು ಅಲಂಕರಿಸಿದರು. ಅಮೃತನನ್ನೂ ಕರೆದರು, ಅವನು ಮೊದಲು ಒಲ್ಲೆಂದನು. ಕುಮಾರನೇ ಹೋಗಿ ಆಗ್ರಹಪಡಿಸಿ ಕೈಹಿಡಿದು ಎಳೆತಂದು ಕೂಡಿಸಿದನು. ಮೋಸಂಬೀ-ದ್ರಾಕ್ಷ-ದಾಳಿಂಬ-ಶೇಬು ಮುಂತಾದ ಹಣ್ಣಿನ ಬೆಳ್ಳಿ ತಾಟುಗಳು ಮುಂದೆ ಸರಿದವು. ಇನ್ನೂ ಮಾವಿನ ಹಣ್ಣಿನ ಮೋಸಮು ಮುಗಿದಿರಲಿಲ್ಲ. ಅವನ್ನೂ ಹೆಚ್ಚಿ ತಂದಿಟ್ಟರು. ಮಳೆಗಾಲ ಬಂದಿದ್ದರೂ ಅವೊತ್ತು ಪುಣ್ಯಕ್ಕೆ ಆಕಾಶ ನಿರಭ್ರವಾಗಿತ್ತು. ಚಂದ್ರ ಹುಣ್ಣಿವೆಯ ಸಮೀಪಕ್ಕೆ ಬಂದ ಹೊಗರಿನಲ್ಲಿ ಎಲ್ಲ ಕಡೆಗೆ ತನ್ನ ಮಾಯೆಯನ್ನು ಹರಡಿದ್ದನು. ಸುಖಸಲ್ಲಾಪದ ಮಾತುಗಳಲ್ಲಿ ನಿಜವಾದ 'ಫಲಾಹಾರ' ಸಾಗಿತು.

ಆಗ ಯಾರೋ ಶಂಕರರಾಯರ ಹತ್ತಿರ ಕುಳಿತವರಂದರು : 'ಶ್ರೀಮಂತರು ಮದವಿ ಅರ್ಭಾಟ ಮಾಡಿದರು.'

ಅದಕ್ಕೆ ಶಂಕರರಾಯರು ಉತ್ತರ ಕೊಟ್ಟರು : 'ಎಲ್ಲೀ ಅರ್ಭಾಟ ? ಎಲ್ಲಾ ಒಣಒಣ ಠಣಠಣ. ಈ ಕಂಟ್ರೋಲದ ದಿನದಾಗ ಒಂದು ಅಕ್ಕಿ ಸಿಗತಾವ, ಸಕ್ರಿ ಸಿಗತದ ? ಎಲ್ಲಾ ಬೇತಿನಾಗ ಮಾಡಿದಿನಿ ಆತು.'

ಅಮೃತನು ಅವರ ಮುಖ ನೋಡಿದನು. ನಿಜವಾದ ನಿರಾಶೆಯ ನೆರಳು ಬಿದ್ದಂತೆ ತೋರಿತು. ಅವನಿಗೆ ಅಚ್ಚರಿಯಾಯಿತು. 'ಇಷ್ಟು ಹಾಳು ಮಾಡಿ ಮಾಡಿದ ಮದುವೆ ಬೇಕಿನದೇ ?' ಎಂದು ತನ್ನೊಳಗೆ ಅಂದನು.

ಇನ್ನೊಬ್ಬ ಅತಿಥಿವರ್ಯರಂದರು : 'ಏನು ಝೋಕಿನಾಗ ಎಂಥಾ ಠೀವಿಲೆ ಮದುವಿ ಆತು ಅಂತೀನಿ. ಶಂಕರರಾಯರ ವ್ಯವಸ್ಥಾ ಅಂದರ ಬಟ್ಟು ಕಚ್ಚು ಹಂಗಿತ್ತು. ಏನು ಆ ಮಂಡಪ, ಎಂಥಾ ಮೆರವಣಗಿ ! ಗವರ್ನರಗರ ಇಂಥಾದು ಸಿಕ್ಕೀತೇನು ?'

ಬೇರೆ ಒಬ್ಬಿಬ್ಬರು ಈ ಪ್ರಶಂಸೆಯಲ್ಲಿ ದನಿಗೂಡಿಸಿದರು. ಮತ್ತೆ ಶಂಕರರಾಯರು ಬಾಯಲ್ಲಿ ಒಂದು ದ್ರಾಕ್ಷದ ಹಣ್ಣು ಹಾಕಿಕೊಂಡು ಹೇಳಿದರು : 'ನೀವೆಲ್ಲಾ ಹೊಗಳತೀರಿ ಖರೆ. ಆದರ ನೋಡರಿ ಇದು ಆಶ್ರಮದಾಗಿನ ಋಷಿಗಳು ಮಾಡಿದ ಮದವಿಹಂಗಾತು. ಈಗ ನಿಮಗ ಕೊಟ್ಟ ಫಲಾಹಾರನ್ನ ಹೇಳತದ. ರಾಯರ್‍ರ, ಖರೇವಂದರ ದೇಶದಾಗ ಎಂಥಾ ಕಠಿಣ ಪರಿಸ್ಥಿತಿ ಅದ ! ಹೊಟ್ಟಿಗಿಲ್ಲದ ಮಂದಿ ಸಾಯಲಿಕ್ಕ ಹತ್ತ್ಯಾರ, ಭಿಕ್ಷಾ ಬೇಡಿಕೋತ ಊರೂರು ತಿರಗಿತಾರ.' ಈಗ ರಾಯರ ಮುಖ ಲೋಕಕರುಣೆಯ ಮುದ್ರೆಯಿಂದ ಭಯಂಕರ ಗಂಭೀರವಾಯಿತು ! ಅಮೃತ ಇದನ್ನು ನಿರೀಕ್ಷಿಸಿದ. ಇನ್ನೊಬ್ಬರಂದರು : 'ಇಲ್ಲೇ ವಿಜಾಪುರ ಜಿಲ್ಹಾದಾಗ ನೋಡಲಿಲ್ಲs— ಲಕ್ಷಗಟ್ಲೆ ಮಂದಿ ಗುಳೆ ಹೋಗಿ ಒದ್ದಾಡಿದರು. ಮಳಿ ಹೋತು, ಬೆಳಿ ಹೋತು. ಈ ಸಾರೆ ಏನಾಗತದೋ ಏನೋ !' ಅಂತೂ ಈ 'ಕಂಪನಿ' ಯಲ್ಲಿ ಬರಗಾಲದ ಬಗ್ಗೆ ಕನಿಕರದ ಮಾತು ಹುಟ್ಟಿದವೆಂದು ಅಮೃತನಿಗೆ ಬೆಕ್ಕಸವಾಯ್ತು, ಕಿವಿದೆರೆದು ಕೇಳಿದನು. ತಾನದರಲ್ಲಿ ಬಾಯಿ ಹಾಕಲಿಲ್ಲ. ಶಂಕರರಾಯರಂದರು : 'ಅದನ್ನೆಲ್ಲಾ ನೋಡಿದರ ನಾವೂ ಊಟ–ಉಡಿಗೆ ಬಿಟ್ಟು ಕೊಡಬೇಕನಸತದ !' ಅದಕ್ಕೆ ಕುಮಾರನು 'ಯಾಕ ಆ ದರಿದ್ರರ ಜೋಡಿ ನಾವೂ ಇಷ್ಟು ಸಾಯಬೇಕೇನು ?' ಎಂದು ಹಾಸ್ಯಮಾಡಿದನು. ಎಲ್ಲರೂ ನಕ್ಕರು. ಹೀಗೆ ಹರಟೆ ನಡೆಯಿತು, ಹಣ್ಣೆಲ್ಲ ತೀರಿದವು. ಜನವೆಲ್ಲ ಕೈತೊಳೆದು ತಾಂಬೂಲ ಸೇವನಕ್ಕೆ ಕೈಯಿಕ್ಕಿದರು. ರಾತ್ರಿ ಹನ್ನೊಂದರ ಮೇಲಾಯಿತು. ಎಲ್ಲ ಕಡೆಗೆ ಅತ್ಯಂತ ಸ್ತಬ್ಧವಾಗಿದೆ. ಅಲ್ಲಿ ಕೂತವರೆಲ್ಲ ಸುಪ್ರಸನ್ನರಾಗಿ ಸುಖದ ಸಮುದ್ರದಲ್ಲಿ ತೇಲುತ್ತಿರುವಂತೆ ಇದ್ದಾರೆ. ಅಮೃತ

ನಿಗೆ ಮಾತ್ರ ಸುಖವಿಲ್ಲ, ಶಾಂತಿಯಿಲ್ಲ. ಮಾಡಬಾರದಷ್ಟು ವೆಚ್ಚ ಮಾಡಿ ಹಾಳಿನ ಹೊಳೆಯನ್ನು ಹರಿಸಿದ ಈ ಶ್ರೀಮಂತ ಯಜಮಾನರು ಎಲ್ಲ ಮುಗಿದ ಮೇಲೆ ಸವಿಯಾದ ಹಣ್ಣು ತಿನ್ನುವ ಬಾಯಿಂದ ಮೂರನೆಯ ಅಂತಸ್ತಿನ ಮೇಲೆ ಕುಳಿತು ದೇಶದ ಬಡತನ-ಬರಗಾಲವನ್ನು ಎದೆಗರಗಿ ಬಣ್ಣಿಸುತ್ತಾರೆ, ಕಣ್ಣೀರು ಸುರಿಸುತ್ತಾರೆ! ಅದೇತಕ್ಕೆ ? ಹರಟೆಗೆ ವಿಷಯವೊಂದು ಬೇಕೆಂದು ಮತ್ತೇನು ? ಈ ದೇಶದಲ್ಲಿ ದಾರಿದ್ರ್ಯ ಇರುವುದಕ್ಕಿಂತ ಹೆಚ್ಚಾಗಿ ಇಂಥ ಶ್ರೀಮಂತಿಕೆ ಇರುವುದೇ ಮೂರ್ತಿಮತ್ತಾದ ವಿಕಟ ಹಾಸ್ಯವಾಗಿದೆ ಎಂದವನಿಗೆ ಅನಿಸಿತು. ಇಷ್ಟರಲ್ಲಿ ಶಾಂತವಾದ ಆಕಾಶದ ಅಲೆಗಳನ್ನು ಕದಡಿ ಅದೆಲ್ಲಿಂದಲೋ ಖೊಳ್ಳೆಂಬ ದೊಡ್ಡ ನಗೆಯ ಮಹಾರವ ಕೇಳಿತು. ಅದೇನೆಂದು ಎಲ್ಲರೂ ಮೇಲೆ ನೋಡಿದರು. ಯಾರಿಗೂ ಅದರ ಗೂಢ ತಿಳಿಯಲಿಲ್ಲ. ಶಂಕರ ರಾಯರಂದರು : 'ಯಾರೋ ನಕ್ಕಂತೆ ಭಾಸ ಆತು !' ಆ ನಗೆ ಮತ್ತೆ ಖೊಕ್ ಖೊಕ್ಕೆಂದು ಅಲೆಅಲೆಯಾಗಿ ಏರಿಕೆಯಲ್ಲಿ ಕೇಳುತ್ತ ದೂರ ಹೋಗಿ ಮಾಯ ವಾಯಿತು.• ಒಂದೆರಡು ನಿಮಿಷ ಇದೇನು ಅದ್ಭುತವೆಂದು ಎಲ್ಲರೂ ದಂಗಾ ದರು. 'ಅದೆಲ್ಲಾ ನಗೆ ಅಲ್ಲ, ನಮ್ಮ ಭ್ರಮೆ' ಎಂದು ಒಬ್ಬರು ನಿರ್ಣಯ ಕೊಟ್ಟರು. ಆಮೇಲೆ ಎಲ್ಲರೂ ಎದ್ದು ತಂತಮ್ಮ ಹಾಸಿಗೆಗಳಿಗೆ ಹೋಗಿ ನಿದ್ರೆಹೋದರು. ಆ ನಗೆ ಅವರ ಕನಸಿನಲ್ಲಿಯೂ ಸಂಚರಿಸಿ ಚಿತ್ರವನ್ನು ನಿಲ್ಲಿಸಿ ಹಾವಳಿ ಮಾಡಿರಬೇಕು. ಅಮೃತನು ಅದರ ಅದ್ಭುತತೆಯನ್ನು ನೆನೆಯುತ್ತ ತನ್ನ ಹಾಸಿಗೆಯಲ್ಲಿ ಸುಮ್ಮನೆ ಕುಳಿತನು. ಅವನ ವಿಚಾರ ಪರಂಪರೆ ಮತ್ತೆ ಜಾಗೃತವಾಯಿತು. ನಿದ್ದೆ ಹಾರಿಹೋಯಿತು. ಸುಮ್ಮನೆ ಹೊರಳಾಡಿದನು, ಅರೆನಿದ್ದೆಯ ಅಂಚಿಯಲ್ಲಿ ಹೋಗಿ ಹೋಗಿ ಮರಳುತ್ತಿದ್ದನು.

ಬೆಳಗುಜಾವ ನಿದ್ದೆ ಹತ್ತಿತು. ಅದರಿಂದ ಅಮೃತನು ಎಂಟು ಬಡಿದ ಮೇಲೆ ಎದ್ದನು. ಪ್ರಾತರ್ವಿಧಿಯನ್ನು ಮುಗಿಸಿ ಮುಖ ತೊಳೆದು ತನ್ನ ಚೀಲ ವನ್ನು ತಗೊಂಡು ನಿರ್ಧಾರ ಮಾಡಿದಂತೆ ಹೊರಟನು. ಸಿದರಾಮಪ್ಪನನ್ನು ಕಾಣಲಿಲ್ಲ, ಶಂಕರರಾಯರನ್ನು ಕಾಣಲಿಲ್ಲ. ಕುಮಾರನೊಬ್ಬನನ್ನು ಮಾತ್ರ ಕಂಡು ಹೇಳಬೇಕೆಂದು ಅವನ ಕೋಣೆಗೆ ಹೋದನು. ಅವನೆದ್ದು ಅದೇ ಕಣ್ಣು ಹೊಸೆಯುತ್ತ ಕೂತಿದ್ದನು. 'ಇದೇನು ಈಗ ಯಾಕೆ ಹೊರಟೆಸಾ?' ಎಂದವನು ಆಶ್ಚರ್ಯದಿಂದ ಕೇಳಿದನು.

'ಹೋಗಲೇಬೇಕು. ಇನ್ನು ನಿಲ್ಲಲಾರೆ.' ಎಂದಿಷ್ಟೆ ಅವನುತ್ತರ.

'ಯಾಕ ಬಂಗಾಲದಿಂದ ಮತ್ತ್ಯೇನಾರ ತಾರುಗೀರು ಬಂತೇನು ?' ಕುಮಾರ ನಗುತ್ತ ಕೇಳಿದನು.

'ಹೌದು. ನಮ್ಮ ಮನೆಯು ಬಂಗಾಲದಿಂದ. ತಾರಂದರ ತಂತಿಯಿಲ್ಲದ ತಾರು !'

'ನೀ ಸುಳ್ಳೇ ಭಾಳ ಹಚಿಗೋತಿಯಪ. ನಿನ್ನ ಜೋಡಿ ಭಾಳ ಮಾತಾಡುದಿತ್ತು. ಈ ಗಾಂಧಿ ಹುಚ್ಚು ಬಿಡದಿದ್ದರ ನೀ ಮನಸ್ಯಾ ಆಗೋದಿಲ್ಲ ನೋಡು.'

'ಹಿಂಗs ? ಇರಬಹುದು, ಕೆಳಮನಿ, ನನ್ನ ಹಾದಿ ಬ್ಯಾರೆ, ನಿನ್ನ ಹಾದಿ ಬ್ಯಾರೆ. ಒಬ್ಬರದೊಬ್ಬರು ಚಾಷ್ಟಿ ಮಾಡೋದು ಬ್ಯಾಡ ನೋಡು.'

'ಬ್ಯಾಡಂದರ ಬಿಡು. ಇನ್ನರ ಕಾಲೇಜಕ್ಕ ಹೋಗತಿಯೋ ಈ ವರ್ಷ ?'

ಈ ಪ್ರಶ್ನೆಗೆ ಸಾಲದ ವಿಚಾರ ಅಮೃತನ ತಲೆಯಲ್ಲಿ ಭೂತದಂತೆ ಎದ್ದಿತು. ಅದೇಕೋ ಕೇಳಿಬಿಡಬೇಕೆಂಬ ಆತುರ ಹೆಚ್ಚಿದಂತಾಗಿ ಮಾತು ನಾಲಗೆ ತುದಿವರೆಗೆ ಬಂದಿತು. ಅವನು ಕಷ್ಟಪಟ್ಟು ಅದನ್ನು ತಡೆದನು. 'ಕಾಲೇಜs ? ಹೋದರ ಹೋಗತೀನಿ. ಅದೆಲ್ಲಾ ನಮ್ಮ ನಸೀಬ ಇದ್ದಂಗ ಆಗ್ತದ.' ಈ ಮಾತಿನ ಬೆನ್ನ ಹಿಂದೆ ಅಡಗಿ ನಿಂತ ಭಾವನಾಲಹರಿ, ವಿಚಾರ ತರಂಗ ಇವು ಯಾವೂ ಕುಮಾರನಿಗೆ ತಿಳಿಯುವುದೇ ಸಾಧ್ಯವಿರಲಿಲ್ಲ.

'ಆತು. ನಿನ್ನ ನಸೀಬ. ನಾ ಅರ ಏನ ಮಾಡಲಿ ? ಮದವಿಗೆ ಬಂದಿನೆಟ್ಟಗಾತು.'

ಅಮೃತ ಕೋಣೆಯಿಂದ ಹೊರಗೆ ಹೊರಟನು. 'ಏನಾರ ಫರಾಳರ ತಿಂದು ಹೋಗು. ಬೇಕಾರ ಊಟ ಮಾಡು' ಎಂದು ಕುಮಾರ ಹೇಳಿದನು.

'ಏನೇನೂ ಬ್ಯಾಡ. ಥ್ಯಾಂಕ್ಸ' ಎನ್ನುತ್ತ ಅಮೃತ ಬಾಗಿಲ ದಾಟಿ ಹೋಗಿಬಿಟ್ಟನು. ಕೆಳಗೆ ಮೋರೆ ಮಾಡಿ ಆ ಕಟ್ಟಡದಿಂದ ನಾಕು ಹೆಜ್ಜೆ ಹೋಗಿ ನಿಂತು ತಿರುಗಿ ಒಮ್ಮೆ ಅದನ್ನು ಬುಡದಿಂದ ಮೇಲೆ ನೋಡಿದನು. ತಾನಿದ್ದ ಕೋಣೆಯ ಮೇಲೂ ಕಣ್ಣು ಹಾಯಿಸಿದನು. ಮೂರು ದಿನಗಳಲ್ಲಿ ನೂರು ಅನುಭವಗಳನ್ನು ನೀಡಿದ ಒಂದು ಸಾಭಿಪ್ರಾಯವಾದ ಸಂಕೇತದಂತೆ ಅದೆಲ್ಲವೂ ಕಂಡಿತು. ದೊಡ್ಡ ನಿಟ್ಟುಸಿರನ್ನು ಬಿಟ್ಟು ಅವನು ಮುಂದೆ ಸಾಗಿದನು.

## ೧೨. 'ಖರೇ ಹಿಂದುಸ್ಥಾನ'

ಅಪ್ಪುತನೇನೋ ಕೆಳಮನಿಯ ಮನೆಯಿಂದ ಹೊರಬಿದ್ದನು. ಆದರೆ ಈಗ ತನ್ನೂರಿಗೆ ಗಾಡಿಯಿರುವುದೇ ಎಂಬುದರ ವಿಚಾರವನ್ನೇ ಮಾಡಲಿಲ್ಲ. ಅಷ್ಟು ತನ್ನೊಳಗೆ ಅವನು ಮುಳುಗಿದ್ದನು. ಇಷ್ಟೆಲ್ಲ ವ್ಯಥೆಪಡುವ ಸಲುವಾಗಿ ನಾನೇಕೆ ಇಲ್ಲಿಗೆ ಬಂದೆ ಎಂದೊಮ್ಮೆ ಅವನಿಗೆ ಅನಿಸುತ್ತಿತ್ತು. ಆಯಿತು, ಬಂದದ್ದಕ್ಕೆ ಎಂದಿಲ್ಲದ ಅನುಭವ ಬಂತಲ್ಲ,ಅದೇ ಲಾಭ ಎಂದು ಮಗದೊಮ್ಮೆ ಅನಿಸುತ್ತಿತ್ತು. ಇನ್ನು ಮುಂದೇನು ? ಕಲಿಯುವುದನ್ನು ಬಿಟ್ಟು ಊರಿಗೆ ಹೋಗಿ ತಣ್ಣಗೆ ಕೊಡುವದೇ ? ಗೊತ್ತಾದ ತಂಗಿಯ ಮದುವೆಯನ್ನು ಮುರಿಯುವದೇ ? ಎಲ್ಲ ಕಗ್ಗತ್ತಲೆ. ಸಾಲ ಕೇಳಲಿಲ್ಲ, ಅದೇ ಒಳ್ಳೆಯದಾಯಿತು. ಆದರೆ ಸಾಲವಿಲ್ಲದೆ ಬಗೆಹರಿಯುವುದು ಹೇಗೆ? ವಕೀಲ ಮಾಧವರಾಯರ ಮಾಯಾಜಾಲದಲ್ಲಿ ಸಿಲುಕಬೇಕೆ ? ಬೇಡ, ಅದಂತೂ ಸರ್ವಥಾ ಬೇಡ ಎಂದು ಗಟ್ಟಿ ನಿಶ್ಚಯಮಾಡಿ ಬೀದಿಯಲ್ಲಿ ಹೋಗುತ್ತಲೆ ಆಚೀಚೆ ತಲೆಯಾಡಿಸಿದನು. ಅವನು ಸ್ಟೇಷನ್ನಿಗೆ ಬಂದು ನೋಡುತ್ತಾನೆ, ಒಂಬತ್ತುವರೆ ಆಗಿದೆ. ಹತ್ತುಗಂಟೆಗೆ ಗದುಗಿನ ಕಡೆಯ ಗಾಡಿ ಇದೆ.ಆದರೆ ಅದು ಬಾಗಿಲುಕೋಟೆಗೆ ಹೋಗುವದಲ್ಲ.ಬಾಗಿಲುಕೋಟೆಯ ಗಾಡಿ ಬೆಳಗು ಮುಂಜಾನೆ ಹೋಯಿತು, ಇನ್ನು ಮಧ್ಯಾಹ್ನ ನಾಲ್ಕರವರೆಗೆ ಇಲ್ಲ. ಈಗೇನು ಮಾಡುವುದು ? ತಿರುಗಿ ಕೆಳಮನಿಯ ಮನೆಗೆ ಮೋರೆ ಒಣಗಿಸಿ ಕೊಂಡು ಹೋಗಬೇಕೇ ? ಅದಕ್ಕೆ ಅವನ ಮನಸ್ಸು ಒಪ್ಪದು. ಕೆಳಮನಿಯ ಹೊರತು ಬೇರೆ ಯಾರೂ ಹುಬ್ಬಳ್ಳಿಯಲ್ಲಿ ಅವನ ಗುರುತಿನವರಿಲ್ಲ.ಮಧ್ಯಾಹ್ನದ ಗಾಡಿಯ ಹೊತ್ತಿನವರೆಗೆ ವೇಟಿಂಗ್ ರೂಮಿನಲ್ಲಿಯೇ ಕೂತರಾಯಿತು ಎನ್ನುತ್ತ ಅಲ್ಲಿಗೆ ಹೋಗಿ ಒಂದು ಬೆಂಚಿನ ಮೇಲೆ ಕೂತನು. ಅಲ್ಲಿ ನೆರೆದ ತರತರದ ಜನ, ಅವರ ಹರಟೆ ಎಲ್ಲ ಮನೋರಂಜಕವಾಗಿ ಕಂಡಿತು. ಇಲ್ಲಿ ಸುಲಭವಾಗಿ ಸಂಜೆಯ ವರೆಗೆ ಹೊತ್ತು ಹಾಕಬಹುದು ಎಂದನು. ತಿಕೀಟು ಕೊಡುವ ಕಿಡಿಕಿಯಿಂದ ಚಹಾ-ಫರಾಳದ ಅಂಗಡಿಯವರೆಗೆ ಕಣ್ಣು ಹಾಯಿಸಿ ಎಲ್ಲ ನೋಡಿದನು. ಎಲ್ಲ ಜಾತಿ, ವೇಷ, ಭಾಷೆಗಳ ಏಕೀಕರಣ ಪರಿಷತ್ತೇ ಕೂಡಿದಂತಿತ್ತು. ರೊಕ್ಕ ಕೊಟ್ಟು ಕರೆದರೂ ಇಂಥ ಪರಿಷತ್ತು ಕೂಡಲಾರದು. ಇವರು ತಾವಾಗಿ ರೊಕ್ಕ ಕೊಟ್ಟು ಬಂದು ಒತ್ತಟ್ಟಿಗೆ ಸೇರಿದ್ದಾರೆ, ನಮ್ಮನ್ನು ನೋಡಿರಿ ಎಂದು. ಕರ್ನಾಟಕದ ಏಕೀಕರಣ ಎಂದಾಗುವದೋ ಏನೊ, ಈ ತರದ ಏಕೀಕರಣ

ಮಾತ್ರ ನಿಲ್ದಾಣಗಳಲ್ಲಿ ಮಾತ್ರವಲ್ಲ, ಕರ್ನಾಟಕದ ಹಳ್ಳಿ–ಪಟ್ಟಣಗಳಲ್ಲಿ ಸಾಕಷ್ಟು ಆಗಿದೆ. ಕೆಲವು ಕಡೆ ಈ ಏಕೀಕರಣದಿಂದ ಕನ್ನಡಿಗರಿಗಿಂತ ಇತರರ ಪ್ರಸ್ಥವೇ ಹೆಚ್ಚು ಬೆಳೆದಿದೆ. ಯಾಕಂದರೆ ಬೇರೆಯವರು ತಮ್ಮ ಮನೆಗೆ ಬರಬೇಕು, ತಾವು ಅಡಚಣಿ ಮಾಡಿಕೊಂಡರೂ ಚಿಂತೆಯಿಲ್ಲ ಅವರಿಗೆ ಇರಲಿಕ್ಕೆ ಜಾಗ ಕೊಡಬೇಕು, ತಾವು ಉಪವಾಸ ಸತ್ತರೂ ಅವರಿಗೆ ಹಬ್ಬದೂಟ ಉಣಿಸಬೇಕು ಎಂಬುದರಲ್ಲಿ ಕನ್ನಡಿಗರ ದೊಡ್ಡಸ್ತಿಕೆ ಇರುವುದಲ್ಲವೇ ? ಅಂತೂ ಅಲ್ಲಿ ಗಾಡಿಯಿಂದ ಬಂದಿಳಿದು ಮುಂದಿನ ಗಾಡಿಗೆ ಹೋಗುವವರೂ ಊರಲ್ಲಿ ಜಾಗವಿರದೇ ಇದನ್ನೇ ಧರ್ಮಸಾಲೆ ಮಾಡಿದವರೂ ಅಮೃತಸಂತೆ ತೀರ ಮೊದಲು ಬಂದವರೂ ಎಲ್ಲರೂ ಸೇರಿದ್ದಾರೆ. ತಮ್ಮ ಮನೆಯೇ ಇದೆಂಬಂತೆ ಒಂದು ಕುಟುಂಬದ ಜನ ಒಂದು ಗುಡಾರ ಹಾಸಿ ತಮ್ಮ ಹಾಸಿಗೆ ಸುರುಳಿ ಯನ್ನಿಟ್ಟು ಕಾಲುಚಾಚಿ ಮಲಗಿದ್ದಾರೆ. ಕೆಲವರು ತಾವು ತಂದ ಊಟ ಉಂಡು ಮುಸುರಿಯನ್ನು ಅಲ್ಲಿಯೇ ಬಿಡುತ್ತಾರೆ. ತಂಬಾಕ–ಎಲೆ ತಿಂದು ಬಾಯಲ್ಲಿಯ ಕೆಂಪು ರಸವನ್ನು ಹಲವರು ಅಲ್ಲಿಯೇ ಸುತ್ತುಮುತ್ತು ಜೀಕಳಿ ಹೊಡೆಯುತ್ತಾರೆ. ಬೀಡಿ-ಸಿಗರೇಟಿನ ಚೂರುಗಳು ಅಲ್ಲಿಯ ಫರಸಿಯನ್ನೂ ಹೊಗೆಗಳು ಹವೆಯನ್ನು ವ್ಯಾಪಿಸಿಕೊಂಡುಬಿಟ್ಟಿವೆ. ತಿಕೀಟು ಕೊಡುವ ಜಾಗದಲ್ಲಿ ಜನರ ವಿಪರೀತ ಗದ್ದಲ. ಒಬ್ಬರಮೇಲೊಬ್ಬರು ಬಿದ್ದು ತಿಕೀಟು ಕೊಳ್ಳುವುದು ನಡೆದಿದೆ. ಎಷ್ಟೊತ್ತಿನ ಮೇಲೆ ತನ್ನ ಚಹಾಪಾಣಿ ಮುಗಿಸಿ ಒಬ್ಬ ಪೋಲೀಸ ಅಲ್ಲಿಗೆ ಬಂದನು. ಯಾರೋ ಸಭ್ಯಗೃಹಸ್ತರು ಅವನಿಗೆ ಈ ಅವ್ಯವಸ್ಥೆಯ ಬಗ್ಗೆ ತಕರಾರು ಮಾಡಿ ದರು. 'ಏ ಸರೀರಿ, ಸಾಲಕ ನಿಲ್ಲಿರಿ' ಎಂದು ಜಬರಿಸುತ್ತ ಅವನು ಒಬ್ಬರ ಹಿಂದೊಬ್ಬರನ್ನು ನಿಲ್ಲಿಸಿದನು. ಈ ಸಾಲು ಚಹಾದಂಗಡಿಯವರೆಗೆ ಹೋಯಿತು. ವ್ಯವಸ್ಥೆಯೇನೋ ಆಯಿತು. ಇದರಿಂದ ತಿಕೀಟ ಸಿಗಬಹುದು, ಆದರೆ ಗಾಡಿ ಸಿಗುವ ಬಗೆ ಹೇಗೆ ? ಯಾವದೋ ಇಂಜನ್ನು ಕೂಗಿತು, ಜನ ಗಡಿಬಿಡಿ ಮಾಡ ಹತ್ತಿತು. ಕೆಲವರು ಮುಂದೆ ಸಾಳಿ ಬಂದವರಿಗೆ ತಮ್ಮ ರೊಕ್ಕ ಕೊಟ್ಟು ತಿಕೀಟ ತರಲಿಕ್ಕೆ ಹೇಳಹತ್ತಿದರು. ಕಿಡಿಕಿಯ ಹತ್ತಿರಕ್ಕೆ ಪೋಲೀಸ ನಿಂತಿದ್ದ. ಒಬ್ಬ ಗೌಡ ಕೆಂಪು ರುಮಾಲು ಸುತಿಗೊಂಡು ಅವಸರದಿಂದ ಧಾವಿಸುತ್ತ ಬಂದ. ಇವನಿಗೆ ತಿಕೀಟ ದೊರೆಯುವುದೇ ಅಶಕ್ಯವೆಂದು 'ಕ್ಯೂ' ಆಗಿ ನಿಂತ ಜನ ಭಾವಿಸಿತು. ಅವನು ಸರಳವಾಗಿ ಕಿಡಕಿಯ ಹತ್ತಿರ ಹೋದನು. ಪೋಲೀಸರ ಗುಟ್ಟು ಅವನಿಗೆ ಗೊತ್ತಿಲ್ಲವೇ? ದಿನಬೆಳಗಾದರೆ ಅವರೊಡನೆ ಅವನ ವ್ಯವಹಾರ.

'ಹೂಂ ನೀನ್ಸ, ಗದಗಿಗೆ ಒಂದು ತಿಕೀಟ ತಗಿ' ಎಂದು ಪೋಲೀಸನ ಕೈಯಲ್ಲಿ ಒಂದು ರೂಪಾಯಿ ಇಟ್ಟನು. 'ಹೋಗಲ್ಲಿ ಹಿಂದ ನಿಂದ್ರಾಕ ಹೋಗು' ಎಂದು ಪೋಲೀಸನು ವಿಧಿಸಿದನು. ಅವನ ನ್ಯಾಯ ಪರಿಪಾಲನೆಯ ದೃಷ್ಟಿಯನ್ನು ನೋಡಿ ಅಲ್ಲಿ ನಿಂತವರು ಕೊಂಡಾಡಿದರು. ಆದರೆ ಗೌಡ ಬಿಡುವನೇ ? ಏ ಮಳ್ಳ, ಅದನ್ನ ನೋಡರ ನೋಡು ಒಂದು ರೂಪಾಯಿ ಐತಿ. ಎಲ್ಲ ನೀನ ತಗೊ ಅಂದೆ. ತಿಕೀಟಟು ತಾ ನನಗ.' ಪೋಲೀಸನಿಗೆ ಅರ್ಥವಾಯಿತು, ಹನ್ನೆರಡು ಆಣೆ ತಿಕೀಟು, ನಾಲ್ಕಾಣೆ ಖುಷಿ. ಒಂದು ಮಿನಿಟನಲ್ಲಿ ತಿಕೀಟು ಸಿಕ್ಕಿತು, ಗೌಡ ಚಪ್ಪಲಿಯ ಚರ್ ಚರ್ ಎಂದು ಸಪ್ಪಳ ಮಾಡುತ್ತ ಕವಾಯತಿಗೆ ನಿಂತ ಸೈನ್ಯಪಥಕದ ಮುಂದೆ ನಿರೀಕ್ಷಣೆ ಮಾಡುತ್ತ ಹೋಗುವ ಸೇನಾಪತಿಯಂತೆ ಐಟಿನಿಂದ ಹೊರಟುಹೋದನು. ನಿಂತವರು ನಿಂತಲ್ಲಿಯೇ ಸಣ್ಣ ಮೋರೆ ಮಾಡಿದರು.

ಇದಾದ ಸ್ವಲ್ಪ ಹೊತ್ತಿಗೆ ಒಬ್ಬ ತರುಣನು ಲಗುಬಗೆಯಿಂದ ತನ್ನ ಪಾಳಿ ಬರಲು ತಿಕೀಟು ತಗೊಂಡು ಹೊರಟನು. ಅಮೃತನ ದೃಷ್ಟಿ ಸಹಜವಾಗಿ ಅವನ ಕಡೆ ಹೋಯಿತು. ನಿಟ್ಟಿಸಿ ನೋಡಿದನು, ತನ್ನ ಕಾಲೇಜ ಮಿತ್ರನೆಂದು ಗೊತ್ತಾಯಿತು. ಕೂಡಲೆ ಎದ್ದು ಹೋಗಿ 'ಏನು ಪಾಟೀಲ ಎಲ್ಲಿಗೆ ಹೊಂಟಿರಿ ?' ಎಂದನು. 'ಓ. ಸಿರೂರ. ನೀವು ಇಲ್ಲಿಗೆ ಯಾವಾಗ ಬಂದಿರಿ ?' ಹೀಗೆ ಮಾತು ಮೊದಲಾಯಿತು. ಹುಬ್ಬಳ್ಳಿಯಲ್ಲಿಯ ಆಪ್ತರ ಮನೆಗೆ ಬಂದಿದ್ದೆನೆಂದೂ ಈಗ ಹತ್ತೂವರೆ ಗಾಡಿಯಿಂದ ತನ್ನೂರಾದ ಉಗಾರಕ್ಕೆ ಹೊರಟಿದ್ದೇನೆಂದೂ ಪಾಟೀಲ ಹೇಳಿದನು. ಅಮೃತ ಬಾಗಿಲುಕೋಟೆಗೆ ಹೋಗಬೇಕೆಂದು ಮಾಡಿದ್ದು ಗಾಡಿಯಿಲ್ಲದೆ ಕೂತಿರುವದನ್ನು ಹೇಳಿದನು. 'ಹಿಂಗಿದ್ದರ ನಮ್ಮೂರಿಗೆ ನಡದುಬಿಡರಿ. ಒಂದೆರಡು ದಿವಸ ಇಟಕೊಂಡು ನಾ ಆತಲಾಗ ಕಳಸತೀನಿ' ಎಂದು ಪಾಟೀಲ ಒಂದೇಸವನೆ ಗಂಟುಬಿದ್ದನು. ಅವನು ಮುಂಬಯಿಯ ವೈದ್ಯಕೀಯ ಕಾಲೇಜಿನಲ್ಲಿ ಎರಡು ವರ್ಷ ಕಳೆದು ಮೂರನೆಯ ವರ್ಷದ ಅಭ್ಯಾಸಕ್ಕೆ ಈ ಸಾರೆ ಹೋಗುವವನಿದ್ದನು. ಎರಡು ವರ್ಷವೂ ಅಮೃತನ ಸಹವಾಸವು ಅವನಿಗೆ ಕಾಲೇಜಿನ ಹಾಸ್ಟೆಲಿನಲ್ಲಿ ದೊರೆತಿತ್ತು. ಅದರಿಂದ ಅವನ ವಿಷಯಕ್ಕೆ ಅವನಿಗೆ ಅತ್ಯಂತ ಆದರ. ಅವನ ಖಾದೀನಿಷ್ಠೆ, ದೇಶಪ್ರೇಮ, ಸೇವಾಬುದ್ಧಿ ಮುಂತಾದ ಗುಣಗಳಿಂದ ಮುಗ್ಧ ಆದವರಲ್ಲಿ ಪಾಟೀಲ ಒಬ್ಬನು. ಉಗಾರಕ್ಕೆ ಅವನನ್ನು ಒಮ್ಮೆ ಕರಕೊಂಡು

ಹೋಗಬೇಕೆಂದು ಅವನ ಬಲವಾದ ಇಚ್ಛೆ ಇತ್ತು. 'ಇಷ್ಟು ದಿವಸಾತು ಕರೀಲಿಕ್ಕೆ ಹತ್ತೀನಿ. ನೀವು ಈಗ ಕೈಯಾಗ ಸಿಕ್ಕೀರಿ. ಬರಲಿಕ್ಕೇ ಬೇಕು' ಎಂದು ಇನ್ನೊಂದು ತಿಕೀಟ ತರಲಿಕ್ಕೆ ಹೊರಟನು. ಅಮೃತ ಅವನನ್ನು ತಡೆದು 'ಈಗ ಬ್ಯಾಡ ಪಾಟೀಲ, ನಮ್ಮನೆಯೊಳಗ ನೂರಾಯೆಂಟು ಅಡಚಣಿ. ನಾ ಈಗ ಲಗೂ ಹೋಗಿ ಊರು ಕಾಣಬೇಕು. ಇನ್ನೊಮ್ಮೆ ಖಾತ್ರೀಲೆ ಬರತೀನಿ' ಎಂದು ಬೇಡಿದನು. ಪಾಟೀಲ ಕೇಳಲೇ ಇಲ್ಲ. ತನ್ನ ಕಿಸೆಯಿಂದ ಕಾರ್ಡು ತೆಗೆದುಕೊಟ್ಟು 'ಇದನ್ನ ಬರೆದು ಹಾಕರಿ. ಇನ್ನೆರಡು ದಿವಸಕ್ಕ ಬರತೀನಿ, ಉಗಾರಕ್ಕ ಹೋಗೀನಿ ಅಂತ' ಎಂದು ತಿಕೀಟ ತೆಗೆಯಲು ಹೋದನು. ಅಮೃತನ ಬೇಡಿಕೆ ಹುಸಿಯಾಯಿತು. ಮತ್ತೊಮ್ಮೆ ಹೇಳಿ ನೋಡೋಣ ಎಂದು 'ಪಾಟೀಲ, ಇಲ್ಲಿ ಕೇಳಿರಿ. ನಾ ಈ ಸಾರೆ ಮತ್ತ ಕಾಲೇಜಕ್ಕ ಬರಬೇಕು, ಅದರ ದಸಿಂದ ವ್ಯವಸ್ಥಾ ಮಾಡಿಕೋಬೇಕಾಗೇದ. ಕಾಲೇಜಕ್ಕ ಬಂದ ಮ್ಯಾಲ ಒಂದು ಸೂಟ್ಯಾಗ ನಿಮ್ಮೂರಿಗೆ ಬರತೀನಿ' ಎಂದು ಹೇಳಿಕೊಂಡನು. 'ಅದೇನಂಥಾ ವ್ಯವಸ್ಥಾ? ದುಡ್ಡಿನದು ಹೌದಲ್ಲೊ? ಯಾರೂ ಕೊಡದಿದ್ದರ ನಾ ನೋಡಿಕೊತೀನಿ ನಡೀರಿ.' ಪಾಟೀಲ ಕೇಳಲೇ ಇಲ್ಲ. ಅವನು ಹಳ್ಳಿಯ ಸಾಧಾರಣ ಶ್ರೀಮಂತ ಮನೆತನದಿಂದ ಬಂದವನು. ಅಮೃತನಿಗೆ ಕೊಡುವಷ್ಟು ಯೋಗ್ಯತೆ ಇರದಿದ್ದರೂ ಕೊಡುವೆನೆಂದು ಹೇಳುವಷ್ಟು ಧೈರ್ಯ, ದೊಡ್ಡಸ್ತಿಕೆ ಇದ್ದವು. ಆಯಿತು, ಹೆಚ್ಚಿನ ವಿಚಾರ ಮಾಡಲು ಅನುವಿಲ್ಲದೆ ಅಮೃತ ಊರಿಗೆ ಪತ್ರ ಬರೆದನು. ತಾನು ಬಂದ ಕೆಲಸದ ವಿಷಯ ಏನೂ ಬರೆಯಲಿಲ್ಲ. 'ಉಗಾರಕ್ಕೆ ಗೆಳೆಯನೊಬ್ಬನ ಮನೆಗೆ ಹೋಗಿ ಎರಡು ದಿನಕ್ಕೆ ಬರತೀನಿ, ಎಲ್ಲಾ ಸಮಕ್ಷಮ ಹೇಳತೀನಿ' ಎಂದಿಷ್ಟೆ ಬರೆದು ಹಾಕಿದನು. ತಿಕೀಟು ಸಿಕ್ಕಿತು, ಗಾಡಿ ಬಿಡುವ ಕೊನೆಯ ಗಂಟೆಯಾಯಿತು. ಇಬ್ಬರೂ ಅವಸರದಿಂದ ಹೋಗಿ ಪುಣೆಯ ಗಾಡಿಯಲ್ಲಿ ಒಂದು ದೊಡ್ಡ ಮೂರನೇ ವರ್ಗದ ಡಬ್ಬಿಯಲ್ಲಿ ಜನರನ್ನು ನುಗಿಸುತ್ತಲೇಹತ್ತಿದರು.

ಧಾರವಾಡದವರೆಗೆ ಇಬ್ಬರೂ ಬಾಗಿಲ ಪತ್ತಿರ ನಿಂತುಕೊಂಡು ಹೋದರು. ಅಲ್ಲಿ ಮಾತ್ರ ಸ್ವಲ್ಪ ಗದ್ದಲ ಕರಗಿತು. ಇಬ್ಬರಿಗೂ ಕೂಡಲು ಜಾಗ ಸಿಕ್ಕಿತು. ಅದೇ ಡಬ್ಬಿಗೆ ಒಂದು ಕುಟುಂಬ ಬಂದು ಸೇರಿಕೊಂಡಿತು. ನಡುವಯಸ್ಸಿನ ಗಂಡಸು, ಅವನ ಹೆಂಡತಿ, ಜೋಡಿ ಎಂಟು ವರ್ಷದಿಂದ ೬ ತಿಂಗಳ ಕೂಸಿನವರೆಗೆ

ಆರು ಹುಡುಗರು. ಅವುಗಳಲ್ಲಿ ನಾಲ್ಕು ಹೆಣ್ಣು ಎರಡು ಗಂಡು. ಆ ಹೆಂಗಸು ಆದೇ ಬಾಣಂತನ ಮುಗಿಸಿಕೊಂಡು ಹೊರಗಿನ ಗಾಳಿಗೆ ಕೂಸಿನ ಸಹಿತ ಬಂದಿದ್ದಾಳೆ. ಮೈಯೆಲ್ಲ ಬೆಳ್ಳಗೆ, ಸೊರಸೊರಗಿ ಸಿಬರುಕಡ್ಡಿಯಾಗಿದ್ದಾಳೆ. ಸಂಸಾರದ ಗಾಣದಲ್ಲಿ ಹಾಕಿ ತಿರುವಿದ ಕಬ್ಬಿನ ಸಿಪ್ಪೆಯಂತೆ ಕಂಡಳು. ಚೀಲ, ಅರಿವೆಗಂಟು, ಟ್ರಂಕು, ಹಾಸಿಗೆ ಸುರುಳಿ ಮುಂತಾದ ಸಾಮಾನು ಬೇರೆ. ಗಾಡಿ ಸೀಟಿ ಕೊಟ್ಟಿತು. ಇನ್ನೂ ಆ ಯಜಮಾನ ಸಾಮಾನು ಹಾಕುತ್ತಲೇ ಇದ್ದಾನೆ. ಕೂತ ಜನ ಇದೇನು ಪೀಡಾ ಬಂತೆಂದು ಮನಸ್ಸಿನಲ್ಲಿ ಶಾಪ ಕೊಡುತ್ತಿದ್ದಾರೆ. ಅಮೃತ ಎದ್ದು ಬಾಗಿಲಿಗೆ ಹೋಗಿ ಸಾಮಾನಿಡಲು ಸಹಾಯ ಮಾಡಿದನು. ಪಾಟೀಲನೂ ಅವನೊಂದಿಗೆ ಅವನ್ನೆತ್ತಿ ಮೇಲೆ ಇಟ್ಟನು. ಅಂತೂ ಸಾಮಾನೆಲ್ಲ ಸುರಕ್ಷಿತವಾಗಿ ಒಳಗೆ ಬಂದಿತು. ಗೃಹಸ್ಥನು ಇಬ್ಬರೂ ತರುಣರನ್ನು ನೋಡಿ ಕೃತಜ್ಞತೆಯನ್ನು ವ್ಯಕ್ತಮಾಡಿದನು. ಪರಸ್ಪರ ಪರಿಚಯವಾಯಿತು. ಬೆಳಗಾವಿಯ ಕೋರ್ಟಿನಲ್ಲಿ ತನಗೆ ಕಾರಕೂನಿಕೆ ಕೆಲಸವಿರುವದೆಂದೂ ಪ್ರಪಂಚ ಸಹಿತ ಹೊರಟರುವೆನೆಂದೂ ಅವನು ಹೇಳಿದನು. ಅವನ ಹೆಂಡತಿ ಹುಡುಗರು ಕೂಡಲು ಜಾಗವಿಲ್ಲದೆ ನಿಂತಿದ್ದರು. ಅಮೃತ ತನ್ನ ಸ್ಥಳದಲ್ಲಿ ಆ ಹೆಂಗಸನ್ನು ಕೂಡಿಸಿದನು. ಪಾಟೀಲ ಕುಳಿತಲ್ಲಿ ಒಬ್ಬಿಬ್ಬ ಸಣ್ಣ ಹುಡುಗರು ಕುಳಿತರು. ನಡುವೆ ಹಾಸಿಗೆ-ಟ್ರಂಕುಗಳ ಮೇಲೆ ಉಳಿದೆಲ್ಲರೂ ಕೂತುಕೊಂಡರು. ಮಲೆನಾಡಿನ ಹಸಿರು ಜೊಂಪದಲ್ಲಿ ಗಾಡಿ ದುಡುದುಡಿಸುತ್ತ ಸಾಗಿತು.

ಆ ಕಾರಕೂನನ ಹುಡುಗರ ಕೂಡ ಒಂದು ತಾಸಿನಲ್ಲಿ ಅಮೃತನ ಸಲಿಗೆ ಹೆಚ್ಚಿತು. ಅವರಿಂದ ಹಾಡು ಹೇಳಿಸಿದನು, ತಾನು ಕತೆ ಹೇಳಿದನು. ಲೋಂಡಾದವರೆಗೆ ಮೋಜಿನಲ್ಲಿ ಹೊತ್ತು ಹೋಯಿತು. ಲೋಂಡಾ ಸ್ಟೇಶನ್ನು ಬಂದಿತು. ಗಾಡಿ ಬರುತ್ತಲೆ ಪ್ಲ್ಯಾಟಫಾರ್ಮಿನ ಮೇಲೆ ಸಾವಿರಾರು ಜನ ಸಾಮಾನು-ಸಟ್ಟರುಸಹಿತ ಒಳಗೆ ಕಿಕ್ಕಿರಿದು ನಿಂತಿದ್ದರು. ಗಾಡಿ ನಿಂತಿತೋ ಇಲ್ಲವೋ ಅವರ ನುಗ್ಗಾಟಕ್ಕೆ ಆರಂಭವಾಯಿತು. ಸಾಧ್ಯವಿದ್ದಲ್ಲಿ ಬಾಗಿಲ ತೆರೆದು ನುಗ್ಗಿದರು, ಇಲ್ಲದಲ್ಲಿ ಕಿಡಿಕಿಗಳೊಳಗಿಂದ ಹಾರಿಕೊಂಡರು. ಯಾವ ಕ್ಲಾಸಿನ ಡಬ್ಬಿಯೆಂಬುದನ್ನು ನೋಡಲಿಲ್ಲ, ಎಷ್ಟು ಜಾಗ ಇರುವುದೆಂಬುದನ್ನು ತಿಳಿದುಕೊಳ್ಳಲಿಲ್ಲ. ಅವರೆಲ್ಲ ಗೋವಾದ ಕ್ರಿಶ್ಚನ್ ಜನರು. ಅವರ ಅಭಿಯೋಗದಿಂದ ಎಲ್ಲ ಡಬ್ಬಿಗಳಲ್ಲಿ ಚೀರಾಟ-ಒದರಾಟ ಸುರುವಾಯಿತು. ಯುದ್ಧ

ಕಾಲದ ಪ್ರವಾಸವೆಂದರೆ ಪ್ರವಾಸಕಾಲದ ಯುದ್ಧವೆಂಬಂತೆ ತೋರಿತು. ಅಮೃತ ಕುಳಿತ ಡಬ್ಬಿಯಲ್ಲಿ ಈ ಯುದ್ಧದ ಒಂದು ಭಯಂಕರ ಪ್ರಕರಣವೇ ನಡೆಯಿತು. ಮೊದಲೇ ಅದು ತುಂಬಿತ್ತು. ಬಹಳೆಂದರೆ ಮೂರು ನಾಲ್ಕು ಜನ ಕೂಡಲು ಎಡೆಯಿತ್ತು. ಅಂಥದರಲ್ಲಿ ಕಿಡಿಕಿಯಿಂದ ಸರಸರ ಗಂಡು ಹೆಣ್ಣು ಕೂಡಿ ಒಳಗೆ ಹಾರಹತ್ತಿದರು. ಒಳಗೆ ಹೋದವರ ಕೈಯಲ್ಲಿ ಹೊರಗಿದ್ದವರು ಸಾಮಾನುಗಳನ್ನು ಕೊಡಹತ್ತಿದರು. ಸಾಮಾನುಗಳಂತೆ ಹುಡುಗರನ್ನು ಒಳಗೆ ತುರುಕಹತ್ತಿದರು. ಸಾಮಾನೆಂದರೆ ಸಾಮಾನ್ಯವೇ ? ಮನೆಯ ಗೋಡೆ ಬಾಗಿಲುಗಳನ್ನು ಬಿಟ್ಟು ಬಹುಶಃ ಎಲ್ಲವನ್ನೂ ಆ ಜನ ತಂದಿದ್ದರು ! ಒಜ್ಜೆ ಒಜ್ಜೆಯಾದ ಟ್ರಂಕುಗಳು ಒಂದರಮೇಲೊಂದು ಲೋಹಾಸ್ತ್ರದಂತೆ ಕಿಡಿಕಿಯ ಮಾರ್ಗವಾಗಿ ಬೀಳಹತ್ತಿದವು. ಜನರ ಕಾಲ ಮೇಲೆ ಮೈಮೇಲೆ ಖಬರಿಲ್ಲದೆ ಒಗೆಯುತ್ತಿದ್ದರು. ದುರ್ದೈವದಿಂದ ಕಿಡಿಕಿಯ ಕಡೆಗೆ ಆ ಕಾರಕೂನನ ಹೆಂಡತಿ ಎಳಗೂಸನ್ನು ಕರಕೊಂಡು ಕೂತಿದ್ದಳು. ಆಕೆಯ ಮೈಮೇಲೆ ಒಂದು ಟ್ರಂಕನ್ನು ನೂಗಿಸಿದರು. 'ಅಯ್ಯಯ್ಯರೊ, ನನ್ನ ಕೂಸು ಸಾಯುತದರೋ' ಎಂದವಳು ಒದರಹತ್ತಿದಳು. ಕೂಡಲೆ ಅಮೃತನು ಆ ಕೂಸನ್ನು ಕರಕೊಂಡು ಎತ್ತರದಲ್ಲಿ ಹಿಡಿದು ನಿಂತನು. ಅದು ಒಂದೇಸವನೆ ಚಿಟ್‌ಚಿಟ್ಟೆಂದ ಚೀರುತ್ತಿತ್ತು. ಇಷ್ಟಾದರೂ ಆ ಮಂದಿ ಹೊರಗಿನಿಂದ ಟ್ರಂಕನ್ನು ನೂಗಿಸುತ್ತಲೇ ಇದ್ದಿತು. ಪಾಟೀಲನು ಆ ಹೆಂಗಸನ್ನು ತಾ ಕುಳಿತಲ್ಲಿ ಕೂಡಿಸಿ ಕಿಡಿಕಿಗೆ ತಾ ಕೂತು ಸಾಮಾನು ಒಳಗೆ ಬಿಡದಂತೆ ಪ್ರತಿಭಟಿಸಹತ್ತಿದನು. ಅವರು ಕೇಳಲೇ ಇಲ್ಲ. ಟ್ರಂಕಿನ ಮೇಲೆ ಟ್ರಂಕು ಬಂದು ಬಿದ್ದವು. 'ನನ್ನ ಕಾಲರೋ' ಎಂದವಳು ಚೀರಿದಳು. ಆಕೆಯ ಗಂಡನೂ ಪಾಟೀಲನೂ ಕೂಡಿ ಟ್ರಂಕನ್ನು ಕಷ್ಟದಿಂದ ಅತ್ತ ಸರಿಸಿದರು. ಕಾಲು ಜಜ್ಜಿದಂತಾಗಿತ್ತು. ಒಂದು ಕಡೆ ಗೀಚಿ ರಕ್ತ ಬಂದಿತ್ತು. ಡಬ್ಬಿಯಲ್ಲಿದ್ದವರೆಲ್ಲ ಇದರಿಂದ ಕೆರಳಿ ತಪ್ತರಾದರು. 'ಹೊರಗೆ ಹಾಕರಿ ಈ ಸೂಳಿಮಕ್ಕಳನ್ನ, ರಾಕ್ಷಸರ ಹಂಗ ಬರಲಿಕ್ಕೆ ಹತ್ತ್ಯಾರ' ಎಂದು ಒದರಾಡಹತ್ತಿದರು. ಅವರೇನು ಕೇಳಲಿಲ್ಲ. ಸುಮಾರು ಇಪ್ಪತ್ತು ಜನ, ನಾಲ್ವತ್ತು ಸಾಮಾನು ಕೂಡಿ ಗಾಡಿಯೊಳಗೆ ಬಂದು ಸೇರಿಕೊಂಡಿತು. ಆ ಸಾಮಾನಿನಲ್ಲಿ ಸೆರೆಯ ಬುಟ್ಟಿಗಳು ಹಲಸಿನ ಹಣ್ಣುಗಳು ಎಗ್ಗಿಲ್ಲದೆ ಇದ್ದವು. ಗಾರ್ಡನಾಗಲಿ ಸ್ಟೇಷನ್ ಮಾಸ್ತರಾಗಲಿ ಯಾರೂ ಈ ಕುರುಕ್ಷೇತ್ರವನ್ನು

ನೋಡಲು ಬರಲಿಲ್ಲ. ಅವರು ಎಲ್ಲ ಪ್ರವಾಸಿಕರಿಗೆ ಸಂಪೂರ್ಣ ಸ್ವಾತಂತ್ರ್ಯ ವನ್ನು ಕೊಟ್ಟಿದ್ದರು, 'ನಿಮ್ಮೊಳಗೆ ಬಡಿದಾಡಿ ನೀವೇ ಬಗೆಹರಿಸಿಕೊಳ್ಳಿರಿ' ಎಂಬ ರಾಜನೀತಿಯನ್ನು ಬ್ರಿಟೀಷರ ಆಳಿಕೆಯಿಂದ ಅವರು ಕಲಿಯದೆ ಇರುವರೇ ? ಕೂಗಾಟ, ಬೈಗುಳು ಇವುಗಳಿಂದ ಸಂತೆಗಿಂತ ಆ ಗಾಡಿ ಅತ್ತಿತ್ತ ಆಗಿರಲು ಸ್ಟೇಶನು ಬಿಟ್ಟು ಹೊರಟಿತು. ಕೂಡುವ ಸ್ಥಳದಲ್ಲಿಯಂತೂ ಒಬ್ಬ ರೊಬ್ಬರು ರಿಕ್ಕಾಗಿ ಕೂತಿದ್ದಾರೆ ಮೇಲೆ ಕಾಲಿಡುವಲ್ಲಿ ಸಾಮಾನಿನ ಮೇಲೆ ಸಾಮಾನು, ಅದರ ಮೇಲೆ ಹೆಣ್ಣುಗಂಡು ಎಲ್ಲ ನಿಂತಿವೆ. ಪಾಯಖಾನೆಯಲ್ಲಿ ಸಹ ಸಾಮಾನಿಟ್ಟು, ಅವುಗಳ ಮೇಲೆ ಕೂಡಲು ಆ ಜನ ಹಿಂದೆ ಮುಂದೆ ನೋಡಲಿಲ್ಲ.

ಅಮೃತ ಎಲ್ಲ ನೋಡುತ್ತ ಕಿಡಿಕಿಡಿಯಾಗಿದ್ದನು. ಆದರೆ ಮಾಡುವನೇನು? ಆ ಕೂಸನ್ನು ಸಮಾಧಾನ ಮಾಡುವದರಲ್ಲಿ ಬೇರೆ ತೊಡಗಿದ್ದನು. ಅದು ಗಾಬರಿಯಿಂದ ಹಾಹಾ ಎಂದು ಅಳುತ್ತಿತ್ತು. ಅದನ್ನು ಆಚೀಚೆ ತೂಗಿ ಸ್ವಲ್ಪ ಹೊತ್ತಿನ ಮೇಲೆ ತಾಯಿಯ ಕೈಯಲ್ಲಿ ಕೊಟ್ಟನು. ತಾಯಿಯ ಹತ್ತಿರ ಹೋದ ಮೇಲೂ ಮೊಲೆ ತಿನ್ನಲೊಲ್ಲದೆ ಅದು ಎಷ್ಟೋ ಹೊತ್ತು ಹಲಬುತ್ತಲೇ ಇತ್ತು. 'ನಮ್ಮ ಕೂಸಿನ್ನ ನೀವೇ ಬದುಕಿಸಿದಿರಿ. ಇಲ್ಲಂದರ ಈ ಪಿಶಾಚಿಗಳ ಕಾಲಾಗ ಗಿಜಗುಳಕಿ ಆಗತಿತ್ತು' ಎಂದು ತಂದೆ-ತಾಯಿ ಇಬ್ಬರೂ ಅಮೃತನಿಗೂ ಪಾಟೀಲ ನಿಗೂ ನೆನಕೆ ಸಲ್ಲಿಸಿದರು. ಕೂಸನ್ನು ಕೊಟ್ಟಮೇಲೆ ತನ್ನ ಜಾಗದಲ್ಲಿ ಕುಳಿತು ಅಮೃತ ಆ ಗೋವಾ ಪ್ರವಾಸಿಗಳನ್ನು ನೋಡಿದ. ಅವರ ಆ ವಿಕಾರವಾದ ಮುಖಗಳು, ಕೆಂಪಾದ ಕಣ್ಣುಗಳು ಕಣ್ಣಲ್ಲಿ ಒತ್ತಿದವು. ಅವರ ಬರವಿನಿಂದ ದುರ್ವಾಸನೆ ಎಲ್ಲ ಕಡೆ ಹರಡಿತು. ಅವರೇನು ಆದದ್ದಕ್ಕೆ ಹಳಹಳಿಸಲಿಲ್ಲ. ಹೇಗೂ ಜಾಗ ಸಿಕ್ಕಿತೆಂಬ ಸಮಾಧಾನ, ತಾವು ವೈರಿಗಳ ಮೇಲೆ ಲಗ್ಗೆ ಮಾಡಿ ಗೆದ್ದೆವೆಂಬ ವಿಜಯೋನ್ಮಾದ ಅವರಲ್ಲಿ ತೋರಿದುವು. ಒಳಗೆ ಬಂದದ್ದಂತೂ ಆಯಿತು. ಇನ್ನು ಸಾಮಾನು ಎಲ್ಲಿ ಸಂವರಿಸಿಡಬೇಕು, ತಮ್ಮಂದಿರನ್ನು ಎಲ್ಲೆಲ್ಲಿ ಕೂಡಿಸಬೇಕು ಎಂದು ಡಬ್ಬಿಯ ಎಲ್ಲ ಕಡೆಗಳನ್ನು ಅವರು ನಿರುಕಿಸ ಹತ್ತಿದರು. ಪಾಪ ! ಅವರಿಗೆ ಪುಣೆಯವರೆಗೆ ಹೋಗುವುದಿದೆ, ಮುಂದೆ ಮುಂಬಯಿಗೆ ಹೋಗಿ ಮುಟ್ಟುವುದಿದೆ. ಅದರ ವಿಚಾರ ಮಾಡಬೇಡವೇ ? ಕನಿಕರ, ದಯೆ-ಮಾಯೆ ಇವು ಇಂದಿನ ಜಗತ್ತಿನ ಪೇಟೆಯಲ್ಲಿ ಎಲ್ಲ ಪದಾರ್ಥಗಳಂತೆ ಭಾರಿ ತುಟ್ಟಿಯಾಗಿವೆ, ಕಳ್ಳ ಪೇಟೆಯಲ್ಲಿಯೂ ಸಿಗಲಾರವು ! ಅಮೃತನಿಗೆ

ಮಾತ್ರ ಸುಮ್ಮನೆ ಕೂಡುವುದಾಗಲಿಲ್ಲ. ಅವನ ಸಾತ್ವಿಕ ತ್ವೇಷ ಜಾಗೃತ ವಾಯಿತು. ಆ ಗೋವಾಗುಂಪಿನ ಹಿರಿಯನೊಬ್ಬನನ್ನು ಕುರಿತು ಇಂಗ್ಲಿಷಿನಲ್ಲಿ ಮಾತಾಡಿಸಿದನು : 'ನೀವು ಹೀಗೆ ನೂಕುನುಗ್ಗಲು ಮಾಡಿ ಒಳಗೆ ಬಂದದ್ದು ನಿಮಗೆ ಸರಿಯೆನಿಸುವದೇ ?' ಇದಕ್ಕೆ ಏನೂ ಉತ್ತರವಿಲ್ಲ. 'ನಿಮ್ಮ ಸಾಮಾನಿನ ಬುಡಕ್ಕೆ ಈ ಕೂಸನ್ನು ಕೊಲತಿದ್ದಿರಿ ಎಂಬುದು ಗೊತ್ತೇ ? ಪಾಪ ಈ ಹೆಂಗಸಿನ ಕಾಲು ಜಜ್ಜಿಹೋಗಿದೆ. ಇದಕ್ಕೇನು ಅನಿಸುವುದಿಲ್ಲವೇ ?' ಇದಕ್ಕೂ ಉತ್ತರವಿಲ್ಲ. ಅಮೃತನ ಸಿಟ್ಟು ಹೆಚ್ಚಿತು. 'ನೋಡಿದಿರಾ, ಪಾಟೀಲ, ಪಶುಗಳಂತೆ ಒಳಗೆ ನುಗ್ಗಿ ಪಶುಗಳಂತೆ ಮೂಕ ಆಗಿರ ತಾರೆ!' ಎಂದನು. ಇದಕ್ಕೆ ಮಾತ್ರ ಉತ್ತರ ಆ ಗುಂಪಿನಲ್ಲಿ ಒಬ್ಬ-ರಿಂದ ಬಂತು, 'ನಾವು ಲೋಂಡಾ ಸ್ಟೇಶನ್ ಮೇಲೆ ಕೂತು ಎರಡು ದಿನ ಆತು. ಕೂಳಿಲ್ಲದೆ ನೀರಿಲ್ಲದೆ ಕೂತಿದ್ದೆವು. ಈವತ್ತು ನಮಗ ಜಾಗಾ ಸಿಕ್ಕಿತು. ನಿಮಗ ತ್ರಾಸಾದರೆ ನಾವೇನು ಮಾಡೋಣ ? ಈ ದಿನದಲ್ಲಿ ಪ್ರವಾಸವೇ ಹೀಗೆ.' ಮಳೆ ಗಾಲದ ಮೂಲಕ ಮುಂಬಯಿಗೆ ಹೋಗುವ ಸ್ಟೀಮರ್ ಸರ್ವಿಸು ನಿಂತದ್ದರಿಂದ ಅಸಾಧ್ಯ ಜನ ಈ ದಾರಿಯಿಂದ ಹೋಗುತ್ತಲಿತ್ತು. ಆದರಿಂದ ಎರಡು ಮೂರು ದಿನ ಅನೇಕರಿಗೆ ಲೊಂಡಾದಲ್ಲಿ ಕಾಯುವ ಪ್ರಸಂಗ ಬಂದಿತ್ತು. ಅಮೃತ ಹೇಳಿದನು : 'ನೀವು ಹೇಳಿದ್ದು ಒಪ್ಪಿದೆ. ನಿಮ್ಮ ಬಗ್ಗೆ ಸಹಾನುಭೂತಿ ಹುಟ್ಟಿಸುವಂತೆ ನೀವು ನಡೆದಿರಾ ? ನಿಮಗೆ ತ್ರಾಸವಾಯಿತೆಂದು ಮುಂದಿಗೂ ತ್ರಾಸ ಕೊಡಬೇಕೇ ?' ಇದಕ್ಕೆ ಮತ್ತೆ ನಿರುತ್ತರ. ಅವರ ಮೇಲೇನೂ ಪರಿಣಾಮವಾಗದು, ಸುಮ್ಮನಿರುವದೇ ನೆಟ್ಟಗೆಂದು ಪಾಟೀಲ ಹೇಳಿದನು. ಅಮೃತ ಸುಮ್ಮಗಾದನು. ಗಾಡಿ ಮುಂದರಿಯಿತು. ನಡುವಿನ ಸ್ಟೇಶನ್ನಿಗೆ ಒಬ್ಬಿಬ್ಬರಿಳಿಯಲು ಆ ಗೋವಾ ಬಂಧುಗಳು ತಟ್ಟನೆ ಹಾರಿ ಆ ಜಾಗ ಆಕ್ರಮಿಸಿ ದರು. ಮುಂದೆ ಬೆಳಗಾವಿ ಸಮೀಪಕ್ಕೆ ಬಂತು. ಅಲ್ಲಿ ಗದ್ದಲ ಬಹಳೆಂದು ಅವರಿಗೆ ಗೊತ್ತು. ಆ ಗದ್ದಲವನ್ನು ಇದಿರಿಸಲು ಅವರು ತಮ್ಮ ಯುದ್ಧ ತಂತ್ರವನ್ನು ನಿರ್ಧರಿಸಿದರು. ಎರಡೂ ಕಡೆಯ ಬಾಗಿಲುಗಳಿಗೆ ಆನಿಸಿ ತಮ್ಮ ದೊಡ್ಡದೊಡ್ಡ ಟ್ರಂಕುಗಳನ್ನು ಹೇರಿದರು. ಅವುಗಳ ಮೇಲೆ ಇಬ್ಬರು ದಾಂಡಿಗ ರನ್ನು ಜಯವಿಜಯರಂತೆ ಕೂಡಿಸಿದರು. ಗದ್ದಲ ಒಳಗೆ ಬಹಳವಿರುವದೆಂಬ 'ಕ್ಯಾಮುಫ್ಲೇಜ' (ಮೋಸದ ತೋರಿಕೆ) ಮಾಡಲು ತಮ್ಮ ಪೈಕಿ ಕೆಲವರನ್ನು ಎದ್ದು ನಿಲ್ಲಿಸಿದರು. ಯಾರನ್ನೂ ಒಳಗೆ ಬಿಡುವಂತಿಲ್ಲ ಎಂದು ಜಯವಿಜಯ

ರಿಗೆ ಹಾಗೂ ಕಿಡಿಕಿಯ ಹತ್ತಿರ ಕುಳಿತವರಿಗೆ ಬಜಾಯಿಸಿದರು. ಬೆಳಗಾವಿ ಬಂದಿತು. ಅಲ್ಲಿಯೂ ವಿಪರೀತ ದಟ್ಟಣೆ. ಎಲ್ಲ ಕಡೆ ಜನ ಹಿಂದೆ ಮುಂದೆ ಹತ್ತಲೆಂದು ನುಗ್ಗಿತು. ಅಮೃತನ ಡಬ್ಬಿಯಿಂದ ಆ ಕಾರಕೂನನ ಪ್ರಪಂಚವೆಲ್ಲ ಅಲ್ಲಿಳಿಯಬೇಕಾಗಿತ್ತು. ಅವರು ಕಿಡಕಿ ತೆರೆದು ಹಾರಿಕೊಂಡು ಇಳಿಯಬೇಕಾದರೆ ಕೋಟೆಗೋಡೆಯಿಂದ ಹಾರಿಕೊಂಡಷ್ಟು ಪ್ರಯಾಸವಾಯಿತು. ಅವರ ಸಾಮಾನೆಲ್ಲ ಕೊಟ್ಟು ಅಮೃತ ಹಾಗೂ ಪಾಟೀಲ ನೆರವಾದರು. 'ನಿಮ್ಮುಪಕಾರ ಭಾಳಾತು' ಎಂದು ಆ ಗೃಹಸ್ಥ ಅಂದನು. ಅವನ ಹೆಂಡತಿ ಸಪ್ಪೆಮೊಗದಲ್ಲಿ ಮುಗುಳುನಗೆಯನ್ನು ಬೀರಿದಳು. ಹೋದವರ ಜಾಗವನ್ನು ಗೋವಾನಿಗಳು ವ್ಯಾಪಿಸಿದರು. ಕೆಲವು ಹೊಸಬರು ಹಿಂದಿನಿಂದ ಒಳಗೆ ಹಾರಿಬಂದರು. 'ಏ ಜಾಗ ನೈ' ಎಂಬ ಘೋಷವಾಕ್ಯದಿಂದ ಆ ಬಾಗಿಲಲ್ಲಿಯ ಕಾವಲಿಗರು ಅವರನ್ನು ಬೆದರಿಸಿ ಅಟ್ಟುತ್ತಿದ್ದರು. ಇಂಥದರಲ್ಲಿಯೂ ಒಬ್ಬ ಘಟ್ಟಿಗನು ಕಿಡಕಿಯಲ್ಲಿ ಹಾರಿ ಕುಳಿತನು. ಅವನನ್ನು ಅಮಾತ ಎತ್ತಿ ಇಳಿಸಿದರು, ಈ ಗೆಲವಿಗಾಗಿ ಖೊಕ್ಕೆಂದು ನಕ್ಕು ನಲಿದರು. ಇದನ್ನೆಲ್ಲ ನೋಡುತ್ತಿದ್ದಂತೆ ಅಮೃತನಿಗೂ ಪಾಟೀಲನಿಗೂ ಹೊಟ್ಟೆಯಲ್ಲಿ ಸಂಕಟವಾಯಿತು. ಆದರೆ ಅವರೊಡನೆ ಗುದ್ದಾಡುವಂತಿರಲಿಲ್ಲ. ಅವರಿಗೆ ಅಪೀಲು ಮಾಡಿ ನೋಡಿದರು, ಅದೆಲ್ಲ ಬೋರ್ಗಲ್ಲ ಮೇಲಿನ ಮಳೆಯಾಯಿತು. ಮೊದಲಿನ ಜನ ಇಳಿದಂತೆ ಅವರ ಸಂಖ್ಯೆ ಹೆಚ್ಚಿತು. ಅಲ್ಲಿಂದ ಅವರು ಮಟ್ಟಸಾಗಿ ತಮ್ಮ ಸಾಮಾನಿಟ್ಟುಕೊಂಡು ಆ ಡಬ್ಬಿಯನ್ನು ತಮ್ಮದೊಂದು ಸಂಚಾರಿ ಮನೆಯ ಸ್ವರೂಪಕ್ಕೆ ಇಳಿಸಿದರು. ಅಲ್ಪ ಸಂಖ್ಯರೇ ತಮ್ಮ ಹಕ್ಕುಬಾಧ್ಯತೆಗಳ ಸಲುವಾಗಿ ನಮ್ಮ ದೇಶದಲ್ಲಿ ಪ್ರಚಂಡ ಪ್ರಳಯ ಹೂಡಲು ನಿಂತಿರುವಾಗ ಬಹುಸಂಖ್ಯವಾದವರು ಕೇಳುವರೇ ? ಅಮೃತನಂಥ ಆರೇಳು ಜನ ಬಿಟ್ಟರೆ ಅದರಲ್ಲಿ ಈಗ ಎಲ್ಲರೂ ಗೋವಾನಿಗಳೇ. ಹೊಸಬರನ್ನು ಒಳಗೆ ತಗೊಳ್ಳದಂಥ ಅವರ ತಂತ್ರ ಫಲಿಸುತ್ತ ಬಂದಿತ್ತು. ಅದನ್ನು ನೋಡಿ ಕಸಿವಿಸಿಗೊಂಡು ಮರೆಯಲೆತ್ನಿಸಲೆಂದು ಅಮೃತ ಕಾಜಿನ ಕಿಡಿಕಿಯಿಂದ ಹೊರನೋಡಿದನು. ಅಲ್ಲಿ ಇನ್ನೊಂದು ಅಸಹ್ಯವಾದ ದೃಶ್ಯ ಕಂಡಿತು. ಮಿಲಿಟರಿ ಡಬ್ಬಿಯೊಳಗಿಂದ ಒಬ್ಬೊಬ್ಬರಾಗಿ ತಿಂದು ತಿಂದು ಟುಮಕಾದ ಟಾಮಿಗಳು ಹೊರಗೆ ಬಂದು ನಿಂತಿದ್ದಾರೆ. ಮೈಯಲ್ಲಿ ಖಾಕಿ ಚಣ್ಣವೊಂದೇ ಇದೆ. ಅರ್ಧ ಮೈಯೆಲ್ಲ ತೆರವು. ರಕ್ತದ ರಸ ಹರಿಯುತ್ತಿದ್ದ ತೊಗಲಿನ ಚೀಲಗಳಂತೆ ಅವರು ಕೆಂಪುಕೆಂಪಾಗಿ ಹೊಳೆಯುತ್ತಾರೆ.ಗಾಡಿ

ಯಲ್ಲಿ ಕೂತು ಕೂತು ಬೇಸರ ಬಂದಿರಬೇಕು. ಚೆನ್ನಾಗಿ ಕುಡಿದಿರಲೂ ಬೇಕು. ಆಯಿತು, ಮಂಗಕ್ಕೆ ಸೆರೆ ಕುಡಿಸಿದಂತಾಗಿ ಪ್ಲ್ಯಾಟ್‌ಫಾರ್ಮಿನ ಮೇಲೆ ಕಾಲು ಒಗೆಯುತ್ತ ಒಬ್ಬರೊಬ್ಬರ ಕೈಹಿಡಿದು ಅವರು ಕುಣಿಯಹತ್ತಿದರು. ಗೊಗ್ಗರ ದನಿಯಲ್ಲಿ ಯಾವುದೋ ಇಂಗ್ಲಿಶ್ ಹಾಡನ್ನು ಬೇರೆ ಹೇಳುತ್ತಲಿದ್ದರು. ನಡು ನಡುವೆ ಹೊಹೋ ಎಂದು ಒದರುತ್ತಿದ್ದರು. ಅವರಿಗೆ ಯಾರದೇನು ಪರಿವೆ ? ಈ ದೇಶದ ರಾಜ್ಯ ಅವರದು, ಸಂಪತ್ತಿ ಅವರದು. ಮುಂದೆ ಅವರಿದಿರು ಯಾವನೋ ಒಬ್ಬ ಸಾಮಾನ್ಯ ಮನುಷ್ಯ ಹ್ಯಾಟು ಹಾಕಿಕೊಂಡು ಬಂದನು. ಆದನ್ನವರು ಅವನ ತಲೆಯಿಂದ ಹಾರಿಸಿದರು, ಕಿಸಿಕಿಸಿ ನಕ್ಕರು. ಅದನ್ನು ಫುಟ ಬಾಲಿನಂತೆ ಒದೆಯುತ್ತ ಕುಣಿತವನ್ನು ಮುಂದರಿಸಿದರು. ಅವನು ಅದನ್ನು ಎತ್ತಬೇಕೆಂದು ಹೋದೊಡನೆ ಮತ್ತೆ ಮುಂದೆ ನುಗಿಸುತ್ತಿದ್ದರು. ಸುತ್ತು ನಿಂತ ವರೆಲ್ಲ ನೋಡಿ ಸುಮ್ಮನಿದ್ದರು. ಎಲ್ಲರಿಗೂ ಅವರ ಹೆದರಿಕೆ. ಗಡಿಬಿಡಿಯಿಂದ ತಿಕೀಟು ತಗೊಂಡು ಒಬ್ಬ ಹಳ್ಳಿಯ ಹೆಂಗಸು ಗಾಡಿಯಲ್ಲಿ ಕೂಡಲಿಕೆ ಬಂದಳು. ಈ ಟಾಮಿಗಳಲ್ಲಿ ಒಬ್ಬ ಅವಳ ಹತ್ತಿರ ಮುದ್ದು ಕೊಡುವಂತೆ ಮಾಡಿ ಹೋದ. ಅವಳು ಕಕ್ಕಾವಿಕ್ಕಿಯಾಗಿ ಓಡಿದಳು. ಅಮೃತನಿಗೆ ಅತ್ಯಂತ ಸಂತಾಪ ವಾಯಿತು. ಕಿಡಿಕಿಯಿಂದ ಹಾರಿಹೋಗಿ ಅವರಿಗೆ ಹೊಡೆದು ಬರಬೇಕೆಂದ ನಿಸಿತು. ಆದರೆ ಗೋವಾನಿಗಳು ಕಿಡಕಿಯನ್ನು ತೆರೆಯುಗೊಡಲಿಲ್ಲ. ಗಾಡಿ ಸೀಟಿಯನ್ನೂ ಕೊಟ್ಟಿತು. 'ನಮ್ಮದೆಂಥ ದಾಸ್ಯ, ಎಂಥ ದುರ್ಗತಿ !' ಎಂದವನು ತನ್ನಷ್ಟಕ್ಕೆ ಕೂಗಿಕೊಂಡನು. 'ದೇಶದ ತುಂಬೆಲ್ಲ ಇಂಥ ರಕ್ಕಸರ ರಿಂಗಣಗುಣಿತ ನಡೆದಿದೆ, ಅದನ್ನು ನೋಡುತ್ತ ಈ ಗಾಡಿಯಲ್ಲಿ ಕೂತಂತೆ ನಾವೆಲ್ಲ ಕೈಕಟ್ಟಿಕೊಂಡು ಕೂತಿದ್ದೇವೆ' ಎಂದವನಿಗೆ ತೋರಿತು. ಗಾಡಿ ಹೊರಟಿತು. ಮುಂದಿನ ಪ್ರತಿಯೊಂದು ಸ್ಟೇಶನ್ನಿಗೆ ಈ ಡಬ್ಬಿಯಲ್ಲಿ ಒಬ್ಬಿ ಬ್ಬರು ಒಳಗೆ ಬರಬೇಕೆನ್ನುತ್ತಿದ್ದರು. ಆದರೆ ಅವರನ್ನು ನುಗಿಸಿ ಕಳಿಸುತ್ತಿ ದ್ದರು ಆ ಗೋವಾ ಬಂಧುಗಳು. ಒಂದು ಸಣ್ಣ ಸ್ಟೇಶನ್ನಿನಲ್ಲಿ ಗಾಡಿ ಬಿಡುವು ದರಲ್ಲಿತ್ತು. ಆಗ ಕಣ್ಣು ಮಂಜಾದ ಒಬ್ಬ ಹಳ್ಳಿಯ ಮುದುಕ 'ಎಪ್ಪ ನನ್ನೀಟ ಒಳಗೆ ತಗೋರ್ರಿ' ಎಂದು ಬಾಗಿಲ ಹತ್ತಿರ ನಿಂದು ಬೇಡಿಕೊಂಡನು. ಆ ಜನದಲ್ಲಿ ಕನಿಕರದ ದ್ರವ ಒಡೆಯಲಿಲ್ಲ. ಅವನು ಹೊರಗಿನ ಫಳಿಯ ಮೇಲೆ ನಿಂತನು, ಗಾಡಿ ಬಿಟ್ಟಿತು. ಆದರೂ ಅವನಿಗೆ ಪ್ರವೇಶವಿಲ್ಲ. ಅಮೃತ ನಿಗೆ ತಾಳದ್ದಾಯಿತು. ತಾ ಕೂತಲ್ಲಿಂದ ಹಾರಿ ಹೋಗಿ ಬಾಗಿಲ ಕಿಡಿಕಿ ತೆರೆದು

ಆ ಮುದುಕನನ್ನು ಒಳಗೆ ತಗೊಂಡನು. ಇದನ್ನು ಅವರು ಪ್ರತಿಭಟಿಸಿದರು. ಒಳಗೆ ತಗೊಂಡದ್ದಕ್ಕೆ ಒದರಾಡಿದರು. 'ಮೂರ್ಖ' ಎಂದು ಬಯ್ದರು. ಕೇಳಿ ಕೇಳಿ ಸಾಕಾಗಿ ಅಮೃತ ಅಂದನು : 'ಏನು ನೀವು ಮನುಷ್ಯರೋ ರಾಕ್ಷಸರೋ ? ನೀವು ಒಳಗೆ ಬರುವಾಗ ಇಲ್ಲಿ ಜಾಗ ಇಲ್ಲದಿದ್ದರೂ ದನದಂತೆ ಒಳಗೆ ನುಗ್ಗಿ ಮಂದಿಯನ್ನು ಕೊಲ್ಲುತ್ತ ಬಂದಿರಿ. ಈಗ ನಿಮ್ಮಂತೆ ಬೇರೆಯವರು ನಿಂದರ ಲಿಕ್ಕೆ ಜಾಗ ಸಿಕ್ಕರೂ ಸಾಕೆಂದು ಬಂದರೆ ಹೊರಗೆ ಹಾಕುತ್ತೀರಿ.' ಇದೆಲ್ಲ ಅವರ ಮೇಲೇನೂ ಪರಿಣಾಮ ಮಾಡಲಿಲ್ಲ. ಇನ್ನಿಷ್ಟು ಬಯ್ದುಕೊಂಡರು. ಮುಂದೆ ಹೊತ್ತು ಇಳಿದು ತಂಪಾಗಲು ಅವರೆಲ್ಲ ಕೂಡಿ ಕೆಟ್ಟ ದನಿಯಲ್ಲಿ ಸಂಗೀತವನ್ನು ಬೇರೆ ಆರಂಭಿಸಿದರು. ಅದಕ್ಕೂ ರೋದನಕ್ಕೂ ಏನೂ ಅಂತರ ಕಾಣುವಂತಿರಲಿಲ್ಲ. ಅಮೃತನಿಗೂ ಪಾಟೀಲನಿಗೂ ಸಾಕು ಸಾಕಾಯಿತು. ಯಾವಾಗ ತಮ್ಮ ಸ್ಟೇಶನ್ನು ಬಂದೀತೋ ಎಂದು ಕಾದು ಕಾದು ಕೊನೆಗೆ ಉಗಾರ ಬರಲು ಇಳಿದು ಕತ್ತಲೆಯಾಗುವದರೊಳಗೆ ಊರು ಸೇರಿದರು. ಪ್ರವಾಸದ ಆ ಭೀಕರ ಚಿತ್ರಗಳು ರಾತ್ರ್ಯಲ್ಲಿ ಅವರನ್ನು ಅಶಾಂತ ಗೊಳಿಸಿದುವು.

ಅಪರೂಪದಂತೆ ತನ್ನ ಮಿತ್ರನು ಬಂದಿರುವನೆಂದು ಪಾಟೀಲನು ಬಹಳ ಆದರಾತಿಥ್ಯ ಮಾಡಿದನು. ಬೆಳಿಗ್ಗೆ ಎದ್ದು ಮುಖ ತೊಳೆದ ಮೇಲೆ ಚಹಾಪಾನ, ಸ್ನಾನವಾದ ಮೇಲೆ ತುಪ್ಪ ಬಸಿಯುತ್ತಿರುವ ಸಿರ, ಗಟ್ಟಿ ಹಾಲು ಹೀಗೆ ದಿನವು ಮೊದಲಾಯಿತು. ಕೆಳಮನಿಯ ಶ್ರೀಮಂತಿಕೆಯ ಬೆಳ್ಳಾರದೊಳಗಿಂದ ಪಾರಾಗಿ ಬಂದರೆ ಇಲ್ಲಿ ಇನ್ನೊಂದು ಬಲೆಯಲ್ಲಿ ಸಿಕ್ಕನಲ್ಲ ಎಂದು ಅಮೃತ ತನ್ನಲ್ಲಿ ಅಂದು ಕೊಂಡನು. ಆದರೆ ಪಾಟೀಲನ ಅಂತಃಕರಣ ಕೆಳಮನಿಗಿಂತ ಬೇರೆ ಎಂಬುದು ಅವನಿಗೆ ಗೊತ್ತು. ಅವನದೇಕೊ ಸ್ನೇಹವುಕ್ಕಿ ಉಕ್ಕಿ ಗೆಳೆಯನ ಪರಾಮರಿಕೆ ಮಾಡುತ್ತಿದ್ದನು. ತಾ ಬಹಳ ಕಾಲದಿಂದ ಬೇಡಿ ಬಯಸಿದ ವಸ್ತು ಅವನಿಗೆ ಇಂದು ಕೈಗೆ ಹತ್ತಿದಂತೆ ಆಗಿರಬೇಕು. ಇದನ್ನೆಲ್ಲ ನೋಡುತ್ತಿದ್ದಂತೆ ಅಮೃತ ನಿಗೆ ಸ್ವಲ್ಪ ಕಾಲದಲ್ಲಿಯೇ ಒಂದು ಗೂಢ ಬಿದ್ದಿತು. ಪಾಟೀಲನ ತಂದೆ-ತಾಯಿ ಯಾಕೆ ಅವನು ಬಂದ ಕ್ಷಣದಿಂದ ಬಿಕ್ಕೊಂಡು ಇರುವರು? ಅವನು ಬಂದದ್ದಕ್ಕೆ ಹಿಗ್ಗಿಲ್ಲ. ಅವನ ಗೆಳೆಯ ತಾನು ಬಂದದ್ದು ನೋಡಿ ಯಾರು ಇವನೆಂದು ಕೇಳಿಲ್ಲ. ತನ್ನನ್ನು ಕರಕೊಂಡು ಬಂದದ್ದಕ್ಕೆ ಕೋಪಿಸಿಕೊಂಡಿರಬಹುದೆ ? ಪಾಟೀಲನ ದೊಂದು ಮನೆಯ ಹೊರತುದಿಗೆ ಸ್ವತಂತ್ರ ಕೋಣೆಯಿದ್ದೆ, ಅಲ್ಲಿಗೆ ಎಲ್ಲ

ಪದಾರ್ಥಗಳನ್ನು ಆಳಿನ ಮೂಲಕ ತರಿಸುತ್ತಾನೆ. ಮನೆಯಲ್ಲಿ ಮೂರುನಾಲ್ಕು ಹುಡುಗರಿವೆ. ಅವು ಯಾವೂ ಅಣ್ಣನ ಹತ್ತಿರ ಹಾಯುವುದಿಲ್ಲ. ಇದೇನು ಕಡಕಾದ ಶಿಸ್ತೇ? ಮಗನ ಮೇಲೆ ಸಿಟ್ಟೇ? ಕೇಳಬೇಕೆಂದರೆ ಅಮೃತನಿಗೆ ಸಂಕೋಚ, ಕೇಳದಿದ್ದರೆ ಕಾತರ-ಈ ಸ್ಥಿತಿಯಲ್ಲಿ ಮಧ್ಯಾಹ್ನದ ಊಟವಾಯಿತು, ಜೊಂಪು ನಿದ್ದೆಯಾಯಿತು. ಎದ್ದ ಮೇಲೆ ಚಹ ಬಂದಿತು. ಅದು ನೆಟ್ಟಗೆ ಆಗಿರಲಿಲ್ಲ, ನೀರು ನಿಕ್ಕಡಿ ಆಗಿ ಬೆಲ್ಲ ಹಾಕಿ ಮಾಡಿದ್ದಾಗಿತ್ತು. ಸ್ವಲ್ಪೇ ಕುಡಿದು ಅಮೃತ ಕೆಳಗಿಟ್ಟನು. ಪಾಟೀಲನು ಇದನ್ನು ನೋಡಿ ಕೆರಳಿ 'ಸೂಳೆ ಮಕ್ಕಳು ಇಂಥವರು ಗಂಟುಬಿದ್ದಾರೆ' ಎಂದು ರಭಸದಲ್ಲಿ ಅಂದನು. ಒತ್ತಿಕೊಂಡ ರೋಷವೆಲ್ಲ ಹೊರಹೊಮ್ಮಿತು. ಆದರೆ ಅವನು ಯಾರನ್ನು ಬಯ್ಯುತ್ತಿರುವನೆಂಬುದು ಮಾತ್ರ ಅಮೃತನಿಗೆ ತಿಳಿಯಲಿಲ್ಲ. 'ಯಾರು ಅವರು ?' ಎಂದು ಸಹಜ ಕುತೂಹಲದಿಂದ ಕೇಳಿದನು. 'ಯಾರೇನು ? ನಮ್ಮ ನಸೀಬ. ನಾವು ನಿಂತು ಮಾಡಿಸಿಕೊಂಡರೇ ಎಲ್ಲಾ ಛಲೋದು ಸಿಗತದೆ' ಎಂದು ಪಾಟೀಲನ ಉತ್ತರ. ಇದರಿಂದಲೂ ಅರ್ಥವಾಗಲಿಲ್ಲ. 'ಕುಡಿಯ ಬ್ಯಾಡರಿ ಅದನ್ನ' ಎಂದು ಕಪ್ಪು-ಬಸಿಯನ್ನು ಅಕ್ಕಸದಿಂದ ಮೂಲೆಗೊತ್ತಿ ತನ್ನ ಖೋಲಿಯ ಬಾಗಿಲ ಹಾಕಿ ಬಂದು ಪಾಟೀಲನು ಅಮೃತನಿದಿರು ಕೆಲಹೊತ್ತು ಸುಮ್ಮನೆ ಕುಳಿತನು. ಅವನ ಮೋರೆ ಒಮ್ಮೆಲೆ ಗಂಭೀರವಾಯಿತು. ಏನೋ ನೆನೆಯುವಂತೆ ಕಣ್ಣಾಲಿಗಳನ್ನು ಮೇಲೇರಿಸಿದನು. 'ಹಿಂಗ್ಯಾಕ ಮಾಡತೀರಿ ಪಾಟೀಲ ?' ಎಂದು ಅಮೃತ ಕೇಳಿದ್ದೊಂದೇ ತಡ, ಪಾಟೀಲನು ಅಳುದನಿಯಲ್ಲಿ 'ಅವ್ವನ್ನ ಕಳಕೊಂಡು ಸಮ್ಮನ್ಯಾಗ ಪರದೇಶಿ ಆಗೇನಿ' ಎಂದು ಅಮೃತನ ಹೆಗಲ ಮೇಲೆ ಕೈಯೊಗೆದು ಅಳಲಿಕ್ಕೆ ಹತ್ತಿದನು. ಇದೇನು ಬಂತೆಂದು ಅಮೃತ ಅವನನ್ನು ಹಿಡಿದು ಪ್ರೀತಿಯಿಂದ ತಲೆಯ ಮೇಲೆ ಕೈಯಾಡಿಸುತ್ತ ಸಣ್ಣ ಹುಡುಗರಿಗೆ ಸಮಾಧಾನ ಮಾಡುವಂತೆ ಮಾಡಿದನು. ಐದು ಹತ್ತು ಮಿನಿಟು ಹೀಗೆ ಸಾಗಿತು. ಪಾಟೀಲನು ತಾಯಿಯನ್ನು ನೆನೆನೆನೆದು ಅಳುತ್ತಿದ್ದಾನೆ, ಅಮೃತ ಅವನ ತಲೆಯನ್ನು ನೇವರಿಸುತ್ತಿದ್ದಾನೆ. ಆಮೇಲೆ ಸ್ವಲ್ಪ ಸಮಕ್ಕೆ ಬಂದು ಅವನು ತನ್ನ ಕಥೆಯನ್ನು ಅಮೃತನಿಗೆ ಹೇಳಿದನು.

ಅವರದು ಪ್ರಸಿದ್ಧವಾದ ಪಾಟೀಲ ಮನೆತನ, ಜಾತಿಯಿಂದ ಜೈನರು. ತಂದೆಯ ಹೆಸರು ಜಿನಗೊಂಡ. ತನ್ನ ಹೆಸರು ಶಾಂತಿನಾಥ. ಮನೆಯಲ್ಲಿ

ಕಾಳು-ಕಡಿಯಿದೆ, ಆಳು-ಹೋಳಿದೆ, ಹೈನವಿದೆ, ಆದರೆ ಸುಖವಿಲ್ಲ. ಜಿನಗೊಂಡನ ಮೊದಲ ಹೆಂಡತಿ ಇದ್ದಾಗ ಸುಖ ಸೂಸಿ ಹರಿಯುತ್ತಿತ್ತು. ಅವಳು ಹೋಗಿ ಹನ್ನೆರಡು ವರ್ಷಗಳಾಗಿವೆ. ಮತ್ತೊಂದು ಮದುವೆ ಮಾಡಿಕೊಂಡು ಜಿನಗೊಂಡ ಗೋಳಾಟವನ್ನೇ ಕೊರಳಿಗೆ ಹಾಕಿಕೊಂಡನು. ಅವಳ ಪ್ರೀತಿ ಸಂಪಾದನೆಗಾಗಿ ಅವಳ ಸೂತ್ರದ ಗೊಂಬೆಯಾದನು. ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಅಲಕ್ಷ್ಯ ಮಾಡಹತ್ತಿದನು. ಅವಳದೇನು ಅಬ್ಬರ, ಏನು ಅಧಿಕಾರ! ಮನೆತನದ ಅದೇಕೆ, ಊರಿನ ಮಾಲಕಿಯೆ ತಾನಾದಂತೆ ಅವಳು ನಡೆಯುತ್ತಿದ್ದಾಳೆ. ಶಾಂತಿನಾಥನು ಈ ಮಲತಾಯಿಯ ಆಳಿಕೆಯಲ್ಲಿ ಸಾಕುಬೇಕಾಗಿ ಹೋದನು. ತಾಯಿಯ ಕರುಳಿನ ಕೂಗಂತೂ ಅವಳಿಂದ ದೊರೆಯದಾಯ್ತು. ಬಂದರೆ ಹೋದರೆ ಒಂದು ಉಪಚಾರದ ಮಾತು ಕೂಡ ಇಲ್ಲ. ತನ್ನ ಮಕ್ಕಳ ಸಂಭ್ರಮದಲ್ಲಿಯೇ ಯಾವಾಗಲೂ ಇರುವಳು. ತನಗೆ ಬೇಕಾದ್ದನ್ನು ಇದುರಿಗೆ ನಿಂತು ಮಾಡಿಸಿಕೊಳ್ಳಬೇಕು. ಅಷ್ಟಾಗಬೇಕಾದರೆ ಹತ್ತು ಜನ್ಮದ ಉಪಕಾರ ಮಾಡಿದಂತೆ ಮಾಡುತ್ತಿದ್ದಳು. ಮೇಲೆ ಎಲ್ಲ ತಕರಾರುಗಳ ಪಟ್ಟಿ ಜಿನಗೊಂಡನವರೆಗೆ ದಿನಾಲು ಹೋಗುತ್ತಿತ್ತು. ಶಾಂತಿನಾಥನೇನಾದರೂ ಹೇಳಹೋದರೆ ಒಬ್ಬನೇ ಇದ್ದಾಗ ಜಿನಗೊಂಡ ಸ್ವಲ್ಪ ಕನಿಕರಿಸುತ್ತಿದ್ದನು. ಆದರೆ ಆ ಮಾಮಾಯೆಯ ನೆರಳು ಬಿದ್ದರೆ ಸಾಕು ತಲೆ ತಿರುಗುತ್ತಿತ್ತು. ಇಂಥದರಲ್ಲಿ ಮಗನಿಗೆ ಕಲಿಯುವುದಕ್ಕೆ ಅವನು ದುಡ್ಡು ಕೊಡುತ್ತಿದ್ದುದು ದೊಡ್ಡ ಉಪಕಾರವೇ ಸರಿ. ಇದೆಲ್ಲ ಕೇಳಿದಂತೆ ಅಮೃತನ ಅಂತಃಕರಣ ಕರಗಿ ನೀರಾಯಿತು. ತಾಯಿಯನ್ನು ಕಳಕೊಂಡು ಮಲತಾಯಿಯ ಉಪಟಳಕ್ಕೆ ಸಿಕ್ಕು ಒದ್ದಾಡುತ್ತಿರುವ ಈ ಗೆಳೆಯ ಸ್ನೇಹರಸದ ಹಂಬಲಿಕೆಯಿಂದ ತನ್ನನ್ನು ಊರಿಗೆ ಬಲುವೆಯಿಂದ ಎಳೆದುಕೊಂಡು ಬಂದದ್ದರ ಅರ್ಥವಾಯಿತು ಅವನಿಗೆ. ಅದೆಷ್ಟೊ ಸಮಾಧಾನದ ಮಾತುಗಳನ್ನು ಹೇಳಿ ಶಾಂತಿನಾಥನಿಗೆ ಈವರೆಗೆ ದೊರೆಯದ ಶಾಂತಿಯನ್ನು ನೀಡಿದನು.

ಇಳಿಹೊತ್ತಾಯಿತು. 'ಸ್ವಲ್ಪ ಹೊರಗೆ ಹೋಗಿ ಬರೋಣ. ನಿಮ್ಮೂರ ತೋರಿಸಿರಲ್ಲ ನಮಗೆ?' ಅಮೃತ ಕೇಳಿದನು.

'ತೋರಿಸಲಿಕ್ಕೆ ನಮ್ಮದೇನು ಶಹರದೂರೇ?' ಶಾಂತಿನಾಥ ತಿರುಗಿ ಕೇಳಿದನು.

'ಅಂದರೆ ಶಹರದೂರೇ ನೋಡಬೇಕೆಂದಿಲ್ಲ ಪಾಟೀಲ. ಗಾಂಧೀಜಿಯವರು ಹೇಳೂದುಲ್ಲs, ಹಳ್ಳಿಯಂದರ 'ಖರೇ ಹಿಂದುಸ್ಥಾನ' ಅಂತ, ಇಂಥಾ ೭ ಲಕ್ಷ ಹಳ್ಳಿಯೊಳಗೆ ನಮ್ಮ ದೇಶದ ಜೀವಾಳವಿದೆ ಅಂತ ಅವರಂಬೋಣ.'

'ಗೊತ್ತಿದೆ ಸಿರೂರ. ಹಳ್ಳಿ ಅಂದರ ಕಟ್ಟಕರೇ ಹಿಂದುಸ್ತಾನೇನು ಸುಳ್ಳಲ್ಲ! ಒಮ್ಮೆ ನೋಡಿದರೆ ಇನ್ನೊಮ್ಮೆ ನೋಡಬೇಕೆನೆಸುವುದಿಲ್ಲ. ಇಷ್ಟು ಹೊಲಸು ತುಂಬಿದ ಹೊಲಗೇರಿ ಆಗಿವೆ ಹಳ್ಳಿ ಅಂದರೆ!'

'ಹೌದು. ನಾವು ನೀವು ಪಟ್ಟಣ ಸೇರಿದರೆ ಆಗದೆ ಏನು ಮಾಡ್ಯಾವು? ನೋಡ್ಯಂತೂ ಬರೋಣ ಏಳರಿ.'

ಇಬ್ಬರೂ ಕೂಡಿ ಕೋಟಹಾಕಿಕೊಂಡು ತಲೆಯ ಮೇಲೆ ಟೊಪ್ಪಿಗೆ ಇಲ್ಲದೆ ಹೊರಟರು. ತಲೆಯ ಮೇಲೆ ರುಮಾಲ, ಟೊಪ್ಪಿಗೆ ಏನೂ ಇಲ್ಲದೆ ತಿರುಗಾಡುವುದೆಂದರೆ ಹಳ್ಳಿಗರು ವಿಚಿತ್ರವೆಂದೂ ಅಶುಭಸೂಚಕವೆಂದೂ ತಿಳಿಯುತ್ತಾರೆ. ಇತ್ತೀಚೆ ಇಂಥ ನೋಟಗಳು ಪರಿಚಿತವಾಗಿದ್ದರೂ ದಾರಿಯಲ್ಲಿ ಜನ ಇವರನ್ನು ಮಿಕಿಮಿಕಿ ನೋಡಿದರು. ಅಮೃತನದು ಹೊಸ ಮೋರೆ ಬೇರೆ ಇತ್ತು. ಇವರ ಮುಂದೆ ಪಟಗಸುತ್ತಿ ಬಿಂಕದಿಂದ ಹೋಗುತ್ತಿದ್ದ ಮಧ್ಯವಯಸ್ಕರ ಟೋಳಿಯೊಂದು ಹೋಯಿತು.ಕಣ್ಮರೆಯಾಗುವವರೆಗೆ ಹಿಂದಿರುಗಿ ಅವರಲ್ಲಿ ಒಬ್ಬಿಬ್ಬರು ಅಮೃತನನ್ನು ನೋಡಿದರು. 'ಇಷ್ಟ್ಯಾಕೆ ನೋಡತಾರೆ?' ಅಮೃತ ಕೇಳಿದ. 'ನೋಡರಿ ಸಿರೂರ, ಅದು ಈ ಊರಾಗನ ಸಿ.ಆಯ್.ಡಿ. ಗುಂಪು. ಪೋಲೀಸ ಪಾಟೀಲರು ಅವರಿಗೆ ತಿಲ್ಲಿಕ್ಕೆ ಉಣಲಿಕ್ಕೆಕೊಟ್ಟು ಬೇಕಾದಾಗ ಸೆರೆಕುಡಿಸಿ ನಾಯಿ ಸಾಕಿದ ಹಾಗೆ ಸಾಕಿದ್ದಾರೆ. ಊರಿಗೆ ಯಾರು ಬಂದರು, ಯಾರು ಹೋದರು, ಯಾರ ಮನೆಯೊಳಗೆ ಏನು ನಡೆದಿದೆ, ಗಂಡಸರು ಹೆಂಗಸರು ಎಲ್ಲರ ನಡತೆ ನಡಾವಳಿ ಇದರ ಸಾದ್ಯಂತ ಮಾಹಿತಿ ಇವರ ಕಡೆ ಇರತದೆ. ನೀವು ನನ್ನ ಜೋಡಿ ಬಂದ ಯಾವನೋ ಒಬ್ಬ ಚಳವಳಿ ಮನುಷ್ಯ ಅಂತ ಲೆಕ್ಕ ಹಾಕಿ ಈಗ ವರದಿ ಒಯ್ದರು ಅವರು ಪಾಟೀಲರ ಕಡೆ. ನೀವು ಹೋಗುವ ತನಕ ನಿಮ್ಮ ಮ್ಯಾಲೆ ಪಾಳತಿ ಇಡತಾರೆ.'

'ಅಂದರೆ? ನಾ ಪಾಟೀಲರ ಮನೆಯೊಳಗೇ ಇಳದೀನಲ್ಲ? ನನಗೇನು ಮಾಡತಾರೆ?'

'ಅವರ ಮುಖಂಡಿದ್ದ ಪೋಲೀಸ ಪಾಟೀಲ ಬ್ಯಾರೆ ಇದ್ದಾರ, ಸಿರೂರ.'

'ಓಹೋ ತಿಳೀತು. ನೀವು ಅವರು ಕೌರವರು ಪಾಂಡವರು. ಮಹಾ ಭಾರತ ಯುದ್ಧ ಇನ್ನೂ ಆಗೂದದ ಏನು ?'

'ಅವೇನು ವರ್ಷದೊಳಗೆ ನಾಲ್ಕು ಸಾರೆ ಆಗತಾವೆ, ಮತ್ತೆ ಮುಗೀತಾವೆ. ಇದ್ದದ್ದರೊಳಗ ನಮ್ಮೂರು ಬೇಕು. ಕತ್ತಿ ಮಸಗೊಂಡು ನಿಂತ ಹಾಗೆ ಬಣ ಏನೂ ಇಲ್ಲ ನಮ್ಮಲ್ಲೆ.'

'ಅಡ್ಡಿಯಿಲ್ಲ. ಈ ಬರಗಾಲದಾಗ ಮಳೆ-ಬೆಳೆ ಹೇಗಿತ್ತು ಇಲ್ಲೆ ?'

'ಎಲ್ಲಾ ಶೂನ್ಯ, ಮಳೆ ಇಲ್ಲ, ಬೆಳೆ ಇಲ್ಲ. ಜನರ ಬೊಗಳಿ ದೇವರೇ ಬಲ್ಲ. ಮನ್ಯಾಗ ಮೊದಲಿನ ಸಂಗ್ರಹ ಇದ್ದ ನಮ್ಮಂತಾ ನಾಕ ಮಂದಿ ಆರಾಮು ಇದ್ದೀವಿ. ಬಾಕಿ ಮಂದೆಲ್ಲಾ ಹುರಪಳಿಸಿ ಹೋತು. ನೋಡರಿ ಅವರ ಮಸಡಿ, ಅವರ ಮೈ. ಅಲ್ಲಿ ಕಟ್ಟೆಮ್ಯಾಲೆ ಕೂತದ ನೋಡಿರಿ ಒಂದು ಗುಂಪು, ಡೂಗಿ ಬರದಾಗಿನ ಹೆಣ ಎದ್ದು ಬಂದಂತೆ. ಸುಟ್ಟಸುಡುಗಾಡ ತಿಂದು ಜೀವ ಹಿಡಕೊಂಡಿವೆ. ಮಾರಿಕಾ ಗೀರಿಕಾ ಬಂದು ಕೆಲವು ಸತ್ತುಹೋದವು. ದುಡಿದು ತಿನಬೇಕಂತ ಕೆಲವು ಗಂಡು-ಹೆಣ್ಣು ಗುಳೇ ಹೋದವು, ತಿರುಗಿ ಅವರ ಸುದ್ದೀನೆ ಇಲ್ಲ. ಕೃಷ್ಣಾ ತೀರದ ಹಳ್ಳೀ ಗತಿ ಹೀಗೆ. ಉಳಿದ ಹಳ್ಳಿಪಾಡು ಏನಾಗಿರಬಹುದು ? ಸರಕಾರದವರು ಬಡಜನರಿಗೆ ಡೋಲು ಕೊಡಬೇಕೆಂದು ಧಾನ್ಯ ಕೊಟ್ಟರೆ ಊರ ಹಿರಿಯರು ಕೊಟ್ಟಂತೆ ಮಾಡಿ ಹೆಚ್ಚು ಭಾಗವನ್ನೆಲ್ಲ ತಮ್ಮ ಹಿತಸಂಬಂಧಿಕರಿಗೆ ಹಂಚಿ ಬಡವರ ಶಾಪವನ್ನು ಕಟಿಗೊಂಡರು. ಕಂಟ್ರೋಲ ಧಾರಣೀಲೆ ಅಕ್ಕಿ, ಸಕ್ರಿ, 'ಕಿಮಣಿಎಣ್ಣೆ, ಹಳ್ಳಿಗಿಷ್ಟು ಅಂತ ಬರತವೆ. ಅವೆಲ್ಲಾ ಎಲ್ಲಿ ಗಡಪ್ಪಾಗತಾವೋ ದೇವರಿಗೂ ಗೊತ್ತಾಗುದುಲ್ಲ. ತಮಗೆ ಬೇಕಾದವರಿಗೆ ಕೊಡತಾರೆ. ಮತ್ತೆ ತಕರಾರು ಮಾಡಲಿಕ್ಕೆ ಹೋದವರ ತಲೆ ಹಾರಿತೆಂದೇ ತಿಳೀಬೇಕು. ನಮ್ಮ ಅಪ್ಪನೂ, ನಾ ಹೇಳಬಾರದು ಸಿರೂರ, ಇದೇ ಕರಾಮತಿಯವನೇ. ಮಹಾತ್ಮಾಜಿಯವರು ಹಳ್ಳಿಗಳೊಳಗೆ ನಮ್ಮ ಸಂಸ್ಕೃತಿ ಅದ ಅಂತಾರ, ಇದs ನೋಡರಿ ಆ ಸಂಸ್ಕೃತಿ—ಸುಳ್ಳು, ಮೋಸ, ಹಾದರ, ಹೆದರಿಕೆ, ಕೊಲೆಪಾತಕ. ಇಲ್ಲಿ ಬದುಕಿ ಬಾಳುವೆ ಮಾಡೂದು ಭಾಳ ಕಠಿಣ, ಸಿರೂರ. ಸುದಾರಿಸಲಿಕ್ಕೆ ಹೋದರಂತೂ ಯಮದೂತರಿಗೆ ಹೇಳಿಕಳಿಸಿದ ಹಾಗೆ ಆಡಾಡತ !'

'ನೀವು ಅಂಬೂದು ಈಗಿದ್ದ ಪರಿಸ್ಥಿತಿ ಸುಳ್ಳಲ್ಲ, ಶಾಂತಿನಾಥ, ಆದರ ಇಂಥ ಹೊಲಸಿನ ಬುಡದೊಳಗೆ ಚಿನ್ನದ ಘಟ್ಟಿ ಅದ, ರತ್ನದ ರಾಶಿ ಅದ. ಅದೇ

ಗಾಂಧೀಜಿಯವರು ಹೇಳುವ ಸಂಸ್ಕೃತಿ. ದುಡಿತದ ಒಲವು, ಸರಳ ಜೀವನ, ದೇವಭಕ್ತಿ, ಸಹಕಾರಬುದ್ಧಿ ಇವು ಹಳ್ಳಿಗಳಲ್ಲಿ ಕಾಣುವುದಿಲ್ಲವೇನು ? ಅವನ್ನು ಬೆಳಗಿಸಬೇಕು, ನೆಲೆಗೊಳಿಸಬೇಕು.'

ಹೀಗೆ ಮಾತಾಡುತ್ತ ಇಬ್ಬರೂ ಊರಹೊರಗೆ ಬಂದರು. ಅದೇ ಸ್ವಲ್ಪ ಮಳೆ ಬಿದ್ದು ಮಕಮಾಸೆ ಮೂಡಿದಂತೆ ನೆಲದಲ್ಲಿ ಎಳಹಸಿರು ಮೊಳೆತಿದೆ. ಹೊಲಗಳೆಲ್ಲ ತೆರವೇ ತೆರವು. ಬಂಡಿದಾರಿಗುಂಟ ತಿರುಗುತ್ತ ಅವರು ಊರ ಬಿಟ್ಟು ಹೋದರು. ತಿರುಗಿ ಬರುವಷ್ಟರಲ್ಲಿ ಕತ್ತಲೆ ನೆಲಕ್ಕೆ ಮುಸುಕು ಹಾಕುತ್ತಲಿತ್ತು. ಗುಡಿಸಲುಗಳಲ್ಲಿ ಮಿಣಿಮಿಣಿ ದೀಪಗಳು ಹತ್ತಿದವು. ಮನೆಮನೆಗೆ ಹೊತ್ತಿಸಿದ ಒಲೆಯಿಂದ ಮೇಲೆದ್ದ ಹೊಗೆ ದಟ್ಟ ಮೋಡವಾಗಿ ಊರನ್ನು ಸುತ್ತಿಕೊಂಡಿದೆ. ಇಬ್ಬರೂ ನಸುಗತ್ತಲೆಯಲ್ಲಿ ಮೆಲ್ಲಗೆ ಹೆಜ್ಜೆ ಇಡುತ್ತ ಊರ ಹತ್ತಿರಕ್ಕೆ ಬಂದರು. ಅಲ್ಲಿ ಹೊರಬದಿಗೆ ಕೆಲವು ಸಣ್ಣ ಗುಡಿಸಲುಗಳಿದ್ದುವು. ಅವುಗಳ ಮುಂದೆ ಹುಡುಗರು ಆಡುತ್ತಿದ್ದರು. ಅತ್ತಕಡೆ ನೋಡುತ್ತ ಶಾಂತಿನಾಥನು ಕೆಲಹೆಜ್ಜೆ ಹೋಗಿ ಒಂದು ಗುಡಿಸಲ ಮುಂದೆ ಗಕ್ಕನೆ ನಿಂತನು. ಅದೇಕೆಂದು ತಿಳಿಯದೆ ಅಮೃತನೂ ನಿಂತನು. ಯಾರೋ ಗುರುತಿನವರನ್ನು ಮಾತಾಡಿಸುವ ದೆಸೆಯಿಂದ ನಿಂತಿರಬೇಕೆಂದು ಮೊದಲು ಅನಿಸಿತು. ಆದರೆ ಉಳಿದೆಲ್ಲ ಗುಡಿಸಿಲಲ್ಲಿ ಜನ ಇದ್ದಾರೆ, ದೀಪವಿದೆ. ಈ ಗುಡಿಸಲಲ್ಲಿ ದೀಪವಿಲ್ಲ, ಜನವಿಲ್ಲ. ಅಷ್ಟೇ ಯಾಕೆ, ಅದೆಲ್ಲ ಮುಂಭಾಗದಲ್ಲಿ ಬಿದ್ದು ಬಯಲಾಗಿ ನಿಂತಿದೆ. ಕಣ್ಣಿಟ್ಟು ನೋಡಿದರೆ ಸುಟ್ಟ ಒಲೆಕಲ್ಲುಗಳು, ಚಿಂದಿ ಅರಿವೆಗಳು ಮಾತ್ರ ಕಾಣುತ್ತವೆ.

'ಪಾಟೀಲ ಇಲ್ಲಿ ಯಾಕೆ ನಿಂತಿರಿ ? ಹಾದಿ ತಪ್ಪಿತೇನು ಮತ್ತೆ ?' ಎಂದು ಅಮೃತ ಕೇಳಿದ.

ಪಾಟೀಲ ಹೆಚ್ಚು ಮಾತಾಡದೆ 'ಇಲ್ಲ' ಎಂದಿಷ್ಟೆ ಅಂದನು.

'ನಿಮ್ಮ ಆಳು ಹೋಳು ಯಾರಾರೆ ಇರುವರೇನು ಇತಲಾಗ ?'

ಈ ಪ್ರಶ್ನೆ ಪಾಟೀಲನ ಭಾವನೆಯನ್ನು ಕೆರಳಿಸಿತು. ಅಮೃತನ ಮುಖದಲ್ಲಿ ಮುಳುಗುವಂತೆ ನೋಡಿ 'ಸಿರೂರ, ಇಲ್ಲಿ ಇದ್ದ, ನಮ್ಮ ಆಳು ಇದ್ದ. ಅವ ಈಗ ಹೋಳಾಗಿ ಹಾಳಾಗಿ ಹೋದ' ಎಂದು ಸ್ವಲ್ಪ ತಡೆದು 'ಇದೇ ನೋಡಿರಿ ಅವನ ಸ್ಮಾರಕ' ಎನ್ನುತ್ತಲೆ ಭಾವವಿವಶನಾಗಿ ಅಮೃತನ ಕೈಹಿಡಿದು ಸುಮ್ಮನೆ ನಿಂತುಬಿಟ್ಟನು. ಹಬ್ಬುತ್ತಿರುವ ಕತ್ತಲೆಯಲ್ಲಿಯೂ ಅವನ ಕಳವಳ

ದಿಂದ ಹೊರಬಂದ ಕಂಬನಿಗಳನ್ನು ಅಮೃತ ನೋಡಿದನು. ಸ್ವಲ್ಪ ಹೊತ್ತು ಇಬ್ಬರೂ ತಟಸ್ಥರಾದರು. ಆಮೇಲೆ 'ಯಾರವ? ಸತ್ತುಹೋದನೇನು?' ಅಮೃತ ಕೇಳಿದನು.

'ಶಿವು ಅವನ ಹೆಸರು. ಎತ್ತ ಹೋದನೋ ಏನಾಯಿತೋ ಯಾರಿಗೂ ಗೊತ್ತಿಲ್ಲ. ಮನೆಗೆ ಹೋಗಿ ಅವನ ಕಥೆ ಹೇಳತೀನಿ ನಡೀರಿ.'

ಇಬ್ಬರೂ ಮನೆ ಮುಟ್ಟಿದರು. ಊಟವಾಯಿತು. ಈಗಾಗಲೆ ತಡವಾಯಿ ತೆಂದು ಮನೆಯ ಒಡತಿ ಗುರುಗುಡುತ್ತಿದ್ದ ಕಾರಣ ಮಾತಿಗೆ ಕೂಡದೆ ಮೊದಲು ಗೆಳೆಯನೊಡನೆ ಊಟ ಮುಗಿಸಿದನು. ಆಮೇಲೆ ತನ್ನ ಕೋಣೆಯಲ್ಲಿ ಅಮೃತ ನೊಬ್ಬನ ಕೂಡ ಕೂತುಕೊಂಡು ಶಿವೂನ ಸುದ್ದಿಯನ್ನು ತನಗೆ ಗೊತ್ತಿದ್ದರವರೆಗೆ ಹೇಳಿದನು.

ಎಲ್ಲ ಕಡೆಯಂತೆ ಕನ್ನಡ ನಾಡಿನ ಈ ಗಡಿಯಲ್ಲಿಯೂ ಮುಖ್ಯ ಮಳೆಗಳು ಕೈಬಿಟ್ಟವು, ಹಳ್ಳಿಹಳ್ಳಿಯ ಜನ ಹಲುಬಹತ್ತಿದರು. ನೆಲದಲ್ಲಿ ಹಸುರಿಲ್ಲ, ಹೊಲ ದಲ್ಲಿ ಬೆಳೆಯುಲಿಲ್ಲ, ರೈತರಿಗೆ ಕೂಲಿಯವರಿಗೆ ದಗದವಿಲ್ಲ. ಕಾಳು ಬರಬರುತ್ತ ಅಪರೂಪವಾಯಿತು. ಕೂಲಿಯೆಂದು ಕಾಳು ಕೊಡುತ್ತಿದ್ದ ಒಡೆಯರು ದುಡಿಸಿ ಕೊಂಡು ರೊಕ್ಕ ಕೊಡಹತ್ತಿದರು. ಬರೀ ಕೂಲಿಯ ಮೇಲೆ ಬದುಕಿದವರು ರೊಕ್ಕ ತಿನ್ನಬೇಕೆ? ಇದ್ದವರು ಹಗೆಯ ಬಾಯಿಯನ್ನು ಮತ್ತಿಷ್ಟು ಗಟ್ಟಿಯಾಗಿ ಮೆತ್ತಿದರು. ಅವರ ಮುಂದಿನಚಿಂತೆ ಅವರಿಗೆ.ವ್ಯಾಪಾರಸ್ತರು ತುಟ್ಟಿಧಾರಣಿಯ ಆಶೆಯಿಂದ ಕಾಳನ್ನು ಕೂಡಿಸಿಟ್ಟರು. ಮೇಲಾಗಿ ಕೆಲಸವಿಲ್ಲದೆ ಜನ ಮನೆಯ ಮುಂದೆ ಆಕಳಿಸುತ್ತ ಕೂಡಹತ್ತಿತು. ಮನೆಯೊಳಗೆ ನೋಡಿದರೆ ಮುಖ ಸಪ್ಪಗೆ ಮಾಡಿಕೊಂಡು ಕುಳಿತ ಹೆಂಡತಿ, ಕಾದಿಟ್ಟ ಒಣ ತುಣುಕುಗಳನ್ನು ಕಚ್ಚುತ್ತಿರುವ ಹುಡುಗರು ಕಾಣುವರು. ಏನಾದರೂ ಒತ್ತೆಯಿಟ್ಟು ಹಣ ತಂದು ಕಾಳು ತರಹೋದರೆ ಸಿಗುವುದು ಗೊಂಡೆಕಾಳು ಇಲ್ಲವೆ ಹಗೆಯ ಬಾಯಿಯ ಮೇಲಿನ ಕೊಳೆತ ಕಾಳು ಅಥವಾ ಹುಳು ತಿಂದು ಪೊಳ್ಳಾದ ಕಾಳು. ಹೀಗಾಗಿ ವಸ್ತ್ರ-ಒಡವೆಯನ್ನೆಲ್ಲ ಅಡವಿಟ್ಟು ಮನೆಯೆಲ್ಲ ತೊಳೆದ ಮುತ್ತಾಗಿಸಿ ಇಂಥ ಕಾಳು ತಂದು ಹಸಿದ ಒಡಲಿಗೆ ಆಹಾರವೆಂದು ಹಾಕಿದ ಅದೆಷ್ಟು ಜನ ಒದ್ದಾಡಿತು, ರೋಗಕ್ಕೆ ಈಡಾಯಿತು! ಇಂಥವರಲ್ಲಿ ಶಿವು ಒಬ್ಬನಾದ. ಕೂಲಿ ಕೆಲಸ ಮಾಡಿ ಇದ್ದವನಾದರೂ ಯಾವ ದುಶ್ಚಟವೂ ಇಲ್ಲದೆ ದುಡ್ಡಿಗೆ ದುಡ್ಡು ಕೂಡಹಾಕಿ ಚಲೋದಾಗಿ ಅವನು ಬಾಳುವೆ ಮಾಡು

ತ್ತಿದ್ದವನು. ಬರಗಾಲ ಬಂದ ಅವನನ್ನು ಮುಕ್ಕಿ ತಿನ್ನಹತ್ತಿತು. ಹೆಂಡತಿಯ ಮೈಮೇಲಿನ ವಸ್ತ್ರ ಹೋದವು,ದನಕರ ಕಟಕರ ಪಾಲಾದವು.ಕೂಲಿಯೂ ನೇಮದಿಂದ ಸಿಗದಾಯ್ತು. ಜಿನಗೊಂಡರಲ್ಲಿ ಅವನು ಹಗಲೆಲ್ಲ ಓಡಾಡುವುದು ಬಹಳ. ಅವನ ದುಸ್ಥಿತಿಯನ್ನು ನೋಡಿ ಅವರು ತಮ್ಮಲ್ಲಿ ಕೂಲಿಗೆ ಇಟಗೊಂಡಿದ್ದರು. ಆದರೆ ಅವನಿಗೆ ಕಾಳು ಸಿಗುವುದೇ ಇಲ್ಲವೇ ಎಂಬುದನ್ನು ಅವರೇನು ಕೇಳುತ್ತಿರಲಿಲ್ಲ. ಮಾನವಂತನಾದ್ದರಿಂದ ತನ್ನ ಗೋಳನ್ನು ಅವನು ತೋಡಿಕೊಳ್ಳಲಾರ. ಶಾಂತಿನಾಥನ ಕೂಡ ಅವನ ಬಳಕೆ ಹೆಚ್ಚು. ಅವನ ಮುಂದೆ ಯಾವಾಗಲೊಮ್ಮೆ ತನ್ನ ಪಾಡನ್ನು ಎದೆಬಿಚ್ಚಿ ಹೇಳುತ್ತಿದ್ದನು. ಶಾಂತಿನಾಥನು ದೀವಳಿಗೆಯ ಬಿಡುವಿನಲ್ಲಿ ಬಂದಾಗ ಅವನ ಮೇಲಿನ ಕನಿಕರದಿಂದ ಕದ್ದು ತಗೊಂಡು ಹೋಗಿ ಒಂದೆರಡು ಸಲ ಕಾಳನ್ನು ಕೊಟ್ಟಿದ್ದನು. ಅದೆಷ್ಟು ದಿನ ಸಾಲುವುದು ? ಒಮ್ಮೆ ಹೀಗಾಯಿತು, ಎರಡು ಮೂರು ದಿನ ಶಿವು ಕೆಲಸಕ್ಕೆ ಬರಲೇ ಇಲ್ಲ. ಗೌಡರು ಒದರಾಡಿದರು. 'ಈ ಘಟಂಗರಿಗೆ ಉಪಕಾರ ಮಾಡಲಿಕ್ಕೆ ಹೋಗಬಾರದು, ನಾವು ಕರಸಿ ಕೂಲಿಗೆ ಹಚ್ಚಿದರೆ ಈ ಲುಚ್ಚಾ್ಯ ಶಿವ್ಯಾ ತಪ್ಪಿಸಿ ಓಡಾಡತಾನ. ನೋಡಿವನ ದಿಮಾಕು ! ಬಂದರ ಬರಲಿ ಇನ್ನೊಮ್ಮೆ.' ಇದು ಶಾಂತಿನಾಥನ ಕಿವಿಗೆ ಬಿತ್ತು. ಹೀಗೆಂದೂ ಶಿವು ಮಾಡುವವನಲ್ಲ. ಯಾಕೆ ಬಂದಿಲ್ಲವೆಂದು ನೋಡಲು ಅವನ ಗುಡಿಸಲಕ್ಕೆ ಹೋದನು. ಅವನು ಹೋದಾಗ ಮೂಲೆಯಲ್ಲಿ ಕುಳಿತು ಅವನೇನೋ ಬಾಯಿಗೆ ಹಾಕುತ್ತಿದ್ದ. 'ಯಾಕೋ ಎರಡು ದಿವಸಾತು ದಗದಕ್ಕ ಬರಾಣಿಲ್ಲ ?' ಶಾಂತಿನಾಥ ಕೇಳಿದನು, ಅವನನ್ನು ನೋಡಿದ ಕೂಡಲೆ ಅವನ ಕಣ್ಣಲ್ಲಿ ನೀರೂರಿದವು. ಆಮೇಲೆ ಗಂಟಲು ಸರಪಡಿಸಿಕೊಂಡು ಅವ ಹೇಳಿದ : 'ಏನ ಹೇಳಲಿ ಶಾಂತೆಪ್ಪ. ಹೇಳಾಕ ನಾಚಿಕಿ ಬರತತಿ. ಮನ್ಯಾಗ ಬಗಸಿ ಕಾಳಿಲ್ಲಾಗ್ಯಾವು. ಹಸದ ಹೊಟ್ಟೀಲಿ ನಡ್ಯಾಕ ಬರಲಿಲ್ಲ.' 'ಈಗರ ಕಾಳು ಸಿಕ್ಕ್ಯಾವೇನು ?' ಅವನೇನೋ ತಿನ್ನುವುದನ್ನು ನೋಡಿ ಶಾಂತಿನಾಥ ಕೇಳಿದನು. ಅದಕ್ಕೆ ಉತ್ತರ ಕಣ್ಣೀರ ಕಾಳು ! ಕೆಲಹೊತ್ತು ತಡೆದು ಕೈಯಲ್ಲಿಯ ಹೆಂಟೆಯನ್ನು ತೋರಿಸಿ ಶಿವು ತಡವರಿಸುತ್ತ ಹೇಳಿದ : ಶಾಂತೆಪ್ಪ ನೋಡರಿ. ಇಂದ ಈ ಹಿಂಡಿ ತಿಂದು ಹಸಿವಿ ಹಿಂಗಸತಿದ್ದೀವಿ. ದನಕರ ಎಲ್ಲ ಕಟಕರ ಕೈಯಾಗ ಕೊಟ್ಟು ನಾವs ಹಿಂಡಿ, ತೊಪ್ಪಲ ತಿನಕೋತ ದನದಂಗ ಆದೀವಿ ಆತು.' ಅವನ ಬಾಯಿಯಿಂದ ದೊಡ್ಡ ನಿಟ್ಟುಸಿರೊಂದು ಗಾಳಿಯನ್ನು ಬಿಸಿಮಾಡುತ್ತ ಹೊರಸಟ್ಟಿತು. ಪ್ರಳಯ

ಕಾಲದ ಸರ್ಪದ ಫೂತ್ಕಾರವೇ ಆಗಿತ್ತದು. ಶಾಂತಿಯ ನಾಲಗೆ ಒಣಗಿತ್ತು, ಮಾತೇ ಹೊರಡಲೊಲ್ಲವು. ದನ ತಿನ್ನುವ ಕುಸುಬಿಯ ಹಿಂಡಿಯನ್ನು ಮನುಷ್ಯನು ತಿಂದು ಹಸಿವು ಹಿಂಗಿಸುವ ಹೊತ್ತು ಬಂತೇ ಎಂದವನು ಮರುಗಿದನು. 'ಅಲ್ಲ ಶಿವು ಎಂಥಾ ಕಾಲ ಬಂತು ಅಂತೀನಿ. ಹುಡುಗರು ಹುಪ್ಪಡಿಗೆ ಏನ ಕೊಡತೀರಿ ?'

'ಎಲ್ಲಾರಿಗೂ ಇದs, ದೇವ್ರು. ಕೆಲವು ದಿವಸ ಪುಂಡೀ ಬೀಜ, ಪುಂಡಿ ತೊಪ್ಪಲ, ಗೊಂಜ್ಯಾಳ ಬುರಕೀ ಹಿಟ್ಟು ಕೊಚ್ಚಿ ಹಿಟ್ನಲ್ಲಿ ಕೂಡ್ಸಿ ತಿಂದೀವು. ಈಗದೂ ಸಿಗೂದುಲ್ಲ,'

'ಇದರಿಂದ ಹೊಟ್ಟಿ ಕೆಡೂದುಲ್ಲೇನೊ ?'

'ಹಸ್ವಿಯಿಂದ ಕಸಿವಿಸಿ ಆಗೂವಾಗ ಹೊಟ್ಟಿ ಕೆಡೂ ಇಚ್ಯಾರ ನಮಗೆಲ್ಲೀದರಿ ದಣೀರ ?'

ಅವನ ಉತ್ತರಗಳಿಂದ ಶಾಂತಿ ತತ್ತರಿಸಿ ಹೋಗುತ್ತಿದ್ದನು. ಅವನು ನಿಂತವನು ಈಗ ಹತ್ತಿರ ಹೋಗಿ ಕುಳಿತು 'ಎಲ್ಲೆಲ್ಲೂ ಕಾಳು ಸಿಗೂದುಲ್ಲೇನು ಶಿವು ?' ಎಂದು ಕೇಳಿದ.

'ಸಿಗತಾವ್ರಿ. ಒಂದು ರೂಪಾಯಿಗೆ ಅಂಗಡಿಯವ ಮೂರು ಸಿಟವಿ ನುಸಿ ತಿಂದ ಜ್ವಾಳಾ ಕೊಡತಾನ—ಅದೂ ರಾತರಿ ಹೊತ್ತಿನಾಗ. ದೈವುಳ್ಳ ಮಂದಿ ಬೇಕಾದಟು ಕೊಡತೀವಿ ಅಂತಾರ. ಆದರ ಒಂದು ಸಿಟವಿ ಜ್ವಾಳಕ್ಕ ಹೊಲದಾಗ ದುಡ್ಯಾಕ ಒಂದಾಳು ಹೋಗ್ಬೇಕಂತ ಹೇಳ್ತಾರ. ಒಂದು ಸಿಟವ್ಯಾಗ ನಮ್ಮ ಹೊಟ್ಟಿ ಹೆಂಗ ತುಂಬಬೇಕರಿ ? ಏನ್ನೊಬ್ಬ ಸಾವಕಾರ್ರು ಬೇಕಾದಟು ಕೊಡ್ತೇವಿ, ಆದ್ರ ಈಗೊಂದು ಸೊಲಗಿ ಒಯ್ದರ ಬರೂ ವರ್ಸ ಮೂರು ಸೊಲ್ಗಿ ಕೊಡಬೇಕಂತ ಅಂತಾರ. ನಮ್ಮನ್ನ ಸುಲಿಯೋದು ಇಲ್ಲಾ ಕೊಲ್ಲೊ ಇಚ್ಯಾರಾನ ಇವ್ರೆಲ್ಲಾ ಮಾಡ್ಯಾರ ಕಾಣಸ್ತದ' ಎಂದು ಹಿಂಡಿಯ ಚೂರನ್ನು ಶಿವು ಬಾಯಲ್ಲಿ ಹಾಕಿದನು.

ಅವನ ಹುಡುಗರು ಮೊದಲು ತುಂಡುತುಂಡಾಗಿ ಎದೆಯುಬ್ಬಿಸಿ ತಿರುಗಾಡುತ್ತಿದ್ದವರು ಈಗ ಹೊಟ್ಟಿ ಡುಮ್ಮ, ಕೈಕಾಲು ಬಡಕಲಾಗಿ ಹೊರಗೆ ಓಡಾಡುತ್ತಿದ್ದರು. ಅವನ ಹೆಂಡತಿ ತೀರ ಬೆಳ್ಳಗಾಗಿದ್ದಳು, ತುಂಬ ಸೋತುಹೋಗಿದ್ದಳು. ಆರೇಳು ತಿಂಗಳ ಬಸುರಿ ಬೇರೆ. ಇದನ್ನೆಲ್ಲ ನೋಡಲಿಕ್ಕೆ ದೇವರೇಕೆ ಕಣ್ಣು ಕೊಟ್ಟನೋ ಎನ್ನುವಂತಾಯಿತು ಶಾಂತಿಗೆ. ತನ್ನ ಮಲತಾಯಿಯ

ಕಾಟ ಈ ಬರಗಾಲ ಮಾರಿಯ ಕಾಡಾಟಕ್ಕಿಂತ ನೂರು ಪಾಲು ಬೇಕೆಂದು ಅವನಿಗನಿಸಿತು. ಏನೂ ಹೇಳಲಾಗದೆ ಮನೆಗೆ ತಿರುಗಿ ಬಂದನು, ಆದರೆ ಜೀವ ನಿಲ್ಲದೆ ತನ್ನೊಂದು ಕೈಚೀಲದಲ್ಲಿ ಜೋಳ ಹಾಕಿ ಕಳವಿನಿಂದ ಶಿವೂಗೆ ಒಯ್ದು ಕೊಟ್ಟನು. ಒಂದು ದಿನವಾದರೂ ಶಿವೂ ಸುಖಬಡಲಿ ಎಂದವನ ಹಾರೈಕೆ. ಆದರೆ ಆ ಒಂದು ದಿನದ ಸುಖ ಮುಂದಿನ ಮೃತ್ಯುವಿನ ನೆನವಿನಲ್ಲಿ ಶಿವೂನ ಪ್ರಸಂಚಕ್ಕೆ ದೊರೆಯದೆ ಹೋಗಬಹುದಲ್ಲ ಎಂಬುದವನ ಮನಕ್ಕೆ ಆಗ ಹೊಳೆಯಲಿಲ್ಲ.

ಮತ್ತೊಮ್ಮೆ ಕೆಲವು ದಿನ ಬಿಟ್ಟು ಹೋದನು. ಶಿವೂನ ಮೈಗೆ ಆಗ ಬಾವು ಏರಿತ್ತು. ಹಾವು ಕಡಿದವರಂತೆ ಸುಂದನಾಗಿದ್ದ. ಹುಡುಗರ ಮೈತುಂಬ ಖಜ್ಜಿ ಮೆತ್ತಿಕೊಂಡಿತ್ತು. ನೊಣಗಳು ಸುತ್ತ ಮುಕುರಿದ್ದವು. ಹೆಂಡತಿಯ ಹೊಟ್ಟೆ ಮೇಲಿಂದ ಮೇಲೆ ಜಾಡಿಸಿ ತಿಂದದ್ದು ಪಚನವಾಗುತ್ತಿರಲಿಲ್ಲ. ಸಿಕ್ಕದ್ದೆಲ್ಲ ಹೊಟ್ಟೆಯಲ್ಲಿ ತುರುಕುತ್ತ ಬಂದು ಸಂಸಾರವೆಲ್ಲ ಈ ಗತಿಗೆ ಇಳಿದಿತ್ತು. ಶಾಂತಿ ಹೋದ ಕೂಡಲೆ ಒಂದು ದೊಡ್ಡ ಆಸೆ ಈಡೇರಬೇಕೆಂದು ಮೊರೆಯಿಡುವವನಂತೆ 'ಯಪ್ಪ. ನಮ್ಮ ಮನಿಮಂದೆಲ್ಲಾ ಒಮ್ಮೇಲೆ ಪಟಕ್ಕನೆ ಸಾಯ್ಬೇಕು ನೋಡ್ರಿ' ಎಂದು ಶಿವು ಹೇಳಿದ.

'ಹಂಗ್ಯಾಕ ಕೆಟ್ಟದಾಡುತೀಯೊ ?'

'ಕೆಟ್ಟದು ? ದಣೇರ, ಸಾವಿಗಿಂತ ಚಲೋದು ಯಾವದರಿ ? ಯಮರಾಯ ಭಾಳ ಚಲೋ ಮನಸ್ಯಾ. ಅವ ಒಬ್ಬವ ಇರದಿದ್ದರ ನಮ್ಮದೆಲ್ಲಾ ಪಾಡು ನಾಯಿಪಾಡು ಆಗುತ್ತಿತ್ತು. ಅವನ ಹಾದಿ ನೋಡಿಕೊಂತ ಕುಂತೀವಿ ನೋಡರಿ ಎಲ್ಲಾರು. ನಾಕ ದಿನದಾಗ ಬರ್ತಾನ ನೋಡರಿ.' ಶಿವು ಪ್ರಸನ್ನ ಮುಖದಿಂದ ಗಡ್ಡ ಬೆಳೆದ ಮುಖವಗಲಿಸಿ ಎಲ್ಲ ಹಲ್ಲು ಕಾಣುವಂತೆ ನಕ್ಕುಬಿಟ್ಟನು. ಆ ನಗೆ ಶಾಂತಿಯ ಎದೆಯನ್ನು ಶಿವನ ಶೂಲದಂತೆ ತಿವಿಯಿತು, ತಲೆಗೆ ಕೈಯಿಟ್ಟು ತಣ್ಣಗೆ ಕೂತುಬಿಟ್ಟನು. ಒಂದೆರಡು ದಿನವಾದ ಮೇಲೆ ಎಲ್ಲಿ ಶಿವು ಜೀವಕ್ಕೆ ಅಪಾಯ ಮಾಡಿಕೊಳ್ಳುವನೊ ಎಂದು ಶಾಂತಿ ನೋಡ ಹೋದನು. ಆಗ ಸಂಜೆಯ ಹೊತ್ತು. ಗುಡಿಸಿಲ ಬಾಗಿಲ ಮುಂದೆಮಾಡಿತ್ತು. ಒಳಗೆ ಸದ್ದಿಲ್ಲ, ಏನೋ ಆಗಿದೆಯೆಂದು ಹೆದಹೆದರುತ್ತ ಬಾಗಿಲ ನುಗಿಸಿದನು, ಹಣಿಕಿ ಹಾಕಿ ನೋಡಿದನು. ಯಾರೂ ಕಾಣಲಿಲ್ಲ. ಆಯಿತು ಘಾತವಾಯಿತೆಂದು ಒಳಗೆ ಪೂರ ಹೊಕ್ಕು ನೋಡಿದನು. ಒಂದಾನೊಂದು ಪಿಳ್ಳೆ ಇಲ್ಲ. ಒಡೆದ ಮಡಕಿ

ಗಳಿವೆ, ಸುಟ್ಟ ಕಲ್ಲುಗಳಿವೆ, ಹರಕು ಅರಿವೆಗಳಿವೆ. ಎದೆ ಭಾರವಾಗಿ ಹೊರಗೆ ಬಂದನು. ಮಗ್ಗಲಿನ ಗುಡಿಸಲ ಮುಂದೆ ಒಂದು ಮುದುಕಿ ಜಡೆಗಟ್ಟಿದ ಕೂದಲನ್ನು ತುರಿಸುತ್ತ ಕೂತಿತ್ತು. 'ಶಿವು ಎಲ್ಲಿ ಹೋದ?' ಎಂದು ಶಾಂತಿ ಕೇಳಿದ. 'ನನಗೇನು ಶ್ಯಾಂವಕಿ?' ಎಂದಳಾಕೆ. ಯಾರಿಗೂ ಗೊತ್ತಿಲ್ಲ. ಶಿವು ಸಂಸಾರಸಹಿತ ಶಿವನ ಸನ್ನಿಧಿಗೆ ಹೋದನೋ, ಭೂಮಿಯ ಮೇಲಿನ ನರಕವನ್ನ ನುಭವಿಸಲು ಬೇರೆಡೆಗೆ ಹೋದನೋ ಯಾವುದೂ ತಿಳಿಯದೆ ಇನ್ನೂ ಗೂಢವಾಗಿ ಉಳಿದಿದೆ.

ಅಮೃತನಿಗೆ ಈ ಕಥೆಯನ್ನು ಶಾಂತಿನಾಥ ಹೇಳುತ್ತಿರುವಂತೆ ವಿಜಾಪುರ ಜಿಲ್ಹೆಯಲ್ಲಿ ತಾ ಕೇಳಿದ, ಕಂಡ ನೂರಾರು ಇಂಥ ಕಥೆಗಳು ಅವನ ಕಣ್ಣ ಮುಂದೆ ಸುಳಿದು ಕರುಳು ಹಿಂಡಿದವು. 'ದೇವರಿಗಿಂತ ಹೆಚ್ಚು ಬಡತನ, ಸಾವು ಇವು ಸರ್ವವ್ಯಾಪಿಯಾಗಿವೆ' ಎಂದವನು ತನ್ನಲ್ಲಿ ಕೂಗಿಕೊಂಡನು. 'ಖರೇ ಹಿಂದುಸ್ತಾನ' ಈಗ ಹೇಗಿದೆ ಎಂಬುದನ್ನು ನೆನೆದನು. ಶಿವುನಂತವರ ಕತೆ ಗಳು ಹೇಳುತ್ತಿರುವುದೇನು? 'ಖರೇ ಹಿಂದುಸ್ತಾನ'ಗಳು ಖರೇ ಮೃತ್ಯು ಸ್ತಾನ, ಕಬರಸ್ತಾನಗಳಾಗಿವೆ. ಇಲ್ಲಿ ಪ್ರಾಣಪ್ರತಿಷ್ಠೆ ಮಾಡಿ ಅನ್ನ-ವಸ್ತ್ರಗಳು ಸಾಕಷ್ಟು ಸಿಗುವ ವ್ಯವಸ್ಥೆಯಾಗದಿದ್ದರೆ, ಇಂದಿನ ನರಕಾಸುರನ ಸಂಹಾರ ಮಾಡಿ ದರಿದ್ರರ ನಾರಾಯಣ ಹಳ್ಳಿಹಳ್ಳಿಯ ಜನದ ಕೈಯಿಂದ ಆರತಿ ಮಾಡಿಸಿ ಕೊಳ್ಳದಿದ್ದರೆ, ಸ್ವಾತಂತ್ರ್ಯ, ಸಂಸ್ಕೃತಿ, ಪ್ರಜಾಸತ್ತೆ ಸಾಮ್ಯವಾದ ಇವುಗಳ ಬೆಲೆಯೇನು?

ಮರುದಿನ ಮುಂಜಾನೆ ಶಾಂತಿನಾಥನು ಅಮೃತನನ್ನು ಅಲ್ಲಿಯ ಕನ್ನಡ ಶಾಲೆಗೆ ಕರಕೊಂಡು ಹೋದನು. ಮಾಸ್ತರರೆಲ್ಲ ಹೊರಗೆ ನಿಂತಿದ್ದರು, ಹುಡುಗರೆಲ್ಲ ಒಳಗೆ ಒದರಾಟ-ಚೀರಾಟ, ಓದು-ಹಾಡು ಇವುಗಳ ಸಮೂಹ ಸಂಗೀತ ನಡಸಿದ್ದರು. ಅಪಸ್ವರಗಳ ಸಂಮೇಲನದಿಂದ ಉಂಟಾದ ಸಾಮರಸ್ಯ ಅಲ್ಲಿ ಕಾಣಬರುತ್ತಿತ್ತು. ಶಾಂತಿನಾಥ ಹೊಸಬರನ್ನು ಕರಕೊಂಡು ಬರಲು ಮಾಸ್ತರರು ಒಳಗೆ ಹೋಗಿ ಹುಡುಗರನ್ನು ಸುಮ್ಮನೆ ಕೂಡಿಸಿದರು. ಒಮ್ಮೆಗೆ ಎಲ್ಲ ಸ್ತಬ್ಧವಾಯಿತು. ಶಾಂತಿನಾಥನು ಅಮೃತನ ಗುರುತನ್ನು ಹೆಡ್‌ಮಾಸ್ತರ ರಿಗೂ ಇತರರಿಗೂ ಮಾಡಿಕೊಟ್ಟ. ಹುಡುಗರು ತಿಳಿದರು ಸಾಹೇಬರು ಬಂದಿರ ಬೇಕೆಂದು. ಇದ್ದದರಲ್ಲಿ ಬಿಚ್ಚಿದ ಗುಂಡಿ ಹಾಕಿಕೊಂಡು ಅಂಗಿ ಟೊಪ್ಪಿಗೆಗಳನ್ನು ಸರಿಮಾಡಿಕೊಂಡರು. ಆದರೆ ಮೋರೆಯ ಮೇಲಿನ ಸಪ್ಪನ್ನ ಕಳೆಯನ್ನೂ

ವೈಯು ಸೊರಗನ್ನೂ ಯಾರು ಮುಚ್ಚಿಡಬಲ್ಲರು ? ಬಂದದ್ದಕ್ಕಾಗಿ ಏನಾದರೂ ಕೇಳೋಣ ಎಂದು ಒಬ್ಬ ಹುಡುಗನನ್ನೆಬ್ಬಿಸಿ ಕವಿತೆಯೊಂದನ್ನು ಹೇಳೆಂದು ಅಮೃತ ಕೇಳಿದನು. ಆ ಹುಡುಗ ಮಾಸ್ತರರ ಕಡೆ ನೋಡುತ್ತ ನಿಂತನು. ಸಾಹೇಬರು ಬಂದಾಗ ಸನ್ನೆಗಳಿಂದ ಅನೇಕ ಕೆಲಸಗಳಾಗುತ್ತಿರುತ್ತವೆ. ಈ ಹುಡುಗನಿಗೆ ಕವಿತೆ ಬರುತ್ತಿರಲಿಲ್ಲ, ಅಷ್ಟೇ ಯಾಕೆ, ಅವನು ಸಾಲೆಗೆ ಬಂದದ್ದೇ ಬಹಳ ದಿನದ ಮೇಲೆ ಆವೊತ್ತು ಮಾತ್ರ. ಅದನ್ನು ಮಾಸ್ತರರು ಸಾಹೇಬರಾಗಿದ್ದರೆ ಹೇಳುತ್ತಿದ್ದರೋ ಇಲ್ಲವೋ ಅಮೃತನ ಮುಂದೆ ಹೇಳಿದರು. 'ಯಾಕೆ ಬರಲಿಲ್ಲ ಎಂದು ಅಮೃತ ಸಹಜ ಪ್ರಶ್ನೆ ಹಾಕಿದ. 'ಏನ ಕೇಳತೀರಿ ? ಈಗ ಹುಡುಗರ ಸಂಖ್ಯಾನs ಕವ್ಮಿ ಆಗೇದ. ತಿಲ್ಲಿಕ್ಕೆ ಹೊಟ್ಟಿ ತುಂಬ ಅನ್ನಿಲ್ಲ. ಸಾಲಿಗೆ ಬರಲಿಕ್ಕೆ ತ್ರಾಣ ಎಲ್ಲಿಂದ ಬರಬೇಕು ? ಮ್ಯಾಲೆ ಬ್ಯಾನಿಬ್ಯಾಸರಕಿ.' ಆಯಿತು, ಆ ಕವಿತೆ ಅಲ್ಲೇ ಉಳಿಯಿತು. ಇನ್ನೊಬ್ಬನ ಕಡೆಯಿಂದ ಹೇಳಿಸುವೆನೆಂದರು ಮಾಸ್ತರು. ಅವನೇ ಒಬ್ಬ ಅವರ 'ಪೇಟಂಟ' ಹುಡುಗನಿರಬೇಕು. ಯಾಕೆ ತ್ರಾಸವೆಂದು ಅಮೃತ ಅಂದರೂ ಆ ಹುಡುಗನನ್ನು ಎಬ್ಬಿಸಿದರು. ಅವನೂ ಎದೆಗಾರ. 'ಕೆಲವಂ ಬಲ್ಲವರಿಂದ ಕಲ್ತು' ಮುಂತಾದ ಪದ್ಯವನ್ನು ದನಿಯಲ್ಲಿಯೂ ದಾಟಿಯಲ್ಲಿಯೂ ಗುರುಗಳ ಪರಾಜಯ ಮಾಡುವಂಥ ಗೊಗ್ಗರದಲ್ಲಿ ಹೇಳಿ ಅತಿಥಿಗಳ ಮನವನ್ನು 'ರಸದೂಟ' ದಿಂದ ತಣಿಸಿದನು. ಸಾಕು ಬಿಡೆಂದು ಹೇಳಿ ಅಮೃತ ಬಿಡಿಸಬೇಕಾದರೆ ರಗಡಾಯ್ತು. ಬರಗಾಲದಲ್ಲಿ ಸರಸ್ವತಿಯೂ ಸೊರಗಿದ್ದಾಳೆ, ವಿದ್ಯೆಗೂ ಬರಗಾಲ ಬಂದಿದೆ ಎಂಬುದನ್ನು ಎತ್ತಿ ತೋರಿಸುತ್ತಿತ್ತು ಆ ಶಾಲೆಯ ದೃಶ್ಯ. ತಿಂಗಳಿಗೆ ಇಪ್ಪತ್ತು ಮೂವತ್ತು ರೂಪಾಯಿ ಪಗಾರದಲ್ಲಿ ಹೆಂಡಿರುಮಕ್ಕಳು, ತಂದೆ ತಾಯಿ ಮುಂತಾದವರಿಂದ ಬೆಳೆಯುವ ಸಂಸಾರವನ್ನು ಬದುಕಿಸುವ ಕಸರತ್ತನ್ನು ಮಾಡಬೇಕಾದ ಸಾಲೀ ಮಾಸ್ತರನು ಹೇಗೆ ಶಾಂತಿಸಮಾಧಾನದಿಂದ ವಿದ್ಯೆಯನ್ನು ನೀಡಬಲ್ಲನು ? ಅವನ ಬುದ್ಧಿದಾರಿದ್ರ್ಯ–ಹೃದಯದಾರಿದ್ರ್ಯ ಅನ್ನದಾರಿದ್ರ್ಯದಿಂದ ಇನ್ನಿಷ್ಟು ಹೆಚ್ಚುತ್ತಲೇ ಇವೆ. ಯುದ್ಧಕಾಲದಲ್ಲಿಯಂತೂ ಪ್ರತಿನಿತ್ಯದ ಇರವೆಂದರೆ ಸಾವಿನ ಕೂಡ ಕುಸ್ತಿಯಾಗಿದೆ, ಅವರ ಕೈಯೊಳಗಿಂದ ಪಾರಾಗಲು ಹೊಸ ಹೊಸ ಪೇಚುಗಳನ್ನು ಕಲಿಯಲು ಶಾಲೆಗಳು ಗರಡೀಮನೆಗಳಂತಾಗಿವೆ. ಕಾಳುಕಡಿಗೆ ಗೌಡರ ವಶೀಲಿ ಹಚ್ಚುವ ಸಲುವಾಗಿ ಅವರ ಹುಡುಗನ ನಿಶೇಷ ಮಜಿ ಹಿಡಿಯಬೇಕು, ವ್ಯಾಪಾ

ರಸ್ತ್ರನೊಬ್ಬನಿಂದ ಅಕ್ಕಿ ಸಂಪಾದಿಸಲು ಅವನ ಮಗನಿಗೆ ಲೆಕ್ಕ ಕಲಿಸ ಬೇಕು. ಉಳಿದ ಹುಡುಗರು ಕಲಿತರೇನು ಬಿಟ್ಟರೇನು ? ಅವರಷ್ಟಕ್ಕೆ ಅವರು ಸ್ವತಂತ್ರರು. ತಲೆಯಿದ್ದಷ್ಟು ಕಲಿಯುತ್ತಾರೆ, ಇಲ್ಲದವರು ಮೂಲೆಹಿಡಿದು ಕೂಡುತ್ತಾರೆ !

ಅಮೃತನೂ ಶಾಂತಿನಾಥನೂ ಶಾಲೆಯಿಂದ ಹೊರಬೀಳುವಷ್ಟರಲ್ಲಿ ಯಾರೋ ಒಬ್ಬರು ಧಡಪಡಿಸಿ ಅಲ್ಲಿಗೆ ಬಂದರು, ಸಾಲೆಯೊಳಗೆ ಹೊಕ್ಕರು. ಆಗ ಹನ್ನೊಂದು ಹೊಡೆದುಹೋಗಿತ್ತು. ನಡೆದ ಮಾತಿನಿಂದ ಅವರು ಅಲ್ಲಿಯ ಒಬ್ಬ ಮಾಸ್ತರರೆಂದೂ ಮುನ್ನಾದಿನ ಹತ್ತಿರದ ಒಂದು ಊರಿಗೆ ಹೋಗಿ ಈಗ ತಿರುಗಿ ಬಂದರೆಂದೂ ತಿಳಿಯಿತು. ಅವರ ಹೆಂಡತಿ ಹಡೆದು ಹತ್ತು ದಿನವಾಗಿದೆ. ಮೆತ್ತಗಿನ ಅನ್ನ ಮಾಡಿ ಹಾಕಬೇಕೆಂದರೆ ಅಕ್ಕಿ ಸಿಕ್ಕಿಲ್ಲ, ಹಾಲಿಗೆ ಸಕ್ಕರೆಯಿಲ್ಲ. ದೀಪಕ್ಕೆ ಎಣ್ಣೆಯಿಲ್ಲ. ಇವನ್ನೆಲ್ಲ ಗುರುತಿನವರಿಂದ ದೊರಕಿಸಿ ಕಳ್ಳತನದಿಂದ ದೊಡ್ಡ ದಿಗ್ವಿಜಯ ಮಾಡಿದವರಂತೆ ಈ ಮಾಸ್ತರು ಬರುತ್ತಿದ್ದರಂತೆ. ರಾತ್ರಿ ಹೊತ್ತು ಯಾರು ನೋಡುತ್ತಾರೆ ಎಂದವರ ಆತ್ಮವಿಶ್ವಾಸ. ಆದರೆ ಅವರ ದುರ್ದೈವದಿಂದ ಎಲ್ಲಿಯೋ ಹೊರಟ ಪೋಲೀಸ ಪಾರ್ಟಿಯ ಮೋಟರೊಂದು ಬಂದು ತಾವು ಹುಡುಕುತ್ತಿದ್ದ ಚಳುವಳಿಖೋರನೇನೊ ಎಂದು ಈ ಮಾಸ್ತರನನ್ನು ನೋಡಿ ನಿಂತಿತು. ಇವರು ವಳ್ಳೇ ಚಮುತು ಮಾಡಿ ಕೈಯೊಳಗಿನ ಸಾಮಾನನ್ನು ಹೊನ್ನಾವರಿ ಗಿಡದೊಳಗೆ ಇಟ್ಟು ಬಂದರು. ಇವರ ತಪಾಸು ನಡೆಯಿತು. ನಿರಪರಾಧಿಗಳೆಂದು ಬಿಡುವು ದರಲ್ಲಿ ಒಬ್ಬ ಪೋಲೀಸನು ಅದೇ ಗಿಡದ ಹತ್ತಿರ ಬೀಡಿ ಸೇದಿ ಅದರ ಬೆಳಕಿನಲ್ಲಿ ಆ ಗಂಟನ್ನೂ ಎಣ್ಣೆಯ ಬಾಟ್ಲಯನ್ನೂ ನೋಡಬೇಕೆ ? ಎಲ್ಲ ಪತ್ತೆಯಾ ಯಿತು. ಕೂಡಲೆ ಮಾಸ್ತರರನ್ನು ಹಿಡಕೊಂಡು ಹೋಗಿ ರಾತ್ರಿಯೆಲ್ಲ ಕೂಡಿಸಿ ಝುಬರಿಸಿ ಮರುದಿನ ಮುಂಜಾನೆ ಸಾಮಾನು ಕಸಗೊಂಡು ಐದು ರೂಪಾಯಿ ದಂಡ ವಸೂಲಿ ಮಾಡಿ ಕಳಿಸಿದರು. ಇಷ್ಟೆಲ್ಲ ಫಜೀತಿ ಆಗಿ ಅವರಿದೇ ಈಗ ಊರು ಕಂಡರು.

ಈ ಕಥೆ ಕೇಳಿ ಮಾಸ್ತರರೆಲ್ಲ ತಮ್ಮ ವ್ಯವಸಾಯಬಂಧುವಿನ ಚೇಷ್ಟೆಯನ್ನು ನಡೆಸಿದರು. ಆ ಮನುಷ್ಯನಿಗೆ ಸಾವಿರ ಚೇಳು ಕಡಿದಷ್ಟು ಕಷ್ಟವಾಗಿರಬೇಕು. ಬರಿಗೈಯಿಂದ ಹೆಂಡತಿಗೆ ಮುಖ ತೋರಿಸಲಾರದೆ ಕುಕ್ಕರ ಬಿದ್ದಂತೆ ಸಾಲೆಯ ಹೊರ ಅಂಗಳದಲ್ಲಿ ಅವರು ಕೆಳ್ಳವೋರೆ ಮಾಡಿ

ಕೂತರು. ಶಾಂತಿನಾಥ-ಅಮೃತ ಇಬ್ಬರೂ ಅವರ ಕಥೆ ಕೇಳಿ ಮಿಡುಕುತ್ತ ಮನೆಗೆ ತೆರಳಿದರು.

ಮೂರನೆಯ ದಿನ ಬೆಳಿಗ್ಗೆ ಇನ್ನು ಹೆಚ್ಚು ಇರಲಾರೆನೆಂದು ಶಾಂತಿನಾಥನ ಅಪ್ಪಣೆ ಪಡೆದು ಅಮೃತ ತನ್ನೂರಿಗೆ ಹೊರಟನು. ಅವನೆಷ್ಟು ದಿನ ಜೊತೆ ಗಿದ್ದರೂ ಶಾಂತಿಗೆ ಬೇಕಾಗಿತ್ತು. ಅವನಿಗೆ ಬರಡಾದ ಬಾಳಿನಲ್ಲಿ ಅಮೃತ ಸಿಕ್ಕಂತೆ ಆಗಿತ್ತು. ಆದರೆ ಹೆಚ್ಚು ದಿನ ಇಟಗೊಳ್ಳುವದು ಸರಿಯಲ್ಲವೆಂಬು ದನ್ನು ಅವನು ಅರಿತಿದ್ದನು. ನಿಲ್ಮನೆಯವರೆಗೆ ಹೋಗಿ ಸೇಡಬಾಳದ ಕಡೆ ಹೋಗುವ ಬೆಳಗಿನ ಗಾಡಿಯಲ್ಲಿ ಅವನನ್ನು ಕೂಡಿಸಿ ಗಟ್ಟಿಯಾಗಿ ಕೈಕುಲುಕಿ ಬೀಳ್ಕೊಟ್ಟನು. 'ಮುಂಬಯಿಯಲ್ಲಿ ಮತ್ತೆ ಕೂಡೋಣ' ಎಂಬ ಅಮೃತನ ಮಾತು ಕೇಳುತ್ತಿರುವಂತೆ ಅವನ ಕಣ್ಣು ಮಂಜಾಯಿತು, ಕೊರಳುಬ್ಬಿತು. ಅಷ್ಟರಲ್ಲಿ ಗಾಡಿ ಮುಂದೆ ಸರಿದು ಹೋಗಿತ್ತು. ಸೇಡಬಾಳದಲ್ಲಿ ಮೋಟರು ಹತ್ತಿ ಸಂಜೆಯೊಳಗೆ ಅಮೃತನು ವಿಜಾಪುರ ಕಂಡನು. ಅಲ್ಲಿ ತನ್ನ ಗೆಳೆಯನ ಮನೆಯಲ್ಲಿ ಬಿಡಾರ ಹಾಕಿ ರಾತ್ರಿ ಗಾಡಿಯಿಂದ ಬಾಗಿಲುಕೋಟೆಗೆ ಹೊರಟನು. ಬೆಳಗಾಗುವುದರಲ್ಲಿ ಊರು ಬಂತು. ಆರೇಳು ದಿನ ಕಣ್ಮರೆಯಾಗಿದ್ದ ಊರು ಹತ್ತಿರ ಬಂದಂತೆ ಅಲ್ಲಿಯ ಸಮಸ್ಯೆಗಳೆಲ್ಲ ಧುತ್ತೆಂದು ಇದಿರೊಡ್ಡಿದವು. ತಡ ವಾಗಿ ಬಂದದ್ದಕ್ಕೆ ಏನು ಪುಷ್ಪಗಳೇರುವವೋ ಎಂಬ ಎದೆಗುದಿ ಹೆಚ್ಚಿತು.

ಅಮೃತ ಮನೆಗೆ ಹೋಗಿ ಬಾಗಿಲ ತೆಗೆಸಿ ಒಳಗೆ ಕಾಲಿಡುವುದೊಂದೇ ತಡ ಶಂಭುರಾಯರು ಒದರಾಟದಿಂದಲೇ ಸ್ವಾಗತಮಾಡಿದರು. 'ಬಂದೇನಪ. ಈವತ್ತ ಊರು ನೆನಪಾತs? ಇನ್ನೂ ಎಲ್ಲ್ಯಾರ ಹೋಗೂದದ ಏನು? ಹೋಗತಿದ್ದರ ಹೋಗಿ ಬಾರಪ. ನಾವಿಲ್ಲಿ ಹೆಂಗಾರ ಮಾಡಿಕೋತೀವಿ. ಕಾಲೇಜ ಸುರುವಾಗಿಹೋತು. ಆದರದೇನಾರ ಖಬರದ ಏನು?'- ಈ ರೀತಿ ಬಾಣದ ಮೇಲೆ ಬಾಣ ಬಿಡುತ್ತ ಅವರು ಅಮೃತನನ್ನು ಅಣಕವಾತಿನಿಂದ ಗಾಸಿ ಮಾಡಿಬಿಟ್ಟರು. ಸುಮ್ಮನೆ ನಿಂತು ಎಲ್ಲ ಕೇಳಿದನು. ತಾನು ಹೋದ ಕೆಲಸವೂ ಆಗಿರಲಿಲ್ಲ, ಮನೆಯವರ ದೃಷ್ಟಿಯಲ್ಲಿ ನಿಷ್ಕಾರಣವಾಗಿ ಎರಡು ದಿನ ಪಾಟೀಲನೂರಿಗೆ ಬೇರೆ ಹೋಗಿದ್ದನು. ಹೀಗಿರುವಾಗ ಅವನು ತನ್ನ ಸಮರ್ಥನೆ ಯನ್ನು ಯಾವ ಬಾಯಿಯಿಂದ ಮಾಡುವನು? ಆಮೇಲೆ ಅವ್ವನಿಂದ ಗೊತ್ತಾಯಿತು, ಸುಂದರಾನ್ನ ತಮ್ಮ ಮಗನಿಗೆ ತಗೊಳ್ಳಲೊಪ್ಪಿದ ಸೋಮನಾಥ ರಾಯರು ವಧೂಪಕ್ಷದಿಂದ ತಿರುಗಿ ಯಾರೂ ಬರಲಿಲ್ಲವೆಂದು ಬೇರೆ ಕನ್ಯೆಗಳನ್ನು

ನೋಡಹತ್ತಿದ್ದರು ಎಂದು. ಎಲ್ಲಾ ಗೊತ್ತು ಮಾಡಿ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂಬಂತೆ ಆದದ್ದೇ ಶಂಭುರಾಯರ ಕಳವಳ-ಸಂತಾಪಗಳಿಗೆ ಕಾರಣವಾಗಿತ್ತು. ಇದಲ್ಲದೆ ವಕೀಲ ಮಾಧವರಾಯರ ಮಗಳನ್ನು ಮಾಡಿಕೊಳ್ಳ ಲೊಲ್ಲದೆ ಅಮೃತನು ತಂದೆಯ ಮುನಿಸನ್ನು ಇನ್ನಿಷ್ಟು ಹೊತ್ತಿಸಿದನು. ಅವನ ಅವಿಧೇಯತೆಯಿಂದ ತಮ್ಮ ಸಂಸಾರವೆಲ್ಲ ಮಣ್ಣುಗೂಡುವುದೆಂಬ ಹೆದರಿಕೆ ಅವರಲ್ಲಿ ನೆಲಸಿಬಿಟ್ಟಿತು. ಅವನು ಬಂದ ಕ್ಷಣದಿಂದ ಸರಿಯಾಗಿ ಒಂದು ಮಾತು ಆಡಲಿಲ್ಲ. ದುಸು ಮುಸು ಮಾಡುತ್ತ ನಿಟ್ಟುಸಿರು ಬಿಡುತ್ತ ಇದ್ದರು. ಎರಡು ದಿನ ಅವನೊಡನೆ ಮಾತುಬಿಟ್ಟರು, ಮುಂದೆ ಎರಡು ದಿನ ಕೆಲಸಕ್ಕೆ ಹೋಗದೆ ಮುಸುಗು ಹಾಕಿ ಮಲಗಿಕೊಂಡರು. ರಾತ್ರಿ ಜ್ವರ ಬಂದವು, ಅದರಲ್ಲಿ ಏನೇನೋ ಹುಚ್ಚುಚ್ಚು ಬಡಬಡಿಸಹತ್ತಿದರು. ಎಲ್ಲವನ್ನೂ ನೋಡಲಾರದೆ, ಏನು ಮಾಡಬೇಕೆಂದು ತಿಳಿಯದೆ, ವಿಚಾರ ಮಾಡಿ ಮಾಡಿ ಅಮೃತ ತಲೆಕೆಟ್ಟು ಹೋದಂತಾದನು. ಶಂಭುರಾಯರ ಹತ್ತಿರ ಧಾವಿಸಿ ಹೋಗಿ ಸಮಾಧಾನದಿಂದ ಮಾತಾಡುವ ಯತ್ನ ಮಾಡಿದನು, 'ನೀ ನಮ್ಮ ಹತ್ತು ಜನ್ಮದ ವೈರಿ ಆಗಿ ಹುಟ್ಟೇದಿ, ಎದ್ದು ಹೋಗು ಇಲ್ಲಿಂದ' ಎಂದು ಅವರು ಗುಡುಗು ಹಾಕಿದರು. ಎಲ್ಲಿಯೂ ದಾರಿ ಕಾಣಲಿಲ್ಲ.

ಹೀಗೆ ಆರೇಳು ದಿನ ಹೋದವು. ಹೊರಗ ಮಳೆಗಾಲದ ಮೋಡಕವಿದು ಹಗಲುಗತ್ತಲೆ ಬಂದಿದೆ. ಅಮೃತನ ತಲೆಯಲ್ಲಿಯೂ ಹಾಗೇ ಆಗಿದೆ. ಒಂದು ರಾತ್ರಿ ನಿದ್ದೆಯಿಲ್ಲದೆ ಕೂತು ದೀರ್ಘವಾಗಿ ಆಲೋಚಿಸಿ ದೊಡ್ಡದೊಂದು ನಿರ್ಧಾರಕ್ಕೆ ಬಂದನು. ತಾನು ಆ ಮದುವೆಗೆ ಒಪ್ಪುವದರಿಂದ ಎಲ್ಲ ಸಮಸ್ಯೆಗಳು ಬಗೆಹರಿಯುವವಲ್ಲವೇ? 'ಆಗಲಿ ಒಪ್ಪಿದ್ದೆ, ಮನೆತನದ ಸುಖಕ್ಕಾಗಿ ತನ್ನ ಸುಖವನ್ನು ಆದರ್ಶವನ್ನು ಆಹುತಿಯಾಗಿ ಕೊಡತೇನೆ, ಇದೇ ನಿಶ್ಚಯ' ಎಂದನು. ಮರುದಿನ ಬೆಳಿಗ್ಗೆ ಝುಗ್ಗೆಂದು ಬಿಸಿಲು ಬಿದ್ದಿದೆ, ಮೋಡವೆಲ್ಲ ಮಾಯವಾಗಿದೆ. ಅಮೃತ ತನ್ನ ನಿಶ್ಚಯವನ್ನು ತಾಯಿತಂದೆಯ ಮುಂದೆ ಸಾರಿದನು. ತನ್ನ ಒಡಲುರಿಯನ್ನೆಲ್ಲ ನಷ್ಟಜ್ವಾಲಾಮುಖಿಯಂತೆ ಒಳಗೆ ನುಂಗಿ ಕೊಂಡನು. ಮನೆಯ ವಾತಾವರಣ ಒಮ್ಮೆಲೆ ಪ್ರಫುಲ್ಲವಾಯಿತು. ಸುಂದರಾನ ಬಾಡಿದ ಮುಖ ಅರಳಿದ ಗುಲಾಬಿಯಾಯಿತು. ಪಾರ್ವತಿಬಾಯಿಯರು ಹುರುಪಿ ನಿಂದ ದಿನಗೆಲಸದಲ್ಲಿ ತೊಡಗಿದರು. ಶಂಭುರಾಯರ ಜ್ವರ ಹಾರಿಹೋಯಿತು. ಪಾತಾಳದಿಂದ ಸ್ವರ್ಗದ ನಟ್ಟನಡುವೆ ಅವರು ಧೀಂಕಿಟ್ಟರು. ಸೋಮನಾಥ

ರಾಯರಿಗೂ ವಕೀಲ ಮಾಧವರಾಯರಿಗೂ ಸಂದೇಶಗಳು ಮುಟ್ಟಿದವು. ಎಂಟು ದಿನದಲ್ಲಿ ಒಳ್ಳೆಯ ಮದುವೆಯ ಮುಹೂರ್ತಗಳಿದ್ದವು. ಎಲ್ಲ ಸಿದ್ಧತೆ ಭರದಿಂದ ನಡೆಯಿತು. ಕಂಟ್ರೋಲಿನ ಕಷ್ಟ ಮಾಧವರಾಯರನ್ನು ಹೆದರಿಸಲಿಲ್ಲ. ಅವರು ಬೇಡಿದಷ್ಟು ಪದಾರ್ಥ ಬೇಕಾದಲ್ಲಿಂದ ಸಿಗುತ್ತಿತ್ತು. ಬರಗಾಲದಲ್ಲಿಯ ಮದುವೆ ಎಂದು ಯಾರೂ ಆಡಿಕೊಳ್ಳಬಾರದೆಂದು ಅವರು ತೋರಿಸಲು ಪಣ ಮಾಡಿದ್ದರು.

ಜೂನ ತಿಂಗಳ ಕೊನೆಯ ಒಂದು ದಿನ ಬೇರೆ ಬೇರೆ ಹೊತ್ತಿಗೆ ಅಮೃತನ, ಸುಂದರಾನ ಲಗ್ನವಾದವು. ಯಾವುದಕ್ಕೂ ಕೊರತೆಯಾಗಲಿಲ್ಲ. ಮಾಧವರಾಯರು ತಮ್ಮ ಪಣ ಗೆದ್ದರು. ಶಂಭುರಾಯರು ಗೆದ್ದು ಪಾರಾದರು. ಸುಂದರಾಗೆ ಬೇಡಿದ ಗಂಡ ಸಿಕ್ಕನು. ಅಮೃತ ಮಾತ್ರ ಬೇಡಾದ ಹೆಂಡತಿಯನ್ನು ಗಂಟು ಹಾಕಿಕೊಂಡನು.

ಜುಲೈ ತಿಂಗಳ ಮೊದಲ ವಾರದಲ್ಲಿ ಕಾಲೇಜ ಸೇರಲು ಅಮೃತ ಮುಂಬಯಿಗೆ ಹೊರಟನು. ಮದುವೆಯ ಪ್ರಾಪ್ತಿಯಿಂದ ಹಣದ ವ್ಯವಸ್ಥೆಯಾಗಿತ್ತು; ಮದುವೆಯಾಗಿದ್ದರಿಂದ ಇನ್ನವನ ಹೊಣೆಗಾರಿಕೆ ಹೆಚ್ಚಿತೆಂದೂ ದೇಶಸೇವೆಯ ಹುಚ್ಚು ಇನ್ನು ತಲೆಯಲ್ಲಿ ಸೇರದೆಂದೂ ಮಾಧವರಾಯರಿಗೂ ಶಂಭುರಾಯರಿಗೂ ದೊಡ್ಡ ವಿಶ್ವಾಸ. ಆದರೂ 'ಅಭ್ಯಾಸ ಮಾಡು, ಅತ್ಲಾಗಿತ್ಲಾಗ ಮನಸ್ಸು ಹಾಕಬ್ಯಾಡ' ಎಂದು ತಿರುತಿರುಗಿ ಉಪದೇಶಿಸಿ ಶಂಭುರಾಯರು ಮಗನನ್ನು ಕಳಿಸಿಕೊಟ್ಟರು. ಪಾರ್ವತಿಬಾಯಿಯದು ತಾಯಿಗರುಳು. ಮುಂಬಯಿಯಂಥ ದೊಡ್ಡ ಊರಲ್ಲಿ ಮತ್ತೇನಾಗುವುದೋ ಎಂಬ ಇಲ್ಲದ ಹೆದರಿಕೆ ಮುತ್ತಿ ಬಂದು ಅಮೃತ ಹೋಗಿಬರುವೆನೆಂದು ಹೇಳಿ ನಮಸ್ಕಾರ ಮಾಡಿದಾಗ ಹೊಯ್ಯೆಂದು ಅಳತೊಡಗಿದರು. ' ಸಂಬಾಳಿಸಿಕೊಂಡಿರು ' ಎಂದು ಹೇಳಬೇಕಾದರೆ ಮಾತು ತಡವರಿಸಿತು.

ಸ್ಟೇಶನ್ನವರೆಗೆ ಎಲ್ಲರೂ ಹೋಗಿ ಕಳಿಸಿಬಂದರು. ಇಷ್ಟು ಜನಕ್ಕೆ ಸಮಾಧಾನವಾಗುವಂತೆ ತಾ ನಡೆದನಲ್ಲ, ತನ್ನ ಸುಖ ಹಾಳಾಗಿ ಹೋದರೂ ಚಿಂತೆಯಿಲ್ಲ ಎಂದು ಈ ವರೆಗೆ ಸಮಾಧಾನದಿಂದ ಇದ್ದ ಅಮೃತನು ಗಾಡಿ ಹೊರಡುತ್ತಲೇ ಎಲ್ಲರನ್ನೂ ನೋಡಿ ಕಂಬನಿದುಂಬಿ ಕಾಣುವವರೆಗೆ ಕಿಡಿಕಿಯಲ್ಲಿ ಹಾಗೇ ನೋಡುತ್ತ ನಿಂತನು. ಹೇಳಬಾರದ ನೋವು ಅವನ ಎದೆಯಲ್ಲಿ ಭುಗ್ಗೆಂದು ಪ್ರಜ್ವಲಿತವಾಯಿತು. ಆದರೆ ಅವನಿಗೆ ಗೊತ್ತಾಗಲಿಲ್ಲ.

## ೧೩. ಕಂಗಾಲ ಬಂಗಾಲ

ಅಮೃತನು ಮುಂಬಯಿಗೆ ಬಂದು ತನ್ನ ಮೊದಲಿನ ವೈದ್ಯಕೀಯ ಕಾಲೇಜು ಸೇರಿದನು. ಕಾಲೇಜ ಆರಂಭವಾಗಿ ಹದಿನೈದು ದಿನದ ಮೇಲೆ ಬಾದರೂ ವಸತಿ ಗೃಹದಲ್ಲಿ ಅವನಿಗೆ ಖೋಲಿ ಸಿಕ್ಕಿತು. ಆ ಮೊದಲು ಅವನು ಪತ್ರ ಬರೆದು ತಿಳಿಸಿಟ್ಟಿದ್ದನು. ಅವನ ವಿಷಯದಲ್ಲಿ ರೆಕ್ಟರ ಆಗಿದ್ದವರ ಸದಭಿಪ್ರಾಯವು ಅವನಿಗೆ ನೆರವಾಯಿತು. ಅವನು ಬರುವುದರೊಳಗೆ ಶಾಂತಿನಾಥ ಪಾಟೀಲನೂ ಉಗಾರದಿಂದ ಬಂದಿದ್ದನು. ಇಬ್ಬರೂ ಕೂಡಿ ವಸತಿಗೃಹದ ಕೆಳಗಿನ ಮೇಲಿನ ಭಾಗಗಳಲ್ಲಿ ತಿರುಗಾಡಿದರು. ಗುರುತಿನ ಕೆಲವು ಕನ್ನಡ ವಿದ್ಯಾರ್ಥಿಗಳು ಭೆಟ್ಟಿಯಾದರು. 'ಯಾಕರೆಪ ಬರಗಾಲ ಮುಗಿಸಿ ಬಂದಿರ್ಯಾ ?' ಎಂದು ಕೊಂಕುಮಾತಿನಿಂದ ಒಬ್ಬಿಬ್ಬರು ಅಮೃತನನ್ನು ಸ್ವಾಗತ ಮಾಡಿದರು. ಅದಕ್ಕವನು 'ಬರಗಾಲ ಹೆಂಗ ಮುಗೀತದರೆಪ ನಮ್ಮಂಥ ನಿಮ್ಮಂಥ ಮುಂದಿ ಇರುತನಕ' ಎಂದು ಅದೇ ಕಾಕು ಸ್ವರದಲ್ಲಿ ಉತ್ತರ ಕೊಡದೆ ಇರಲಿಲ್ಲ. ಬೇರೆ ಭಾಗಗಳಿಂದ ಬಂದ ಮಿತ್ರರು ಅಮೃತನನ್ನು ಕಂಡೊಡನೆ 'ಹಲೊ ಸಿರೂರ' ಎಂದು ಕೈಕುಲಕಿ ಹುಚ್ಚೆದ್ದವರಂತೆ ಮಾಡಿದರು. ಅವನನ್ನು ಸುತ್ತುಗಟ್ಟಿ ನಿಂತು ಅವನ ಬಂಗಾಲಯಾತ್ರೆಯ ಸಾಹಸ ಕಥೆಯನ್ನು ಕೇಳಿದರು, ನಿಂತಲ್ಲಿಯೇ ಸಭೆ ನಡೆಸಿದಂತೆ ಮಾಡಿ ಅವನನ್ನು ಅಭಿನಂದಿಸಿಯೂ ಬಿಟ್ಟರು. ಮತ್ತೆ ವಿದ್ಯಾರ್ಥಿದಶೆಯ ವಾತಾವರಣದಲ್ಲಿ ಅಮೃತ ಪ್ರವೇಶ ಮಾಡಿದನು, ಹಿಂದುಮುಂದಿನದನ್ನು ನೆನೆಯದೆ ಕಾಲೇಜಿನ ದಿನಚರಿಯಲ್ಲಿ ಮಗ್ನನಾದನು.

ಬಂದ ಮೇಲೆ ಎಂಟು ದಿನದಲ್ಲಿ ಅವನ ಕಾರ್ಯಕ್ರಮ ವ್ಯವಸ್ಥಿತವಾಗಿ ಸಾಗಿತು. ಓದುವಾಗ ಓದು, ಕ್ಲಾಸಿನ ಹೊತ್ತಿನಲ್ಲಿ ಅಲ್ಲಿ ಹಾಜರಿ, ಆಸ್ಪತ್ರೆಯ ಡ್ಯೂಟಿ ಇದ್ದಾಗ ಅದರ ಕೆಲಸ—ಯಾವುದಕ್ಕೂ ತಡೆ ಉಂಟಾಗಲಿಲ್ಲ. ಬೇಸರ ಬಂದಾಗ ಸ್ವಲ್ಪ ಮಾತುಕತೆ ಆಡಿದರೆ ಪಾಟೀಲನ ಕೂಡ ಮಾತ್ರ. ಅವನನ್ನು ಕಂಡು ಮೆಚ್ಚಿದ ಪ್ರೊಫೆಸರರೆಲ್ಲ 'ಹಿಂದಿನಂತೆ ಇನ್ನು ಮೇಲೆ ಹುಚ್ಚು ಆವೇಶಕ್ಕೆ ಬಲಿಯಾಗಬೇಡ. ಒಂದು ವರ್ಷದ ವರೆಗೆ ಕಣ್ಕಟ್ಟು ಹಾಕಿದ ಕುದುರೆಯಂತೆ ಆಚೀಚೆ ನೋಡದೆ ಅಭ್ಯಾಸಮಾಡು. ಡಾಕ್ಟರ ಆದ ಮೇಲೆ ದೇಶಸೇವೆ ಇದ್ದೇ ಇರುವದು' ಎಂದು ತಿರುತಿರುಗಿ ಉಪದೇಶಿಸುವರು. 'ಹೌದು ಈ ಸಾರೆ ಪರೀಕ್ಷಾ ಮುಗಿಸಿಬಿಡಬೇಕೆಂದು ಮಾಡೀನಿ' ಎಂದವನು ನಿರ್ಧಾರದ

ಉತ್ತರವನ್ನು ಕೊಡುತ್ತಿದ್ದನು. 'ಹುಡುಗನ ಆವೇಶ ಈಗ ಇಳಿದಿದೆ, ವ್ಯಾವಹಾರಿಕ ಬುದ್ಧಿ ಬಂದಿದೆ' ಎಂದವರು ಸಮಾಧಾನ ಪಡುತ್ತಿದ್ದರು. ಆದರೆ ಅವನಿಗೆ ಮಾತ್ರ ಇಂಥ ಉಪದೇಶದ ಪ್ರಸಂಗಗಳಲ್ಲಿ ಒಳಒಳಗೆ ಜೀವ ಕುದಿಯುತ್ತಿತ್ತು. ನಗರವೆಲ್ಲ ಉರಿಯುತ್ತಿರುವಾಗ ನೋಡುತ್ತ ಕೂತು ಕೊಂಡು, ಫಿಡಲ್ಲು ಬಾರಿಸುವ ನೀರೋನ ಚಿತ್ರವೊಂದು ಕಣ್ಣ ಮುಂದೆ ಸುಳಿಯುತ್ತಿತ್ತು. ಅದನ್ನು ಮನದ ಕಸದ ಬುಟ್ಟಿಯಲ್ಲಿ ನೂಕಿ ತನ್ನ ನಿತ್ಯ ಕ್ರಮದಲ್ಲಿ ಅವನು ತಲ್ಲೀನನಾಗುತ್ತಿದ್ದನು.

ಊರಿಂದ ಪತ್ರ ಬಂದಿತು. ಅವನದೆಲ್ಲ ಸುಸೂತ್ರ ನಡೆದಿರುವದೆಂದು ತಿಳಿದು ಶಂಭುರಾಯರು ಹಿಗ್ಗಿಹೋಗಿದ್ದರು. ಮಗಳು ಮದುವೆ ಮಾಡಿ ಕೊಂಡು ಗಂಡನ ಮನೆಗೆ ಹೋದಳು ; ಮಗನು ಕೊನೆಯ ವರ್ಷದ ಅಭ್ಯಾಸ ವನ್ನು ಮನಸಿಟ್ಟು ಮಾಡುತ್ತಿರುವನು. ಅದೆಂಥ ಭಾರ ಅವರ ತಲೆಯ ಮೇಲಿಂದ ಇಳಿದಂತಾಗಿತ್ತು ! ಹಿಂದೆ ಅನುಭವಿಸಿದ ವನವಾಸವೆಲ್ಲ ಅವರಿಗೆ ರಾಮಾಯಣದ ವನವಾಸದಷ್ಟೆ ಹಳೆಯದೂ ಆಯಿತು, ರುಚಿಕರವೂ ಆಯಿತು. ಈಗಲಾದರೂ ಸಣ್ಣ ಪಗಾರದಲ್ಲಿ ಸಂಸಾರ ನಡಸಬೇಕಾದ ಒದ್ದಾಟವಿದೆ. ಆದರೆ ಅದೆಷ್ಟು ದಿವಸದ ಮಾತು? ಇನ್ನೊಂದು ವರ್ಷದೊಳಗೆ ಮಗನು ಪಾಸಾಗಿ ಬಂದು ಡಾಕ್ಟರ ಧಂದೆಯನ್ನು ಸುರುವು ಮಾಡುವನು. ಅಲ್ಲಿಂದ ಫಳಿಕೆಗೇನು ಕಡಿಮೆ? ಆಮೇಲೆ ಇಂಥ ದರಿದ್ರ ಮನೆಯಲ್ಲಿ ಇರುವದೇಕೆ ? ಈ ಮುನಿಸಿಪಾಲಿಟಿಯ ದರಿದ್ರ ನೌಕರಿಯನ್ನಾದರೂ ಯಾಕೆ ಮಾಡಬೇಕು ? ಈ ಊರನ್ನೇ ಬಿಟ್ಟು ವಿಜಾಪುರಕ್ಕೆ ಹೋದರಾಯಿತು. ಅಮೃತನ ಪ್ರ್ಯಾಕ್ಟೀಸು ಅಂಥ ದೊಡ್ಡ ಊರಲ್ಲಿ ಒಮ್ಮೆ ಹತ್ತಿತೆಂದರೆ ಕೇಳುವದೇನು ? ರೊಕ್ಕದ ಮೇಲೆ ರೊಕ್ಕ. ಈ ಬಗೆಯ ಸುಖಸ್ವಪ್ನಗಳನ್ನು ಅವರು ಕಾಣುತ್ತಿದ್ದರೆಂಬುದು ಅಮೃತನಿಗೆ ಅವರು ಬರೆದ ಪತ್ರದ ಪ್ರತಿಯೊಂದು ವಾಕ್ಯವು ಸಾರಿ ಹೇಳುತ್ತಿತ್ತು. ಅದನ್ನೋದಿ ಅಮೃತನೂ ಹಿಗ್ಗಿದನು, ತನ್ನ ಆಯುಷ್ಯದಲ್ಲಿ ತಂದೆಗೆ ಇಷ್ಟು ಸುಖಸಂತೋಷಗಳನ್ನು ಒಮ್ಮೆಯಾದರೂ ಉಂಟುಮಾಡಿದೆನಲ್ಲ ಎಂದು. ಈ ಸಂತೋಷದ ಸರಕನ್ನು ಪಡೆದು ಶಂಭುರಾಯರಿಗೆ ಕೊಡಬೇಕಾದರೆ ಮನಸ್ಸೊಪ್ಪದ ಹುಡುಗಿಯನ್ನು ಮದುವೆಯಾಗಿ ತನ್ನ ಸುಖಸರ್ವಸ್ವದ ಬೆಲೆಯನ್ನು ಅವನು ಕೊಟ್ಟಿದ್ದನು. ಅದನ್ನು ನೆನಸಿ ಅವನ ಮೈ ಒಂದು ಕ್ಷಣ ಜುಮ್ಮೆಂದಿತು. ಮನಸ್ಸು ಬಂಗಾಲದತ್ತ ಹಾರಿತು. ಪ್ರೀತಿಯ ಮೂರ್ತಿಯಾಗಿ ವೀಣೆ ಕರೆದಳು.

ಅವಳನ್ನೇಕೆ ಮದುವೆ ಮಾಡಿಕೊಳ್ಳದೆ ಹೋದೆ? ಕೆಲ ನಿಮಿಷ ತ್ರಸ್ತನಾಗಿ ಅವನು ಕೋಣೆಯಲ್ಲಿ ತಿರುಗಿದನು, ಕಿಡಿಕಿಯ ಹೊರಗೆ ಹಣಿಕಿ ಬೀದಿಯ ನೋಟಗಳಲ್ಲಿ ಮನಸ್ಸನ್ನು ತೊಡಗಿಸಬೇಕೆಂದನು. ಆದರೆ ಗಾಳಿಯಾಡದ ಹವೆಯಲ್ಲಿ ಎದ್ದ ಧೂಳಿ ಬಹಳ ಹೊತ್ತು ಹಾಗೇ ನಿಲ್ಲುವಂತೆ ಆ ತ್ರಸ್ತತೆ ಉಳಿಯಿತು. ಕೊನೆಗೆ ಇದೆಲ್ಲ ಈಗ ವ್ಯರ್ಥವಿಚಾರವೆಂದೂ ಪ್ರೀತಿಗಿಂತ ಜಗತ್ತಿನಲ್ಲಿ ಕರ್ತವ್ಯವೇ ಹೆಚ್ಚೆಂದೂ ಮನಸ್ಸಿನ ಸಮಾಧಾನಕ್ಕೆಂದು ಒಂದು ನಿರ್ಣಯಕ್ಕೆ ಬಂದು ಟೇಬಲ್ಲಿನ ಹತ್ತಿರ ಬಂದು ಅಭ್ಯಾಸಕ್ಕೆ ಕುಳಿತನು. ಪುಸ್ತಕವೊಂದನ್ನು ತಗೊಂಡು ಓದಿದ್ದರ ಮುಂದಿನ ಭಾಗವನ್ನು ಓದಬೇಕೆಂದು ತೆರೆದನು. ಆ ಪುಟದಲ್ಲಿ ಓದಿದ್ದರ ಗುರುತಿಗೆಂದು ಇಟ್ಟಿದ್ದು ವೀಣೆಯ ಪತ್ರವಾಗಿತ್ತು. ಅದು ಬಂದು ಎಂಟು ಹತ್ತು ದಿನವಾಗಿದ್ದರೂ ಉತ್ತರ ಬರೆದಿರಲಿಲ್ಲ. 'ಛೆ ಅವಳೆಷ್ಟು ಹಾದಿ ನೋಡುತ್ತಿರುವಳೋ' ಎಂದು ನೆನೆದನು, ಕಲಕತ್ತೆಗೆ ಹೋದ ಮೇಲೆ ಈ ಮೊದಲು ಬಾಗಿಲಕೋಟೆಗೇ ಅವಳು ಒಂದು ಪತ್ರ ಬರೆದು ರಾಮಕೃಷ್ಣ ಆಶ್ರಮದಲ್ಲಿ ತನ್ನದೆಲ್ಲ ಸರಿಯಾಗಿ ನಡೆದಿರುವುದೆಂದು ತಿಳಿಸಿದ್ದಳು. ಅದಕ್ಕೆ ತನ್ನ ಗೊಂದಲದಲ್ಲಿ ಅನ್ಮೃತ ಉತ್ತರವನ್ನೇ ಬರೆದಿರಲಿಲ್ಲ. ಮುಂಬಯಿಗೆ ಬಂದ ಮೇಲೆ ಮಾತ್ರ ಉತ್ತರ ಬರೆದನು. ತಾನು ಕಾಲೇಜಿಗೆ ಬಂದದ್ದು ತಿಳಿಸಿ ತನ್ನ ಹೊಸ ವಿಳಾಸವನ್ನು ಕೊಟ್ಟಿದ್ದನು. ತನ್ನ ಮದುವೆಯ ಸುದ್ದಿಯನ್ನು ಮಾತ್ರ ಅವಳಿಗೆ ತಿಳಿಸಲು ಹೋಗಲಿಲ್ಲ. ತಿಳಿಸಬಹುದೆಂದು ಪತ್ರ ಬರೆಯುತ್ತಿರುವಾಗ ಬಂದ ವಿಚಾರವನ್ನು ಅವನು ತಡೆದನು. ಅವಳ ಸ್ವಭಾವ, ತನ್ನ ಬಗ್ಗೆ ಇದ್ದ ಒಂದು ಸ್ವಪ್ನಾಳುವಾದ ಅವಳ ನಿರೀಕ್ಷೆ ಅವನಿಗೆ ಗೊತ್ತಿತ್ತು. ಅಂತೇ ಅವಳ ಹೃದಯಕ್ಕೆ ತೀವ್ರ ಧಕ್ಕೆಯನ್ನುಂಟುಮಾಡಬಹುದಾದ ಸುದ್ದಿಯನ್ನು ತಿಳಿಸಕೂಡದು ಎಂದವನಿಗೆ ತೋರಿತು. ಮುಂದೆ ಎಂದಾದರೊಮ್ಮೆ ತಾನೇ ತಿಳಿಯುವುದಲ್ಲ; ತಿಳಿಯದಿದ್ದರೂ ತಪ್ಪೇನು? ಅವಳ ಸಮಾಧಾನಕ್ಕಾಗಿ ಏನೋ ಪತ್ರ ಬರೆಯುತ್ತಿರುವೆ. ಆದರೆ ಅವಳನ್ನು ಇನ್ನು ಕಾಣುವ ಯೋಗವೆಲ್ಲಿಯದು? ಇಬ್ಬರ ಹಾದಿಗಳೂ ಬೇರೆಯಾದವು. ಈ ಮುಂತಾದ ಯೋಚನೆಯಿಂದ ಮೊದಲಿನ ಉತ್ತರವನ್ನೂ ಬರೆದಿದ್ದನು. ಈಗ ಎರಡನೆಯ ಉತ್ತರವನ್ನೂ ಬರೆದು ಹಾಕಿದನು. ಅದರಲ್ಲಿ ಅವಳಿಗೆ ಒಂದು ಸ್ಪಷ್ಟವಾದ ಎಚ್ಚರಿಕೆಯನ್ನು ತಿಳಿಸಿದನು: 'ಇನ್ನು ಮುಂದೆ ಪತ್ರ ಬರೆಯಬೇಡ, ನನ್ನಿಂದ ಉತ್ತರವನ್ನು ಅಪೇಕ್ಷಿಸಬೇಡ' ಎಂದು. ತಾನು ಉತ್ತಮವಾಗಿ

ಅಭ್ಯಾಸಿಸಬೇಕೆಂದೂ ಪರೀಕ್ಷೆಯಲ್ಲಿ ಮೇಲಾದ ರೀತಿಯಲ್ಲಿ ಪಾಸಾಗಬೇಕೆಂದೂ ಅವಳಿಗೆ ಸಹ ಅನಿಸುವುದರಿಂದ ಈ ಎಚ್ಚರಿಕೆಯನ್ನು ಸರಿಯಾಗಿ ತಿಳಕೊಂಡು ಅದರಂತೆ ಅವಳು ನಡೆಯುವವಳೆಂದು ಅವನು ನಂಬಿದನು.

ಹಿಂದುಸ್ಥಾನದ ತುಂಬೆಲ್ಲ ಭೂಮಿಗತವಾದ ರಾಜಕೀಯ ಚಳವಳಿ ಕಳೆದ ಆಗಸ್ಟದಿಂದ ಅಂತರ್ವಾಹಿನಿಯಾಗಿ ಅವ್ಯಾಹತವಾಗಿ ನಡೆದಿತ್ತು. ಅದರ ಅದ್ಭುತ ಸಂಘಟನೆ ಕೆಲವು ಕಡೆ ಪ್ರತಿಸರಕಾರಗಳನ್ನು ನಡಸಲು ಸಮರ್ಥ ವಾಗಿತ್ತು. ಅದರ ಮುಂದಾಳುಗಳೂ ಕೆಲಸಗಾರರೂ ಆಳರಸರ ಕೈಗೆ ಹತ್ತ ದಂತೆ ಹಲವಾರು ವೇಷದಲ್ಲಿ ಅಲೆಯುತ್ತಿದ್ದರು, ಸಾವಿನ ಬಾಯಲ್ಲಿದ್ದರೂ ಸಾವಿಗೆ ಹೆದರದ ಧೀರರಾಗಿ ಸಾಹಸದ ಕೃತಿಗಳನ್ನು ಎಸಗುತ್ತಿದ್ದರು. ನೀರೊಳಗೆ ನುಸುಳುವ ಸಬ್‌ಮರೀನು ಪ್ರಚಂಡವಾದ ವೈರಿ ಹಡಗುಗಳನ್ನು ಮುಳುಗಿಸುವಂತೆ ಈ ಭೂಮಿಗತ ಚಳವಳಿ ಗಾಡಿಗಳನ್ನು ಉರುಳಿಸುತ್ತಿತ್ತು, ನಿಲ್ದಾಣಗಳನ್ನೂ ಸರಕಾರಿ ಕಟ್ಟಡಗಳನ್ನೂ ಸುಡುತ್ತಿತ್ತು. ಇನ್ನೂ ಅನೇಕ ಶತಕೃತ್ಯಗಳನ್ನು ಮಾಡುತ್ತಿದ್ದಿತು. ಮುಂಬಯಿ ಈ ಸ್ವಾತಂತ್ರ್ಯ ಸಂಗ್ರಾ ಮದ ಗುಪ್ತ ಕೇಂದ್ರವಾಗಿತ್ತು. ಅಮೃತನಿಗೆ ಇದೆಲ್ಲ ಗೊತ್ತು. ಆದರೆ ಈ ಸಲ ಮಹಾ ಪ್ರತಿಜ್ಞೆಯೊಂದನ್ನು ಮಾಡಿ ಅವನು ಕಾಲೇಜಿನ ಕಟ್ಟೆಯೇರಿದ್ದನು. ಯಾವುದೇ ರಾಜಕೀಯ ವಿಷಯದಲ್ಲಿ ತಲೆಹಾಕುವಂತಿಲ್ಲ. ವರ್ತಮಾನ ಪತ್ರವನ್ನು ಮುಖ್ಯ ಸುದ್ದಿಗಳಿಗಾಗಿ ಒಂದೆರಡು ಮಿನಿಟು ಮಾತ್ರ ನೋಡಿ ಒಗೆಯಬೇಕು. ಕಾಲೇಜಿನ ಆವಾರದ ಹೊರಗೆ ಹೆಚ್ಚು ಹೋಗುವುದೇ ಬೇಡ. ಈ ರೀತಿ ಮನಸ್ಸಿನ ಸುತ್ತು ಒಂದು ಅಭೇದ್ಯ ಕೋಟೆಯನ್ನು ರಚಿಸಿಕೊಂಡು ಅವನು ಹೊರಟಿದ್ದನು. ಅದರಿಂದ ಜಗತ್ತಿನಲ್ಲಿ ಮಹಾ ಯುದ್ಧ ಜೋರಾಗಿ ನಡೆದರೂ ಭಾರತದಲ್ಲಿ ಸ್ವಾತಂತ್ರ್ಯಸಂಗ್ರಾಮ ಉರವಣಿಸಿ ದರೂ ಅವನ ಅಭ್ಯಾಸದ ಕೋಟೆಯೊಳಗೆ ಅದರ ಎಳ್ಳಷ್ಟು ಧ್ಯಾಸವು ಹೋಗಲಿಲ್ಲ. ಒಂದು ತಿಂಗಳವರೆಗೆ ಗೊತ್ತುಪಡಿಸಿದ್ದರಕಿಂತ ಸರಾಗವಾಗಿ ಅವನ ಅಭ್ಯಾಸ ಸಾಗಿತು. ಇದರಿಂದ ಇನ್ನು ನಿರ್ವಿಘ್ನವಾಗಿ ಎಲ್ಲವೂ ನಡೆಯುವು ದೆಂದೂ ಈ ವರ್ಷದ ಪರೀಕ್ಷೆಗೆ ಕೂತು ತಾನು ತೇರ್ಗಡೆ ಹೊಂದುವುದು ಖಂಡಿತವೆಂದೂ ಅವನು ಮನಗಂಡನು.

ಹೀಗಿರಲು ೧೯೪೩ ಆಗಸ್ಟ ೯ ನೇ ದಿನಾಂಕ ಬಂದಿತು. ಚಳವಳಿ ಆರಂಭ ವಾದ ಸುಮುಹೂರ್ತವೆಂದು ಈ ದಿನದ ಆಚರಣೆ ನಾಡಿನ ತುಂಬ ಅನೇಕ ಬಗೆ

ಯಲ್ಲಿ ಆಯಿತು. ಮೆರವಣಿಗೆಗಳು, ಅಶ್ರುವಾಯುಗಳು, ಲಾಠೀಪ್ರಹಾರಗಳು, ಸೆರೆಮನೆಯ ಆತಿಥ್ಯಗಳು, ಸಾವಿನ ಮನೆಯ ಔತಣಗಳು ಒಂದು ದಿನ ಮಾತ್ರದಲ್ಲಿ ಸಂಭವಿಸಿದವು. ಶಾಲೆ-ಕಾಲೇಜಿನ ಹುಡುಗರು ಹರತಾಳ ಪಾಲಿಸಿದರು; ಸಭೆಸೇರಿದ್ದರು, ಸರಕಾರವನ್ನು ಧಿಕ್ಕರಿಸಿದರು, 'ರಾಷ್ಟ್ರೀಯ ತ್ರಿವರ್ಣಧ್ವಜವನ್ನೇರಿಸಿ 'ಝೇಂಡಾ ಊಂಚಾ ರಹೇ ಹಮಾರಾ' ಗೀತವನ್ನು ಹಾಡಿ 'ವಂದೇ ಮಾತರಂ' ದಿಂದ ಮುಗಿಸಿದರು. ಈ ಘಟನೆ ಅಮೃತನ ಕಾಲೇಜಿನಲ್ಲಿಯೂ ನಡೆಯದ್ದೇ ಇರುವುದೇ ? ಅದರ ಮುನ್ನಾದಿನ ತಾನೇನು ಮಾಡಬೇಕೆಂದು ಅಮೃತ್ನು ಶಾಂತವಾಗಿ ಕುಳಿತು ಪಾಟೀಲನೊಡನೆ ಆಲೋಚಿಸಿದನು. ಇಬ್ಬರೂ ಕಾಲೇಜಿಗೆ ಹೋಗದೆ ಕೋಣೆಯಲ್ಲಿದ್ದು ತಮ್ಮ ಮೂಕ ಸಹಾನುಭೂತಿಯನ್ನು ತೋರಬೇಕೆಂದೂ ಹೆಚ್ಚಿನ ಉದ್ದ ನೀರಿಗೆ ಹೋಗಬಾರದೆಂದೂ ನಿಶ್ಚಯಿಸಿದರು. ಆದರೆ ಮರುದಿನ ಕಾಲೇಜು ಸುರುವಾಗುವ ಹೊತ್ತಿಗೆ ವಿದ್ಯಾರ್ಥಿಗಳೆಲ್ಲ ಕ್ಲಾಸಿಗೆ ಹೋಗದೆ ವಸತಿಗೃಹದ ಮುಂದೆ ನಿಂತು ರಾಷ್ಟ್ರೀಯ ಘೋಷಣೆಗಳನ್ನು ನಡಸಿದರು. ಆ ಗುಂಪಿನಲ್ಲಿ ಅಮೃತನಿರಲಿಲ್ಲ. ಎಲ್ಲರಿಗೂ ಅಚ್ಚರಿಯಾಯಿತು. ಆಯಿತು; ಎಲ್ಲರೂ ಕೂಡಿ 'ಅಮೃತ್, ಅಮೃತ್' ಎಂದು ಒಂದೇಸವನೆ ಕೂಗಹತ್ತಿದರು. ಅವನು ಕೋಣೆಯಲ್ಲಿ ಬಾಗಿಲು ಹಾಕಿ ಕೂತಿರುವನೆಂದು ಸುದ್ದಿ ಬಂತು. ಆಯಿತು; 'ಹೋದ ವರ್ಷದ ಶೂರ ಈ ವರ್ಷದ ಹೇಡಿ' ಎಂಬ ಘೋಷವಾಕ್ಯವನ್ನು ಸಾರುತ್ತ ಒಂದು ಗುಂಪು ಅವನ ಖೋಲಿಯ ಮುಂದೆ ನಿಂತು ಧಾಂದಲೆ ಹಾಕಹತ್ತಿತು. 'ಬಾಗಿಲು ತೆಗೆದು ಹೊರಗೆ ಬಾ' ಎಂದು ಕೆಲವರು ಕದವನ್ನು ಬಡಿಯಹತ್ತಿದರು. ಇಂಥದರಲ್ಲಿ ಅಭ್ಯಾಸ ಹೇಗೆ ಸಾಧ್ಯ? ಬಾಗಿಲು ತೆರೆದು ಅಮೃತ ಹೊರಬಂದ. ಎಲ್ಲರೂ ಕೇಕೆ ಹಾಕಿದರು, ಕುಣಿದರು. ತನ್ನದು ಕಡೆಯ ವರ್ಷದ ಅಭ್ಯಾಸವೆಂದೂ ದಯವಿಟ್ಟು ತನ್ನನ್ನು ಕ್ಷಮಿಸಬೇಕೆಂದೂ ಕೇಳಿಕೊಂಡನು. ತನಗೆ ಇದ್ದ ಸಹಾನುಭೂತಿಯನ್ನು ತಿಳಿಸಿದನು. 'ಅಚ್ಛಾ' ಎಂದು ಒಳ್ಳೆಯವರಿಬ್ಬರು ಮರಳಿದರು. ಉಳಿದ ಜಂಗುಳಿ ಕೇಳುವದೇ ? ಅವನ ಕೈಯಲ್ಲಿ ಕೈಹಾಕಿ ಎಳಕೊಂಡು ಅಂಗಳಕ್ಕೆ ಒಯ್ದಿತು. ಕೆಲವರು ಅವನ ಕೈಯಲ್ಲಿ ಧ್ವಜವೊಂದನ್ನು ಕೊಟ್ಟು ನಿಲ್ಲಿಸಿದರು. ಗೀತ-ಗಾಯನವಾಯಿತು, ಭಾಷಣವಾಯಿತು. ಅಮೃತನೂ ಮಾತಾಡಲೇಬೇಕೆಂದು ಎಲ್ಲರೂ ಕೂಗೆಬ್ಬಿಸಿದರು. ಅವನೆಷ್ಟು ಬೇಡವೆಂದರೂ ಕೇಳಲಿಲ್ಲ. 'ಮಾತಿನ ದಿವಸ ಮುಗಿದವು. ಕೃತಿಯ ಕಾಲ ಈಗ ಬಂದಿದೆ' ಎಂದು ನಾಲ್ಕು ಮಾತು

ಹೇಳಲೇಬೇಕಾಗಿ ಬಂದು ಅಮೃತ ಹೇಳಿದನು. ಎಲ್ಲ ಮುಗಿಸಿ ಕೋಣೆಗೆ ಬಂದು ಕೂಡಬೇಕಾದರೆ ಮಿಗಿಲಾಯಿತು. ಅಂದಿನ ಅಭ್ಯಾಸಕ್ಕೆ ಯಾವಾಗಲೋ ಅರದಾಳ ತಗಲಿತ್ತು. ಈ ಪ್ರಕರಣ ಅಲ್ಲಿಗೆ ಮುಗಿಯಲಿಲ್ಲ. ಎಲ್ಲ ವರದಿ ಪ್ರಿನ್ಸಿಪಾಲರಿಗೆ ಮರುದಿನ ಹೋಯಿತು. ಅಮೃತ ಮುಖ್ಯಪಾತ್ರ ವಹಿಸಿದನೆಂದೂ ಬಣ್ಣ ಬಳಿದು ಹೇಳಲಾಯಿತು. ಪ್ರಿನ್ಸಿಪಾಲರು ರೇಗಿದರು, ಅಮೃತನನ್ನು ಕರೆಕಳಿಸಿದರು. ಕೆಂಜಗದ ಮೊಗ ಮಾಡಿ 'ಸಿರೂರ, ಹೋದ ವರ್ಷದಿಂದ ನಾ ನೋಡತಿದ್ದೇನೆ. ನೀ ಚಳವಳಿಖೋರನಾಗಿ ಕಾಲೇಜಿನ ವಾತಾವರಣವನ್ನು ಕೆಡಿಸುತ್ತ ಬಂದಿರುವಿ. ಜೇಲಿಗೆ ಹೋಗಿ ಬಂದಿ. ಇಷ್ಟೆಲ್ಲ ಮಾಡಿದ್ದರೂ ನಿನಗೆ ಕಾಲೇಜ ಪ್ರವೇಶ ಕೊಟ್ಟರೆ ಮತ್ತೆ ಅದೇ ಉಪದ್ವ್ಯಾಪವನ್ನು ನಡಸಿರುವಿ. ನಿನ್ನ ಕಾಲೇಜಿನಿಂದ ಹೊರಗೆ ಹಾಕಿದ್ದೇನೆ. ಈಕ್ಷಣ ಹೊರಟು ಹೋಗು'. ಎಂದು ಒದರಿಕ್ಕೊಂಡರು, ಹುಕುಮು ಮಾಡಿದರು. ಅಮೃತನ ಮೈಯೆಲ್ಲ ಬೆವತಿತು. ತನ್ನ ದುರ್ದೈವ ಕ್ಷಣಿಕ ವಿಶ್ರಾಂತಿಯನ್ನು ತೀರಿಸಿ ಹೆಚ್ಚು ಚಟುವಟಿಕೆಯಿಂದ ಮತ್ತೆ ತಲೆಯೆತ್ತಿತೆಂದು ಅವನಿಗೆ ತೋರಿತು. ಆದರೂ ಧೈರ್ಯಗೆಡದೆ ನಡೆದ ಸಂಗತಿಯನ್ನೆಲ್ಲ ಹೇಳಿ ತನ್ನ ದೋಷವಿಲ್ಲವೆಂದು ತಿಳಿಸುವ ಯತ್ನ ಮಾಡಿದನು. ಇನ್ನೂ ರೌದ್ರ ಆವೇಶದಲ್ಲಿಯೇ ಇದ್ದ ಪ್ರಿನ್ಸಿಪಾಲರು ಅವನು ಹೇಳಿದ್ದೆಲ್ಲ ಸುಳ್ಳೆಂದು ಸಾಧಿಸಿದರು. ಬೇಕಾದರೆ ಎಲ್ಲ ವಿಚಾರಣೆ ನಡಸಿ ತಿಳಿದುಕೊಳ್ಳ ಬೇಕೆಂದು ಅಮೃತ ಬೇಡಿದನು. ಆಮೇಲೆ ತನ್ನ ತಪ್ಪಿದ್ದರೆ ಬೇಕಾದ ಶಿಕ್ಷೆಯನ್ನು ಕೊಡಬಹುದು ಎಂದನು. 'ಹೊರಡು, ಈಗಂತೂ ಇಲ್ಲಿಂದ ಹೊರಡು,' ಎಂದು ಸಾಹೇಬರು ಅವನನ್ನು ಕಳಿಸಿಕೊಟ್ಟರು. ತಲೆ ಶಾಂತವಾದ ಮೇಲೆ ಬೇರೆ ಕೆಲವು ವಿದ್ಯಾರ್ಥಿಗಳನ್ನು ಕರೆಸಿ ಕೇಳಿದರು. ಅಮೃತ ದಿಟವನ್ನೇ ಆಡಿದ ನೆಂದು ಅತ್ಯಂತ ಮವಾಳ ಹುಡುಗರ ಮಾತಿನಿಂದಲೂ ಅವರಿಗೆ ಮನವರಿಕೆ ಯಾಯಿತು. ಮರುದಿನ ಅವನನ್ನು ಕರೆಯಿಸಿ ತಮ್ಮ ಔದಾರ್ಯವನ್ನು ತೋರಿಸುವ ರೀತಿಯಲ್ಲಿ 'ಇದೊಂದು ಸಲ ನಿನ್ನನ್ನು ಕ್ಷಮಿಸಿರತೇನೆ. ಇನ್ನೊಮ್ಮೆ ಹೀಗೆ ಮಾಡಿದ್ದು ತಿಳಿದರೆ ಇಲ್ಲಿಂದ ನೀ ಹದ್ದುಪಾರೆಂದು ತಿಳಿ. ನಿನ್ನ ಅಭ್ಯಾಸದ ಹೊರತು ಇನ್ನೊಂದರ ಉಸಾಬರಿ ಮಾಡಬೇಡ' ಎಂದು ಬೋಧಿಸಿ ಕಳಿಸಿದರು. ಅಂತೂ ಈ ಪ್ರಕರಣ ಮುಗಿಯಿತೆಂದು ನಿಟ್ಟುಸಿರು ಬಿಟ್ಟು ಅಮೃತ ತನ್ನ ಕೋಣೆಯ ಕಡೆ ನಡೆದನು. ಆದರೆ ಇನ್ನೂ ಏನೇನು ಸಂಭವಿಸುವುದೋ ಎಂಬ ಚಿಂತೆ ಎದೆಗುದಿ ಈ ಸಂದರ್ಭದಿಂದ ಅವನ ಮನದಲ್ಲಿ

ಕಾಲಿಟ್ಟಿತು.

ಎಂಟು ಹತ್ತು ದಿನಗಳು ಅಡೆತಡೆಯಿಲ್ಲದೆ ಉರುಳಿದವು. ಅಮೃತನಿಗೆ ತನ್ನ ಗಾಬರಿಯೆಲ್ಲ ನಿರಾಧಾರವೆಂದು ಅನಿಸಿತು. ಎಲ್ಲರೂ ತನಗೆ ಅನುಕೂಲರಾಗಿ ನಡೆಯುತ್ತಾರೆ. ನಿತ್ಯಕ್ರಮಕ್ಕೆ ಎಲ್ಲಿಯೂ ಭಂಗವಿಲ್ಲ. ಹಿಂದೆ ನಡೆದದ್ದು ಹಳೆಯ ಕತೆಯಾಯಿತು. ಇನ್ನು ಮುಂದಿನ ಆಗಸ್ಟ ೯ ಬರುವುದರಲ್ಲಿ ತಾನು ಪರೀಕ್ಷೆ ಪಾಸಾಗಿ ಡಾಕ್ಟರ ಆಗಿ ಬಿಡುವವನು. ಹೀಗೆ ಅವನಲ್ಲಿ ಆಶಾವಾದವು ಪ್ರಬಲಿಸಿದಾಗ ಆಗಸ್ಟ ೨೦ ರ ಸುಮಾರಿಗೆ ದಿನಪತ್ರಿಕೆಯ ಮೇಲ್ಪುಟದಲ್ಲಿ ಒಂದು ಹೃದಯವಿದಾರಕವಾದ ಸುದ್ದಿ ಮೊಟ್ಟಮೊದಲನೆಯ ಸಲ ಪ್ರಕಟವಾಯಿತು: 'ಬಂಗಾಲದಲ್ಲಿ ಭೀಕರವಾದ ಬರಗಾಲ. ಅಲ್ಲಿ ಲಕ್ಷಾಂತರ ಜನರು ಹೊಟ್ಟೆಗಿಲ್ಲದೆ ಸಾಯುತ್ತಿರುವರು' ಎಂದು. ಈ ಸುದ್ದಿ ಅಮೃತನ ಗಮನವನ್ನೆಳೆಯಿತು. ಅದನ್ನೋದಿದನು. ಹೆಚ್ಚು ವಿವರಗಳನ್ನು ಕೊಟ್ಟಿರಲಿಲ್ಲ. ತಲೆಕಟ್ಟಿನಲ್ಲಿ ದಪ್ಪಕ್ಷರದಲ್ಲಿ ಇದ್ದುದನ್ನೇ ಒಂದೆರಡು ವಾಕ್ಯದಲ್ಲಿ ಬರೆಯಲಾಗಿತ್ತು. ದಿನದ ವಾಡಿಕೆಯಂತೆ ಸರಸರನೆ ಎಲ್ಲ ಪಾನುಗಳನ್ನು ತಿರುವಿ ದೈನಿಕವನ್ನು ಕೆಳಗಿಟ್ಟು ತನ್ನ ಅಭ್ಯಾಸಕ್ಕೆ ಕುಳಿತನು. ಓದು ಸ್ವಲ್ಪ ಸಾಗಿತು. ಆದರೆ ಮನಸ್ಸು ಆ ಸುದ್ದಿಯ ಕಡೆಗೆ ಅವನನ್ನು ಎಳೆಯುತ್ತಿತ್ತು. ಬಂಗಾಲದಲ್ಲಿ ಬರಗಾಲವೆಂದರೇನು, ಮೃತ್ಯುವಿನ ಸಂಹಾರ ಕಾರ್ಯವೆಂಥದು ಎಂಬುದನ್ನು ಅವನು ಕೇಳಿ ಮಾತ್ರವಲ್ಲ ಕಂಡು ಅನುಭವಿಸಿದ್ದನು. ಅದರ ಬಗೆಗೆ ಅವನ ಉತ್ಕಂಠೆಯೆಂದರೆ ನೆರೆಹೊರೆಯ ಮನೆಯಲ್ಲಿ ಆದ ಆಪತ್ತಿಯ ವಿಷಯದಲ್ಲಿ ಎಷ್ಟಿರಬೇಕೋ ಅಷ್ಟು ಹೆಚ್ಚಾಗಿತ್ತು. ತಾನೇನು ಮಾಡದಿದ್ದರೂ ಅದೇನಿದೆ ಎಂಬುದನ್ನು ಅರಿತುಕೊಳ್ಳಬೇಕೆಂದು ಬಯಸಿದನು. ಅಭ್ಯಾಸದ ಓದು ನಸುನಿಂತಿತು. ಮತ್ತೆ ಪತ್ರಿಕೆಯನ್ನು ಕೈಯಲ್ಲಿ ತಗೊಂಡು ಮೊದಲಿನಿಂದ ಕೊನೆಯವರೆಗೆ ಎಲ್ಲ 'ಸ್ತಂಭ'ಗಳನ್ನು ನಿರುಕಿಸಿ ನೋಡಿದನು. ಆ ಸುದ್ದಿಯ ತುಣುಕಿನ ಹೊರತು ಇನ್ನೇನೂ ಇರಲಿಲ್ಲ. ಅವನಿಗೆ ಹೆಚ್ಚು ಮಾಹಿತಿ ಸಿಗಲಿಲ್ಲ. ಹಾಗಾದರೆ ಇದು ಅತಿಶಯೋಕ್ತಿಯ ಪ್ರಚಾರ ಪದ್ಧತಿಯಿರಬಹುದೇ ? ಎಂದು ಯೋಚಿಸಿದನು. ಬರಗಾಲದ ಲಕ್ಷಣಗಳು ಅವನು ಅಲ್ಲಿ ಇದ್ದಾಗಿನಿಂದಲೂ ತೋರುತ್ತಿದ್ದವು. ವೀಣೆ ಬಾಗಿಲುಕೋಟೆಗೆ ಬಂದಾಗ ಅವು ಇನ್ನೂ ಸ್ಪಷ್ಟವಾಗಿ ಪ್ರಾಂತದ ತುಂಬೆಲ್ಲ ವ್ಯಾಪಿಸುತ್ತಿರುವವೆಂಬುದನ್ನು ಅವಳು ತಿಳಿಸಿದ್ದಳು. ಈಗ ಎಲ್ಲಾ ನಿಕರಕ್ಕೆ ಬಂತೇ ? ಎಂದು ಏನೇನೋ ಚಿತ್ರಗಳನ್ನು

ಕಲ್ಪಿಸಿ ಅವನು ಅಸ್ವಸ್ಥನಾದನು. ಅಂದು ಬೆಳಗಿನ ಅಭ್ಯಾಸ ಅಳದಕ್ಕಿಯಾಗಿ ನಡೆಯಿತು.

ಆಮೇಲೆ ಎರಡು ಮೂರು ದಿನಕ್ಕೊಮ್ಮೆ ಕಲಕತ್ತೆಯ ಸುದ್ದಿಗಳು ಪತ್ರಿಕೆಗಳಲ್ಲಿ ಬರತೊಡಗಿದವು. ಆ ಮಹಾನಗರದ ಬೀದಿಗಳಲ್ಲಿ ಅನ್ನಾನ್ನ ಗತಿಕರು ಗುಂಪುಗುಂಪಾಗಿ ತಿರುಗುತ್ತಿರುವರೆಂದೂ ಅವರಲ್ಲಿ ಕೆಲವರು ಹೊಟ್ಟೆ ಗಿಲ್ಲದೆ ಬಳಲಿ ಮೂರ್ಛೆ ಹೊಂದಿ ಬೀಳುತ್ತಿರುವರೆಂದೂ ಸುದ್ದಿ ಬಂದಿತ್ತು. ತರುವಾಯ ಹಸಿವೆಯ ಮಾರಿಗೆ ಆಹುತಿಯಾಗಿ ಇಂದು ಇಷ್ಟು ನಾಳೆ ಇಷ್ಟು ಎಂಬ ಸಾವಿನ ಸುದ್ದಿಗಳೂ ವರ್ಣನೆಗಳೂ ಬರತೊಡಗಿದವು. ಒಂದೊಂದಾಗಿ ಎದೆಯೊಡೆಯುವ ಚಿತ್ರಗಳನ್ನೂ ಪ್ರಕಟಗೊಳಿಸಹತ್ತಿದರು. ದಿನದಿನವೂ ಈ ಆಘಾತಗಳಿಗೆ ಒಳಗಾಗಿ ಅಮೃತನು ವ್ಯಥೆಪಡುತ್ತಿದ್ದನು. ಆದರೆ ತನ್ನ ಯಾವ ಕಾರ್ಯಕ್ರಮಕ್ಕೂ ವ್ಯತ್ಯಯವನ್ನು ತಂದುಕೊಳ್ಳಲಿಲ್ಲ. ಆಸ್ಪತ್ರೆಗೆ ಹೋದಾಗ ಆ ಕೇಸು ಕೈಬಿಟ್ಟಿತು, ಇದು ಹೋಪ್‌ಲೆಸ್ ಆಯ್ತೆಂದು ದಿನಾಲು ಕೇಳುತ್ತಿರುವುದಿಲ್ಲವೇ ? ಆ ಪೈಕಿ ಇದೊಂದು ಎಂಬಂತೆ ಬಹಳ ಪ್ರಯಾಸದಿಂದ ತನ್ನ ಭಾವನೆಗಳನ್ನು ಒತ್ತಿಕ್ಕಿ ಹೊರತೋರಿಕೆಗೆ ಏನೂ ಆಗದಿದ್ದವನಂತೆ ಸಾಗಿದನು. ಆದರೆ ಅವನೊಬ್ಬನೇ ಕುಳಿತು ಓದುತ್ತಿರುವಾಗ ಪತ್ರಿಕೆಯಲ್ಲಿ ಕಣ್ಣಿಗೆ ಬಿದ್ದ ಆ ಘೋರಚಿತ್ರಗಳು ಪುಸ್ತಕದ ಪುಟಗಳಲ್ಲಿ ಮೂಡಿದಂತಾಗಿ ಅವನ ಅಂತಃಕರಣದ ತಂಗೊಳವನ್ನು ಕದಡುತ್ತಿದ್ದವು. ಅವುಗಳ ಬಗ್ಗೆ ಒಂದೆರಡು ಮಿನಿಟುಗಳವರೆಗೆ ಅನಿವಾರ್ಯವಾಗಿ ಅವನು ಆಲೋಚನೆ ಮಾಡುತ್ತಿದ್ದನು, ತಲೆ ಹಿಡಿದು ಕೂಡುತ್ತಿದ್ದನು. ಆಗುವದಾಗುತ್ತದೆ, ನಮ್ಮದು ನಾವು ನೋಡಿಕೊಳ್ಳಬೇಕೆಂಬ ಸ್ವಾರ್ಥಸಂಕಲ್ಪದಿಂದ ಮರಳಿ ಓದಿನಲ್ಲಿ ಮುಳುಗುತ್ತಿದ್ದನು. ಬೀದಿಯಲ್ಲಿ ನಮ್ಮ ಪಾಡಿಗೆ ನಾವು ಹೋಗುವಾಗ, ನಡೆದಾಡುವ ಹೆಣದಂತಿದ್ದು ಹೊಲಹೊಲಸು ಚಿಂದಿಗಳನ್ನು ಸುತ್ತಿಕೊಂಡು ತಿರುಗುವ ಒಬ್ಬ ತಿರುಕನನ್ನೋ ಬೀದಿಯ ಬದಿಯ ಮಲಮೂತ್ರದ ಜಾಗಗಳಲ್ಲಿಯೆ ವಸತಿ ಮಾಡಿದ ಗಲಿಚ್ಛ ಸಂಸಾರಗಳನ್ನೋ ನೋಡಿ ಏನು ಮಾಡುತ್ತೇವೆ ? ಏನೂ ಅನಿಸಿಕೊಳ್ಳದೆ ಹಾಗೇ ಹೋಗುತ್ತೇವೆ. ಬಹಳಾದರೆ ಒಂದು ಕ್ಷಣ ನೋಡಿ ಮರುಗಿ ಜೊತೆಯವರಿಗೆ ಬಣ್ಣಿಸಿ ಮುಂದೆ ಸಾಗುತ್ತೇವೆ. ಅಮೃತನು ಹಾಗೇ ಮಾಡಹತ್ತಿದನು. ಹಿಂದಿನ ಭಾವನಾವಶತೆಯಿಂದ ಅನುಭೋಗಿಸಿದ್ದೆಲ್ಲ ಅವನ ನೆನಪಿನಲ್ಲಿ ನಿಚ್ಚಳವಾಗಿತ್ತು. ಈ ಸಾರೆ ಅಂಥ ಹುಚ್ಚು ಹೊಳೆಗೆ ಇಂಬನ್ನು ಕೊಡಕೂಡದು ಎಂದೇ ಅವನ ನಿರ್ಧಾರವಾ

ಕಾಲಿಟ್ಟಿತು.

ಎಂಟು ಹತ್ತು ದಿನಗಳು ಅಡೆತಡೆಯಿಲ್ಲದೆ ಉರುಳಿದವು. ಅಮೃತನಿಗೆ ತನ್ನ ಗಾಬರಿಯೆಲ್ಲ ನಿರಾಧಾರವೆಂದು ಅನಿಸಿತು. ಎಲ್ಲರೂ ತನಗೆ ಅನುಕೂಲ ರಾಗಿ ನಡೆಯುತ್ತಾರೆ. ನಿತ್ಯಕ್ರಮಕ್ಕೆ ಎಲ್ಲಿಯೂ ಭಂಗವಿಲ್ಲ. ಹಿಂದೆ ನಡೆದದ್ದು ಹಳೆಯ ಕತೆಯಾಯಿತು. ಇನ್ನು ಮುಂದಿನ ಆಗಸ್ಟ ೯ ಬರುವುದರಲ್ಲಿ ತಾನು ಪರೀಕ್ಷೆ ಪಾಸಾಗಿ ಡಾಕ್ಟರ ಆಗಿ ಬಿಡುವವನು. ಹೀಗೆ ಅವನಲ್ಲಿ ಆಶಾವಾದವು ಪ್ರಬಲಿಸಿದಾಗ ಆಗಸ್ಟ ೨೦ ರ ಸುಮಾರಿಗೆ ದಿನಪತ್ರಿಕೆಯ ಮೇಲ್ಪುಟದಲ್ಲಿ ಒಂದು ಹೃದಯವಿದಾರಕವಾದ ಸುದ್ದಿ ಮೊಟ್ಟಮೊದಲನೆಯ ಸಲ ಪ್ರಕಟ ವಾಯಿತು : 'ಬಂಗಾಲದಲ್ಲಿ ಭೀಕರವಾದ ಬರಗಾಲ. ಅಲ್ಲಿ ಲಕ್ಷಾಂತರ ಜನರು ಹೊಟ್ಟೆಗಿಲ್ಲದೆ ಸಾಯುತ್ತಿರುವರು' ಎಂದು. ಈ ಸುದ್ದಿ ಅಮೃತನ ಗಮನ ವನ್ನೆಳೆಯಿತು. ಅದನ್ನೋದಿದನು. ಹೆಚ್ಚು ವಿವರಗಳನ್ನು ಕೊಟ್ಟಿರಲಿಲ್ಲ. ತಲೆ ಕಟ್ಟನಲ್ಲಿ ದಪ್ಪಕ್ಷರದಲ್ಲಿ ಇದ್ದುದನ್ನೇ ಒಂದೆರಡು ವಾಕ್ಯದಲ್ಲಿ ಬರೆಯಲಾಗಿತ್ತು. ದಿನದ ವಾಡಿಕೆಯಂತೆ ಸರಸರನೆ ಎಲ್ಲ ಪಾನುಗಳನ್ನು ತಿರುವಿ ದೈನಿಕವನ್ನು ಕೆಳಗಿಟ್ಟು ತನ್ನ ಅಭ್ಯಾಸಕ್ಕೆ ಕುಳಿತನು. ಓದು ಸ್ವಲ್ಪ ಸಾಗಿತು. ಆದರೆ ಮನಸ್ಸು ಆ ಸುದ್ದಿಯ ಕಡೆಗೆ ಅವನನ್ನು ಎಳೆಯುತ್ತಿತ್ತು. ಬಂಗಾಲದಲ್ಲಿ ಬರಗಾಲವೆಂದರೇನು, ಮೃತ್ಯುವಿನ ಸಂಹಾರ ಕಾರ್ಯವೆಂಥದು ಎಂಬುದನ್ನು ಅವನು ಕೇಳಿ ಮಾತ್ರವಲ್ಲ ಕಂಡು ಅನುಭವಿಸಿದ್ದನು. ಅದರ ಬಗೆಗೆ ಅವನ ಉತ್ಕಂಠೆಯೆಂದರೆ ನೆರೆಹೊರೆಯ ಮನೆಯಲ್ಲಿ ಆದ ಆಪತ್ತಿಯ ವಿಷಯದಲ್ಲಿ ಎಷ್ಟಿರಬೇಕೋ ಅಷ್ಟು ಹೆಚ್ಚಾಗಿತ್ತು. ತಾನೇನು ಮಾಡದಿದ್ದರೂ ಅದೇನಿದೆ ಎಂಬುದನ್ನು ಅರಿತುಕೊಳ್ಳಬೇಕೆಂದು ಬಯಸಿದನು. ಅಭ್ಯಾಸದ ಓದು ನಸುನಿಂತಿತು. ಮತ್ತೆ ಪತ್ರಿಕೆಯನ್ನು ಕೈಯಲ್ಲಿ ತಗೊಂಡು ಮೊದಲಿನಿಂದ ಕೊನೆಯವರೆಗೆ ಎಲ್ಲ 'ಸ್ತಂಭ'ಗಳನ್ನು ನಿರುಕಿಸಿ ನೋಡಿದನು. ಆ ಸುದ್ದಿಯ ತುಣುಕಿನ ಹೊರತು ಇನ್ನೇನೂ ಇರಲಿಲ್ಲ. ಅವನಿಗೆ ಹೆಚ್ಚು ಮಾಹಿತಿ ಸಿಗಲಿಲ್ಲ. ಹಾಗಾದರೆ ಇದು ಅತಿಶಯೋಕ್ತಿಯ ಪ್ರಚಾರ ಪದ್ಧತಿಯಿರಬಹುದೇ ? ಎಂದು ಯೋಚಿಸಿದನು. ಬರಗಾಲದ ಲಕ್ಷಣಗಳು ಅವನು ಅಲ್ಲಿ ಇದ್ದಾಗಿನಿಂದಲೂ ತೋರುತ್ತಿದ್ದವು. ವೀಣೆ ಬಾಗಿಲುಕೋಟೆಗೆ ಬಂದಾಗ ಅವು ಇನ್ನೂ ಸ್ಪಷ್ಟ ವಾಗಿ ಪ್ರಾಂತದ ತುಂಬೆಲ್ಲ ವ್ಯಾಪಿಸುತ್ತಿರುವವೆಂಬುದನ್ನು ಅವಳು ತಿಳಿಸಿದ್ದಳು. ಈಗ ಎಲ್ಲಾ ನಿಕರಕ್ಕೆ ಬಂತೇ ? ಎಂದು ಎದೆನಡುಗಿ ಏನೇನೊ ಚಿತ್ರಗಳನ್ನು

ಕಲ್ಪಿಸಿ ಅವನು ಅಸ್ವಸ್ಥನಾದನು. ಅಂದು ಬೆಳಗಿನ ಅಭ್ಯಾಸ ಅಳದಕ್ಕಿಯಾಗಿ ನಡೆಯಿತು.

ಆಮೇಲೆ ಎರಡು ಮೂರು ದಿನಕ್ಕೊಮ್ಮೆ ಕಲಕತ್ತೆಯ ಸುದ್ದಿಗಳು ಪತ್ರಿಕೆಗಳಲ್ಲಿ ಬರತೊಡಗಿದವು. ಆ ಮಹಾನಗರದ ಬೀದಿಗಳಲ್ಲಿ ಅನ್ನಾನ್ನ ಗತಿಕರು ಗುಂಪುಗುಂಪಾಗಿ ತಿರುಗುತ್ತಿರುವರೆಂದೂ ಅವರಲ್ಲಿ ಕೆಲವರು ಹೊಟ್ಟೆ ಗಿಲ್ಲದೆ ಬಳಲಿ ಮೂರ್ಛೆ ಹೊಂದಿ ಬೀಳುತ್ತಿರುವರೆಂದೂ ಸುದ್ದಿ ಬಂದಿತ್ತು. ತರುವಾಯ ಹಸಿವೆಯ ಮಾರಿಗೆ ಆಹುತಿಯಾಗಿ ಇಂದು ಇಷ್ಟು ನಾಳೆ ಇಷ್ಟು ಎಂಬ ಸಾವಿನ ಸುದ್ದಿಗಳೂ ವರ್ಣನೆಗಳೂ ಬರತೊಡಗಿದವು. ಒಂದೊಂದಾಗಿ ಎದೆಯೊಡೆಯುವ ಚಿತ್ರಗಳನ್ನೂ ಪ್ರಕಟಗೊಳಿಸಹತ್ತಿದರು. ದಿನದಿನವೂ ಈ ಆಘಾತಗಳಿಗೆ ಒಳಗಾಗಿ ಅಮೃತನು ವ್ಯಥೆಪಡುತ್ತಿದ್ದನು. ಆದರೆ ತನ್ನ ಯಾವ ಕಾರ್ಯಕ್ರಮಕ್ಕೂ ವ್ಯತ್ಯಯವನ್ನು ತಂದುಕೊಳ್ಳಲಿಲ್ಲ. ಆಸ್ಪತ್ರೆಗೆ ಹೋದಾಗ ಆ ಕೇಸು ಕೈಬಿಟ್ಟಿತು, ಇದು ಹೋಪ್‌ಲೆಸ್ ಆಯ್ತೆಂದು ದಿನಾಲು ಕೇಳುತ್ತಿ ರುವುದಿಲ್ಲವೇ ? ಆ ಪೈಕಿ ಇದೊಂದು ಎಂಬಂತೆ ಬಹಳ ಪ್ರಯಾಸದಿಂದ ತನ್ನ ಭಾವನೆಗಳನ್ನು ಒತ್ತಿಕ್ಕಿ ಹೊರತೋರಿಕೆಗೆ ಏನೂ ಆಗದಿದ್ದವನಂತೆ ಸಾಗಿದನು. ಆದರೆ ಅವನೊಬ್ಬನೇ ಕುಳಿತು ಓದುತ್ತಿರುವಾಗ ಪತ್ರಿಕೆಯಲ್ಲಿ ಕಣ್ಣಿಗೆ ಬಿದ್ದ ಆ ಘೋರಚಿತ್ರಗಳು ಪುಸ್ತಕದ ಪುಟಗಳಲ್ಲಿ ಮೂಡಿದಂತಾಗಿ ಅವನ ಅಂತಃಕರಣದ ತಂಗೊಳವನ್ನು ಕದಡುತ್ತಿದ್ದವು. ಅವುಗಳ ಬಗ್ಗೆ ಒಂದೆರಡು ಮಿನಿಟುಗಳವರೆಗೆ ಅನಿವಾರ್ಯವಾಗಿ ಅವನು ಆಲೋಚನೆ ಮಾಡುತ್ತಿದ್ದನು, ತಲೆ ಹಿಡಿದು ಕೂಡು ತ್ತಿದ್ದನು. ಆಗುವದಾಗುತ್ತದೆ, ನಮ್ಮದು ನಾವು ನೋಡಿಕೊಳ್ಳಬೇಕೆಂಬ ಸ್ವಾರ್ಥಸಂಕಲ್ಪದಿಂದ ಮರಳಿ ಓದಿನಲ್ಲಿ ಮುಳುಗುತ್ತಿದ್ದನು. ಬೀದಿಯಲ್ಲಿ ನಮ್ಮ ಪಾಡಿಗೆ ನಾವು ಹೋಗುವಾಗ, ನಡೆದಾಡುವ ಹೆಣದಂತಿದ್ದು ಹೊಲಹೊಲಸು ಚಿಂದಿಗಳನ್ನು ಸುತ್ತಿಕೊಂಡು ತಿರುಗುವ ಒಬ್ಬ ತಿರುಕನನ್ನೋ ಬೀದಿಯ ಬದಿಯ ಮಲಮೂತ್ರದ ಜಾಗಗಳಲ್ಲಿಯೆ ವಸತಿ ಮಾಡಿದ ಗಲಿಚ್ಛ ಸಂಸಾರಗಳನ್ನೋ ನೋಡಿ ಏನು ಮಾಡುತ್ತೇವೆ ? ಏನೂ ಅನಿಸಿಕೊಳ್ಳದೆ ಹಾಗೇ ಹೋಗುತ್ತೇವೆ. ಬಹಳಾದರೆ ಒಂದು ಕ್ಷಣ ನೋಡಿ ಮರುಗಿ ಜೊತೆಯವರಿಗೆ ಬಣ್ಣಿಸಿ ಮುಂದೆ ಸಾಗುತ್ತೇವೆ. ಅಮೃತನು ಹಾಗೇ ಮಾಡಹತ್ತಿದನು. ಹಿಂದಿನ ಭಾವನಾವಶತೆ ಯಿಂದ ಅನುಭೋಗಿಸಿದ್ದೆಲ್ಲ ಅವನ ನೆನಪಿನಲ್ಲಿ ನಿಚ್ಚಳವಾಗಿತ್ತು. ಈ ಸಾರೆ ಅಂಥ ಹುಚ್ಚು ಹೊಳೆಗೆ ಇಂಬನ್ನು ಕೊಡಕೂಡದು ಎಂದೇ ಅವನ ನಿರ್ಧಾರವಾ

ಗಿತ್ತು. ಅಗಸ್ಟ ತಿಂಗಳ ಕೊನೆ ಬಂದಿತು. ಮನೆಯಿಂದ ಕ್ಷೇಮ ಸಮಾಚಾರದ ಪತ್ರವೊಂದು ಬಂತು. ಅವನ ಅಭ್ಯಾಸವೆಲ್ಲ ಸುರಳೀತವಾಗಿ ನಡೆದಿರುವದೆಂದು ತಿಳಿದು ಶಂಭುರಾಯರು ಹಿಗ್ಗಿ ಹಪ್ಪಳವಾಗಿದ್ದರು. ಪತ್ರದಲ್ಲಿ ಒಂದೆರಡು ಸಂತೋಷದ ವರ್ತಮಾನಗಳನ್ನೂ ತಿಳಿಸಿದ್ದರು. ಸುಂದರಾ ಗಂಡನ ಮನೆಗೆ ಹೋಗಿ ಅವನ ಪ್ರೀತಿಯನ್ನು ಗಳಿಸಿ ಆರಾಮವಾಗಿ ಇರುವಳಂತೆ. ಆಕೆಯ ಗಂಡನು ಅಹಮದನಗರ ಸ್ಟೇಶನ್ನಿನಲ್ಲಿ ಪಾರ್ಸಲ್ ಕ್ಲಾರ್ಕ ಆಗಿರುವನೆಂದೂ ಅಲ್ಲಿಗೊಮ್ಮೆ ತಂಗಿಯ ಭೆಟ್ಟಿಗೆ ಹೋಗಿ ಬರಬೇಕೆಂದೂ ಸೂಚನೆಯಿತ್ತು. ಅಂದರೆ ಬೇಸರ ಬಂದಾಗ ಎಂಬ ನಿಬಂಧನೆಯೂ ಇತ್ತು. ಅಮೃತನ ಹೆಂಡತಿ ಕಾಂತಾಬಾಯಿ ಮೈನೆರೆದು ಎಲ್ಲ ಶಾಸ್ತ್ರೋಕ್ತ ವಿಧಿಗಳು ನೆರವೇರಿದ್ದವೆಂದೂ ಅವನು ದೀವಳಿಗೆಯ ಸೂಟಿಗೆ ಬಂದಾಗ ಒಪ್ಪಿಗೆ ಕೊಟ್ಟರೆ ಫಲಶೋಭನವನ್ನು ಮುಗಿಸಿಬಿಡಬೇಕೆಂದು ಮಾವಂದಿರಾದ ಮಾಧವರಾಯರು ಅಪೇಕ್ಷಿಸುತ್ತಿರುವರೆಂದೂ ಕಾಣಿಸಿತ್ತು. ಸುಂದರಾನ ವಿಷಯಕ ಸುದ್ದಿ ಅವನಿಗೆ ಸಮಾಧಾನ ಕೊಟ್ಟಿತು. ಆದರೆ ತನ್ನ ಹೆಂಡತಿಯ ಸುದ್ದಿಯಿಂದ ಅವನು ಬಹಳೇ ತ್ರಸ್ತನಾದನು. ಅಂದಿನ ಅಭ್ಯಾಸ ಮೂಲೆಗುಂಪಾಯಿತ್ತು. ಬೇಡಾದ ಹೆಂಡತಿಯೊಡನೆ ಸಂಸಾರ ಮಾಡಬೇಕಾದ ಸಂದರ್ಭವು ಬಂಗಾಲದ ಬರಗಾಲದಷ್ಟೇ ಅವನಿಗೆ ಭಯಾನಕವಾಗಿ ತೋರಿತು. ಎರಡನ್ನೂ ತಪ್ಪಿಸುವಂತಿಲ್ಲ. ಎರಡನ್ನೂ ಇದಿರಿಸಬೇಕು. ಅದೆಷ್ಟೋ ವಿಚಾರ ಮಾಡಿ ಮಾಡಿ ಕಾದು ನಿದ್ದೆಯಿಲ್ಲದೆ ಮೊದಲನೆಯ ಇರುಳನ್ನು ಕಳೆದನು. ಮತ್ತೆ ಪ್ರಯತ್ನಪೂರ್ವಕವಾದ ಹೊಸ ನಿಗ್ರಹದಿಂದ ತನ್ನ ದಿನಚರಿಯಲ್ಲಿ ಲೀನನಾದನು. ತಂದೆಗೆ ಮಾತ್ರ ಜೋರಾದ ಉತ್ತರ ಬರೆದು ಹಾಕಿದನು. ಮಾವನ ಮನೆಯ ಕಡೆಯ ಸುದ್ದಿಯನ್ನು ತನಗೆ ಪರೀಕ್ಷೆ ಮುಗಿಯುವವರೆಗೆ ತಿಳಿಸಬಾರದೆಂದೂ ದೀವಳಿಗೆಸೂಟಿಗೆ ತಾ ಬರುವುದು ಸಾಧ್ಯವಾಗಲಿಕ್ಕಿಲ್ಲವೆಂದೂ ಸ್ಪಷ್ಟವಾಗಿ ಅದರಲ್ಲಿ ತಿಳಿಸಿದ್ದನು.

ಸಪ್ಟಂಬರ ಮೊದಲಿಗೆ ಮುಂಬಯಿಯಲ್ಲಿ ಪತ್ರಿಕೆಗಳಲ್ಲಿ ವಿದ್ಯಾರ್ಥಿಗಳಲ್ಲಿ ಬಂಗಾಲ ದುರ್ಭಿಕ್ಷದ ಸುದ್ದಿಯೆ ಸುದ್ದಿಯಾಯಿತು. ವೈದ್ಯಕೀಯ ಪಥಕಗಳು ಕಲಕತ್ತೆಗೂ ಇತರ ಸ್ಥಳಗಳಿಗೂ ಧಾವಿಸಿದುವು. ಎಲ್ಲ ಪಕ್ಷ ಪಂಗಡಗಳು ನಿಧಿ ಸಂಗ್ರಹವನ್ನು ನಡಸಿದುವು, ತಮ್ಮ ಜನಸಹಾಯ ಧನಸಹಾಯವನ್ನು ಕಳಿಸಿ ಪರಿಹಾರಕೇಂದ್ರಗಳನ್ನು ಸ್ಥಾಪಿಸತೊಡಗಿದುವು. ಕೂಲಿಕಾರ ರೈತರ ಕೈವಾರಿ

ಗಳಾದ ಕಮ್ಯುನಿಸ್ಟರು, ಹಿಂದುಗಳನ್ನುಳಿಸಿಕೊಳ್ಳಲು ಹಾತೊರೆಯುವ ಮಹಾ ಸಭೆಯವರು, ಮುಸಲಾನ್ಮರನ್ನು ಸಾವಿನ ದವಡೆಯಿಂದ ತಪ್ಪಿಸಬೇಕೆಂದು ಲೀಗಿನವರು—ಈ ರೀತಿ ಎಲ್ಲರೂ ಮೃತ್ಯುವಿನ ಕೂಡ ಕುಸ್ತಿಗಾಗಿ ಬಂಗಾಲದ ಕಣದಲ್ಲಿ ಇಳಿದರು. ಈ ಗೆಲವು ತಂತಮ್ಮ ಪಕ್ಷಗಳಿಗೆ ಬಲವನ್ನು ಕೊಡುವುದೆಂಬ ಸ್ವಾರ್ಥಬುದ್ಧಿ ಇದರಲ್ಲಿ ಕಡಿಮೆ ಆಗಿರಲಿಲ್ಲ. ಜೊತೆಗೆ ರಾಮಕೃಷ್ಣ ಮಠದಂಥ ಜಾತಿಮತ ಭೇದವೆಣಿಸದ ಸಕಲಮಾನವ್ಯದ ಸೇವೆಯಲ್ಲಿ ತೊಡಗಿದ ಸಂಸ್ಥೆಗಳು ಕಾರ್ಯಪ್ರವೃತ್ತವಾದವು. ಈ ಹೊಸ ಪರಿಸ್ಥಿತಿಯಲ್ಲಿ ಅಮೃತನ ಅಭೇದ್ಯ ಕೋಟೆ ತಳದಲ್ಲಿಯೇ ಕ್ಷಣಕ್ಷಣಕ್ಕೆ ಸಡಿಲುತ್ತಿತ್ತು. ಮೇಲೆ ಮಾತ್ರ ಎಲ್ಲ ಸುರಕ್ಷಿತವಾಗಿದ್ದಂತೆ ಕಾಣುತ್ತಿತ್ತು. ಪಾಟೀಲ ಶಾಂತಿನಾಥನಿಗೆ ಅವನೇಕೊ ಉದ್ವಿಗ್ನನಾಗಿರುವನೆಂಬುದು ತಿಳಿಯಿತು. ಒಂದೆರಡು ಸಲ ಅವನನ್ನು ಕೇಳಿ ನೋಡಿದನು. 'ಏನಿಲ್ಲ, ಎಲ್ಲಾ ನೆಟ್ಟಗೆ ನಡದದ' ಎಂದು ಉತ್ತರ ಬಂತು. ಕೆಲವು ಸಲ ಊಟಕ್ಕೆ ಕುಳಿತಾಗ ಉಣ್ಣುವುದನ್ನು ನಿಲ್ಲಿಸಿ ಒಂದೆರಡು ನಿಮಿಷ ಅಮೃತನು ಸುಮ್ಮನೆ ಕೂಡುತ್ತಿದ್ದನು. ಅದು ಶಾಂತಿಯ ಕಣ್ಣಿಗೆ ಬೀಳಲು ಹೀಗೇಕೆ ಎಂದು ಅವನು ಕೇಳುವನು. 'ಏನೂ ಇಲ್ಲ, ಏನೋ ನೆನಪಾಯಿತು' ಎಂಬುದಾಗಿ ಹಾರಿಕೆಯ ಉತ್ತರ ಬರುತ್ತಿತ್ತು. ಅಭ್ಯಾಸದ ಧ್ಯಾಸವಿರಬೇಕೆಂದು ಶಾಂತಿ ಸುಮ್ಮನಾಗುವನು.

ಈ ಹೊತ್ತಿಗೆ ವೀಣೆಯಿಂದ ಬ್ರರಬಾರದ್ದ ಮಾರೋಲೆ ಬಂದಿತು. ಬರೆಯು ಬೇಡವೆಂದು ಅವನೆಷ್ಟು ಬಜಾಯಿಸಿದ್ದರೂ ಅವಳು ಕೇಳಲಿಲ್ಲ. ಅದು ಸಾಕಷ್ಟು ದೊಡ್ಡದಾಗಿಯೇ ಇತ್ತು. ಏನಾದ್ದರೂ ಹುಚ್ಚುಭಾವನೆ ಹರಿಯಿಸಿದ ಮಾತಿನ ಮಾಲೆಯಿರಬೇಕೆಂದು ಅವನು ಮೊದಲು ಓದಲೇ ಇಲ್ಲ. ತನ್ನ ಮಾತು ಕೇಳದೆ ಬರೆದಳಲ್ಲ ಎಂಬ ಸಿಟ್ಟೂ ಇತ್ತು, ಹಾಗೆ ಅದನ್ನು ಡ್ರಾಅರಿನಲ್ಲಿ ತೆಗೆದಿಟ್ಟನು. ಸಂಜೆಯವರೆಗೆ ಕಾಲೇಜಿನ ಓಡಾಟವಾಯಿತು. ರಾತ್ರಿ ಊಟವಾದ ಮೇಲೆ ಓದಲಿಕ್ಕೆ ಕುಳಿತನು. ಒಂದರ್ಧ ತಾಸಾದ ಮೇಲೆ ತಟ್ಟನೆ ಆ ಪತ್ರದ ನೆನಪಾಯಿತು. ಏನು ಬರೆದಿರುವಳೋ ಏನೋ, ಒಮ್ಮೆ ಓದಿದರೆ ತಪ್ಪೇನು? ಎಂದು ಮನಸ್ಸು ಜಗ್ಗುತ್ತಿತ್ತು. ಅವಳ ಪತ್ರವನ್ನು ಓದುವುದೆಂದರೆ ಭಾವಪೂರ್ಣವಾದ ಹೃದಯಸಂವಾದಾಲಾಪವನ್ನು ಕೇಳಿದಂತೆ ಎಂದು ಅದಕ್ಕೆ ಹಸಿದ ಹೃದಯ ಅವನ ಆತುರವನ್ನು ಹೆಚ್ಚಿಸಿತ್ತು. ಆಯಿತು, ಪತ್ರವನ್ನು ಹೊರದೆಗೆದು ಓದಹತ್ತಿದನು. ಅಭ್ಯಾಸ ಕೆಲಹೊತ್ತು ತಡೆಯಿತು. 'ಪ್ರಿಯ ಅಮೃತ್' ಎಂದು ಸಂಬೋಧಿಸಿ

ಅವಳು ಪತ್ರವನ್ನು ಹೀಗೆ ಆರಂಭಿಸಿದ್ದಳು : 'ಇನ್ನು ಬರೆಯಬೇಡ, ಉತ್ತರ ಅಪೇಕ್ಷಿಸಬೇಡ ಎಂಬ ನಿನ್ನ ಆಜ್ಞೆ ಶಿರಸಾಮಾನ್ಯ. ಅದರಿಂದ ನಾ ಕೋಪಿಸಿ ಕೊಳ್ಳಲಿಲ್ಲ. ನಿನ್ನ ಓದು ನಿರಾತಂಕವಾಗಿ ಸಾಗಬೇಕೆಂಬುದು ನನಗೆ ಗೊತ್ತಿಲ್ಲವೇ ? ಆದರೆ ಬಹಳ ದಿನ ತಡೆದು ತಡೆದು, ನಿನಗೆ ನನ್ನ ವಿಷಯವೇ ನೇನೂ ಬರೆಯುವುದು ಇಲ್ಲದೆ, ಬೇರೆ ವಿಷಯವೊಂದನ್ನು ಬರೆಯದೆ ಇರಲಾರದೆ ಬರೆಯುತ್ತಿದ್ದೇನೆ. ಅದಕ್ಕಾಗಿ ಕ್ಷಮಿಸಿ ಇದನ್ನು ಮುಂದೆ ಓದು.' ಇಷ್ಟು ಓದಿದೊಡನೆ ಅಮೃತನ ಲವಲವಿಕೆ ಕೆರಳಿತು. ತನ್ನ ವಿಷಯವೇನೂ ಇಲ್ಲ, ಬೇರೆ ವಿಷಯ ಎಂದಿರುವಳಲ್ಲ, ಅದೇನಿರಬಹುದು ಎಂದು ಸರಸರ ಓದಹತ್ತಿ ದನು. ಆ ಬೇರೆ ವಿಷಯವೆಲ್ಲ ಬಂಗಾಲದ ಕರುಣ ಕಥೆಯೇ ಆಗಿತ್ತು. ಅದರ ಸಾರವೆಂದರೆ 'ಬಂಗಾಲದ ಹಳ್ಳಿಹಳ್ಳಿಗಳಿಂದ ಅನ್ನರಾಶಿಯನ್ನೊಟ್ಟಿದ ಸ್ವರ್ಗಕ್ಕೆ ಹೊರಟಿದ್ದೇವೆ ಎಂಬ ಭ್ರಮೆಯಿಂದ ಬಡಜನರು ಸಂಸಾರ ಕಟ್ಟಿಕೊಂಡು ಕಲಕತ್ತೆಗೆ ಬರುತ್ತಿದ್ದಾರೆ. ಬೀದಿಬೀದಿಯಲ್ಲಿ ತಿರುಗಿ ಅನ್ನದ ಅಗಳು ಸಹ ದೊರೆಯದೆ ಸಿಕ್ಕದ್ದು ತಿಂದು ರೋಗದ ನರಕದಲ್ಲಿ ನರಳುತ್ತಿದ್ದಾರೆ, ಸಾಯು ತ್ತಿದ್ದಾರೆ. ಕಲಕತ್ತೆ ಶ್ರೀಮಂತರ ಸ್ವರ್ಗ, ಬಡವರ ನರಕ ಎರಡೂ ಆಗಿ ಪರಿಣ ಮಿಸಿದೆ. ಅಮೃತ್ ನೋಡಲಿಕ್ಕೆ ಆಗದ ಭಯಾನಕ ದೃಶ್ಯಗಳು ಹೆಜ್ಜೆ ಹೆಜ್ಜೆಗೆ ಕಣ್ಣಿಗೆ ಬೀಳುತ್ತವೆ. ಕೇಳಲಾಗದ ಕೂಳಿನ ಕೂಗುಗಳು ಕರುಳನ್ನು ಕತ್ತರಿಸು. ವಂತೆ ಈ ಮಹಾನಗರವನ್ನು ಭೇದಿಸುತ್ತವೆ. ಇದ್ಯಾವದನ್ನೂ ಲೆಕ್ಕಿಸದ ಸರಕಾರವು ದರಕಾರವಿಲ್ಲದೆ ಇರುವೆಗಳನ್ನು ತುಳಿಯುತ್ತ ಹೊರಟ ಮದ್ದಾನೆ ಯಂತೆ ಸಾಗಿದೆ. ತಮ್ಮ ಅನ್ನ ಸಿಕ್ಕರಾಯಿತು, ತಮ್ಮ ಚೈನಿ ನಡೆದರಾಯಿತು ಎಂದು ಪಟ್ಟಣದ ನಾಗರಿಕರೂ, ಸಾವಕಾರರೂ ನಿರ್ಲಜ್ಜೆಯ ಮೂರ್ತಿಯಾಗಿ ದ್ದಾರೆ.ಇದೀಗ ಪರಿಹಾರದ ಕಾರ್ಯವನ್ನು ಕೆಲಕೆಲವು ಸಂಸ್ಥೆಗಳು ಕೈಕೊಂಡಿವೆ. ಸ್ವಾಮಿಜಿಯವರ ನೇತೃತ್ವದಲ್ಲಿ ರಾಮಕೃಷ್ಣಮಠವು ಎಂದಿನಂತೆ ಸೇವಾತತ್ಪರ ವಾಗಿದೆ. ಆದರೆ ಸೇವಕ-ಸೇವಿಕೆಯರ ಕೊರತೆ ಬಹಳ. ಕೆಲಸಕ್ಕೆ ತಕ್ಕಷ್ಟು ಕೆಲಸಗಾರರಿಲ್ಲ. ಆದರೂ ಕರ್ತವ್ಯವನ್ನು ಸಾಧ್ಯವಾದಷ್ಟು ಮಾಡಲೇ ಬೇಕಲ್ಲವೇ ? ಅದೇ ನಮಗೆ ಸಮಾಧಾನ.' ಹೀಗೆ ಪತ್ರವನ್ನು ಮುಗಿಸಿ ತನ್ನ ಹೆಸರು ಬರೆದು ವೀಣೆ ಕೊನೆಗೆ ಒಂದು ಹೆಚ್ಚಿನ ಮಾತನ್ನು ಸೇರಿಸಿದ್ದಳು. ಅದೆಂದರೆ : ಅಮೃತ ಈಗ ಇಲ್ಲಿದ್ದಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಸ್ವಾಮಿಜಿಯವರು ನಿನ್ನ ನೆನಸಿದರು. ನೀ ಈ ವರ್ಷ ಅಭ್ಯಾಸದಲ್ಲಿ ತೊಡಗಿ

ಶುವಿಯೆಂದೂ ಬರಲಾರಿಯೆಂದೂ ನಾ ಹೇಳಿದೆ. ಈ ಬಗ್ಗೆ ನೀ ಯೋಚನೆಯನ್ನೇ ಮಾಡಬೇಡ.' ಅಮೃತ ಪತ್ರ ಓದಿ ಕೆಳಗಿಟ್ಟನು. ತೀವ್ರ ನಿರಾಶೆಯೂ ಸಂಕಟವೂ ಅವನ ಹೃದಯಕ್ಕೆ ಮುತ್ತಿಗೆ ಹಾಕಿದವು. ವೀಣೆಯ ಹೃದಯದಾಲಾಪವನ್ನು ನಿರೀಕ್ಷಿಸಿದ ಅವನು ಬಂಗಾಲ ಪ್ರಾಂತದ ಹೃದಯವಿಲಾಪವನ್ನು ಕೇಳುವ ಪ್ರಸಂಗ ಬಂದಿತು. ವೀಣೆಯ ಮಾತಿನ ಸುಖದ ತುಷಾರದಿಂದ ಜಳಕ ಮಾಡಬೇಕೆಂದವನು ಜನದ ದುಃಖದ ಆಳವಾದ ಕಡಲಲ್ಲಿ ಮುಳುಗೆದ್ದನು. ಒಂದು ಕ್ಷಣ ಸುಮ್ಮನೆ ಕುಳಿತು ಇದಿರುಗೋಡೆಯನ್ನು ಶೂನ್ಯವಾಗಿ ನೋಡುತ್ತಲಿದ್ದನು. ಅಲ್ಲಿ ಅವನಿಗೆ ಪ್ರೀತಿಯದಾದ ವಿವೇಕಾನಂದರ ಭಾವಚಿತ್ರ ಕಣ್ಣಿಗೆ ಬಿದ್ದಿತು. ತಮ್ಮ ಎದೆಯ ಮೇಲೆ ಕೈಯೊಳಗೆ ಕೈ ಹೆಣೆದು ಗಂಭೀರವಾಗಿ ನಿಂತ ಅವರ ನಿಲವು, ತೇಜಸ್ವಿಯಾದ ನೋಟ ಇದರಲ್ಲಿ ಮನ ನೆಟ್ಟಿತು. ಅಧಿಕಾರವಾಣಿಯಿಂದ ಅವರು ಹತ್ತಿರ ಕರೆದು 'ಏಳು, ಬಾ ಬೆನ್ನು ಹತ್ತು' ಎಂದು ಒತ್ತಂಬದಿಂದ ಹೇಳುವಂತಾಯಿತು. ಅವನು ಕಣ್ಣುಮುಚ್ಚಿದನು, ಅಲ್ಲಿಯೂ ಅವರು ಕಂಡರು, ಕರೆದರು. ಕಣ್ಣುತೆರೆದು ಕುರ್ಚಿಯಿಂದೆದ್ದು ಅತ್ತಿಂದಿತ್ತ ಅಲೆಯಹತ್ತಿದನು. ಪತ್ರದಲ್ಲಿಯ ಚಿತ್ರಗಳು ಕಾಡುನೊಣಗಳಂತೆ ತಲೆಯ ಸುತ್ತು ಮುಕುರಿದುವು. ಗುರುವಿನ ವಾಣಿ ಮೇಲೆ ಸುತ್ತವರಿಯುವ ವಿಮಾನದ ರವದಂತೆ ಒಂದೇ ಸವನೆ ಕೇಳುತ್ತಿತ್ತು. 'ಹೌದು, ನಾನೀಗ ಬಂಗಾಲಕ್ಕೆ ಹೋಗಲೇಬೇಕು. ಜನ ಸಾಯುವುದನ್ನು ಕೇಳಿ ಬದುಕಿಸುವ ಕೆಲಸ ಮಾಡದೆ ಈ ಪುಸ್ತಕ ಹಿಡಕೊಂಡು ಕೂಡುವುದು ಸರಿಯೆ ? ಅಲ್ಲ ಅಲ್ಲ' ಎಂದು ತನ್ನಲ್ಲಿ ಅಂದುಕೊಂಡನು. ಕೆಲ ಹೊತ್ತು ವಿಚಿತ್ರ ಭಾವಾವೇಶವು ಅವನನ್ನು ಅಡರಿತು. ಅಭ್ಯಾಸವಲ್ಲಿಯೇ ಉಳಿಯಿತು. ಏನೇನೋ ವಿಚಾರಗಳು ಬಂದವು. ಸ್ವಾಮೀಜಿಯವರು ನನ್ನ ನೆನಸಿದರು ಎಂದು ವೀಣೆ ಬರೆದಿರುವಳು. ಬರೀ ನೆನಸಿದರೇ ? ಶಾಪಿಸಿರಬೇಕು. ನನ್ನಂಥ ಕಲ್ಲೆದೆಯ ತರುಣನು ಬೇರೆ ಯಾರು ಎಂದಿರಬೇಕು. ನಾ ಅಭ್ಯಾಸದಲ್ಲಿರುವೆ, ಬರಲಾರೆ ಎಂದು ಆಕೆ ಹೇಳಿದಳಂತೆ. ಈ ಬಗ್ಗೆ ಯೋಚನೆಯನ್ನೇ ಮಾಡಬಾರದಂತೆ. ಅಂದರೆ ನಾನೆಂದರೆ ನಿರ್ಲಜ್ಜ ಪಶುವೆ ? ಸ್ವಾಮಿಜಿ ಏನು ಭಾವಿಸಿರಬೇಕು ? ಈ ಬಗೆಯಾಗಿ ಆತ್ಮನಿಂದೆಯಲ್ಲಿ ಕೆಲಹೊತ್ತು ತೊಡಗಿ ಮತ್ತೆ ತನ್ನ ಕುರ್ಚಿಯಲ್ಲಿ ಬಂದುಕುಳಿತು ಇನ್ನೊಮ್ಮೆ ವೀಣೆಯ ಪತ್ರವನ್ನೋದಿ ಡ್ರಾಅರಿನಲ್ಲಿ ಮಡಗಿದನು.

ಆ ಪತ್ರದ ಮಗ್ಗುಲಿಗೆ ಇದ್ದ ಇನ್ನೊಂದು ಪತ್ರ ಅವನ ಕಣ್ಣಿಗೆ ಬಿದ್ದಿತು. ಅದು ಶಂಭುರಾಯರಿಂದ ೫-೬ ದಿನದ ಹಿಂದೆ ಬಂದ ಪತ್ರ. ಇದನ್ನು ನೋಡಿ ವೀಣೆಯ ಪತ್ರದ ಬುಡಕ್ಕೆ ಸರಿಸಿ ಡ್ರಾಅರನ್ನು ಮುಚ್ಚಿ ದನು. ಆದರೆ ಮನಸ್ಸಿನ ಕದವನ್ನು ಹೇಗೆ ಮುಚ್ಚಬಲ್ಲ ? ಅದು ತನ್ನ ವೇಗದಿಂದ ಥಾರಿ ಬಾಗಿಲುಕೋಟೆಯ ಮನೆಗೆ ಹೋಯಿತು. ತಾಯಿ–ತಂದೆ ಯರ ಮುಖ ನೋಡಿತು. ಹಳೆಯ ದುಮ್ಮಾನವಳಿಸಿ ಹೊಸ ಸುಖ ಅಲ್ಲಿ ಹೊಳೆಯುತ್ತಿತ್ತು. ಸೊರಗಿದ ಮೈಯು ತುಂಬಿಕೊಳ್ಳುತ್ತಿತ್ತು. ಇದೆಲ್ಲಾ ಯಾತರ ಪರಿಣಾಮ ? ಅಮೃತನು ಕಲಿಯಲಿಕ್ಕೆ ಹೋದ, ಕಲಿತು ಪಾಸಾಗಿ ಬರತಾನೆ ಎಂಬ ಉಮೇದಿಯದು. ದಿನ ದಿನವೂ ಅಮೃತ ಬರುವುದರ ಎಣಿಕೆ ನಡೆದಿದೆ. ಅವನಲ್ಲಿಯೇ ಇಡೀ ಸಂಸಾರದ ಲಕ್ಷ್ಯ ನಟ್ಟಿದೆ. ಈ ವಾಸ್ತವ ಪ್ರಪಂಚವೆಲ್ಲ ಅಮೃತನ ಕಣ್ಣೆದಿರು ಕಟ್ಟಿತು. ಅವನ ಮೈ ನಡುಗಿತು. ಬೇಡಾದ ಹುಡುಗಿಯನ್ನು ಮದುವೆ ಮಾಡಿಕೊಂಡದ್ದು ಯಾತಕ್ಕಾಗಿ? ಇಲ್ಲಿಗೆ ಬಂದದ್ದು ಯಾವ ನಿರ್ಧಾರದಿಂದ ? ಲೋಕವೆಲ್ಲ ಹಾಳಾಗಲಿ ಎಂದು ಕೋಣೆ ಶಂಕರನಾಗಿ ಕುಳಿತು ಇಷ್ಟುದಿನ ಓದಿದ್ದು ಯಾವುದಕ್ಕೆ ? ಈ ಎಲ್ಲ ಪ್ರಶ್ನೆ ಗಳಿಗೆ ಒಂದೆ ಉತ್ತರ: 'ನನ್ನ ಮನೆತನದ ಮಾರಿಗೆ ಬಲಿಯಾದ ಕುರಿ ನಾನು. ನನಗೆ ದೇಶವಿಲ್ಲ, ಪ್ರೇಮವಿಲ್ಲ, ಸುಳ್ಳೇ ಇಲ್ಲದ ವಿಚಾರವನ್ನು ಮಾಡುತ್ತಿದ್ದೆ.' ಇದೇ ನಿಶ್ಚಯವೆಂದು ತನ್ನೊಳಗೆ ಘೋಷಿಸಿ ಮತ್ತೆ ಅಭ್ಯಾಸಕ್ಕೆ ಪುಸ್ತಕ ಎತ್ತಿದನು. ಆ ಕ್ಷಣಾರ್ಧ ಸಂಕಲ್ಪದಿಂದಲೋ ಏನೊ ನಿದ್ದೆಯ ಹೊತ್ತಿನವರೆಗೆ ಓದು ತಡೆಯಿಲ್ಲದೆ ಸಾಗಿತು. ಆಮೇಲೆ ದೀಪತೆಗೆದು ಹಾಸಿಗೆಯಲ್ಲಿ ಮಲಗಿ ಕೊಂಡನು. ಇನ್ನೂ ಕಣ್ಣು ಮುಚ್ಚಿದ್ದನೋ ಇಲ್ಲವೋ ಅಷ್ಟರಲ್ಲಿ, ಕಟ್ಟಿದ ನಾಯಿ ಹಗ್ಗ ಹರಿದು ಬಂದಂತೆ ಯೋಚನೆಗಳು ನುಗ್ಗಿ ಬಂದವು. ಒಮ್ಮೆ ವೀಣೆಯ ಪತ್ರ, ಇನ್ನೊಮ್ಮೆ ತಂದೆಯ ಪತ್ರ ಎರಡೂ ತಂತಮ್ಮ ಸಂದೇಶ ಬೀರಿ 'ಇದೇ ನಿನ್ನ ದಾರಿ' ಎಂದು ಆ ಆ ಚಣದಲ್ಲಿ ತೋರಿ ಹಿಂದೆ ಸರಿಯು ತ್ತಿದ್ದವು. ಎಷ್ಟು ಹೊರಳಾಡಿದರೂ ಹೆಣಗಿದರೂ ನಿದ್ದೆ ಬರಲೊಲ್ಲದು. ಹನ್ನೆರಡು ಬಡಿದು ಹೋಯಿತು. ಎಲ್ಲ ಕಡೆಗೆ ಸಪ್ಪಾಗಿದೆ. ಬೀದಿಯಲ್ಲಿ ಯಾವಾಗೋ ಒಂದು ವಿಕ್ಟೋರಿಯಾ ಗಾಡಿ ಟಪ್‌ಟಪ್ಪೆಂದು ಸಪ್ಪಳಿಸುತ್ತ ಹೋಗುತ್ತಿದೆ. ಅದು ಅವನ ದುರ್ಬಲವಾದ ಎದೆಯನ್ನು ತುಳಿಯುತ್ತ ಹೋದ ಹಾಗೆ ಆಗುತ್ತಿತ್ತು. ನಡುವೊಮ್ಮೆ ಎದ್ದು ಕುಳಿತು ನಿರ್ಧಾರಕ್ಕೆ

ಬರಬೇಕೆಂದು ಅವನ ಶಾಂತನಾಗಿ ವಿಚಾರ ಮಾಡಿದನು. ಒಂದೆರಡು ತಿಂಗಳಾದರೂ ಸೇವೆಯ ಕಾರ್ಯಕ್ಕೆ ಹೋಗಬಹುದು ಎಂದು ಗೊತ್ತುಮಾಡಬೇಕೆನ್ನುವುದರಲ್ಲಿ 'ಹೋದ ಮೇಲೆ ಎಷ್ಟು ತಿಂಗಳೆಂಬುದು ಯಾರಿಗೆ ಗೊತ್ತು' ಎಂದುಕೊಂಡು ಕೊನೆಗೆ 'ಹೋಗಲೇ ಕೂಡದು' ಎಂಬ ನಿರ್ಧಾರಕ್ಕೆ ಬಂದು ಅಡ್ಡಾದನು. ಮುಂದೆ ನಿದ್ದೆಯೇನೋ ಹತ್ತಿತು. ಆದರೆ ಅದು ಅವನ ಮನಸಿನ ತಿಕ್ಕಾಟವನ್ನು ರೂಪಿಸುವ ಹಲವಾರು ಕನಸುಗಳ ಮಾಲೆಯನ್ನು ತೊಟ್ಟದ್ದಾಯಿತು.

ಮುಂದೆ ಒಂದೆರಡು ದಿನ ಹೇಗೆ ಹೇಗೊ ಕಳೆದವು. ಅಮೃತನು ತನ್ನ ಒಳದೋಟೆಯನ್ನು ಒತ್ತಿಕ್ಕಿ ಯಾರಿಗೂ ತೋರಗೊಡದೆ ದಿನಗೆಲಸದಲ್ಲಿ ತನ್ಮಯನಾಗಿದ್ದಾನೆ. ಮೂರನೆಯ ದಿನ ಮಾತ್ರ ಅದುಭುತ ಸಂಗತಿಯೊಂದು ನಡೆಯಿತು. ಅಮೃತ ಓದುತ್ತಿರುವ ದಿನದ ಪತ್ರಿಕೆ ಕ್ರಾನಿಕಲ್ಲಿನಲ್ಲಿ ಒಂದು ಇಡೀ ಪುಟದ ತುಂಬ ಕಲಕತ್ತೆಯ ಸ್ಟೇಟ್ಸ್‌ಮನ್ ಪತ್ರಿಕೆಯಿಂದೆತ್ತಿದ ಬರಗಾಲದ ಚಿತ್ರಗಳನ್ನು ಕೊಟ್ಟು ಹೃದಯಭೇದಕ ಶೈಲಿಯಲ್ಲಿ ಅವನ್ನು ವರ್ಣಿಸಿದ್ದರು. ಒಂದರಲ್ಲಿ ಎಲುವಿನ ಗೂಡಾದ ಮಗುವೊಂದು ಹಸಿದು, ಹೊಟ್ಟೆಗಿಲ್ಲದೆ ಪ್ರಾಣಬಿಟ್ಟ ತಾಯಿಯ ಒಣಮೊಲೆಗಳನ್ನು ಹಾಲಿನ ಹಂಬಲಕ್ಕಾಗಿ ಜಗ್ಗುತ್ತಿದೆ. ಇನ್ನೊಂದರಲ್ಲಿ ನಾಯಿ-ನರಿಗಳ ಜೊತೆಗೆ ಬೀದಿಯ ಕಸದ ಬುಟ್ಟಿಯನ್ನು ಕೆದಕಿ ಬಡಕಲಾದ ಮೈಗಳು ತಿನಿಸನ್ನು ಹುಡುಕಿ ಬಾಯಿಗೆ ಹಾಕುತ್ತಿವೆ. ಮತ್ತೊಂದರಲ್ಲಿ ಬೀದಿಯ ಮೇಲೆ ಕಾಲು ಮಡಚಿ ಹುಡುಗರ ಹೆಣಗಳು ಹಸಿವೆಗೆ ಗೋರಿಯ ಕಟ್ಟೆದಂತೆ ಬಿದ್ದಿರುತ್ತವೆ. ಇಂಥ ಹಲವಾರು ಅಘೋರ ಚಿತ್ರಗಳನ್ನು ನೋಡಲಾಗದೆ ಅಮೃತ ನೋಡಿದನು. ಅಸಾಧ್ಯ ವೇದನೆಯನ್ನು ಅನುಭವಿಸಿದನು. ಉಳಿದ ಸುದ್ದಿಗಳೆಲ್ಲ ಅವನಿಗೆ ಬೇಡಾದವು. ಮೈಗೆಲ್ಲ ಉರಿ ಹತ್ತಿದಂತಾಯಿತು. ಇದೆಲ್ಲಾ ನಮ್ಮ ದೇಶದಲ್ಲಿಯೇ ನಡೆದಿರುವುದೇ ? ಅಂಥಾ ಪಟ್ಟಣದಲ್ಲಿ ಮನುಷ್ಯರೆಂದು ಮೆರೆಯುವ ಜನರ ಕಣ್ಣೆದಿರು ನಡೆದಿರುವುದೇ ? ಕಂಗಾಲ ಬಂಗಾಲ, ಅಲ್ಲ ಕಂಗಾಲ ಹಿಂದುಸ್ತಾನ, ಅಲ್ಲ ಅಲ್ಲ ಕಂಗಾಲ ಅಮೃತ ! 'ಅಮೃತ' ನಿನ್ನಲ್ಲಿಮನುಷ್ಯತ್ವವಿರುವುದೇ ?' ಆ ಚಿತ್ರಗಳೆಲ್ಲ ಕೂಡಿ ಪ್ರಶ್ನೆಯನ್ನು ಅವನಿಗೆ ಕೇಳಿದಂತಾಯಿತು. ಕೂಡಲೇ ಕಂಬನಿಯುಕ್ಕಿ ಬಂದು ಅವನು ಕುಳಿತಲ್ಲಿಯೇ ಬಿಕ್ಕಿ ಬಿಕ್ಕಿ ಅಳಹತ್ತಿದನು. ಕಂಬನಿಗಳು ಧಾರೆಯಾಗಿ ಸುರಿಯುತ್ತಿವೆ. ಬಿಸಿಯುಸಿರು ಸುಯ್ಯುತ್ತಿದೆ.

ನಡುನಡುವೆ 'ಇಲ್ಲ, ಇಲ್ಲ, ನಿಜ' ಎಂಬ ಆಳುವಿಕೆ ಬೆರೆತ ಅರೆ ನುಡಿಗಳು ತುಟಿಯಿಂದ ಹೊರಬೀಳುತ್ತವೆ. ಹಿಂದೆ ಹಲವು ನಿಮಿಷ ನಡೆದು ಮರಗಾಳಿ ಬೀಸಿ ನಿಂತ ಹಾಗೆ ಅಳು ನಿಂತಿತು. ಧೋತರದ ತುದಿಯಿಂದ ಅವನು ಕಣ್ಣೊರಸಿಕೊಂಡನು. ಮೈಗೆ ಮನಸ್ಸಿಗೆ ದೊಡ್ಡ ಭಾರವೆತ್ತಿದಷ್ಟು ದಣಿವಾಗಿತ್ತು. ಆದರೆ ಒಳಗೊಳಗೆ ಅವಿತಿದ್ದ ಆತ್ಮದ ಕಣ್ಣು ತೆರೆದಂತಾಗಿ ಅವನಿಗೆ ಹೊಸ ನೋಟವನ್ನು ಕೊಟ್ಟಿತ್ತು, ಹೊಸ ದಾರಿಯಲ್ಲಿ ಹೋಗಲು ಧೈರ್ಯವನ್ನು ನೀಡಿತ್ತು.

ಅಂದಿನ ಕಾಲೇಜಿಗೆ ಅತ್ಯಂತ ಶೂನ್ಯ ಮನಸ್ಕನಾಗಿ ಅವನು ಹೋದನು. ಯಾರೂ ಅದನ್ನು ಗುರತಿಸಬಹುದಾಗಿತ್ತು. ಪಾಠಗಳಲ್ಲಿ ಅವನ ಲಕ್ಷ್ಯವೇ ಇಲ್ಲ. ಅಂದು ಕಂಡ ಚಿತ್ರಗಳೇ ಅಧ್ಯಾಪಕರ ಹಾಗೂ ತನ್ನ ನಡುವೆ ನಿಲ್ಲುತ್ತಿದ್ದವು. ಈ ವೃತ್ತಿಯನ್ನು ಪಾಟೀಲ ಗುರುತಿಸಿದ್ದನು. ಅದರೆ ಅವನಿಗೆ ಕಾರಣ ಗೊತ್ತಾಗಲಿಲ್ಲ. ಕಾಲೇಜು ಮುಗಿದ ಮೇಲೆ ಅಮೃತನ ಕೋಣೆಗೆ ಹೋಗಿ 'ಯಾಕೆ ಏನಾಗಿದೆ? ಜ್ವರಗಿರ ಬಂದಿರುವದೇನು?' ಎಂದನು. ಅಮೃತ ಅದೇ ವಿಮನಸ್ಕತೆಯಲ್ಲಿ ಮೊದಲು 'ಹೌದು' ಎಂದನು, 'ಹಾಗಾದರೆ ತೋರಿಸಿ ಔಷದ ತರೋಣ' ಎಂದವನು ಒತ್ತಿ ಹೇಳಲು 'ಇಲ್ಲ, ಬೇಡ' ಎಂದನು, ಕೊನೆಗೆ ಅಮೃತನೇ ಅಂದನು: 'ಎಲ್ಲಿಯೂ ಬೇಡ. ಜುಹುವಿಗೆ ಹೋಗಿ ಬರೋಣ, ಪಾಟೀಲ. ನಾವಿಬ್ಬರೇ ಸಮುದ್ರದ ದಂಡೆಯಲ್ಲಿ ಕೆಲ ಹೊತ್ತು ಕೂತು ಬರೋಣ.' ಅವನ ಬೇಸರ ಕಳೆದು ಉಲ್ಲಾಸವನ್ನು ತರಲು ಇದೊಳ್ಳೇ ಯುಕ್ತಿಯೆಂದು ಪಾಟೀಲನು ತತ್‌ಕ್ಷಣ ಒಪ್ಪಿದನು. ಇಬ್ಬರೂ ಲೋಕಲ್ ಗಾಡಿಯನ್ನು ಹತ್ತಿ ಜುಹುಕ್ಕೆ ಹೋದರು.

ಜುಹುದಲ್ಲಿ ಸಮುದ್ರದ ಕರೆಯು ಮೇಲೆ ಇಬ್ಬರೂ ಕೆಲ ಹೊತ್ತು ತಿರುಗಿದರು, ನೀರಲ್ಲಿ ಸೂರ್ಯ ಇಳಿದನು. ತೆರೆಗಳ ತಂಪನಿಯನ್ನು ಈಂಟಿ ತಂಗಾಳಿ ಬೀಸುತ್ತಿತ್ತು. ಎಂಥವರ ಮನಸ್ಸನ್ನೂ ಅರಳಿಸುವ ಕಾಲವದು. ಆದರೆ ಅಮೃತನಿನ್ನೂ ತನ್ನೊಳಗೇ ಲೀನನಾಗಿದ್ದಾನೆ. ಶಾಂತಿ ಕೇಳಿದ ಪ್ರಶ್ನೆಗಳಿಗೆ ಅಷ್ಟಷ್ಟೇ ಉತ್ತರಗಳನ್ನು ಕೊಡುತ್ತಾನೆ. ಬೆಳಕು ಕಡಿಮೆಯಾಗತೊಡಗಿತು. ಇಬ್ಬರೂ ಯಾರೂ ಇಲ್ಲದ ಒಂದು ಮಳಲಿನ ಎಡೆಯಲ್ಲಿ ಕೂತುಕೊಂಡು ಸಮುದ್ರದತ್ತ ಮುಖ ಮಾಡಿದರು. ತೆರೆಗಳು ಬುರುಗುಗಟ್ಟಿ ಬಂದು ಮತ್ತೆ ಮರಳುತ್ತಿದ್ದವು. ಅವರು ಕೆಲಹೊತ್ತು ಮೌನವಾಗಿಯೇ ಇದ್ದರು.

ಆಮೇಲೆ ಅಮೃತ ತಾನಾಗಿ 'ಶಾಂತಿ, ನಿನಗೊಂದು ಮಾತು ಹೇಳಬೇಕಾಗಿದೆ' ಎಂದನು. ಈವರೆಗೆ ಇಷ್ಟು ಪೂರ್ಣ ವಾಕ್ಯವನ್ನೇ ಅವನು ಮಾತಾಡಿದ್ದಿಲ್ಲ. ಶಾಂತಿಗೆ ಸಮಾಧಾನವಾಯಿತು. ಅಲ್ಲದೆ ತನ್ನ ಕುರಿತು ಅಮೃತನು ಏಕವಚನದ ಸಲಿಗೆಯಲ್ಲಿ ಮಾತಾಡಿದ್ದು ಕೇಳಿ ಇನ್ನಿಷ್ಟು ಸಮಾಧಾನವಾಯಿತು. ಅಷ್ಟು ಅವರು ಆತ್ಮೀಯರೆ ಆಗಿದ್ದರು. 'ಏನದು ?' ಎಂದನು.

ಸ್ವಲ್ಪ ತಡೆದು ಅಮೃತ ಅಂದನು: 'ಹೇಳತೀನಿ. ಆದರೆ ಹೇಳಿದರೆ ನಿನ್ನಷ್ಟಕ್ಕೆ ಇಟಗೊಳ್ಳತೀಯು ?'

'ಅಂಥ ಗೂಢವೇನು, ಅಮೃತ್ ? ನೀ ಬೇಡವೆಂದರೆ ಯಾರಿಗೂ ಹೇಳುವದಿಲ್ಲ.'

'ಹೌದು, ಯಾರಿಗೂ ಹೇಳಬಾರದೀಗ. ನೀ ಒಪ್ಪಿದರೇ ಹೇಳುವೆ.'

'ಅಂದರೆ ಮನೆಯಿಂದ ಏನಾದರೂ ಪತ್ರ ಬಂದಿರುವದೇ ಅಮೃತ ? ಎಲ್ಲರೂ ನೆಟ್ಟಗಿರುವರೇ ?'

ಮನೆಯ ವಿಷಯು ಬಂದೊಡನೆ ಅಮೃತನ ಎದೆ ಕಲಕಿತು. ಆದರೆ ಅವನೀಗ ನಿರ್ಧಾರ ಮಾಡಿಬಿಟ್ಟಿದ್ದನು. 'ಮನೆಯ ವಿಷಯುವಲ್ಲ. ಎಲ್ಲರೂ ನೆಟ್ಟಗಿದ್ದಾರೆ. ನಾನೇ ನೆಟ್ಟಗಿಲ್ಲ. ಇರುವದು ಸಾಧ್ಯವಿಲ್ಲ.'

'ಅದ್ಯಾಕೆ ?'

'ನೀ ಒಪ್ಪಿದರೆ ಹೇಳತೇನೆ.'

'ಹೂ. ಒಪ್ಪಿದೆ ಹೇಳು,'

ಅಮೃತ ಸಮುದ್ರದತ್ತ ದೂರದ ವರೆಗೆ ಕಣ್ಣು ಹಾಯಿಸಿ ನೋಡಿ ಒಂದೆರಡು ನಿಮಿಷ ಸುಮ್ಮನಿದ್ದನು 'ಶಾಂತಿ, ನಾ ಮತ್ತೆ ಕಲಕತ್ತೆಗೆ ಹೋಗಬೇಕು. ಇನ್ನು ಇಲ್ಲಿರುವದು ಅಸಾಧ್ಯ, ಅಸಹ್ಯ.'

'ಎದಕ್ಕೆ, ಅಮೃತ ? ಅಲ್ಲಿ ಜನರು ಹೊಟ್ಟೆಗಿಲ್ಲದೆ ಸಾಯುತ್ತಿರುವರು. ನೀ ಒಬ್ಬ ಅಲ್ಲಿ ಹೋಗಿ ಎನು ಮಾಡುವಿ?'

'ಅದಕ್ಕೇ. ಸಾಯುವವರ ಸೇವೆಗೆ, ಸಾಧ್ಯನಾದರೆ ಅವರನ್ನು ಬದುಕಿಸಲಿಕ್ಕೆ.'

'ಆಯಿತು. ಸೇವೆಗೆ ಹೋಗಿ ಸಾವಿಗೆ ಹೋದಂತಾದೀತು.. ಬೇಡ ಅಮೃತ,'

'ಸಾವು ? ಶಾಂತಿ, ಅವರ ಸಾವು ಬೇಕು. ನನ್ನ ಸಾವು ಬೇಡ ಅಲ್ಲವೇ ?'

'ಹಾಗಲ್ಲ ಅಮೃತ. ನಿನ್ನ ಮನೆಯ ಪರಿಸ್ಥಿತಿ ನಿನಗೆ ಗೊತ್ತಿದೆ. ಹೋದ ವರುಷ ಇದರಲ್ಲಿಯೇ ಹೋಯಿತು. ನಿನ್ನ ತಾಯಿ-ತಂದೆ ಏನಂದಾರು ?'

'ಎಲ್ಲಾ ವಿಚಾರ ಮಾಡಿದ್ದೇನೆ. ನನ್ನ ನಿರ್ಧಾರವನ್ನು ಕದಲಿಸಬೇಡ, ಶಾಂತಿ. ಬೇಗ ತಿರುಗಿ ಬಂದರೆ ಈ ವರುಷ, ಇಲ್ಲದಿದ್ದರೆ ಮುಂದಿನ ವರುಷ ನಾ ಕಲಿಯಬಹುದು. ಪರೀಕ್ಷೆಗೆ ಕೂಡಬಹುದು. ಈಗ ಮಾತ್ರ ಬಂಗಾಲದ ಕರುಳಿರಿಯುವ ಕಥೆ ಕೇಳಿ ನಾ ಇಲ್ಲಿರಲಾರೆ, ನನ್ನ ಅಭ್ಯಾಸ ಸಾಗಲಾರದು. ನಾ ಹೋಗಲೇ ಬೇಕು.'

'ಅಲ್ಲ ಅಮೃತ, ನಿನ್ನ ದೇಶಪ್ರೇಮ ನನಗೆ ಗೊತ್ತಿದೆ. ನಿನ್ನ ಬಗ್ಗೆ ನನಗೆ ಬಹಳ ಆದರವಿರುವದು. ಆದರೆ ನೋಡು ಮೊನ್ನೆ ಮೊನ್ನೆ ಲಗ್ನ ಬೇರೆ ಆಗಿರುವಿ.'

'ಹೌದು, ಅದನ್ನು ಮರೆತಿಲ್ಲ. ಆದರೂ ನಾ ನಿಲ್ಲಲಾರೆ. ತಂದೆ-ತಾಯಿಯನ್ನೇ ದುಃಖದ ಕಡಲಲ್ಲಿ ನೂಕಿ ಹೋಗುತ್ತಿದ್ದವನು ಹೆಂಡತಿಯ ಬಗ್ಗೆ ಯೋಚಿಸಬೇಕೆ ? ಶಾಂತಿ, ನನ್ನ ಜೀವಕ್ಕೆ ಹತ್ತಿದ ಉರಿಯನ್ನು ಏನೆಂದು ಹೇಳಲಿ ?' ಎನ್ನುತ್ತಲೆ ಮಾತು ತಡೆದು ಕೊರಳುಬ್ಬಿ ಅಮೃತ ತಡೆದನು. ಶಾಂತಿ ಅವನ ಮುಖ ನೋಡುತ್ತಿರಲು ಎರಡೂ ಕಣ್ಣಿನಿಂದ ದಳದಳ ಹನಿಗಳುದುರಿದವು. 'ಶಾಂತಿ, ಬಂಗಾಲದಲ್ಲಿಯ ಸಾವು ಹಿಂದುಸ್ತಾನದ ಸಾವು. ನಮ್ಮ ಮನುಷ್ಯತ್ವದ ಸಾವು ! ಅದನ್ನು ನೋಡುತ್ತ ನಾವಿದ್ದು ಬದುಕಿದರೂ ಸತ್ತಂತೇ.'

'ನೀನಂಬುವದು ಸುಳ್ಳಲ್ಲ, ಅಮೃತ' ಎಂದು ಶಾಂತಿ ಆವೇಶಗೊಂಡನು. ಆದರೆ ಅಮೃತನ ಆದರ್ಶನಿಷ್ಠೆಯ ಉತ್ಕಟತೆಯಿಲ್ಲದೆ ಅವನ ನಿರ್ಧಾರಕ್ಕೆ ಅಳುಕಿದನು. 'ಅಮೃತ, ನಿನ್ನ ತ್ಯಾಗ-ಧೈರ್ಯ ನನ್ನಲ್ಲಿಲ್ಲ. ಆದರೆ ನಿನಗೆ ನಾ ಅಡ್ಡ ಬರಲಾರೆ. ನಿನಗೆ ತೋರಿದಂತೆ ಮಾಡು.'

ತನ್ನ ನಿರ್ಧಾರದ ಕೆಲ ವಿವರಗಳನ್ನು ಅವನಿಗೆ ಹೇಳುತ್ತ ಅಮೃತ ಮುಂದೆ ಆಡುತ್ತಿದ್ದನು. ಕತ್ತಲೆ ಹೆಚ್ಚಲು ಇಬ್ಬರೂ ಎದ್ದು ಮರಳಿ ತಮ್ಮ ನಿವಾಸಕ್ಕೆ ಹೋದರು.

ಅಮೃತನು ಮರುದಿನ ತನ್ನ ನಿರ್ಧಾರಕ್ಕೆ ಅನುಸರಿಸಿ ಅದೇ ರಾತ್ರಿ ಕಲ

ಕತ್ತಿಗೆ ಹೊರಡುವ ತಯ್ಯಾರಿ ನಡಸಿದನು. ಬರುವದಾಗಿ ವೀಣೆಗೆ ತಾರು ಕಳಿಸಿದನು. ಭಾರವಾದ ಕೈಯಿಂದ ಆದರೂ ಧೀರವಾದ ಎದೆಯಿಂದ ಶಂಭುರಾಯರಿಗೆ ಒಂದು ದೊಡ್ಡ ಪತ್ರ ಬರೆದು ತನ್ನ ನಿಶ್ಚಯವನ್ನೂ ಅದಕ್ಕೆ ಕಾರಣವನ್ನೂ ತಿಳಿಸಿದನು. ಅವರ ಸಮಾಧಾನಕ್ಕಾಗಿ ತಾ ಬೇಗ ತಿರುಗಿ ಬರಬಹುದೆಂದೂ ಅಭ್ಯಾಸವನ್ನು ಮುಂದುವರಿಸಬಹುದೆಂದೂ ಕಾಣಿಸಿದ್ದನು. ತನ್ನ ಕಲಕತ್ತೆಯ ವಿಳಾಸವನ್ನು ಕೊಟ್ಟು ಅಲ್ಲಿಗೆ ಉತ್ತರ ಬರೆಯಲು ಕೇಳಿದ್ದನು. ಇದನ್ನೋದಿ ಅವರ ಸ್ಥಿತಿ ಏನಾದೀತೆಂಬುದನ್ನು ಪತ್ರ ಬರೆದಿಡುತ್ತಲೇ ನೆನೆದನು. ಅವನಿಗೆ ಬಹಳ ಸಂಕಟವಾಯಿತು. ಒಂದು ಚಣ ಅವನ ಧೈರ್ಯ ಉಡುಗಿತು. ಆದರೆ ಮತ್ತೆ ಮೊದಲ ನೆಲೆಗೆ ಬಂದನು. ಅಲ್ಲಿಯೆ ಇಡಬೇಕಾದ ತನ್ನ ಸಾಮಾನುಗಳನ್ನೆಲ್ಲ ಕಟ್ಟಿ ತನ್ನ ಕೋಣೆಯಲ್ಲಿಯೇ ಬಿಟ್ಟು, ತಾ ಹೋದ ಮೇಲೆ ಶಾಂತಿನಾಥ ತನ್ನ ಕೋಣೆಯಲ್ಲಿ ಇಟ್ಟುಕೊಳ್ಳಬೇಕೆಂದು ಅವನಿಗೆ ಹೇಳಿದನು. ಕೆಲವು ದಿನ ರಜೆಯ ಮೇಲೆ ತಾ ಹೋಗಿರುವಂತೆ ಕೇಳಿದವರಿಗೆ ಹೇಳಬೇಕೆಂದನು. ಆಮೇಲೆ 'ನಿಜ ಗೊತ್ತಾದರೂ ಚಿಂತೆಯೇಕೆ' ಎಂದೂ ಅಂದುಕೊಂಡನು. ತನ್ನೊಡನೆ ಬೇಕಾಗುವಷ್ಟು ಸಾಮಾನುಗಳನ್ನು ಬೇರೆ ಕಟ್ಟಿಟ್ಟು ಆಗದವರಂತೆ ಕಾಲೇಜಿಗೆ ಹೋದನು, ಕ್ಲಾಸುಗಳಲ್ಲಿ ಕೂತನು. ತಿರುಗಿ ಬರುವಾಗ ಪತ್ರದ ಬೋರ್ಡಿನ ಮುಂದೆ ಅವನು ಹಾಯ್ದು ಬರುತ್ತಿರುವಾಗ ಅಕಸ್ಮಾತ್ತಾಗಿ ಅವನ ವಿಳಾಸದ ಒಂದು ಪಾಕೀಟು ಅವನ ಕಣ್ಣಿಗೆ ಬಿದ್ದಿತು. ಧಾವಿಸಿ ಹೋಗಿ ಅದನ್ನು ತಗೊಂಡು ಉತ್ಸುಕತೆಯಿಂದ ಒಡೆದು ನೋಡಿದನು. ಅದರಲ್ಲಿ ಬರೀ ಒಂದು ಕವಿತೆಯಿತ್ತು. ಕೆಳಗೆ ಪ್ರಸಾದ ಎಂದು ಹೆಸರಿತ್ತು. ಮತ್ತೆ ಅದೇ ಕವಿಯಿಂದ ತನಗೆ ಕವಿತೆಯ ಪ್ರಸಾದ ಬಂದಿದೆ ಎಂದವನು ಹಿಗ್ಗಿದನು. ಲಗುಬಗೆಯಿಂದ ಕೋಣೆಗೆ ಹೋಗಿ ಅದನ್ನೋದಲು ಕುಳಿತನು. ಯಾವೂರಿಂದ ಬಂದಿರಬಹುದೆಂದು ಪರೀಕ್ಷಿಸಿದನು, ಪತ್ತೆ ಹತ್ತಲಿಲ್ಲ. ಅಂಚೆಯ ಛಾಪು ಮಾತ್ರ ಯಾವುದೋ ಅಪರಿಚಿತಹಳ್ಳಿಯದಾಗಿತ್ತು. ಕಾಗದವನ್ನು ಹಿಂದೆ ಮುಂದೆ ತಿರುವಿ ನೋಡಿದನು. 'ಪ್ರಸಾದ'ವೆಂಬ ಹೆಸರಿನ ಕೆಳಗೆ ಮುಸಮುಸಕಾಗಿ 'ಬಂಧಮುಕ್ತ' ಎಂದು ಪೆನ್ಸಿಲಿಂದ ಬರೆದಂತಿತ್ತು. ಓಹೋ. ಹಿಂದೆ ಸೆರೆಮನೆಗೆ ಹೋದ ಪ್ರಸಾದನು ಈಗ ಬಿಡುಗಡೆ ಹೊಂದಿದ್ದಾನೆ. ಕೆಲವು ದಿನದ ಹಿಂದೆ ಜೇಲೊಡೆದು ಕೆಲವು ರಾಜಕೀಯ ಕೈದಿಗಳು ಫರಾರಿಯಾದರೆಂದು ಸುದ್ದಿಯಿತ್ತು. ಅವರಲ್ಲಿ ಪ್ರಸಾದನೂ ಇದ್ದನೇ ? ಇಲ್ಲವಾದರೆ ಅವನಂಥ ರಾಜದ್ರೋಹಿಯನ್ನು ಹಾಗೇ

ಯಾರು ಹೊರಬಿಡುತ್ತಾರೆ ? ಅಂತೂ ಈಗ ಹೊರಗೆ ಬಂದು ಮತ್ತೆ ಭೂಮಿಗತ ಕ್ರಾಂತಿಕಾರರಲ್ಲಿ ಈ 'ಭಯಂಕರ' ಕವಿ ಸೇರಿರಬೇಕು. ಆದರೆ ನನ್ನ ಮೇಲೆ ಇವನಿಗೆ ಅಷ್ಟೇಕೆ ಮಮತೆ ? ನನಗೇಕೆ ಈ ರೀತಿ ಕವಿತೆಗಳನ್ನು ಕಳಿಸುತ್ತಿರುವನು ? ಇವನಾರೆಂಬುದು ನನಗೆ ತಿಳಿಯಲೇ ಒಲ್ಲದಲ್ಲ ? ಹೀಗೆ ಯೋಚಿಸಿ ಸ್ವಲ್ಪ ಹೊತ್ತು ಅಮೃತನು ವಿಚಾರಪರನಾಗಿ ಕುಳಿತನು. ಆಮೇಲೆ 'ಯಾರೇ ಇರಲಿ, ಅವನ ಕವಿತೆಯೆಂದರೆ ನನಗೆ ದಾರಿದೀವಿಗೆಯಾಗಿದೆ. ಹಿಂದಿನ ಕವಿತೆಗಳಂತೆ ಇದಾದರೂ ಹಾಗೆ ಇರಬೇಕು' ಎನ್ನುತ್ತ ಅದನ್ನು ಅತ್ಯಂತ ಆಸ್ಥೆಯಿಂದ ಓದ ತೊಡಗಿದನು. ಅದು ಕೆಳಗಿನಂತಿತ್ತು :—

## ನಾವೆಲ್ಲಾ ಒಂದೇ

ನಾವೆಲ್ಲಾ ಒಂದೇ
ಹಿಂದೀಯರು ನಾವೆಲ್ಲಾ ಒಂದೇ
ಈ ಹೊಸ ರಾಷ್ಟ್ರದ ತಾಯ್ತಂದೆ
ಹಿಂದೆಂದೂ ತಲೆದೋರದ ಭವ್ಯಭವಿಷ್ಯವು ಇದೆ ನಮ್ಮುಂದೆ
ನಾವೆಲ್ಲಾ ಒಂದೇ.
ಬೇರೆಯೆ ಎಂಬುದ ಗಾಳಿಗೆ ತೂರುತ
ಒಂದರ ತರತರವೆಂದೇ ಸಾರುತ
ಬಾಳಿರೆ ಬಾಂಧವ್ಯವು ನಾವಾಗಿಯೆ, ಮಿಗಿಲೇ ಮುಗಿಲದು ನಮ್ಮಿಂದೆ ? ೧
ಮೂರೆಡೆ ನೀರಿನ ಕಂದಕವಿರಿಸಿ
ಮೇಗಡೆ ಮಲೆಗಳ ಕೊತ್ತಳನಿಲಿಸಿ
ಪ್ರಕೃತಿಯು ನೀಡಿದೆ ನದಿಗಳು ಹರಿಯುವ ನೆಲದಗಲವ ನಮಗೆಂದೇ. ೨
ಬೇಡಿದ ಬೆಳೆಯನು ಹಸುರಿನ ಕಳೆಯನು
ಚಿನ್ನದ ರಾಶಿಯು ಖನಿಜದ ಕೋಶವ
ಸೊಗದಲಿ ಬಾಳಿರಿ ಎಂದೊರೆಯುತ ನಿರಿಸಿದೆ ನಮ್ಮಿದಿರಲಿ ತಂದೇ ೩
ಹೊರದಾಳಿಗೆ ಕದ ತೆರೆಯುತ ಕರೆದೆವು
ಹೊರಾಡಿದೆವೆಮ್ಮೊಳು ನಾಣ್ ತೊರೆದೆವು
ಹೆರರಾಳಿಕೆಯೊಳಾಗುತ ನಾಡನು ಗೈದೆವು ಸೆರೆಮನೆಯಿಂದೇ ೪

ಜಗದೆಲ್ಲಾ ಜನಜಾತ್ರೆಯ ನೆರೆಸಿ
ಮತಪಂಥದ ಮೇಲಾಟವ ಮೆರೆಸಿ
ಕಲಿತಾ ತಾಳ್ಮೆಯ ತುಳಿಯುತ ನಿಂದೆವು ಬಂಧುಗಳನು ನಾವ್ ಕೊಂದೇ ೫

ಮುಗಿಲೆತ್ತರಕೇರಿದ ಮಾಪುರುಷರ
ಪಡೆದೆವು ಪಾತಾಳದಿ ಬಿದ್ದಿರುವರ
ಮೇಲೇಳಿಸಲಾಗದೆ ನಾವ್ ಬದುಕನು ನರಕವ ಮಾಡಿದೆವಿಂದೇ ೬

ಹೋಗಲಿ ಹಳಕತೆ ಮರವಿನ ಕೊಳ್ಳಕೆ
ಸಾಗಲಿ ಬಾಳುವೆ ಹೊಸ ನಿರ್ಮಾಣಕೆ
ನಾಡಿನ ಬಿಡುಗಡೆ ಎಲ್ಲರ ಏಳಿಗೆ ಇದೆ ಗುರಿಯಾಗಿಸಿ ಮುಂದೆ ೭

ಹಲಶತಮಾನದಿ ಬಲಿದಿಹ ಬೇನೆಯ
ಕಳೆಯಲು ತ್ಯಾಗದ ತಾಳ್ಮೆಯ ಸೋನೆಯ
ಸುರಿಸಲು ಕಿರಿಮನಸೆರೆಯನು ಹರಿದೇಳುವ ಹಿರಿತನದಿಂದೇ ೮

ಎಲ್ಲಾ ಮತವೆಲ್ಲಾ ನುಡಿಗಡಣವು
ಸಲ್ಲುವ ಸ್ವಾತಂತ್ರ್ಯದಿ ನಿಲೆ ತಾವು
ಎಲ್ಲರ ನಲುಮೆಯೆ ಎಲ್ಲರ ನಂಟೇ ನಮ್ಮಯ ಮಂತ್ರವು ಒಂದೇ ೯

ಮಾನವ್ಯದ ಮಾಸಾಧನೆ ನಡೆದಿದೆ
ಸಂಮೇಳದ ಗೀತವು ಸವಿ ಪಡೆದಿದೆ
ನಮ್ಮಯ ನಾಡಿನ ವಿಧವಿಧ ಸ್ವರಗಳ ಸಮರಸ ಗಾಯನದಿಂದೇ ೧೦

—ಪ್ರಸಾದ (ಬಂಧಮುಕ್ತ)

ಅಮೃತನು ಕವಿತೆಯನ್ನೋದಿ ಮುಗಿಸಿದನು, ಅದರ ಪ್ರಭಾವಕ್ಕೆ ಸಿಲುಕಿ ಮುಗ್ಧನಾದನು. ಪಲ್ಲವಿಯನ್ನು ತಿರುತಿರುಗಿ ತನ್ನಷ್ಟಕ್ಕೆ ಹೇಳಿಕೊಂಡನು. ಪ್ರತಿಯೊಂದು ನುಡಿಯನ್ನು ಭಾವಾವೇಶದಿಂದ ತನ್ನ ನಂಬಿಗೆಯನ್ನೇ ಸಾರುತ್ತಿರುವಂತೆ ಹಾಡಿಕೊಂಡನು. ಕವಿತೆಯಲ್ಲಿಯ ಉಜ್ವಲ ರಾಷ್ಟ್ರೀಯವೃತ್ತಿಯೂ ಮುನ್ನೋಟವೂ ಅವನನ್ನು ಬಹಳ ಮೆಚ್ಚಿಸಿದುವು. ಈ ಕವಿತೆ ರಾಷ್ಟ್ರೀಯ ಸಮೂಹಗೀತವೆಂದು ಹೇಳಲು ಸರಿಯಾಗಿದೆ ಎಂದುಕೊಂಡನು. ತನ್ನ ಬಂಗಾಲ ಪ್ರಯಾಣದ [illegible] ನಿರ್ಧಾರಕ್ಕೆ ಅತುಲವಾದ ಬಲವನ್ನು

ಕೊಡಲೆಂದೇ ಆಕಾಶವಾಣಿಯಾದಂತೆ ಪ್ರಸಾದನ ಕವಿತೆ ಬಂದಿತೆಂದು ಭಾವಿಸಿದನು. ಮನದ ತಳದಲ್ಲಿ ಉಳಿದ ಅಳುಕಗಳೆಲ್ಲ ಅದೃಶ್ಯವಾದವು. ಸ್ವಾರ್ಥದ ಕೂಗು ದೂರ ಕರಗಿದ ವೊಳಗಾಯಿತು. ನಾಡಸೇವೆಯೆ ಬದುಕಿನ ಸಾಫಲ್ಯವೆಂಬ ಆವೇಶ ಸ್ಥಿರವಾಯಿತು. ನಾ ಮಾಡುವ ಸೇವೆ ತೀರ ಅಲ್ಪವಾಗಿರಬಹುದು. ಆದರೆ ಆ ಅಲ್ಪವೂ ಕಡಿಮೆಯಾದರೆ ನಾಡಿನ ಅಧೋಗತಿ ಇನ್ನೂ ಹೆಚ್ಚುವುದಿಲ್ಲವೇ? ಇದೇ ಅವನ ಅನಿಸಿಕೆಯಾಯಿತು. ಅಂದು ರಾತ್ರಿ ನಿಲ್ದಾಣಕ್ಕೆ ಕಳಿಸಲು ಬಂದ ಶಾಂತಿನಾಥನ ನಿರೋಪ ತಗೊಂಡು ಅಮೃತ ಕಲಕತ್ತೆಗೆ ಪ್ರಯಾಣ ಬೆಳೆಸಿದನು. ಪ್ರಯಾಣದಲ್ಲೆಲ್ಲ 'ನಾವೆಲ್ಲಾ ಒಂದೇ, ಹಿಂದೀಯರು ನಾವೆಲ್ಲಾ ಒಂದೇ' ಎಂಬ ಗೀತದ ಪಲ್ಲವಿಯನ್ನೂ ಕೆಲವು ನುಡಿಗಳನ್ನೂ ಗುಣುಗುಣಿಸುತ್ತಿದ್ದನು.

## ೧೪. ಮೃತ್ಯುವಿನ ಮನೆ

ನಸುಕಿನ ಹೊತ್ತು. ಕತ್ತಲೆ ತನ್ನ ಬಿಡಾರವನ್ನು ಕಿತ್ತಿ ಬಟ್ಟೆ ಸಾವರಿಸಿಕೊಂಡು ಹೋಗುವದರಲ್ಲಿದೆ. ಬೆಳಕು ಎಲ್ಲೆಡೆ ಹರಡುತ್ತಿದೆ. ಇನ್ನೂ ಮೂಡಲಿಲ್ಲ ಕೆಂಪು ಮೂಡಿಲ್ಲ. ಅಮೃತನು ಗಾಡಿಯಲ್ಲಿ ಕೂತಲ್ಲಿಯೇ ಅರನಿದ್ದೆ ಮಾಡಿ ಒಮ್ಮೆಲೆ ಎಚ್ಚತ್ತನು, ಕಣ್ಣು ಹೊಸೆಯುತ್ತ ಹೊರಗೆ ನೋಡಿದನು, ಬೆಳಗಾಗಿತ್ತು. ಒಂದುವರೆ ದಿನದ ಪ್ರವಾಸ ಮುಗಿದು ಕಲಕತ್ತೆ ಹತ್ತಿರ ಬಂದಿತೆಂದು ಆವನಿಗೆ ಸಮಾಧಾನವಾಯಿತು. ಇನ್ನೊಂದು ಗಂಟೆಯಲ್ಲಿ ಪ್ರವಾಸ ಮುಗಿಯುವದೆಂದುಕೊಂಡು ಆಕಳಿಸುತ್ತ ಮೈಮುರಿದನು. ಆದರೆ ಗಾಡಿ ಅಲ್ಲಿ ಹಾಗೇಕೆ ನಿಂತುಬಿಟ್ಟದೆ? ನಿಲ್ದಾಣವೇನಾದರೂ ದೊಡ್ಡದಿರಬಹುದೇ ಎಂದು ಕಿಡಿಕಿಯಲ್ಲಿ ಹಣಿಕಿ ನೋಡುತ್ತಾನೆ, ಅದು ತೀರ ಸಣ್ಣದು. ಒಬ್ಬಾನೊಬ್ಬ ಪ್ಯಾಸೆಂಜರರಿಲ್ಲ. ಪೋರ್ಟರ-ಸ್ಟೇಶನ್‌ಮಾಸ್ತರ ಇವರೇ ಅಲ್ಲಿಯ ನಿವಾಸಿಗಳೆಂದು ತೋರಿತು. ಬೆಳಕು ಹರೆದರೂ ಇರುಳಿನಷ್ಟು ಸ್ತಬ್ಧತೆ ಅಲ್ಲಿ ಆಳುತ್ತಿದೆ. ಹತ್ತಿರ ಕುಳಿತವರನ್ನು ಕೇಳಿದನು, 'ಯಾಕೆ ಗಾಡಿ ನಿಂತಿದೆ ಇಲ್ಲಿ?' ಯಾರಿಗೂ ಗೊತ್ತಿಲ್ಲ. ಎಲ್ಲರೂ ನಿದ್ದೆಗಣ್ಣಲ್ಲಿ. ಗಾಡಿ ಕೆಟ್ಟಿರಬಹುದೆಂದು ಒಬ್ಬ ಹೇಳಿದನು. ಕ್ರಾಸಿಂಗ ಇರಬಹುದೆಂದು ಇನ್ನೊಬ್ಬ ಸೂಚಿಸಿದನು. ಕಲಕತ್ತೆಯನ್ನು ಬೆಳಗ್ಗೆ ಸೇರಬೇಕಾದ ಗಾಡಿಯಿದು. ಹತ್ತಿರ ಬಂದಿರಬಹುದೆಂದು ಸ್ಟೇಶನ್ನಿನ ಹೆಸರನ್ನು ನೋಡಿದನು. ಬೆಂಗಾಲೀ ಹೆಸರಿತ್ತು. ಆದರೆ ಕಲಕತ್ತೆಯಿಂದ ಎಷ್ಟು

ದೂರ ಎಂಬುದು ಹಿಂದೊಮ್ಮೆ ಪ್ರವಾಸಮಾಡಿದ ಅವನಿಗೂ ಪತ್ತೆ ಹತ್ತಲಿಲ್ಲ. ನೆರೆಹೊರೆಯವನನ್ನು ಹಿಂದಿಯಲ್ಲಿ ಕೇಳಿದನು. 'ಕಲಕತ್ತೆ ಇನ್ನೂ ಬಹಳದೂರ ಇರುವದು, ನೂರು ಮೈಲವೋಲೆ' ಎಂದು ಉತ್ತರ ಬಂದಿತು. ಅಮೃತನಿಗೆ ಅದು ಹೇಗೆ ಎಂದು ಆಶ್ಚರ್ಯವಾಯಿತು. ಆಗ ಇನ್ನೊಬ್ಬ ಹೇಳಿದನು: 'ಈ ದಿವಸದಲ್ಲಿ ಹೊತ್ತಿಗೆ ಸರಿಯಾಗಿ ಗಾಡಿ ಎಲ್ಲಿ ಹೋಗುತ್ತವೆ? ಎಂದಾರೆ ಒಯ್ಯಲಿ. ಸುರಕ್ಷಿತ ಒಯ್ದರೆ ನಂನಿಮ್ಮ ಪುಣ್ಯ.' ಅಲ್ಲಿ ಕುಳಿತವರು ನಿದ್ದೆ ಯಾರದ ಮುಖದ ಮೇಲೂ ನಸುನಗೆ ಬೀರಿದರು. 'ಎಲ್ಲಿಯಾದರೂ 'ಸೆಬಾಟೇಜ' ಆಗಿರಬೇಕು' ಎಂದೊಬ್ಬ ಊಹಿಸಿದನು. 'ಆಗಿರಬೇಕು ಎಂದೇನು ಅನ್ನುವಿರಿ? ಆಗಿತ್ತು. ರಾಮಪುರ ಮುಂದೆ ಗುಡ್ಸ ಗಾಡಿಯನ್ನು ಕೆಡುವುವ ಹೊಂಚುಹಾಕಿದ್ದರು. ಡ್ರಾಯವರನ ಜಾಣತನದಿಂದ ಬರೀ ಹೊಯ್ದಾಡಿ ಅದು ಪಾರಾಯಿತು. ಅದಕ್ಕೇ ತಡವಾಗಿದೆ. ಆಗ ನಮ್ಮ ಗಾಡಿ ಹೋಗಿದ್ದರೆ ನಾವೆಲ್ಲಾ ಇಷ್ಟೊತ್ತಿಗೆ ಮೃತ್ಯುವಿನ ಮನೆಯಲ್ಲಿ ಇರುತ್ತಿದ್ದೆವು' ಎಂದು ಬಲ್ಲವನೊಬ್ಬ ವಿಸ್ತರಿಸಿ ಹೇಳಿದನು. ಹಾ ಎನ್ನುತ್ತ ಅಮೃತ ಬೆಚ್ಚಿ ಬಿದ್ದನು. 'ಮೃತ್ಯುವಿನ ಮನೆ! ಸ್ವಲ್ಪದರಲ್ಲಿ ಅದರಿಂದ ಪಾರಾದೆವೇ? ಅಂತೂ ನಿನ್ನೆ ರಾತ್ರಿ ವಿಷದ ಗಳಿಗೆ ಒಂದಿತ್ತು...... ಒಂದು ದೃಷ್ಟಿಯಿಂದ ಅದರಲ್ಲಿ ನಾವು ಸಿಕ್ಕಿದ್ದರೆ ಅದು ಅಮೃತದ ಗಳಿಗೆಯೇ ಆಗುತ್ತಿರಲಿಲ್ಲವೇ? ಸ್ವಾತಂತ್ರ್ಯದ ಯಜ್ಞ ಕುಂಡಕ್ಕೆ ಆಹುತಿಯಾಗುತ್ತಿದ್ದೆವು. ಸಾವೇನು ಇಂದಿಲ್ಲ ನಾಳೆ ಬರತಕ್ಕದ್ದೇ. ಆದರೆ ಇಂಥ ಸಾವು?' ಅವನ ಮೈ ಜುಮ್ಮುದಟ್ಟಿತು. ಈ ಯೋಚನೆಗಳ ಭರವನ್ನು ತಡೆಯಲು ಹೊರಗೆ ತಲೆಹಾಕಿದನು. ದೂರದಲ್ಲಿ ಇಂಜನ್ನು ಸುಮ್ಮನೆ ಸುಯ್ಗುಡುತ್ತಿದೆ. ಹೊರಡುವ ಗಡಿಬಿಡಿ ಯೆಂಬುದಿಷ್ಟೂ ಇಲ್ಲ.

ಬೆಳಕು ಹೆಚ್ಚಿತು, ಪೂರ್ವದಲ್ಲಿ ಕೆಂಪು ರಸರಸವಾಗಿ ತೋರಿತು. ನಿಲ್ದಾಣ ವನ್ನು ಆಚೆಯಿಂದ ಈಚೆ ಅಮೃತ ಕಣ್ಣಿಟ್ಟು ನೋಡಿದನು. ಅವನಿಗೆ ಮೊದಲು ನಸುಕಿನಲ್ಲಿ ಕಾಣದ ನೋಟ ಈಗ ನಿಚ್ಚಳವಾಗಿ ಕಂಡಿತು. ನೋಡಿದಷ್ಟು ಮೈನಡುಗಿತು, ಮನಸ್ಸು ಉಡುಗಿತು. ಏನಿದು? ನಿಲ್ದಾಣವೇ ಸ್ಮಶಾನವೇ? ಇಷ್ಟೇಕೆ ಎಲುಬಿನ ಹಂದರಗಳು ಹಾಕಿದ ತೊಗಲಿನ ಬಟ್ಟೆಗಳಲ್ಲಿ-? ಪ್ಲಾಟ್‌ಫಾರ್ಮಿನ ಒಳಗಡೆ, ಮೈಯೆಂಬ ಹೆಸರಿನ ಬಾಳ್ವೆಣಗಳನ್ನು ಕಟಾಂಜನಕ್ಕೆ ಆನಿಸಿಬಿಂದನ್ನೊಂದು ಅಮುಚಿಕೊಂಡು ಅದೆಷ್ಟು ಜೀವಗಳು ಅಲ್ಲಿ ಬಿದ್ದಿವೆ!

ನ್ನೈನೋಲೆ ಹೆಸರಿಗೆ ಚಿಂದಿ ಅರಿವೆ. ನಿಜವಾಗಿ ಒಂದು ನ್ಯೆಗೆ ಇನ್ನೊಂದು ಅರಿವೆಯಂತಾಗಿದೆ. ಮುಖಗಳೆಲ್ಲ ಅಕರಾಳ ವಿಕರಾಳ, ನೋಟವೆಲ್ಲ ಶೂನ್ಯ-ಭೀಕರ. ಸ್ವಲ್ಪವೂ ಅಲುಗಾಟವಿಲ್ಲ. ಕೂಳಿನ, ಅದು ದೊರೆಯದಿದ್ದರೆ, ಸಾವಿನ ಧ್ಯಾನ ಮಾಡುವ ತಪಸ್ವಿಗಳಂತೆ ಬಿದ್ದಿರುವರು ಆ ಜೀವನ್ಮೃತರು. ಅಮೃತ ಹಾಗೇ ನೋಡಿದನು, ಕರಳು ಕಿತ್ತಿದಂತಾಗಿ ಕಂಬನಿಗರೆದನು. ಒಂದು ಆ 'ಎಲುಹಂದರ'—ಹಿಂಡಿ ಹಿಪ್ಪೆಯಾದ ಜೋಲುಮೊಲೆಯ ತಾಯಿಜೀವ-ತೊಡೆಯ ಮೇಲಿನ ೨-೩ ವರ್ಷದ ಮಗುವನ್ನು ನೋಡಿ ಕನಿಕರಿಸಿ, ಹತ್ತಿರದ ತಗಡಿನ ಡಬ್ಬಿಯನ್ನು ನಡನಡುಗುವ ಕೈಯಿಂದೆತ್ತಿ ಮೋರೆಯುವರೆಗೊಯ್ದು ಅದರಾಳದಲ್ಲಿ ಕಣ್ಣಿಟ್ಟು ನೋಡಿತು—ಮಗುವಿಗೆ ಕೊಡಲಿಕ್ಕೆ ಅನ್ನವಿರುವುದೇ ಎಂದು. ನೋಡಿಯೇ ನೋಡಿತು, ಏನೇನೂ ಇಲ್ಲವೆಂದು ಕಂಡಿತು.' ಆಗ ಅತ್ಯಂತ ನಿರಾಶೆಗೊಂಡು ಡಬ್ಬಿಯ ಕೈಬಿಟ್ಟು ಗೋಣು ಚೆಲ್ಲಿಕೊಂಡಿತು. ಆ ಡಬ್ಬಿ ಮಗುವಿನ ಮೇಲೆ ಬಿದ್ದು ಅದನ್ನು ಎಚ್ಚರಿಸಲು ಅದು ಹೊಯ್ಯೆಂದು ಅಳತೊಡಗಿತು. ಸ್ಮಶಾನಶಾಂತಿ ಅಳುವಿನ ಅಲೆಗಳಿಂದ ಕದಡಿತು. ಗಾಡಿಯಲ್ಲಿದ್ದವರೆಲ್ಲ ಅತ್ತ ನೋಡಿದರು. ಅನೇಕರಿಗೆ ಅದು ವಾಡಿಕೆಯ ದೃಶ್ಯ. ಅಂತೇ ತಣ್ಣಗೆ ಕುಳಿತರು. ಆ ಮಗು ಡಬ್ಬಿಯಲ್ಲಿ ಕೈ ಹಾಕಿ ಒಂದು ಅಗುಳೂ ಇಲ್ಲದ ತಳವನ್ನು ಕೆದರಿ ಕೆದರಿ ನೆಕ್ಕಹತ್ತಿತ್ತು. ಏನೂ ಸಿಗದಿದ್ದರೂ ತಿನ್ನುತ್ತಿರುವೆನೆಂಬ ಭ್ರಮೆಯೇ ಅದಕ್ಕೆ ತಣಿವನ್ನು ಕೊಟ್ಟಿತೇನೊ! ಅಮೃತ ನೋಡಲಾರದೆ ಕಣ್ಣು ಮುಚ್ಚಿದನು.

ಅಮೃತನ ಡಬ್ಬಿಗೆ ತೀರ ಹತ್ತಿರ ಎರಡನೆಯ ವರ್ಗದ ಡಬ್ಬಿಯಿತ್ತು. ಅದರಲ್ಲಿ ಕುಳಿತ ಕೆಮ್ಮೋರೆಯ ಸಾಹೇಬನೊಬ್ಬನು ಮುಖ ತೊಳೆದು ಬೆಳಗಿನ ಚಹವನ್ನು ತಗೊಳ್ಳುತ್ತಲಿದ್ದನು. ಅವನಿಗೂ ಹೊರಗಿನ ನೋಟ ಕಂಡಿತು. ಅದೇಕೊ ಅವನ ಕನಿಕರ ದ್ರವವೊಡೆಯಿತು, 'ಇದರಾವ' ಎಂದು ಸನ್ನೆ ಮಾಡಿ ಆ ತೆರವಾದ ಡಬ್ಬಿ ನೆಕ್ಕುವ ಮಗುವನ್ನು ಕರೆದು ಅವನು ತನ್ನ ಮುಂದಿನ ತಟ್ಟೆಯಲ್ಲಿಯ ಬ್ರೆಡ್ಡಿನ ಚೂರುಗಳನ್ನೂ ಬಿಸ್ಕೀಟನ್ನೂ ಕೊಡ ಹೋದನು. ದರಿದ್ರ ಹಿಂದುಸ್ತಾನಕ್ಕೆ ಆಳರಸರು ಸ್ವರಾಜ್ಯದ ಎಂಜಲು ತುಣುಕುಗಳನ್ನು ಕೊಡಬಯಸುವಂತೆ. ಅವನಿಗೆ ಆಶ್ಚರ್ಯವಾಯಿತು. ಹೊಯ್ಡಾಡುತ್ತ ಹಪಾಪಿಸುತ್ತ ಬಂದ ಆ ಮಗು ಆ ತಿನಿಸನ್ನು ನೋಡಿದ ಕೂಡಲೆ ಅದು ಬೇಡವೆಂದು ಗೋಣು ಹಾಕಿತು. ಚೀರಿ ಚೀರಿ ಅಳುತ್ತ ಆ ಡಬ್ಬಿಯನ್ನು

ಚಾಚಲಿಲ್ಲ. ಹೀಗೇಕೆ ಮಾಡುವದೆಂದು ಅಲ್ಲಿಯೇ ಇದ್ದ ಹಿಂದೀಯನಾದ ಸಹ ಪ್ರವಾಸಿಯನ್ನು ಕೇಳಿದನು.

'ನೀ ಕೊಡುವದನ್ನು ಆ ಮಗು ತಿನ್ನದು. ಅವರ್‍ಯಾರೂ ತಿನ್ನಲಾರರು.'

'ಓ. ಇವರು ಬೇಕಾದ್ದು ತಿನಬಹುದೆಂದು ನಾನೆಣಿಸಿದ್ದೆ '

'ಛೀ. ಅವರಿಗೆ ಬೇಕು ಅನ್ನ, ಅಕ್ಕಿಯ ಅನ್ನ ಇಲ್ಲವೆ ಗಂಜಿ, ಜೊತೆಗೆ ಮೀನ. ಇನ್ನೇನೂ ಅವರಿಗೆ ಸೇರುವದಿಲ್ಲ, ತಡೆಯುವದಿಲ್ಲ.'

ಗಾರ್ಡನ ಸೀಟಿ ಕೇಳಿಸಿತು. ಗಾಡಿ ಸರಿಯಿತು. ಆ ದಯಾರ್ದ್ರ ಸಾಹೇಬನು ದಾನ ಕೊಟ್ಟೇ ತೀರಬೇಕೆಂದು ಪಣ ತೊಟ್ಟಂತೆ ತನ್ನ ಚಣ್ಣದ ಕಿಸೆಯೊಳಗಿಂದ ಕೆಲವು ಚಿಲ್ಲರ ಹಣವನ್ನು ತೆಗೆದು ಆ ಮಗುವಿನ ತೆರವಾದ ಡಬ್ಬಿಯಲ್ಲಿ ತೂರಿದನು. ಅವನ ಡಬ್ಬಿ ಮುಂದೆ ಸಾಗಿತು. ಆದರೆ ಅವನ ದೃಷ್ಟಿ ಆ ಮಗುವಿನ ಮೇಲೆ ಮಾತ್ರ. ಅದು ಆ ಬಿಲ್ಲಿಗಳನ್ನು ಒಮ್ಮೆ ಕಣ್ಣಿಟ್ಟು ನೋಡಿ ನಿರಾಶೆಯ ಮೊಗ ಮಾಡಿ ಆ ಡಬ್ಬಿಯನ್ನು ತನ್ನಿದಿರು ಡಬ್ಬಹಾಕಿತು, ತಾಮ್ರ ನಾಣ್ಯವೆಲ್ಲ ಸಪ್ಪಳ ಮಾಡುತ್ತ ಸೂರೆಯಾಗಿ ಬಿದ್ದಿತು. ಇದನ್ನು ನೋಡಿ ಸಾಹೇಬನ ಕೆಂಪು ಮುಖವೂ ಬಿಳುಪಾಯಿತು.'ಇಂಥ ಸ್ವರಾಜ್ಯ ನಮಗೆ ಬೇಡವೆಂದು ಧಿಕ್ಕರಿಸಿತೇ ಬಡಭಾರತ ?' ಎಂದು ಇದನ್ನೆಲ್ಲ ನೋಡುತ್ತಿದ್ದ ಅಮೃತ ತ್ರಸ್ತನಾಗಿ ತನ್ನೊಳಗೆ ಅಂದುಕೊಂಡನು.

ಡಬ್ಬಿಯೊಳಗೆ ಈ ಬಗ್ಗೆ ಹರಟೆ ನಡೆಯಿತು. ಹತ್ತಿರದ ಹಳ್ಳಿಗಳಲ್ಲಿಯ ಜನವೆಲ್ಲ ಅಕ್ಕಿಯೆಲ್ಲ ತೀರಿಹೋಗಲು ಕೂಳುದೊರೆಯದೆ ಹೌಹಾರಿ ಆ ನಿಲ್ದಾಣಕ್ಕೆ ಬಂದಿರುವುದೆಂದೂ ಕಲಕತ್ತೆಗೆ ಹೋಗಬಯಸಿ ಅಲ್ಲಿ ತಂಗಿರುವುದೆಂದೂ ತಿಳಿಯಿತು. ಎಲ್ಲ ನಿಲ್ಮನೆಗಳಲ್ಲಿಯೂ ಎಲ್ಲ ರಸ್ತೆಗಳಲ್ಲಿಯೂ ಇದೇ ಈಗ ಕಣ್ಣಿಗೆ ಬೀಳುವ ದೃಶ್ಯ. ಸುತ್ತೆಲ್ಲ ಸೃಷ್ಟಿ ಹಸುಹಸುರಾಗಿ ತಾಳೆ ತೆಂಗಿನ ಮರಗಳಿಂದ ಅತ್ಯಂತ ಸುಂದರವಾಗಿದೆ. ಗದ್ದೆಗಳು ಸುಗ್ಗಿಗೆ ಸಿದ್ಧವಾದ 'ಔಸ' ಪೈರಿನ ತೆನೆಗಳಿಂದ ಚಿನ್ನದ ಕಣಜವಾಗಿದೆ, ಸೂರ್ಯ ಕಿರಣಗಳ ಲೇಪ ಪಡೆದು ಬಂಗಾರಮಯವಾದ ಬಂಗಾಲವನ್ನು ಎತ್ತಿ ತೋರಿಸುತ್ತವೆ. ಆದರೆ ಈ ನಿಸರ್ಗದ ನಡುವೆ ಇದ್ದ ಮಾನವ ಇದ್ದೂ ಇಲ್ಲದ ಗತಿಗೇಡಿಯಾಗಿದ್ದಾನೆ. ಹಸಿವೆ ಸಾವು! ಹಸಿವೆಯಿಂದ ಸಾವು ! ಇದೇ ಎಲ್ಲ ಕಡೆಯ ನೋಟ. ನಾಳಿನ ಬೆಳೆ ಬೇಡ, ಇಂದಿಗೆ ಅಕ್ಕಿ ಬೇಕು, ಅನ್ನ ಬೇಕು, ಇನ್ನೇನೂ ಕೊಟ್ಟರೂ ಬೇಡ; ಇದೇ ಎಲ್ಲ ಕಡೆಯ ಕೂಗು.

ಈ ಬಗೆಯ ಯೋಚನೆಗಳ ಉದ್ವೇಗದಲ್ಲಿ ಅಮೃತನು ತನ್ನ ಊಟ-ಉಡಿಗೆ ಯಾವುದನ್ನೂ ಒಲ್ಲದೆ ಮಧ್ಯಾಹ್ನದಷ್ಟೊತ್ತಿಗೆ ಕಲಕತ್ತೆ ಸೇರಿದನು. ಗಾಡಿ ತಡವಾಗಿ ಬಂದರೂ ಅವನನ್ನು ಇಳಿಸಿಕೊಳ್ಳಲು ವೀಣೆ ಸ್ಟೇಶನ್ನಿಗೆ ಬಂದಿದ್ದಳು. ನೋಡಿದೊಡನೆ 'ಅಂತೂ ಬಂದೇಬಿಟ್ಟಿಯಾ?' ಎಂದು ಮುಗುಳು ನಗೆ ಬೀರುತ್ತ ಕೇಳಿದಳು. ಅಮೃತ ಹಣೆಮುಡಿಕೆಯನ್ನು ತೋರಿ ಉಸು ರ್ಗರೆದು 'ಹೌದು. ಬಂದೆ ಮೃತ್ಯುವಿನ ಮನೆಗೆ. ಬರದೆ ಇದ್ದರೆ ಅಲ್ಲಿ ನಾನು ಬದುಕುವದೇ ಅಶಕ್ಯವಿತ್ತು' ಎಂದು ಭಾವನಾಮಯವಾಗಿ ಹೇಳಿದನು. ಇಬ್ಬರೂ ಅದೇ ವಿಷಯ ಮಾತಾಡುತ್ತ ಬೀದಿಯಲ್ಲಿ ಕಾಣುವ ಪ್ರತಿದಿನದ ನೋಟಗಳನ್ನು ನೋಡುತ್ತ ರಾಮಕೃಷ್ಣ ಮಠದ ಬಿಡಾರದತ್ತ ತೆರಳಿದರು.

ಅಮೃತನು ಜಳಕ-ಊಟ ಮುಗಿಸಿ ಪ್ರಜ್ಞಾನಂದ ಸ್ವಾಮಿಜಿಯವರ ದರ್ಶನಕ್ಕೆಂದು ಅವರ ಕೋಣೆಗೆ ವೀಣೆಯೊಂದಿಗೆ ಹೋದನು. ಪರಿಹಾರದ ಕೆಲಸದ ಸಂಬಂಧಿ ಹಲವು ಕಾರ್ಯಕರ್ತರೊಡನೆ ಅವರು ಮಾತಾಡುತ್ತಲಿದ್ದರು. ಅಮೃತನನ್ನು ಕಂಡಕೂಡಲೆ 'ನೀ ಬಂದಿಯಾ ಅಮೃತ್, ಉತ್ತಮವಾಯಿತು. ಕೂತುಕೊ' ಎಂದು ಬರಮಾಡಿದರು. ಇತರರು ತಮ್ಮ ಮಾತು ಮುಗಿಸಿ ಸ್ವಾಮಿಜಿಯವರ ಸೂಕ್ತ ಸಲಹೆಗಳನ್ನು ಪಡೆದು ಹೋಗುವವರೆಗೆ ಇಬ್ಬರೂ ಸುಮ್ಮನೆ ಅಲ್ಲಿ ಹಾಸಿದ ಚಾಪೆಯ ಮೇಲೆ ಕುಳಿತರು. ಅಮೃತನು ಗೋಡೆಯ ಮೇಲೆ ತಗಲಿಸಿದ ಪರಮಹಂಸರ, ವಿವೇಕಾನಂದರ ಹಾಗೂ ಬೇಲೂರಮಠದ ಭವ್ಯ ಚಿತ್ರಗಳನ್ನು ನೋಡುವದರಲ್ಲಿ ತಲ್ಲೀನನಾಗಿದ್ದನು. ವೀಣೆ ಸ್ವಾಮಿಜಿಯವರ ಅನುಭವಪೂರ್ಣ ಸಲಹೆಗಳನ್ನು ಕೇಳುತ್ತಿದ್ದಳು. ಉಳಿದವರು ಹೋದ ಮೇಲೆ ಸ್ವಾಮಿಜಿ ಅಂದರು : 'ಅಮೃತ್, ಭೆಟ್ಟಿ ಆಗಿ ವರ್ಷವಾಗಬಂತಲ್ಲವೆ? ಈ ಬರಗಾಲ ಬರದಿದ್ದರೆ ನಾವೆಲ್ಲಿ ಸೇರುತ್ತಿದ್ದೆವು?' ಮೂವರೂ ಬಂದ ನಗೆಯನ್ನು ತಡೆದರು. 'ಪುಸ್ತಕ ಎಲ್ಲಾ ಗಂಟುಕಟ್ಟಿಟ್ಟು ಬಂದೆಯ?' ಸ್ವಾಮಿಜಿ ಕೇಳಿದರು. 'ಹೌದು' ಎಂದಿಷ್ಟೆ ಅಮೃತ ಮಾರುನುಡಿದನು. ಆ ಪ್ರಶ್ನೆ ಅವನಲ್ಲಿ ಕೆರಳಿಸಿದ ನೆನಪು ಅವನ ಕೊರಳುಬ್ಬಿಸಿತ್ತು. ವೀಣೆಯೆ ಹೇಳಿದಳು : 'ಹೋದ ವರ್ಷವೂ ಹೀಗೇ ವ್ಯರ್ಥಹೋಯಿತೆಂದು ಅವನ ತಾಯಿತಂದೆ ಗೋಳಾಡಿದರು. ಈ ಸಾರೆ ಪರೀಕ್ಷೆ ಮುಗಿಸಲೇ ಬೇಕೆಂದು ಅವರು ಕಟ್ಟು ಹಾಕಿ ಕಳಿಸಿದ್ದರು. ಆ ಕಟ್ಟನ್ನೊಡೆದು ಮತ್ತೆ ಬಂದು

ಬಿಟ್ಟಿರತಾನೆ.' 'ಅಂತೇ ನಾ ಕರೆಯಲಿಲ್ಲ. ಆದರೆ ಬಂದಮೇಲೆ ಮಾತ್ರ ಹೋಗೆಂದು ಹೇಳಲಾರೆ. ಅಮೃತ್, ಇಲ್ಲಿ ನಮ್ಮೆಲ್ಲರ ಮನುಷ್ಯತ್ವದ ದೊಡ್ಡ ಪರೀಕ್ಷೆ ನಡೆದಿದೆ. ಅಕೋ ಆ ಪರಮಪೂಜ್ಯ ಗುರುಗಳು (ಗೋಡೆಯ ಮೇಲಿನ ಭಾವಚಿತ್ರಗಳನ್ನು ತೋರಿಸುತ್ತ) ಕಲಿಸಿದ ವೇದಾಂತ, ವಿಶ್ವಧರ್ಮ ಇಂದು ಒರೆಗೆ ಹತ್ತಿದೆ. ಈ ಪರೇಕ್ಷೆಯಲ್ಲಿ ಪಾಸಾಗು. ಅವರು ಅಮೃತ ಪದವಿಯನ್ನು ಕೊಡುತ್ತಾರೆ. ಮನೆಯವರ ದುಃಖ ತೀರ ಸಹಜ. ಸಂನ್ಯಾಸಿಗೆ ಅದು ಹೆಚ್ಚಾಗಿ ತಿಳಿಯುತ್ತದೆ. ಆದರೆ ಜನದ ದುಃಖ ನೋಡಲಾಸಲ್ಲ. ನೋಡು, ಈ ಪ್ರಾಂತವೆಲ್ಲ ಯಮರಾಯನ ಬಿಡಾರವಾಗಿದೆ. ಮನುಷ್ಯರ ಹೆಣಗಳು ಸತ್ತ ನೊಣಗಳಂತೆ ಬೀಳುತ್ತಿವೆ. ಇದನ್ನು ನಾವು ತಪ್ಪಿಸಲಾರೆವೇ? ಹೆಚ್ಚು ಮಾತು ಬೇಡ. ಈ ಕ್ಷಣದಿಂದ ನೀ ಕೆಲಸಕ್ಕೆ ಮೊದಲುಮಾಡು. ವೈದ್ಯಕೀಯ ವಿಭಾಗದಲ್ಲಿಯೇ ನಿನ್ನ ಸಹಾಯ ಅಗತ್ಯ, ಹಸಿದು ಸಾಯಲಾದವರನ್ನು ಕೇಂದ್ರಕ್ಕೆ ತಂದು ಉಪಚರಿಸಬೇಕು. ಅನ್ನಕ್ಕಿಂತ ಮಿಗಿಲಾಗಿ ಅವರಿಗೆ ತಾಯಿಯಂಥ ಆರೈಕೆ ಬೇಕು. ಕೆಲಸಕ್ಕಾಗಿ ಕೆಲಸ ಎಂದು ಅಸಡ್ಡೆಯಿಂದ ಮಾಡಬೇಡ. ಪ್ರೀತಿ ದಯೆದುಂಬಿದ ಎದೆಯನ್ನು ಚಾಚಿ ಸಾವಿನ ದವಡೆಯಿಂದ ಬಡಜೀವಗಳನ್ನು ಹೊರಗೆ ತರಬೇಕು. ವೀಣೆ ನರ್ಸ್ ಆಗಿ ನೀ ಡಾಕ್ಟರ್ ಆಗಿ ನಿಮ್ಮೊಂದು ಪಥಕವನ್ನೇ ಮಾಡಿಕೊಂಡು ಸುರುವು ಮಾಡಿರಿ. ವೀಣೆಯಿಂದ ಉಳಿದ ವಿಷಯ ತಿಳಿಯುವದು. ನಾ ಈಗ ಸದ್ಯ ಗವರ್ನರರ ಭೆಟ್ಟಿಗೆ ಹೋಗಬೇಕು. ಮಂತ್ರಿಮಂಡಳದಿಂದ ಆಗದ ಕೆಲಸ ಸಾರ್ವಜನಿಕ ಸಂಸ್ಥೆಗಳಿಂದ ಆಗುತ್ತಿರುವದೆಂದು ಆ ಸಾಹೇಬನಿಗೆ ಗೊತ್ತಾಗಿದೆ; ಅದಕ್ಕೆ ಕರೆಕಳಿಸಿದ್ದಾನೆ ಮತ್ತೆ ಕೂಡೋಣ.'

ಸ್ವಾಮಿಜಿ ಎದ್ದರು. ಅಮೃತ ವೀಣೆ ನಮಸ್ಕಾರಮಾಡಿ ತಮ್ಮ ಇಕ್ಕೆಗಳಿಗೆ ಹೋದರು. ಕೆಲಹೊತ್ತಾದ ಮೇಲೆ ಇಬ್ಬರೂ ಮಠದಲ್ಲಿಯ ಪರಿಹಾರ ಕೇಂದ್ರವನ್ನು ಸುತ್ತಾಡಿ ನೋಡಿಕೊಂಡು ಬಂದರು. ಅಚ್ಚುಕಟ್ಟಾಗಿ ನಡೆದ ಅನ್ನಛತ್ರ ವೈದ್ಯಕೇಂದ್ರ ಇವನ್ನು ನೋಡಿ ಅಮೃತನು ಬೆರಗುವಟ್ಟನು. ಮಾನವತೆಯ ಸೇವೆಯಲ್ಲಿ ತನ್ನ ಆಯುಷ್ಯವನ್ನೆಲ್ಲ ಧಾರೆಯೆರೆಯಬೇಕೆಂದೂ ಅದರಲ್ಲಿ ಸಾವು ಬಂದರೂ ಅದಕ್ಕೆ ಸ್ವಾಗತವೆಂದೂ ತನ್ನಲ್ಲಿ ಅಂದುಕೊಂಡನು. ಕಾರ್ಯದ ಉತ್ಸಾಹವು ಅವನಲ್ಲಿ ಉಕ್ಕೇರುತ್ತಿತ್ತು. ರಾಮಕೃಷ್ಣ ಮಠದಿಂದ ಕಲಕತ್ತೆಯಲ್ಲಿ ಮತ್ತು ಪ್ರಾಂತದ ಬೇರೆ ಬೇರೆ ಹಳ್ಳಿ ಪಟ್ಟಣಗಳಲ್ಲಿ ಅನೇಕ ಕೇಂದ್ರಗಳು

ಸ್ಥಾಪಿತವಾಗಿ ಇದೇ ಬಗೆಯಲ್ಲಿ ಕೆಲಸ ನಡೆಸಿವೆ. ಮಠದ ಸಂನ್ಯಾಸಿಗಳೆಲ್ಲರೂ ತಮ್ಮ ಧ್ಯಾನ–ವ್ಯಾಸಂಗಗಳನ್ನು ಬದಿಗಿರಿಸಿ ಸೇವಾನಂದರಾಗಿದ್ದಾರೆ, ಬೇರೆ ಅರೆಹೊತ್ತಿನ ಕೆಲಸಗಾರರೂ ನೂರುಗಟ್ಟಳೆಯಾಗಿ ನೆರವನ್ನು ಈಯು ತ್ತಿದ್ದಾರೆ. ಇದನ್ನೆಲ್ಲ ವೀಣೆ ಬಣ್ಣಿಸಿ ಹೇಳಿದಳು. 'ಇಂಥ ಸಂಸ್ಥೆಯ ವತಿಯಿಂದ ಸೇವೆ ಸಲ್ಲಿಸುವುದು ನನ್ನ ದೊಡ್ಡ ಭಾಗ್ಯ.' ಅಮೃತ ಆಡಿದನು.

ಸಂಜೆ ಹೊತ್ತು. ಕಲಕತ್ತೆಯ ಬೀದಿಗಳಲ್ಲಿ ಅನ್ನಾನ್ನಗತಿಕರು ತಿರುಗು ತ್ತಿದ್ದಾರೆ, ಒರಲುತ್ತಿದ್ದಾರೆ. ಬೀದಿಯ ಬದಿಗಳಲ್ಲಿ ಬಿದ್ದ ಕುಟುಂಬಗಳು ಹೊರಳುತ್ತಿವೆ, ಸಾವಿನೊಡನೆ ಗುದ್ದಾಡುವಂತೆ ವಿಕಾರವಾಗಿ ಕೈಕಾಲುಮುಖ ಮಾಡುತ್ತಿವೆ. ವೀಣೆ-ಅಮೃತರು ಈ ಬಂಧುಗಳಲ್ಲಿ ಕೆಲವರನ್ನು ಆರೈಕೆಗೆ ಕರತರ ಬೇಕೆಂದು ಮಠದಿಂದ ಹೊರಬಿದ್ದರು. ಅಷ್ಟರಲ್ಲಿ ತಾರಿನವನು ಬಂದು ಅಮೃತ ನಿಗೆ ಒಂದು ತಾರು ಕೊಟ್ಟನು. ಅವನು ನಿರೀಕ್ಷಿಸಿದಂತೆ ಅದು ಬಾಗಿಲುಕೋಟೆ ಯಿಂದ ಬಂದಿತ್ತು. ಅವನ ಪತ್ರ ಮುಟ್ಟಿದ ಮೇಲೆ ಏನು ಪರಿಣಾಮವಾಗುವು ದೆಂಬುದು ಅವನಿಗೆ ಗೊತ್ತೇ ಇತ್ತು. ಆದರಿಂದ ಅವನು ಗಾಬರಿಯಾಗಲಿಲ್ಲ. ಆದರೆ ತಾರಿನಲ್ಲಿ ಬರೆದದ್ದು ಓದಿದೊಡನೆ ಅವನ ಮುಖ ಸಣ್ಣದಾಯಿತು. ವೀಣೆ ಅದನ್ನು ತಗೊಂಡು ನೋಡಿದಳು. ಇಬ್ಬರೂ ಕಂಬದಂತೆ ನಂತರು. 'ನೀ ಊರಿಗೆ ಹೋಗಿ ಬಿಡು ಅಮೃತ್.' ವೀಣೆ ಕೆಲನಿಮಿಷಗಳಾದ ಮೇಲೆ ಅಂಗಲಾಚಿದಳು. ಅದಕ್ಕೆ ಉತ್ತರವೆಂದರೆ ದೊಡ್ಡ ಬಿಸಿಯುಸಿರು. 'ನೋಡು ನೀ ಇಲ್ಲಿರುವುದರಿಂದ ಇಲ್ಲಿಯ ಪ್ರಳಯವನ್ನು ತಪ್ಪಿಸಬಹುದೇ? ಅದೇ ತಿರುಗಿಹೋಗಿ ನೀ ನಿನ್ನ ಓದಿ ನಲ್ಲಿ ತೊಡಗಿದರೆ ನಿನ್ನ ಮನೆಯಲ್ಲಿಯ ಪ್ರಳಯವನ್ನು ತಪ್ಪಿಸಬಲ್ಲಿ. ನೀ ಹೋಗದಿದ್ದರೆ' ಅರ್ಧಕ್ಕೆ ವೀಣೆ ತಡೆದಳು. ಅವಳಿಗೆ ಅಮೃತನ ಪ್ರಪಂಚದ ಸುಖದುಃಖ ಚೆನ್ನಾಗಿ ತಿಳಿದಿತ್ತು. ಇನ್ನೊಂದು ಅವ್ಯಕ್ತ ಆಶೆಯಿಂದ ತನ್ನ ಜೀವಾಳದಲ್ಲಿ ಅವಳು ಆ ಪ್ರಪಂಚದೊಡನೆ ಸಮರಸವಾಗುತ್ತ ನಡೆದಿದ್ದಳು ಅವಳ ಅಪೂರ್ಣ ವಾಕ್ಯವು ನಿಲ್ಲಿಸಿದ ಘೋರ ಚಿತ್ರದಿಂದ ಅಮೃತನ ಕಣ್ಣು ಹನಿಯೊಡೆಯಿತು. ಅವನು ಮಂಜುಗಣ್ಣಿನಿಂದ ಸಾವಿರಾರು ಮೈಲು ದೂರ ವಾಗಿದ್ದ ತಂದೆ ತಾಯಿಗಳನ್ನು ಕಂಡನು. ಅವರ ಸಂಕಟಗ್ರಸ್ತವಾದ ಅಳು ಮೋರೆ, ನರಳಾಟಗಳು ಕಂಡವು, ಕೇಳಿದವು. ಅವನು ಕೆಳಕ್ಕೆ ದೊಪ್ಪನೆ ಕುಳಿತನು. ವೀಣೆಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಮೆಲ್ಲಗೆ

ಅವನನ್ನು ಎಬ್ಬಿಸಿ ಕೋಣೆಗೆ ಕರೆದೊಯ್ದಳು. ಅವನನ್ನು ಮಂಚದಲ್ಲಿ ಮಲಗಿಸಿ ತಲೆಯ ಮೇಲೆ ಕೈಯಾಡಿಸುತ್ತ ಕೂತಳು. ಕೆಲಹೊತ್ತಿನ ಮೇಲೆ ಅಮೃತನು ಘೂರ್ಣಿಸುವ ಕಡಲ ಭರವಿಳಿದಂತೆ ಶಾಂತವಾದನು. ಎದ್ದು ಕುಳಿತು ಸುತ್ತೆಲ್ಲ ನೋಡಿದನು. 'ನಡೆ'ಯೆಂದು ವೀಣೆಗೆ ಮೊದಲಿನ ದನಿಯಲ್ಲಿ ಹೇಳಿದನು. 'ಎಲ್ಲಿಗೆ ?' ಎಂದವಳು ಕೇಳಿದಳು. ಸಾಮಾನು ಕಟ್ಟಿ ಸ್ಟೇಷನ್ನಿಗೆ ಹೋಗ ಬೇಕೆಂದು ಅವನು ಅನ್ನುತ್ತಿರಬಹುದೇ ಎಂದವಳ ಪ್ರಶ್ನೆಯ ಆಶಯವಾಗಿತ್ತು. 'ಎಲ್ಲಿಗೆಂದರೆ ? ಕೈಕೊಂಡ ಕೆಲಸಕ್ಕೆ. ಮೃತ್ಯುವಿನ ಮನೆಯಿಂದ ನಾಡಿನ ಜನ ವನ್ನು ಬದುಕಿನ ಬಯಲಿಗೆ ತರಲಿಕ್ಕೆ.' ಅವನು ಎದ್ದು ನಿಂತನು. ಒಳಕಿಸೆಯಲ್ಲಿ ತನ್ನ ಸ್ಟೆಥೋಸ್ಕೋಪ್ ಇರುವುದನ್ನು ನೋಡಿಕೊಂಡನು. ದೃಢ ನಿರ್ಧಾರವು ಅವನಲ್ಲಿ ಮೂಡಿತ್ತು. 'ಅಲ್ಲ ಅಮೃತ್ ತಾರು ಬಂದಿದೆಯಲ್ಲ' ಎಂದು ವೀಣೆ ಮತ್ತೆನೆನಪು ತೆಗೆದಳು. 'ಹೌದು. ಬಂದಿದೆ. ಕೂಡಲೇ ಹೊರಟು ಬರಬೇಕಂತೆ. ನಾ ಬರದಿದ್ದರೆ ಅವರು ಬದುಕಿದ್ದು ನೋಡಲಾರೆನಂತೆ. ಆದರೆ, ವೀಣಾ, ನಾ ತಿರುಗಿ ಹೋದರೆ ನಾ ಬದುಕಿದ್ದು ಅವರು ನೋಡುವರೇ ? ಇದಕ್ಕೆ ಉತ್ತರ ವೇನು ? ನನ್ನ ನಿಶ್ಚಯವನ್ನು ಈ ತಾರು ಕದಲಿಸಲಾರದು.' ವೀಣೆ ನಿರುತ್ತರ ಳಾದಳು. ಇಬ್ಬರೂ ಬೀದಿಗುಂಟ ನಡೆದರು.

ನೋಡಲಿಕ್ಕೆ ಕಲಕತ್ತೆ ಎಂದಿನಂತೇ ಇದೆ. ಹಿಂದುಸ್ಥಾನದ ಮೊದಲ ನೆಯ ದೊಡ್ಡ ಪಟ್ಟಣ, ಯುದ್ಧ ಕಾಲದಲ್ಲಿ ಸೈನಿಕರು ತೆರಪಿಲ್ಲದೆ ಸೇರಿದ್ದರಿಂದ ಜನಸಂಖ್ಯೆ ಇನ್ನೂ ಹೆಚ್ಚಿದೆ. ಮೇಲೆ ಜಗತ್ತಿನಲ್ಲಿಯೇ ಇದನ್ನು ದೊಡ್ಡ ಪಟ್ಟಣ ಮಾಡಲೆಂದೋ ಏನೋ ಪ್ರಾಂತದ ಎಲ್ಲ ದಿಕ್ಕುಗಳಿಂದ ಈಗ ನಿರಾಶ್ರಿ ತರು ಬೇರೆ ಬಂದು ತುಂಬುತ್ತಿದ್ದಾರೆ! ಆದರೆ ಯಮದೂತರನ್ನು ಅವರು ಕಟ್ಟಿ ಕೊಂಡೇ ಬಂದ ಕಾರಣ ಅವರಿಂದ ಬಹಳ ದಿನ ತೊಂದರೆಯಾದೀತೆಂಬ ಹೆದರಿಕೆ ಊರ ಹಿರಿಯರಿಗಿಲ್ಲ! ಜೀವನ ಪ್ರವಾಹ ಎಂದಿನಂತೆ ಸಂತವಾಗಿ ಹರಿಯುತ್ತಿದೆ. ಆಫೀಸು-ಕಾರಖಾನೆಗಳಿಂದ ದಿನಗೆಲಸ ಮುಗಿಸಿ ಟ್ರ್ಯಾಮ-ಬಸ್ಸಿನಲ್ಲಿಯೂ ಕಾಲುನಡಿಗೆಯಿಂದಲೂ ಚಾಕರರು ಮನೆಗೆ ಹೋಗುತ್ತಿದ್ದಾರೆ; ಅವರ ಅನ್ನ ಅವರಿಗಾಗಿ ಮನೆಯಲ್ಲಿ ಬೇಯುತ್ತಿದೆ. ವ್ಯಾಪಾರ ಮುಗಿಸಿ ಅಂದಿನ ಗಳಿಕೆಯ ಸಂತಸದಲ್ಲಿ ಮುಂದಿನವರ ಸುಖಸ್ವಪ್ನದಲ್ಲಿ ಹೊಟ್ಟೆಬಂದ ವ್ಯಾಪಾರಿಗಳು ರಿಕ್ಷಾ ದಲ್ಲಿ ಮುಗಿಲು ನೋಡುತ್ತ ಹೊರಟದ್ದಾರೆ. ತರುಣ ದಂಪತಿಗಳು ತಿರುಗಾಡ ಲಿಕ್ಕೆ ಹೊರಟಿದ್ದಾರೆ. ಅವರ ಮುಖದ ಮೇಲೆ ಕುಲು ಕುಲು ನಗೆ ಸೂಸಿ

ಹರಿಯುತ್ತಿದೆ. ಬೇಕಾದವರಿಗೆ ಹಾಯುತ್ತ ಯಾರದೂ ಪರಿವೆಯಿಲ್ಲದೆ ಕಲ ಕತ್ತೆಯ ಆಳಿಯಂದಿರಂತೆ ಯ್ಯಾಂಕಿಗಳು ಟಾಮಿಗಳು ಸಿಗರೇಟು ಸೇದುತ್ತ ಸಿಳ್ಳು ಹಾಕುತ್ತ ನಡೆದಿದ್ದಾರೆ. ಊಟ ಉಪಹಾರ ಗೃಹಗಳಲ್ಲಿ ಜನ ಕಿಕ್ಕಿರಿದಿದೆ. ನೃತ್ಯ-ನಾಟಕ-ಚಿತ್ರಮಂದಿರಗಳ ಮುಂದೆ ಕ್ಯೂ ಹತ್ತಿದೆ. ಈ ಸಂಜೆಯ ವಿವಿಧ ಶ್ರುತಿ-ಗತಿಗಳಿಂದ ಕೂಡಿದ ಕಲಕತ್ತೆಯ ಮಹಾಸಂಗೀತ ಅಲ್ಲಲ್ಲಿಯ ಅಪಸ್ವರಗ ಳಿಂದ ಮಾತ್ರ ಆಗಾಗ ಕೆಡುತ್ತಿದೆ. ಸಂಗೀತದಲ್ಲಿ ತಲ್ಲೀನರಾದವರು ಅಪಸ್ವರದಿಂದ ವ್ಯಗ್ರರಾಗುವರೇ ? ಊರಿದ್ದಲ್ಲಿ ಹೊಲಗೇರಿ ಎಂದು ಗಾದೆಯಲ್ಲವೇ ?

ವೀಣೆ-ಅಮೃತ ಅವರಿಗೆ ಮಾತ್ರ ಹಾಗೆ ತೋರಲಿಲ್ಲ. ಬಳಲು ತ್ತಿರುವ ಬಂಧುಗಳನ್ನು ಅರಸುತ್ತ ಅವರು ಸಾಗಿದರು. ಅರಸುವ ಕಾರಣವೇ ಇರಲಿಲ್ಲ. ಎಲ್ಲ ಬೀದಿಗಳಲ್ಲಿ ಚಿಂದಿ ಸುತ್ತಿಕೊಂಡು ಫರಸಿಗಳಲ್ಲಿ ಮಲಗಿದ, ಹೊರಳುವ, ಅಲೆಯುವ, ಒದರುವ ಸಣ್ಣ ದೊಡ್ಡ ಎಲುವಿನ ಹಂದರ ಗಳು ಕಾಣುತ್ತಿದ್ದವು. ಕಲಕತ್ತೆಯೆಂದರೆ ಕಾಮಧೇನು-ಕಲ್ಪವೃಕ್ಷವುಳ್ಳ ಸ್ವರ್ಗವೆಂದು ಕಲ್ಪಿಸಿ ಈ ಜೀವಗಳು ಬಂದಿರಬೇಕು. ಬಂದ ಮೇಲೆ ನೋಡು ತ್ತಾರೆ, ಕಾಮಧೇನು ಬರಡಾಗಿದೆ, ಕಲ್ಪವೃಕ್ಷ ಮೋಟಾಗಿದೆ. ಕಲ್ಪನೆಯ ಸ್ವರ್ಗ ಯಮರಾಜನ ದರ್ಬಾರು ಆಗಿದೆ. ಬಡಜೀವಿಗಳ ನೆತ್ತರು ಹೀರುತ್ತ ಅಸ್ಥಿಪಂಜರಗಳನ್ನು ತುಳಿಯುತ್ತ ಈ ದರ್ಬಾರಿನಲ್ಲಿ ಮಾರಿ ಕುಣಿಯುತ್ತಿದ್ದಾಳೆ.

ಎಲ್ಲವೂ ತುಟ್ಟಿಯಾಗಿ ಸಿಗದಂತೆ ಆದ ಜಗದಲ್ಲಿ ಒಂದು ಮಾತ್ರ ಬಹಳ ಅಗ್ಗವಾಗಿದೆ—ಅದು ಸಾವು! ಯಾವಾಗ ಎಲ್ಲಿ ಬಯಸಿದರೂ ಅದು ದೊರೆಯು ತ್ತದೆ. ಸತ್ತವರು, ಸಾಯಲಾದವರು ಎಂದು ಈ ಜಂಗುಳಿಯನ್ನು ಇಬ್ಭಾಗ ಮಾಡಬಹುದೆ ಹೊರತು ಬದುಕಿದವರು ಎಂಬ ಸದರೇ ಇಲ್ಲ. ಸಂಜೆಗತ್ತಲೆ ನೆಲದ ಮೇಲೆ ಇಳಿದಂತೆ ಯುದ್ಧ ಸಮಯದ ಬ್ಲ್ಯಾಕ್‌ಔಟಿನ ಮಿಣಿಮಿಣಿ ದೀಪಗಳ ಮೂಲಕ ಮಬ್ಬು ಹೆಚ್ಚುತ್ತಿದೆ. ಜನರ ಓಡಾಟವು ಈಗ ಹೆಚ್ಚಿತು. ಇದೇ ಸಮಯವೆಂದು, ಬೆಳಗಿನಿಂದ ಸಂಜೆಯವರೆಗೆ ಹೊಟ್ಟೆ ಹೊಟ್ಟೆ ಬಡ ಕೊಂಡು ಬಿಕ್ಕೆ ಬೇಡಿ ನಿರಾಶರಾದ ಬಡಪಾಯಿಗಳು ಈಗ ಗಂಟಲು ಹರಿಯು ವಂತೆ ಕಂಡವರ ಮುಂದೆ ಕೈಯೊಡ್ಡಿ ಮಾಬಾಪ, ಶೇಟ, ದಯಾ ಕರೊ ದಾನ ಕರೋ ಎಂಬ ತರತರದ ಆರ್ತವಚನಗಳಿಂದ ಹಲುಬುತ್ತಿದ್ದಾರೆ. ವೇಷದಿಂದ

ಶ್ರೀಮಂತರೆಂದು ಕಂಡವರ ಬೆನ್ನು ಹತ್ತಿ ಕಾಲು ಬೀಳಲು ಹೋಗುತ್ತಾರೆ, ಅಡ್ಡಗಟ್ಟುತ್ತಾರೆ. ಹೊಟ್ಟೆಯ ಸಂಕಟವು ಲಜ್ಜೆ-ಸಂಕೋಚ-ಭಯ-ಅದೇಕೆ ಮನುಷ್ಯತನವನ್ನೇ ಹೋಗಲಾಡಿಸಿದೆ. ಅವರಿಗೆ ಪ್ರತಿಯಾಗಿ ದೊರೆಯುವ ದೇನು ? ತಿರಸ್ಕಾರ, ಕಾಲ್ತುಳಿತ, ಒದಿಕೆ. ಆದರೆ ಅವರಿಗೆ ಅದರ ದರಕಾರವಿಲ್ಲ. ಒಂದುಕಡೆ ತಿಂದು ಕೊಬ್ಬಿದ ಕೆಂಜಗಮೋರೆಯ ಸಾಹೇಬ ಮಡ್ಡಮ್ಮಗಳಿಬ್ಬರು ಕೈಯಲ್ಲಿ ಕೈಹಾಕಿ ನಗುತ್ತ ಕೆಲೆಯುತ್ತ ದಾರಿಗುಂಟ ಬಂದರು, ಅವರಿಗೂ ಈ ಭಿಕ್ಷುಕರು ಮುತ್ತಿಗೆ ಹಾಕಿದರು. ಸಾಹೇಬನು ಕೇಳುತ್ತಾನೆಯೆ ? ಬೂಟನಿಂದ ಜೋರಾಗಿ ಒದೆದು 'ಬದ್‌ಮಾಷ್' ಎಂಬ ಬೈಗಳಿಂದ ಅಲಂಕರಿಸಿದನು. ಇಬ್ಬರೂ ನಾಲ್ಕು ಹೆಜ್ಜೆ ಮುಂದೆ ಹೋಗಿ ಹಿನ್ನೋಡಿ ಹಲ್ಲುತೆರೆದು ನಕ್ಕರು. 'Wretched lot of beggars in this rotten Country' (ಅರಿಷ್ಟ ! ಈ ದರಿದ್ರ ದೇಶದಲ್ಲಿ ಅದೆಷ್ಟು ಭಿಕ್ಷುಕರಿರುವರು !) ಎಂದು ಸಾಹೇಬನು ಮಡ್ಡಮ್ಮನಿಗೆ ಹೇಳಿದನು. ಅವಳು ಹೊಸದಾಗಿ ಇಂಗ್ಲಂಡವೆಂಬ ಸಗ್ಗದಿಂದ ಇಳಿದುಬಂದಿರಬೇಕು. 'I see' (ತಿಳಿಯಿತು) ಎಂದು ಗೋಣು ಹಾಕುತ್ತ ಸಮಾಧಾನ ಹೊಂದಿದಳು. ಇನ್ನೊಂದು ಕಡೆ ಹರಕು ಬಟ್ಟೆಯನ್ನು ಮೈಗೆ ಸುತ್ತಿಕೊಂಡು ಫರಸಿಯ ಮೇಲೆ ಭಿಕ್ಷೆ ಬೇಡುತ್ತ ಒಬ್ಬ ಹೆಂಗಸು ಕೂತಿದ್ದಾಳೆ. ಕೈಯಲ್ಲಿ ಒಂದೇ ಬಳೆಯಿದೆ. ತಲೆಯ ಮೇಲಿನ ಸೆರಗನ್ನೆ ಮೇಲಿಂದ ಮೇಲೆ ಮೋರೆಯ ಮೇಲೆಳೆದು ಬುರ್ಖಾ ಇದ್ದವಳಂತೆ ಮಾಡುತ್ತಾಳೆ. ಮೊದಲು ಒಳ್ಳೆಯ ಮನೆತನದವಳು. ಬುರ್ಖಾ ಇಲ್ಲದೆ ಹೊರಬಿದ್ದವಳಲ್ಲ. ಬರಗಾಲ ಅವಳನ್ನು ತನ್ನೂರಿಂದ ಕಲಕತ್ತೆಯ ಬೀದಿಬಯಲಿಗೆಳೆದಿದೆ. ಆದರೆ ಎಂಟು ಪೀಳಿಗೆಯಿಂದ ಅಂಟಿದ ಆ ಸಂಸ್ಕಾರ ಹೇಗೆ ಹೋದೀತು ? ತೊಡೆಯ ಮೇಲೆ ಸೀರೆ ಹರಿದಿದೆ. ಅದು ಕಾಣದಂತೆ ಎಡಗೈ ಅಗಲಾಗಿ ಇಟ್ಟಿದ್ದಾಳೆ, ಯಾರಾದರೂ ಹತ್ತಿರ ಬಂದೊಡನೆ ಬಲಗೈಯಿಂದ ತಲೆಸೆರಗನ್ನು ಮುಖದ ಮೇಲೆ ಎಳೆಯುತ್ತಾಳೆ. ಮುಂದೆ ಒಡ್ಡಿದ ಕೈ ಹಾಗೇ ಇದೆ, ತೆರೆದ ಬಾಯಿ ಬೇಡುತ್ತಿದೆ. ಹತ್ತಿರ ತಲೆಗೆ ಒಂದು ಡಗಲಾದ ಟೊಪ್ಪಿಗೆ ಸಿಗಿಸಿಕೊಂಡು ಹೊಟ್ಟೆ ಪಾತಾಳಕ್ಕೆ ಹತ್ತಿ ಬೆನ್ನು ಗೂನಾಗಿ ಮೈ ಎಲುವಿನ ಗೂಡಾಗಿ ಹಸಿದು ಕಂಗಾಲಾದ ಹುಡುಗ ಬಾಯ್ತೆರೆದು ಕೂತಿದ್ದಾನೆ. ಇವರನ್ನು ಈ ಭಯಂಕರ ಶಹರದಲ್ಲಿ ಯಾರು ಕೇಳಬೇಕು ? ಯಮದೂತರಲ್ಲದೆ ಯಾರು ಕರೆಯುವವರು ?

ವೀಣೆಯೂ ಅಮೃತನೂ ಇಂಥಿಂಥ ನೋಟಗಳನ್ನು ನೋಡಿದರು. ಅಲ್ಲಲ್ಲಿ ಕೆಲವರನ್ನು ಬಳಿಯ ಮಠದ ಕೇಂದ್ರಗಳಿಗೆ ಸಾಗಿಸಿದರು. ಎಷ್ಟೋ ಕಡೆಗೆ ಇವರು ನೀಡಿದ ಸಹಾಯವನ್ನು ಪಡೆಯಲು ಕೂಡ ಕಂಗಾಲ ಜನ ಸಿದ್ಧವಿರಲಿಲ್ಲ. ತಮಗೆ ಇಷ್ಟು ದಯೆ–ಮಾಯೆಗಳನ್ನು ಯಾರಾದರೂ ತೋರಿಸುವರೆಂದರೆ ಹೇಗೆ ? ಅವರಿಗೆ ನಂಬಿಗೆ ಹುಟ್ಟಲೊಲ್ಲದು. ಒಂದು ಬೀದಿಯ ತುದಿಗೆ ಹೊಲಸುದುಂಬಿದ ಮೂಲೆಯೊಂದರಲ್ಲಿ ಎರಡು ಮೂರು ಸಣ್ಣ ಹುಡುಗರು ಹಸಿವೆ ಸಂಕಟವಾಗಿ ಹೊರಳಾಡುತ್ತಿದ್ದವು. 'ಮಾ, ಮಾ' ಎಂದು ತಾಯಿಯನ್ನು ನೆನೆಸುತ್ತ ಗೋಳಿಡುತ್ತಿದ್ದವು. ಮುಂಜಾವಿನಿಂದ ಹೊಟ್ಟೆಯಲ್ಲಿ ತಟಗು ಅನ್ನವಿಲ್ಲ, ಮುನ್ನಾದಿನವೇನಾಗಿದ್ದಿತೊ ಯಾರು ಬಲ್ಲರು ? ಅವುಗಳ ತಾಯಿ ಭಿಕ್ಷೆಗೆ ಹೋದವಳು, ಇನ್ನೂ ಬಂದಿಲ್ಲ. ವೀಣೆ ಅಡರಿಸಿ ಅವರ ಹತ್ತಿರ ಹೋಗಿ ಎಬ್ಬಿಸಿ ಕೂಡಿಸಿ ಮೈದಡವಿದಳು, 'ಊಟಕ್ಕೆ ಕೊಡತೀನಿ ನಡೆಯಿರಿ' ಎಂದು ಪ್ರೀತಿಯಿಂದ ಕರೆದಳು. ಅಮೃತನು ಅವರನ್ನು ಘರಸಿಗೆ ಕರೆತಂದನು.

ಕತ್ತಲೆಯಲ್ಲಿ ಇನ್ನೊಂದು ನೆರಳುವ ಮೈ ಕಂಡಿತು. ನೋಡಲಾಗಿ ಗಡ್ಡದ ಮುದುಕ, ಸೊರಗಿ ಸಾಯಲಾಗಿದ್ದಾನೆ. ಈ ಹುಡುಗರನ್ನು ಯಾರೋ ಎತ್ತಿಕೊಂಡು ಹೊರಟರೆಂಬ ಭೀತಿಯಿಂದ ಏಳುತ್ತ ಬೀಳುತ್ತ ಬಂದು ಅವನು ಒದರಾಡಹತ್ತಿದನು. ಆ ಮುಸ್ಲಿಂ ಕುಟುಂಬದ ಹಿರಿಯ ಅವನು. ಅವನ ಮೊಮ್ಮಕ್ಕಳು ಅವು. ಅವರಂತೆ ಅವನಿಗೂ ಹೊಟ್ಟೆಗಿಲ್ಲ. ಆದರೆ ಸ್ವಸಂರಕ್ಷಣೆಯ ಆವೇಶವೆಂಥದು ? ಎಷ್ಟು ತಿಳಿಹೇಳಿದರೂ ಅವನು ಕೇಳಲಿಲ್ಲ. ಒದರಿ ಒದರಿ ಕಡಕೊಂಡು ಕೆಳಗೆ ಬಿದ್ದನು, ಪ್ರಾಣ ಹಾರಿಹೋಯಿತು. ಅಮೃತ ತನ್ನ ಯಂತ್ರವನ್ನು ಅವನ ಎದೆಗೆ ಹಚ್ಚಿ ನೋಡಿದನು. ಸತ್ತದ್ದೇ ನಿಜವಾಗಿತ್ತು. ಮಾಡುವದೇನು ? ವೀಣೆಯನ್ನು ಅಲ್ಲಿಯೇ ಕುಳ್ಳಿರಿಸಿ ಹತ್ತಿರ ಫೋನಿಗೆ ಹೋಗಿ ಪೋಲೀಸ ಠಾಣೆಗೆ ತಿಳಿಸಿ ಬಂದನು. ಯಾರೂ ಬರಲಿಲ್ಲ. ಇಷ್ಟರಲ್ಲಿ 'ಮಾ' ತೂಗುತ್ತ ಬಂದಳು. ಅವಳ ಕೈಯಲ್ಲಿ ಒಂದು ಒಡಕು ಹರಿವಾಣ ಇತ್ತು. ಅವಳನ್ನು ಕಂಡೊಡನೆ ಆ ಹುಡುಗರೆಲ್ಲ ಅದೇನು ಹುರುಪಾದವು ! ಅವಳು ಆ ಹರಿವಾಣವನ್ನು ಅವರ ಮುಂದೆ ಇಟ್ಟಳು. ಕಟೆಯಾದ ಎಂಜಲನ್ನದ ಅಗಳು ಅದಕ್ಕೆ ಹತ್ತಿಕೊಂಡಿದ್ದವು. ಅವಕ್ಕೇ ಕೈಹಾಕಿ ಕೆದರುತ್ತ ಅವು ಬಾಯಿಗೆ ತುರುಕಿಕೊಂಡವು. ಹಲಬುವಿಕೆ ತುಸು ನಿಂತಂತಾಯಿತು. ಆದರೆ ಹಸಿದ

ಒಡಲಲ್ಲಿ ಒಣಗಿದ ಅಗಳನ್ನು ತುಂಬಿದರೆ ತಡೆಯುವದೇ ? ಎಲ್ಲ ಕಾರಿಕೆಯಾಗಿ ಹೊರಬಿದ್ದಿತು. ಮತ್ತೆ ಗೋಳೋ ಸುರುವಾಯಿತು. ತಾಯಿಯೂ ಅಳಹತ್ತಿದಳು. ಕೆಲ ನಿಮಿಷದಲ್ಲಿ ತಂದೆ ಸತ್ತು ಬಿದ್ದುದನ್ನು ನೋಡಿ ಅವಳು ಇನ್ನಿಷ್ಟು ಅಳತೊಡಗಿದಳು. ದುಃಖ ಮಡುಗಟ್ಟಿ ನಿಂತಿತು. ಅಮೃತ ಮತ್ತು ವೀಣೆ ಇವರಿಗೆ ಅಸಾಧ್ಯ ವೇದನೆಯಾಯಿತು. ಏನು ಮಾಡಬೇಕು ತಿಳಿಯದೆ ವೀಣೆ ಹೋಗಿ ಸ್ವಾಮಿಜಿಯವರನ್ನು ಕರೆತಂದಳು. ಸ್ವಾಮಿಜಿಯವರಿಗೆ ಇದು ಸಾವಿರದ ಒಂದನೆಯ ಅನುಭವ. ಕೂಡಲೆ ಅವರ ಮನವೊಲಿಸಿ ಆ ತಾಯಿಮಕ್ಕಳನ್ನು ಒಂದು ಕೇಂದ್ರಕ್ಕೆ ಸಾಗಿಸಿ ಎಲ್ಲ ಆರೈಕೆ ಮಾಡಲು ತಿಳಿಸಿದರು. ಮುಸ್ಲಿಂ ಪದ್ಧತಿಯಂತೆ ಆ ಮುದುಕನ ದಫನ ಮಾಡಿಸಿದರು. ದುರಂತ ನಾಟಕದ ಒಂದು ದೃಶ್ಯದ ಮೇಲೆ ಹೀಗೆ ತೆರೆಬಿದ್ದಿತು.

ರಾತ್ರಿ ನಾಲ್ಕು ತಾಸು ಮೀರಿ ಹೋಗಿತ್ತು. ವೀಣೆ-ಅಮೃತ ಮಠದ ದಾರಿ ಗುಂಟ ತಿರುಗಿ ನಡೆದಿದ್ದರು. ಹೆಜ್ಜೆಹೆಜ್ಜೆಗೆ ಬಂದ ಅನುಭವಗಳಿಂದ ಅವರ ಹೃದಯ ಚೂರುಚೂರಾಗಿತ್ತು. ಇನ್ನೊಂದು ನಿಮಿಷದಲ್ಲಿ ಮತ್ತೇನು ಕಾಣು ವುದೋ ಕೇಳುವುದೋ ಎಂಬ ಭಯಪೂರ್ಣವಾದ ನಿರೀಕ್ಷೆಯಿಂದ ಮುಂದೆ ಸಾಗಿದ್ದರು. ಬೀದಿಗಳಲ್ಲಿಯ ಗದ್ದಲ ಕರಗಿತ್ತು, ಸುತ್ತೆಲ್ಲ ಸ್ಮಶಾನ ಶಾಂತಿ ನೆಲಸಹತ್ತಿತ್ತು. ಫರಸಿಯ ಮೇಲೆ ಬಿದ್ದುಕೊಂಡ ನಿರಾಶ್ರಿತರು ನರಳಾಟವೂ ಇಲ್ಲದೆ ಒರಗಿದ್ದಾರೆ. ಅದೇನು ಸಾವಿನ ದೀರ್ಘನಿದ್ರೆಯೊ ಹಸಿವೆ ಕರುಣಿಸಿದ ಮಂಕುನಿದ್ದೆಯೋ ಹೇಳಬಾರದು. ಹೊಟ್ಟೆತುಂಬ ತಿಂದುತೇಗುವ ಸಿರಿವಂತರು, ಸಾಲುವಷ್ಟಾದರೂ ತಿಂದು ಬದುಕಿದ ಮಧ್ಯಮ ವರ್ಗದ 'ಭದ್ರಲೋಗ'ರು ಅಂದಿನವರೆಗೆ ಭಿಕ್ಷುಕರ ಕರುಳಿರಿಯುವ ಕೂಗುಗಳೆಲ್ಲ ಕಿವಿಮರೆಯಾದವೆಂದು ಉಸ್ಸೆನ್ನುತ್ತ ಹಾಸಿಗೆಯ ಮೇಲೆ ಉರುಳುತ್ತಿದ್ದಾರೆ. ಈ ಹೊತ್ತಿಗೆ ಮಠದಿಂದ ನಾಲ್ಕು ಹೆಜ್ಜೆ ಇರುವಾಗ ಒಂದು ಓಡಿಬರುವ ಮಗುವಿನ ವರ್ರೆಂಬ ಅಳುದನಿ ಗಾಳಿಯನ್ನು ಭೇದಿಸುತ್ತ ಬಂತು. ಇಬ್ಬರೂ ಗಕ್ಕನೆ ನಿಂತು ದನಿ ಎಲ್ಲಿಂದ ಬರು ವದೆಂಬುದನ್ನು ಅರಿತು ಸಣ್ಣ ಬೀದಿಯೊಂದರಲ್ಲಿ ಹೊರಳಿದರು. ಎಳೆಯ ಮಗು ವೊಂದು ಬೀಳುತ್ತೇಳುತ್ತ ಅವರ ಮುಂದೆ ಬಂದಿತು. ಒಂದೇ ಸವನೆ ಅದು ಕಣ್ಣೀರು ಸುರಿಸುತ್ತ ಅಳುತ್ತಿದೆ. ವೀಣೆ ಹತ್ತಿರ ಹೋಗಿ ಕೈಹಿಡಿದು 'ಯಾಕೆ ಅಳುವಿ ?' ಎಂದು ಕೇಳಿದಳು. ಅದು ಅಳುವುದನ್ನು ಒಮ್ಮೆಲೆ ನಿಲ್ಲಿಸಿತು. ಯಾರೂ ಈ ರೀತಿ ಈವರೆಗೆ ಕೇಳಿರಲಿಲ್ಲ. ತನ್ನ ತಾಯಿ ಸಿಕ್ಕಳೆಂದು ತಿಳಿದು

ಅದು ಸುಮ್ಮನಾಗಿರಬೇಕು, ಕೂಡಲೆ ವೀಣೆಯನ್ನಪ್ಪಿಕೊಂಡಿತು. ಅವಳು ಎತ್ತಿ ಮೈಮೇಲೆ ತಗೊಂಡಳು. ಒಂದು ಮಿಂಚಿನ ದೀಪದ ಬುಡಕ್ಕೆ ಕರಕೊಂಡು ಹೋಗಿ 'ಪಾಪ! ಅವ್ವನನ್ನು ಕಳಕೊಂಡಿದೆ' ಎಂದು ಅಮೃತನಿಗೆ ತೋರಿಸಿ ಹೇಳಿದಳು. ಹೀಗೆ ತಪ್ಪಿಸಿಕೊಂಡು ಯಾರ ಪಾಲೋ ಆಗುವ ಮಕ್ಕಳ ಉದಾಹರಣೆಗೆ ಕಲಕತ್ತೆಯಲ್ಲಿ ಕೊರತೆಯಿರಲಿಲ್ಲ. ಅಮೃತನೂ ನೋಡಿ ಮರುಗಿದನು. ಅದರ ಪಕ್ಕಡಿ-ಎದೆ ಎಲುಬು ಎಲ್ಲ ತೆರೆದಿವೆ, ಕೈಕಾಲು ಸೊರಗಿ ಸಿಬರುಕಡ್ಡಿಯಾಗಿವೆ. ಹೊಟ್ಟೆಗಿಲ್ಲದಿದ್ದರೂ ಬರಿ ಗಾಳಿಯಿಂದ ಉಬ್ಬಿದಂತಿದೆ ಒಡಲು ; ತಲೆಯೊಂದು ಬಂಡೆಗಲ್ಲಿನಂತಾಗಿದೆ. ಮೋರೆಯ ಮೇಲೆ ಹೆಣದ ಕಳೆ ಸುರಿಯುತ್ತಿದೆ. ಅದು ಅವರನ್ನು ತಿರುತಿರುಗಿ ಆ ಬೆಳಕಿನಲ್ಲಿ ನೋಡಿತು, ತಾಯಿಯಲ್ಲವೆಂದು ಕಂಡುಹಿಡಿದು ಮತ್ತೆ ದೊಡ್ಡ ದನಿಯಲ್ಲಿ ಅಳುತ್ತ ಕೊಸರಿಕೊಂಡು ಕೆಳಗಿಳಿಯಿತು. 'ನಿನಗೆ ಯಾರು ಬೇಕು ?' ಎಂದರೆ 'ಮಾ, ಮಾರೆ' ಎಂಬ ಒಂದೇ ಉತ್ತರ. 'ಮಾ ಎಲ್ಲಿದ್ದಾಳೆ, ಅವಳ ಹೆಸರೇನು ?' ಎಂಬುದಕ್ಕೆ ಅದೇ ಉತ್ತರ. 'ನಿನ್ನ ಮಾನನ್ನು ತೋರಿಸತೀವಿ ಬಾ' ಎಂದು ಅವರಿಬ್ಬರೂ ಒಂದೊಂದು ಕೈಹಿಡಿದು ಎಳೆಯುತ್ತ ನಡೆದರು.

ಅಷ್ಟರಲ್ಲಿ ಇನ್ನೊಂದು ಅಳುದನಿ ಹತ್ತಿರಬಂತು. ಅದು ಒಬ್ಬ ಹೆಂಗಸಿನದು. ಅರೆಬೆತ್ತಲೆಯಾಗಿ ತಲೆಗೂದಲು ಕೆದರಿಕೊಂಡು ಆ ಪ್ರಾಣಿ ಓಡೋಡುತ್ತ ಬಂದಳು: 'ಗೌರ, ಗೌರ, ನನ್ನ ಗೌರ ಎಲ್ಲಿ ಹೋದನರೆ ?' ಎಂದು ಹಲಬುತ್ತಿದ್ದಳು. 'ಆಯಿತು, ಈ ಹುಡುಗ ತಾಯಿಯನ್ನು ತಪ್ಪಿಸಿಕೊಂಡಿದ್ದರೆ, ಈ ಹೆಂಗಸು ಮಗವನ್ನು ಕಳಕೊಂಡಿದ್ದಾಳೆ.' ಅಮೃತ ವೀಣೆಗೆ ಹೇಳಿದನು. 'ಇವಳದೇ ಈ ಮಗು ಏಕಿರಬಾರದು ?' ವೀಣೆ ಆಡಿದಳು. ನೋಡೋಣ ಎಂದು ಅವಳ ಹತ್ತಿರ ವೀಣೆ ಆ ಮಗುವನ್ನು ಒಯ್ದು ನಿಲ್ಲಿಸಿದಳು. ಅದು ಒಮ್ಮೆಲೆ ಅವಳನ್ನು ಗುರುತಿಸಿ 'ಮಾ, ಮಾ' ಎನ್ನುತ್ತ ಬಿಗಿದಪ್ಪಿಕೊಂಡಿತು. 'ನನ್ನ ಗೌರ' ಎಂದು ಅವಳೂ ಅಪ್ಪಿ, ನಿಲ್ಲಲು ತ್ರಾಣವಿಲ್ಲದೆ ಫರಸಿಯ ಮೇಲೆ ಇದ್ದಕ್ಕಿದ್ದ ಹಾಗೆ ಬಿದ್ದುಬಿಟ್ಟಳು. ಇದೇನು ಅನಾಹುತವಾಯಿತೆಂದು ಅಮೃತ ನೋಡಿದನು. ಅವಳ ಎಚ್ಚರು ತಪ್ಪಿತ್ತು, ನಾಡಿ ಮಂದವಾಗಿತ್ತು. ಯಾವದನ್ನೂ ಅರಿಯದ ಗೌರನು ಅವಳ ತೆಕ್ಕೆಯಲ್ಲಿ ಮಲಗಿದ್ದಾನೆ. 'ಪ್ರಾಣ ಹೋಯಿತೇ ?' ವೀಣೆ ಕೇಳಿದಳು. 'ಹೋದಂತೇ. ಮೊದಲೇ ಹೊಟ್ಟೆಗಿಲ್ಲ. ಮೇಲೆ ಬಹಳ ಹೊತ್ತಿನವರೆಗೆ ಓಡಿಯೇ ಓಡಿದ್ದಾಳೆ. ಅಲ್ಲಲ್ಲಿ ಗಟಾರದಲ್ಲಿ ಬಿದ್ದು

ಕಂಬಗಳಿಗೆ ಹಾಯ್ದು ಮೈಯೆಲ್ಲ ರಕ್ತವಾಗಿದೆ ನೋಡು. ವೀಣಾ, ಆದರೂ ನಿರಾಶೆ ಬೇಡ, ಪ್ರಯತ್ನ ಮಾಡೋಣ. ಆ ವಾಹನ ಕರೆ. ಇವರನ್ನು ಕೂಡಲೆ ನಮ್ಮ ಕೇಂದ್ರಕ್ಕೆ ಒಯ್ಯೋಣ. ಅಲ್ಲಿ ಉಪಚರಿಸೋಣ.' ಆ ಪ್ರಕಾರ ಅವರಿಬ್ಬರನ್ನೂ ಮೆಲ್ಲಗೆ ವೈದ್ಯಕ ವಿಭಾಗದ ಒಂದು ವಾರ್ಡಿನಲ್ಲಿ ಮಲಗಿಸಿದರು. ಅಮೃತನು ಮುಖ್ಯ ಡಾಕ್ಟರರ ನೆರವಿನಿಂದ ಅವಳಿಗೆ ಔಷಧೋಪಚಾರ ಮಾಡಿದನು, ಗಾಯಗಳನ್ನು ಕಟ್ಟಿದನು. ವೀಣೆ ಗೌರನಿಗೆ ಹಾಲು ಕುಡಿಸಿ ಮಲಗಿಸಿದಳು. ಊಟ ಮಾಡಿ ಬಂದು ಇಬ್ಬರೂ ರಾತ್ರಿಯೆಲ್ಲ ಅಲ್ಲಿಯೇ ಕುಳಿತರು. ಇದೊಂದು ಜೀವವನ್ನು ಬದುಕಿಸುವುದರಲ್ಲಿ ಸಾವಿನ ಕೂಡ ಅವರು ಜಿದ್ದು ಹೂಡಿದಂತೆ ಆಗಿತ್ತು. ಬೆಳಗಿನವರೆಗೆ ಆಚೆ ಈಚೆ ಎನ್ನುವಂತಿತ್ತು. ಆದರೆ ಬೆಳಿಗ್ಗೆ ಅವಳಿಗೆ ಎಚ್ಚರ ಬಂತು, ಕಣ್ಣು ತೆರೆದು ನೋಡಿದಳು. ಇಬ್ಬರಿಗೂ ಬಹಳ ಸಂತೋಷವಾಯ್ತು. ಮುಂದೆ ಒಂದು ದಿನ ಕೆಂಡದಂಥ ಜ್ವರ ಬಂದವು, ಏನೇನೋ ಬಡಬಡಿಸಿದಳು. ಅದ್ಯಾವುದೂ ಅವರಿಗೆ ಅರ್ಥವಾಗಲಿಲ್ಲ. ಮರುದಿನ ಜ್ವರವಿಳಿಯಿತು, ಗೌರನನ್ನು ಕರೆದು ಹತ್ತಿರ ಮಲಗಿಸಿಕೊಂಡಳು. ಅವಳ ಪ್ರಕೃತಿ ಸುಧಾರಣೆಯ ದಾರಿ ಹಿಡಿಯಿತು.

೨-೩ ದಿನ ಹೀಗೆ ಕಳೆದವು. ಒಂದು ರಾತ್ರಿ ಗೌರನ ತಾಯಿಯ ಶುಶ್ರೂಷೆಯಲ್ಲಿ ವೀಣೆ ತೊಡಗಿದ್ದಳು. ಅಲ್ಲಿಗೆ ತನ್ನ ದಿನಚರಿಯನ್ನೆಲ್ಲ ಮುಗಿಸಿ ಅಮೃತನೂ ಬಂದನು. ಗೌರನು ಅವನ ಹತ್ತಿರ ಧಾವಿಸಿ ಹೋದನು. ಮಂಚದ ಬಳಿ ಕುರ್ಚಿಯೊಂದನ್ನೆಳೆದು ಅಮೃತನು ಕುಳಿತನು, ಗೌರ ಅವನ ತೊಡೆಯ ಮೇಲೆ ಕುಳಿತುಕೊಂಡನು. 'ಈಗೆಲ್ಲಾ ಆರಾಮವೇ ?' ಅಮೃತ ಕೇಳಿದನು. ಗೌರನ ತಾಯಿ ಕಂಬನಿದುಂಬಿ ಅಮೃತ–ವೀಣೆ ಇಬ್ಬರನ್ನೂ ನೋಡಿ 'ನಿಮ್ಮಿಂದ ನಾ ಬದುಕಿದೆ, ಈ ಕೂಸು ಬದುಕಿತು' ಎಂದಳು. 'ಇದೊಂದೇನೆ ನಿನ್ನ ಮಗು ?' ಕೇಳಬೇಕೆಂದಿದ್ದ ಹಲವು ಪ್ರಶ್ನೆಗಳಲ್ಲಿ ಒಂದನ್ನು ವೀಣೆ ಈಗ ಕೇಳಿದಳು. ಅವಳು ಮೊದಲು ಕಣ್ಣು ಮುಚ್ಚಿ ಸುಮ್ಮಗಾಗಿ ಸ್ವಲ್ಪ ತಡೆದು 'ಹೌದು. ಆದರೆ ನನಗೆ ಮಕ್ಕಳಿಲ್ಲ' ಎಂದು ಕೊರಳುಬ್ಬಿ ಹೇಳಿದಳು. 'ಅಂದರೆ ?' ವೀಣೆ ಚಕಿತಳಾದಳು. 'ಅಂದರೇನು ? ಯಾರದೋ ಬಳಗದ ಪೈಕಿ ಮಗುವನ್ನು ತನ್ನದಾಗಿ ಸಾಕಿರಬೇಕು.' ಅಮೃತ ಅದಕ್ಕೆ ಭಾಷ್ಯ ಹೇಳಿದನು. ಆದರೆ ಅವಳು 'ಅಲ್ಲ, ಹಾಗಲ್ಲ' ಎಂದು ಇನ್ನಿಷ್ಟು ಆತುರವನ್ನು ಹೆಚ್ಚಿಸಿದಳು. 'ಅಂದರೆ ಈ ಮಗು ಯಾರದು ? ಎಂದು ವೀಣೆ ಕೇಳಿದಳು. 'ಅದನ್ನೆಲ್ಲಾ ನೆನಸಿದರೆ ಮೈಗೆ

ಮುಳ್ಳು ಬರತದೆ. ನಾ ಹೇಳಲಾರೆ' ಎಂದವಳು ಮಲಗಿದಲ್ಲಿ ಮುಗ್ಗಲಾದಳು. ಹಾಸಿಗೆಯನ್ನು ಕಣ್ಣೀರಿನಿಂದ ತೊಯ್ಸಿಸಿದಳು. 'ಹೋಗಲಿ ಬಿಡು, ಅವಳಿಗೆ ತೊಂದರೆ ಕೊಡಬೇಡ ನಡೆ' ಎಂದು ಅಮೃತ ವೀಣೆಯನ್ನು ಎಬ್ಬಿಸಿ ತಾನೂ ಹೊರಟನು. ಗೌರನನ್ನು ಅವಳ ಹತ್ತಿರ ಮಲಗಿಸಿ ವೀಣೆ ಹೊರಟಳು. ಆದರೆ ಆ ಹೆಂಗಸು ಒಮ್ಮೆಲೇ ಹೊರಳಿ 'ಹೋಗಬೇಡಿರಿ ಪುಣ್ಯಾತ್ಮರೇ. ನಿಮಗೆಂದು ನನ್ನ ಸುಡುಗಾಡ ಕತೆ ಹೇಳತೇನೆ, ಕೂಡಿರಿ' ಎಂದು ಅವರನ್ನು ಕೂಡಿಸಿ ಕೆಳಗಿನಂತೆ ತನ್ನ ಕತೆಯನ್ನು ಹೇಳಿದಳು :

ಪೂರ್ವಬಂಗಾಲದ ತಿಪ್ಪೇರಾ ಜಿಲ್ಲೆಯ ಚಾಂದಪುರ ಅವಳ ತವರುಮನೆ. ರುಕ್ಮಾ ಅವಳ ಹೆಸರು. ಇನ್ನೂ ಹನ್ನೆರಡು ವರುಷದ ಹುಡುಗಿ ಆಗಿದ್ದಾಗ ಹೊಲ ಹೊಲ ತಿರುಗಿ ಹುಡದಿ ಹಾಕುತ್ತಿದ್ದಳು, ಕಸಕು ಮಾವಿನ ಕಾಯಿಗಳನ್ನು ಆರಿಸಿ ತಿನ್ನುತ್ತಿದ್ದಳು ; ಆಗಳೆ ಅವಳ ಮದುವೆ ಮಾಡಿಬಿಟ್ಟರು. ಕಸಗಾಯಿಯನ್ನು ಪಾಡಾಗುವ ಮೊದಲೇ ಹರಿದು ಚೆಲ್ಲಿದಂತಾಯಿತು. ಗಂಡನ ಮನೆ ಅದೇ ಭಾಗದಲ್ಲಿ ದೂರದಲ್ಲಿದ್ದ ರಾಮಪುರ ಎಂಬುದು ಅಲ್ಲಿಗೆ ಹೊರಡುವ ದಿನ ಅವಳ ಕಪ್ಪು ಕೂದಲನ್ನು ಬೆಳ್ಳಿ-ಬಂಗಾರದ ಬಣ್ಣದ ಬೇಗಡಿಗಳಿಂದ ಕಟ್ಟಿ ಸಿಂಗರಿಸಿದರು. ಕಾಲಿಗೆ ಕೆಂಪು ಜವಡಿ ಸವರಿದರು, ಮೈಗೆ ಕೆಂಪು ಸೀರೆ ಸುತ್ತಿದರು. ಒಮ್ಮೆಲೇ ಹುಡುಗಿ ಹೋಗಿ ಅವಳು ಮಡದಿಯಾಗಿಬಿಟ್ಟಳು. ಪಲ್ಲಕ್ಕಿಯಲ್ಲಿ ಕುಳಿತು ಅರಸಿಯಂತೆ ಅತ್ತೆ ಮನೆಗೆ ಹೋದಳು. ಅಲ್ಲಿ ಎಲ್ಲವೂ ಅವಳಿಗೆ ಸುಖವಾಗಿತ್ತು, ಯಾರಿಂದಲೂ ತೊಂದರೆಯಿಲ್ಲ. ಆದರೆ ಮೂರು ನಾಲ್ಕು ವರ್ಷವಾಯಿತು, ಅವಳಿಗೆ ತಾಯ್ತನದ ಚಿಹ್ನ ತೋರಲಿಲ್ಲ. ತಡೆದು ಸಾಕಾಗಿ ಅತ್ತೆ ಅಂದಳು 'ಇದೇನೇ ಈ ಕಾಲದ ಹುಡುಗಿಯರದು ! ನಿನ್ನಂಥ ದಷ್ಟಪುಷ್ಟ ಹುಡುಗಿಗೆ ನನ್ನ ಕಾಲದಲ್ಲಿ ಎರಡಾದರೂ ಮಕ್ಕಳಾಗುತ್ತಿದ್ದವು. ನಿನಗೇನಾಗಿದೆ ಧಾಡಿ ? ನೋಡಿಕೊ ಒಂದಿಷ್ಟು. ಇಲ್ಲಂದರೆ ನಮ್ಮ ಶ್ಯಾಮಲನಿಗೆ ಇನ್ನೊಂದು ಹೆಂಡತಿಯನ್ನು ತರಬೇಕಾದೀತು.' ಬಚ್ಚಬಾಯಿ ತೆರೆದು ನಗುತ್ತಲೇ ಅತ್ತೆ ಆಡಿದಳು. ನಗೆಚಾಟಿಕೆಯಿರಬಹುದೆಂದು ರುಕ್ಮಾನೂ ಅಷ್ಟು ಹಚ್ಚಿಕೊಳ್ಳಲಿಲ್ಲ. ಆದರೂ ಒಳಒಳಗೆ ಬರ್ಚಿಯ ತಿವಿತವಾದಂತಾಯಿತು. ಆಮೇಲೆ ಕೆಲವು ದಿನ ತಣ್ಣಗಿತ್ತು. ಆದರೆ ಮತ್ತೆ ಆರುತಿಂಗಳ ಮೇಲೆ—ಅಂದರೆ ಆರು ಶತಮಾನ ತಡೆದಷ್ಟು ಅತ್ತೆಗೆ ಆಗಿರಬೇಕು—ದಾಯಿಯಿಂದ ರುಕ್ಮಾನ ಪರೀಕ್ಷೆ ಮಾಡಿಸಿದರು. ಅವಳು, ರುಕ್ಮಾ ಹುಟ್ಟುಬಂಜೆಯೆಂದು ಹೇಳಿಬಿಟ್ಟಳು. ಊರ

'ಪಂಡಿತರು' ಹೇಳಿದರು, ಇನ್ನು ಅವಳ ಬಗ್ಗೆ ಶ್ಯಾಮಲನಿಗೆ ನೈತಿಕ ಹೊಣೆ ಏನೂ ಇಲ್ಲ. ರುಕ್ಮಾ ಇದನ್ನೆಲ್ಲ ತಿಳಿದು ಕಕ್ಕಾವಿಕ್ಕಿಯಾದಳು, ಶ್ಯಾಮಲನ ಕಾಲಿಗೆ ಬಿದ್ದು ಬೇಡಿಕೊಂಡಳು, ಭೋ ಎಂದು ಅತ್ತಳು. ಆದರೆ ಅವನೂ ಪರಾಧೀನನೇ. ಎರಡನೇ ಹೆಂಡತಿಯನ್ನು ತರುವುದು ಗೊತ್ತಾಗಿಹೋಯಿತು. ಇದನ್ನು ಸಹಿಸಲಾರದೆ ರುಕ್ಮಾ ತವರುಮನೆಗೆ ಹೋದಳು. ಅಲ್ಲಿ ಅವಳ ದುಃಸ್ಥಿತಿಯನ್ನು ಅರಿತು ಊರಿಗೆ ಊರೇ ಮರುಗಿತು. ಆದರೇನು ? ಏನಾದರೂ ತಿರುಗಿ ಗಂಡನ ಮನೆಗೆ ಹೋಗಲೆಬೇಕು, ಎದೆ ಭಾರವಾಗಿ ಹೋದಳು. ಅಂಗಳದಲ್ಲಿ ಮಾವನವರನ್ನು ಕಂಡು ಬಾಗಿ ನಿಂತು 'ಅಂತಃಪುರ'ದಲ್ಲಿ ಹೊಕ್ಕಳು. ತನ್ನ ಹೊರತು ಎಲ್ಲವೂ ಇದ್ದಂತಿತ್ತು. ಇನ್ನು ತಾನೆಲ್ಲಿ ಮಲಗುವುದು ಎಂದವಳು ಯೋಚಿಸಿದಳು. ಎದೆ ಝಲ್ಲೆಂದಿತು. ಅತ್ತೆ ಕೆರೆಯಿಂದ ನೀರು ತುಂಬಿದ ಕೊಡ ತಗೊಂಡು ಬಂದು ರುಕ್ಮಾನನ್ನು ನೋಡಿ 'ಬಂದೆಯ, ಮುತ್ತೈದೆಯಾಗಿ ಬಾಳು' ಎಂದು ಅವಳ ಸವತಿಯನ್ನು ಕರೆದು 'ಇಕಾ ನೋಡು ರಜನೀ. ಇವಳು ನಿನ್ನ ದಿದಿ, ಅಕ್ಕ, ಇವಳು ಹೇಳಿದಂತೆ ಕೇಳಬೇಕು' ಎಂದಳು. ರುಕ್ಮಾ ರಜನಿಯ ದುಂಡುಮೊಗ ನೋಡಿದಳು, ಹೊಟ್ಟೆಯಲ್ಲಿ ಉರಿಬಿದ್ದಿತು. 'ನಾ ಹೇಳಿದಂತೆ ಅವರು ಕೇಳಲಿಲ್ಲ. ಇನ್ನು ಇವಳು ಕೇಳುವಳೇ?' ಎಂದು ತನ್ನಷ್ಟಕ್ಕೇ ಅಂದುಕೊಂಡಳು. ರಜನಿಗೆ ಗಾಬರಿ, ಸವತಿಯೆಂದು ರುಕ್ಮಾನ ಜಾಗದಲ್ಲಿ ಬಂದದ್ದಕ್ಕೆ ಏನಾಗುವದೋ ಎಂದು. ಆದರೆ ಕ್ಷಣದಲ್ಲಿ ಅದೆಲ್ಲಿಯದೋ ವಿವೇಕ ಜಾಗೃತವಾದಂತೆ ಹಿರಿಯತನದ ಠೀವಿಯಲ್ಲಿ 'ತಂಗಿ, ಇಲ್ಲಿ ಬಾ' ಎಂದು ರುಕ್ಮಾ ರಜನಿಯನ್ನು ಬರಮಾಡಿದಳು. ಮೊದಲ ರಾತ್ರಿ ಅಸಹ್ಯವಾಯಿತು, ಗಂಡನ ಬಗ್ಗೆ ರುಕ್ಮಾನ ಸಂತಾಪ ಮಿತಿಮೀರಿತು. ಯಾಕಂದರೆ ಅವಳ ಜಾಗ ರಜನಿಗೆ ದೊರೆತಿತ್ತು, ಮೂಲೆಯ ಒಂದು ಚಾಪೆಯಲ್ಲಿ ತಾ ಮಲಗಿದಳು. ನಡುರಾತ್ರಿಯಲ್ಲಿ ಶ್ಯಾಮಲ ಅವಳ ಹತ್ತಿರ ಬಂದು ಕೂತು ಅವಳ ಕಂಬನಿಯೊರಸುತ್ತ 'ರುಕ್ಮಾ, ನನ್ನ ಕ್ಷಮಿಸು. ಬೇರೆ ಗತಿಯಿರಲಿಲ್ಲ. ನಿನ್ನ ನಾ ಬಿಟ್ಟಿಲ್ಲ, ಎಂದಿಗೂ ಬಿಡುವದಿಲ್ಲ' ಎಂದು ಕಳಕಳಿಯಿಂದ ಹೇಳಿದನು. ಅವಳೇನೂ ಆಡುವಂತಿರಲಿಲ್ಲ, ಆದರೆ ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದು ಕಾಲು ತಟ್ಟಿದಳು. ಅವನಿಗೆ ತನ್ನ ದುಃಖ ಗೊತ್ತಿದೆ, ಅವನ ಪ್ರೀತಿ ಕಡಿಮೆ ಆಗಿಲ್ಲ ಎಂಬುದು ಅವಳ ಜೀವಕ್ಕೆ ಸಮಾಧಾನ ಕೊಟ್ಟಿತು.

ದಿವಸ ಸಾಗಿದಂತೆ ಮನದ ಕಹಿಯನ್ನು ಮರೆಮಾಡಿಬಿಡುವ ಹೊಸ

ಗಂಡಾಂತರವೊಂದು ದೇಶಕ್ಕೆ ಬಂದಿತು. ಅದು ಮೆಲ್ಲನೆ ಹೆಡೆ ಹರಡಿತು, ವಿಷದ ಹಲ್ಲು ಚಾಚಿತು. ಅದೇಕೆ ಹೀಗಾಯಿತು ಯಾರಿಗೂ ತಿಳಿಯದು ಆದರೆ ಆದದ್ದು ಸುಳ್ಳಲ್ಲ. ಊರಲ್ಲಿ ಅಕ್ಕಿಯ ಕೊರತೆ ಆಗಿದೆ, ಅಕ್ಕಿಯ ಧಾರಣೆ ಏರುತ್ತ ಹೊರಟಿದೆ. ಒಂದು ರೂಪಾಯಿಗೆ ಎರಡು ಸೇರಿದ್ದದ್ದು ಬರಬರುತ್ತ ಒಂದು ಸೇರಾಯಿತು. ಆಮೇಲೆ ಅರ್ಧಸೇರಾಗಿ ಪಾವಸೇರಾಯಿತು. ಬಿತ್ತಿ ಬೆಳೆದವರು ಕೊಳ್ಳುವ ಹೊತ್ತು ಬಂತು. ಕೊಳ್ಳಬೇಕೆಂದರೂ ಕೈಯಲ್ಲಿ ಕಾಸಿಲ್ಲದ ಸ್ಥಿತಿಯಾಯಿತು. ಊರೂರಿನ ಗಂಡು-ಹೆಣ್ಣೆಲ್ಲ ದುಷ್ಕಾಲದ ದುಃಸ್ವಪ್ನ ಕಂಡು ಭಯಭೀತರಾದರು. ಹೊಲಗದ್ದೆಯಿಲ್ಲದೆ ಕೂಲಿಮಾಡಿ ಜೀವಿಸುವ ಬಡಜನರಂತೂ ಹೌಹಾರಿಹೋದರು. ಮೊದಲು ಹೆಂಗಸರು ತಾವು ಒಪ್ಪತ್ತೂಟ ಮಾಡಬೇಕೆಂದೂ ಹುಡುಗರೂ ಗಂಡಸರೂ ಎಂದಿನಂತೆ ಎರಡೂ ಹೊತ್ತು ಉಣಬೇಕೆಂದೂ ನಿರ್ಧರಿಸಿದರು. ಸ್ವಲ್ಪ ದಿನದಲ್ಲಿ ಇದೂ ಅಶಕ್ಯ ವಾಯಿತು. ಎಲ್ಲರಿಗೂ ಒಪ್ಪತ್ತಿನ ಪಾಳಿ ಬಂದಿತು. ಕೂಸುಕುನ್ನಿ ಹೊಟ್ಟೆಗೆ ಸಾಲದೆ ಅತ್ತವು ಕರೆದವು, ಆಗ ತಾವು ಊಟ ಬಿಟ್ಟು ತಾಯಂದಿರು ಅವಕ್ಕೆ ಉಣಿಸಿದರು. ಇದರಿಂದ ಅವರು ನಿತ್ರಾಣರಾಗುತ್ತ ಹೊರಟರು. ಜ್ವಾಲಾ ಮುಖಿಯ ಬಾಯಿಂದ ಹರಿದು ಬರುವ ಲಾವಾರಸದಂತೆ ಈ ಜನದತ್ತ ಸಾವು ಮೆಲುಹೆಜ್ಜೆಯಿಂದ ಬರತೊಡಗಿತ್ತು. ಯಾರಿಗೂ ಅದನ್ನು ತಪ್ಪಿಸುವ ಶಕ್ತಿಯಿರಲಿಲ್ಲ. ಇಂಥದರಲ್ಲಿ ರಜನಿ ಬಸುರಿಯಾದಳು. ಸುತ್ತರಿಂದ ಬೇಗೆಯ ನಡುವೆ ಇದೊಂದು ಆಸೆಯ ಚಿಗುರು ಮೂಡಿತು, ಅದು ಹುಟ್ಟಿ ಕಮರೀತೆಂಬ ಕಳವಳ ಆಕ್ಷಣ ಯಾರಿಗೂ ಉಂಟಾಗಲಿಲ್ಲ. ಮನೆ ತುಂಬ ಒಂದು ಬಗೆಯ ಉತ್ಸಾಹವೇ ತೋರಿತು. ಮನೆತನ ಮುನ್ನಡೆಯಿತೆಂದು ಅತ್ತೆ ಹಸಿದ ಕಣ್ಣಲ್ಲಿಯೂ ಹೊಳಪುದೋರಿ ದೇವರನ್ನು ನೆನಸಿದಳು. ರಜನಿ ತಾಯಿಯಾಗುವೆ ನೆಂದು ಹಿಗ್ಗಿದಳು, ಆದರೆ ಹಿಗ್ಗಿದ ಒಡಲಿಗೆ ನೀಡಲು ಸಾಕಷ್ಟು ಅನ್ನವಿಲ್ಲದೆ ಗೋಳಾಡಿದಳು, ಸೊರಗಿದಳು. ರುಕ್ಮಾಗೆ ಹಸಿವೆ, ಹೊಟ್ಟೆ ಕಿಚ್ಚು ಎರಡೂ ಬಾಧಿಸತೊಡಗಿದವು. ಒಮ್ಮೊಮ್ಮೆ ಹಸಿವೆಯ ಶೂಲಿಯನ್ನು ಅವಳು ತಡಕೊಳ್ಳುತ್ತಿದ್ದಳು. ಆದರೆ ಹೊಟ್ಟೆಕಿಚ್ಚು ಮೈಯೆಲ್ಲ ಹೊತ್ತಿಕೊಂಡಾಗ ರಜನಿಯನ್ನು ನೋಡಿ ನೋಡಿ ಉರಿದೇಳುವ ದ್ವೇಷವನ್ನು ತಡೆಯುವುದಸಾ ಧ್ಯವಾಗಿತ್ತು. ರಜನಿಯೇ ಮನೆಯ ಜನಕ್ಕೆ ಬೇಕಾದ ವಸ್ತು, ತಾನು ಮೂಲೆ ಗುಂಪಾದ ಕಸ. ಯಾಕೆ ಇದು ? ಯಾರೂ ಇದಕ್ಕೆ ಲಕ್ಷ್ಯ ಕೊಡುತ್ತಿರಲಿಲ್ಲ.

ಒಂದು ದಿನ ಊರಲ್ಲಿ ತುಟ್ಟಿಯಾದ ಅಕ್ಕಿ ಸಹ ಇಲ್ಲವೆಂದಾಯ್ತು. ಮನೆಯ ಯಜಮಾನ—ಶ್ಯಾಮಲನ ತಂದೆ—ಮುದುಕನಾದರೂ ಪಟ್ಟಣಕ್ಕೆ ಹೋಗಿ ತಗೊಂಡು ಬರತೇನೆ ಎಂದು ಹೆಂಡತಿಯ ವಸ್ತ್ರ-ಒಡವೆಗಳನ್ನು ಜುಲುಮೆಯಿಂದ ಇಸಗೊಂಡು ಹೊರಟನು. ಗಂಡನನ್ನು ಎಂದಿಲ್ಲ ಇಂದು ಅಗಲಿದ್ದಕ್ಕೆ ತನ್ನ ವಸ್ತ್ರ ಮಾರುವ ಹೊತ್ತುಬಂದದ್ದಕ್ಕೆ ಮುದುಕಿ ಮಮ್ಮಲ ಮರುಗಿದಳು. ಆದರೆ ರಜನಿಯ ಹೊಟ್ಟೆಯಲ್ಲಿ ಕುಲದೀಪಕ ಹುಟ್ಟುವನಲ್ಲವೇ ? ಅದಕ್ಕಾಗಿ ರಜನಿಯನ್ನು ಚೆನ್ನಾಗಿ ನೋಡಕೊಳ್ಳಬೇಕಲ್ಲವೇ ? ತನ್ನ ವಸ್ತುವೇನು ಹಿರಿದು ? ಈ ತ್ಯಾಗಬುದ್ಧಿಯಿಂದ ಅವಳು ಸಮಾಧಾನ ತಾಳಿದಳು. ಸ್ವಾರ್ಥ, ತ್ಯಾಗ ಎರಡೂ ಸೇರಿದ್ದ 'ಸ್ವಾರ್ಥತ್ಯಾಗ'ವಿದು ! ಹೋದ ಮುದುಕ ನಾಲ್ಕು ದಿನವಾಯ್ತು, ಎಂಟಾಯ್ತು ಬರಲೇ ಇಲ್ಲ. ಮುದುಕಿಗೆ ಬಹಳ ಕಾಳಜಿಆಯಿತು. ಇತ್ತ ಅಕ್ಕಿಯ ಸಲುವಾಗಿ ಮನೆಯಲ್ಲಿಯ ದನಕರುಗಳನ್ನೂ ಬೇರೆ ಒಡವೆಗಳನ್ನೂ ಪಾತ್ರೆಗಳನ್ನೂ ಮಾರುವ ಹೊತ್ತು ಬಂತು. ಶ್ಯಾಮಲ ತಾನೇ ಇದನ್ನೆಲ್ಲ ಮಾಡಿ ಹತ್ತಿರದ ಇನ್ನೊಂದು ಊರಿನಿಂದ ಅಕ್ಕಿ ತರುತ್ತಿದ್ದನು. ಅದನ್ನೇ ಕುಚ್ಚಿ ಎಲ್ಲರೂ ತಿಂದು ಬದುಕಿದ್ದರು. ಇನ್ನೂ ಮುದುಕನ ಪತ್ತೆಯಿಲ್ಲ. ಮುದುಕಿ ಕೊನೆಗೆ ಶಾಮಲನಿಗೆ ಹೇಳಿದಳು. 'ಹೋಗು, ನೀನೇ ಹೋಗಿ ನೋಡಿಕೊಂಡು ಬಾ. ಅವರಿಗೆ ಏನಾಯ್ತೋ ಏನೋ, ನೀ ಬೇಗ ಅವರ ಸುದ್ದಿ ತರದಿದ್ದರೆ ನಾ ಪ್ರಾಣ ಬಿಡತೀನಿ.'

ನಿರ್ವಾಹವಿಲ್ಲದೆ ಶ್ಯಾಮಲ ಹೊರಟನು, ಜೊತೆಗೆ ರಕ್ಮಾನ್ನ ಕರೆದನು. 'ಇಲ್ಲಿ ನಾ ಯಾರಿಗೆ ಬೇಕಾದ್ದು ಅಷ್ಟರಲ್ಲೇ ಇದೆ, ನಡೆ' ಎಂದು ಅವಳೂ ಹೊರಟಳು. ಇಬ್ಬರೂ ಊರ ದಾಟ ಬಂದು ತೆಂಗಿನ ಮರಗಳ ತುದಿಯನ್ನೂ ಕೆರೆಗಳ ತಂಪು ಆಳವನ್ನೂ ನೋಡಿದಂತೆ ಊರೆಲ್ಲ ಹಾಳ್ಸುರಿಯುವುದು ಅವರಿಗೆ ಕಂಡಿತು. ಬಾಗಿಲ ಮೆಟ್ಟಲಲ್ಲಿ ಹೊಲಸು ನಾಯಿಗಳು ಹೊರಳುತ್ತಿವೆ. ಡೊಕ್ಕೆ ಹಾಯ್ದ ಹಸುಗಳು ಸಿಕ್ಕ ಘುಲ್ಲು ತಿನ್ನುತ್ತ ನಿಂತಿವೆ. ಡೊಳ್ಳೆ ಹೊಟ್ಟೆ, ಸೇದಿ ಹೋದ ಕಣ್ಣು, ಸೀರುಗಾಲು ಉಳ್ಳ ಹುಡುಗರು ಗುಡಿಸಲ ಬಳಿ ಸುಳಿದಾಡುತ್ತಿವೆ. ಎಲ್ಲಿಯೂ ಚಟುವಟಿಕೆಯಿಲ್ಲ, ನಗೆಯಾಟವಿಲ್ಲ. ನಾಳಿನ ಚಿಂತೆಯೇ ಚಿಂತೆ.

ಹಗಲೆನ್ನದೆ ರಾತ್ರಿಯೆನ್ನದೆ ಇಬ್ಬರೂ ಪಯಣ ಬೆಳೆಸಿದರು. ರೇಲ್ವೆಹಳಿಯ ಗುಂಟ ಕೆಲಹೊತ್ತು ನಡೆದು ಆಮೇಲೆ ತಿಕೀಟಿಲ್ಲದೆ ಗಾಡಿಯಲ್ಲಿ ಕುಳಿತು ಅಲ್ಲಿಂದ

ಹೊರಗೆ ಹಾಕಿಸಿಕೊಂಡು ಕೊನೆಗೆ ಕಲಕತ್ತೆಯ ಹತ್ತಿರ ಬಂದು ಒಂದು ಗಿಡದ ಬುಡಕ್ಕೆ ಹೊಟ್ಟೆಗಿಲ್ಲದೆ ಕುಸಿಬಿದ್ದರು. ಹೋದ ಎಚ್ಚರು ಮತ್ತೆ ಬಂತು. ತಾವು ತಂದ 'ಮುರಿ' ತಿಂದು ಹೊಟ್ಟೆತುಂಬ ನೀರೊಂದು ಕುಡಿದರು. ಅಷ್ಟರಲ್ಲಿ ಲಕ್ಷಾವಧಿ ಜನ ಬೀದಿಗುಂಟ ಪಟ್ಟಣಕ್ಕೆ ಹೊರಟಿತ್ತು. ಆಣೆಕಟ್ಟೊಡೆದ ಹೊಳೆಯಂತೆ ಈ ಮನುಷ್ಯ ಪ್ರವಾಹ ಬಿಟ್ಟು ಬಿಡದೆ ಸಾಗಿತ್ತು. ಅನ್ನದೇವರ ಜಾತ್ರೆಗೆ ಹೊರಟಂತೆ ಹಸಿವೆ, ಹಸಿವೆ ಎಂದು ಜಪಿಸುತ್ತ ಹಳ್ಳಿಹಳ್ಳಿಯ ಜನ ಹೊರಟಿದೆ. ತಾವು ಹೊರಟಿದ್ದು ಮೃತ್ಯುವಿನ ಮನೆಗೆ ಎಂಬುದು ಅನೇಕರಿಗೆ ಕಲ್ಪನೆಯಿಲ್ಲ. 'ಕಲಕತ್ತೆಗೆ ಹೋಗೋಣ' ಎಂಬುದೇ ಎಲ್ಲರ ಘೋಷವಾಕ್ಯ. ಆದರೆ ಕಲಕತ್ತೆಯ ಆ ಕಲ್ಪನಾ ಸ್ವರ್ಗಕ್ಕೆ ಮುಟ್ಟುವ ಭಾಗ್ಯವು ಅವರಲ್ಲಿ ಕೆಲವರಿಗೆ ಇಲ್ಲ. ದಾರಿಯ ಬದಿಗಳಲ್ಲಿ ಮರದ ಅಡಿಗಳಲ್ಲಿ ಎಲ್ಲ ಕಡೆಗೆ ಉಪವಾಸ ಮಾರಿಗೆ ಬಲಿಯಾಗಿ ಬೀಳುತ್ತಿದ್ದಾರೆ. ಸಾಯುವ ಮೊದಲೇ ಆ ನಿಸ್ತೇಜವಾದ ಕಣ್ಣೆದಿರೇ ಅವರನ್ನು ನಾಯಿ ನರಿ ಕಾಲು ಕೆದಕಿ ಮಾಂಸ ತೆಗೆದು ತಿನ್ನುತ್ತಿವೆ. ಸತ್ತಮೇಲೆ ರಣಹದ್ದುಗಳಿಗೆ ಹಿರಿಯ ಔತಣ! ಪಶುಪಕ್ಷಿಗಳನ್ನು ತಿಂದು ಬದುಕುವ ಮನುಷ್ಯ ಇಂದು ಅವಕ್ಕೇ ತಾನು ಆಹಾರವಾಗಿದ್ದಾನೆ! ದಿಕ್ಕು ದಿಕ್ಕಿಗೆ ಇದೇ ನೋಟ, ನೋಡಲಾರದ ನರಕ!

ರುಕ್ಮಾ-ಶ್ಯಾಮಲ ಕುಳಿತ ಮರದ ಹತ್ತಿರ ಒಂದೆರಡು ಕುಟುಂಬಗಳು ಬಂದವು. ಅವರೂ ಸಮದುಃಖಿಗಳೇ, ಆದರೆ ಒಬ್ಬೊಬ್ಬರ ದುಃಖವನ್ನು ತೋಡಿಕೊಳ್ಳುವುದರಲ್ಲಿ ಆದರೂ ಸುಖವಿರುವದಲ್ಲ! ಅದರಲ್ಲಿ ಒಂದು ಕುಟುಂಬ ಕಥೆ ಬಹಳ ಹೃದಯದ್ರಾವಕವಾಗಿತ್ತು. ಮನೆತುಂಬ ಮಕ್ಕಳಿದ್ದ ಆ ತಾಯಿ ತಂದೆ ಈಗ ನಿಪುತ್ರಿಕರಾಗಿದ್ದಾರೆ. ಯಾಕೆ? ಹೊಟ್ಟೆಗೆ ಹಾಕಲಾರದೆ ಎಲ್ಲ ಮಕ್ಕಳನ್ನು ಮಾರಿಬಿಟ್ಟಿರುವರು! ಮೊದಮೊದಲು ಮನೆಮಾರು ಮುಂತಾಗಿ ಎಲ್ಲ ಮಾರಿದರು, ಶಹರಕ್ಕೆ ಮಕ್ಕಳೊಡನೆ ಹೊರಟರು, ದಾರಿಯಲ್ಲಿ ಬಿಕ್ಕೆ ಬೇಡಿದರು, ತೊಪ್ಪಲು ತಿಂದರು, ಇನ್ನೂ ಶಹರ ಬರಲಿಲ್ಲ. ಮಾಡುವುದೇನು? ಮಕ್ಕಳನ್ನು ಸಾಯಗೊಡಬೇಕು ಇಲ್ಲವೆ ಮಾರಬೇಕು. ಉತ್ತರ ಹಿಂದುಸ್ಥಾನದಿಂದ ಅನಾಥ ಸಂಸ್ಥೆಗಳ ಚಾಲಕರ ಪರವಾಗಿ ಕೆಲವರು ಕೊಳ್ಳಲು ಆಗ ಬಂಗಾಲಕ್ಕೆ ಬಂದಿದ್ದರು, ಅವರಿಗೆ ಏಳೆಂಟು ವರ್ಷದವರೆಗಿನ ಹುಡುಗರನ್ನು ಎದೆ ಕಲ್ಲುಮಾಡಿ ಕೊಟ್ಟರು. ಅಲ್ಲಿಯಾದರೂ ಮಾನದಿಂದ ಬದುಕಲಿ ಎಂದು

ಅವರ ಹಾರೈಕೆ. ಮುಂದೆ ಆ ಹಣವೂ ತೀರಿತು. ಮದುವೆಗಾದ ಇಬ್ಬರು ಹುಡುಗಿಯರಿದ್ದರು. ಅವರನ್ನು ಉಳಿಸಿಕೊಳ್ಳಬೇಕೆಂದು ತಾವು ಅರೆ ಹೊಟ್ಟೆಯಾಗಿ ಬೇಕಾದಷ್ಟು ಹೆಣಗಿದರು. ಕೊನೆಗೆ ವಿಷದ ವೇಳೆ ಬಂತು. ಹೆಣ್ಣನ್ನು ಕೊಂಡು ವೇಶ್ಯಾಮಂದಿರಗಳನ್ನು ತುಂಬುವ ದಲಾಲಿಗಳು ಅವರಿಗೆ ಗಂಟು ಬಿದ್ದರು. 'ಮೈ ಕೈಯಿಂದ ನೆಟ್ಟಗಿದೆ, ಸ್ವಲ್ಪ ಕಪ್ಪಿದೆ' 'ಆದರೂ ತೆಳ್ಳಗಿದೆ' ತಿನಿಸಿದರೆ ತುಂಬಿಕೊಳ್ಳುವದು' ಈ ರೀತಿ ದನದ ಸಂತೆಯಲ್ಲಿ ಮಾತಾಡುವಂತೆ ಆ ದಲಾಲಿಗಳು ಮಾತಾಡಿದರು. ತಾಯ್ತಂದೆ ಮಾರಲೊಲ್ಲದೆ ಗೋಳಾಡಿದರು, ಆದರೆ ಹೊಟ್ಟೆಬಕಾಸುರ ಕೇಳುವದೇ ? ನೀತಿಗೀತಿ, ಅಂತಃಕರಣ-ಗಿಂತಃಕರಣ ಎಲ್ಲವನ್ನೂ ಅವನು ತಿಂದು ತೇಗಿದ್ದನು. ಹತ್ತು ರೂಪಾಯಿಗೆ ಒಬ್ಬರಂತೆ ಮಾರಿದರು. ತಬ್ಬಿ ಅತ್ತು ಕಳಿಸಿಕೊಟ್ಟರು. ಮುಂದೆ ನಾಲ್ಕು ದಿನ ತಾವು ಏನೊ ಸಿಕ್ಕದ್ದು ಕೊಂಡು ತಿಂದರು. ಈಗ ಮಕ್ಕಳನ್ನು ಮಾರಿ ಬುದ್ಧಿಯನ್ನು ಕಳಕೊಂಡು ನೀತಿಯನ್ನು ಗಾಳಿಗೆ ತೂರಿ ಬದುಕಬೇಕೆಂಬ ದುರ್ದಮ್ಯವಾದ ಆಕಾಂಕ್ಷೆಯಿಂದ ಕಾಳಿಯ ಪ್ರಳಯನೃತ್ಯವು ನಡೆದಿರುವ ಕಲಕತ್ತೆಯ ಹತ್ತಿರಕ್ಕೆ ಬಂದಿದ್ದಾರೆ. ಈಬಗೆಯಾಗಿ ಗಂಡಂದಿರು ಹೆಂಡರನ್ನೂ ತಾಯ್ತಂದೆ ಮಕ್ಕಳನ್ನೂ ಮಾರಿಕೊಂಡು ಒಮ್ಮೊಮ್ಮೆ ಧಾರಣೆಯೇರಿಸಲು ಲಿಲಾವು ಮಾಡಿ ಹಸಿವೆಯ ಸಲುವಾಗಿ ಪಶುಗಳಾಗಿಬಿಟ್ಟದ್ದಾರೆ. ಇದನ್ನು ಕೇಳಿ ಶಾಮುಲ-ರುಕ್ಮಾ ಅವರು ತಮ್ಮ ಗತಿಯೇನೆಂದು ಗದಗದ ನಡುಗಿದರು.

ಕಲಕತ್ತೆಯ ಊರೊಳಗೆ ಹೊಕ್ಕು ನೋಡಲು ಅವರಿಗೆ ಎಲ್ಲ ಅಭೋ ಅನಿಸಿತು. ತಿರುಕರಾಗುವುದು ಅವರ ಮಾನಕ್ಕೆ ಸಾಲಲಿಲ್ಲ. ಎಷ್ಟೋ ಮಾನವಂತರೇ ತಿರುಕರಿಗಿಂತ ಅತ್ತತ್ತ ಆಗಿದ್ದರೆಂಬುದು ಅವರಿಗಿನ್ನೂ ತಿಳಿಯಬೇಕಾಗಿತ್ತು. ಅವರ ಸುದೈವದಿಂದ ಒಬ್ಬ ತರುಣ ದಂಪತಿಗಳ ಮನೆಯಲ್ಲಿ ಚಾಕರಿ ಸಿಕ್ಕಿತು. ಮನೆಗೆಲಸವನ್ನೆಲ್ಲ ಚೊಕ್ಕಟವಾಗಿ ಮಾಡುತ್ತಲಿದ್ದು ಯಜಮಾನರ ಪ್ರೀತಿ ಸಂಪಾದಿಸಿದರು. ಬಂದ ಕೆಲಸ ಎಲ್ಲೋ ಉಳಿಯಿತು. ಬೀದಿ ಬೀದಿ ತಿರುಗಿದರೂ ಶ್ಯಾಮುಲನಿಗೆ ತಂದೆಯ ಭೆಟ್ಟಿಯಿಲ್ಲ. ಅವನೆಂದೋ ಯಮದೂತರ ಕೈವಶವಾಗಿರಬೇಕು. ತಿರುಗಿ ಹೋಗುವ ತ್ರಾಣವಿಲ್ಲ. ತಾಯಿ, ರಜನಿ ಇವರ ನೆನವು ಘೋರ ಚಿತ್ರಗಳನ್ನು ನಿಲ್ಲಿಸುತ್ತಿತ್ತು. 'ನಾವಿಲ್ಲಿ ಚೆನ್ನಾಗಿ ಇದ್ದೇನು ರುಕ್ಮಾ ?' ಎಂದವನು ದಿನಾಲು ಚಡಪಡಿಸುತ್ತಿದ್ದನು. ಈ ಚಡಪಡಿಕೆಯಲ್ಲಿ ಅವನಿಗೆ ಉಂಡ ಅನ್ನ ಹತ್ತಲಿಲ್ಲ. ಇದನ್ನೆಲ್ಲ ನೋಡಿ 'ಏನು ಮಾಡುವದಿದೆ ?'

ಎಂದು ರುಕ್ಮಾ ನಿರಾಶೆಯಿಂದ ಆಡುತ್ತಿದ್ದಳು. ಆ ಅತ್ತೆ, ಆ ಸವತಿ ಇವರಿಗಾಗಿ ತಾನೇಕೆ ಅಷ್ಟು ಹಚ್ಚಿಕೊಳ್ಳಬೇಕು ಎಂಬ ಭಾವ ಒಳಗೆ ಹುದುಗಿತ್ತು. ಆದರೆ ಗಂಡನ ಮೇಲಿನ ಪ್ರೀತಿಯಿಂದ ಅವನು ನವೆಯುತ್ತಿರುವುದನ್ನು ನೋಡ ಲಾರದೆ, ಒಂದು ದಿನ ಅವನ ಅಪ್ಪಣೆ ಪಡೆದು ತಾನೇ ಹೊರಟಳು. 'ಊರಿಗೆ ಹೋಗಿ ಎಲ್ಲರನ್ನು ಇಲ್ಲಿಗೆ ಕರೆತರುವೆ. ಇದ್ದದರಲ್ಲಿ ತಿಂದಿರೋಣ.' ಬರುವದ ಕ್ಕಿಂತ ಹೋಗುವುದು ಇನ್ನೂ ಕಠಿಣವಾಗಿತ್ತು. ಆದರೂ ಅವಳು ಧೈರ್ಯಮಾಡಿ ಹೋದಳು. ಏನೋ ಅನಾಹುತವಾಗಿರಬೇಕು ಎಂದು ಧೇನಿಸುತ್ತಲೆ ನಿರ್ಜನ ವಾದ ಊರನ್ನು ಮುಟ್ಟಿ ಮನೆಯ ಮುಂಭಾಗಕ್ಕೆ ಹೋದಳು. ಅಲ್ಲಿ ಪರಿಚಿತ ವಾದ ಬಾಳೆಯ ಮರವಿತ್ತು. ಅದರ ಹಸಿರೆಲೆ ಬಿಸಿಲಿನಲ್ಲಿ ಹೊಳೆಯುತ್ತಿದ್ದವು, ಚಲಿಸುತ್ತಿದ್ದವು. ಮನೆಯೊಳಕ್ಕೆ ಹೋದಳು. ಯಾರೂ ಕಾಣಲಿಲ್ಲ. 'ಯಾರಿ ದ್ದೀರಿ' ಎಂದು ಕೂಗಿದಳು. ಮೌನವೇ ಮರುನುಡಿಯಿತು. ಅಡಿಗೆಮನೆಯಲ್ಲಿ ಕಾಲಿಟ್ಟಳು, ಅಲ್ಲಿ ಬೆಂಕಿಯ ಸುಳಿವಿಲ್ಲ. ಅಲ್ಲಿಂದ ಗಾಬ ಹೊಡೆದು ಕೋಣೆ ಯಿಂದ ಕೋಣೆಗೆ ತಿರುಗಿದಳು. ಅಲ್ಲಿ ಏನಿವೆ ? ಕೆಲವು ಚಿಂದಿಗಳು ತೂಗು ಬಿದ್ದಿವೆ, ಚಾರಪಾಯ (ಹೊರಸು) ಒಂದು ತಿರುವಿ ಬಿದ್ದಿದೆ. ಎಲ್ಲ ಕಡೆಗೆ ಕಸ, ಹೊಲಸು. ಅವಳು ನೋಡದೆ ಉಳಿದ ಒಂದು ಕೊಟಡಿಯಿತ್ತು. ಅದರೊಳಗೆ ಹೋಗಿ ನೋಡುತ್ತಾಳೆ, ಅವಳಿಗೆ ಅಘೋರವೆನಿಸಿತು. ಅಲ್ಲಿ ರಜನಿ--ಅಲ್ಲ ಅವಳ ಅಸ್ಥಿಪಂಜರ—ಬಿರುಸಾಗಿ ಕಳೆಯಿಲ್ಲದೆ ಒರಗಿದ್ದಾಳೆ, ಅವಳ ಮಗ್ಗಲಲ್ಲಿ ಎಳೆ ಗೂಸೊಂದು ಮೊಲೆ ಜಗ್ಗುತ್ತ ಬಿದ್ದಿದೆ. ಮುಗಿದುಹೋದ ಮೈಯಲ್ಲಿಯ ಮೊಲೆಯನ್ನು ಹಸಿದು ಕಂಗಾಲಾದ ಆ ಹೊಸ ಜೀವ ಹಾಲಿಗೆ ಹಂಬಲಿಸಿ ಜಗ್ಗುತ್ತಲೇ ಇದೆ. ರುಕ್ಮಾ ಆ ಕೂಸನ್ನು ಎತ್ತಿಕೊಂಡಳು, ಒಮ್ಮೆಲೆ ಕತ್ತಲೆಯಲ್ಲಿ ಮಿಂಚು ಸುಳಿದಂತೆ ಹೊಸ ಆಸೆಯೊಂದು ಅವಳಲ್ಲಿ ಮೊಳೆ ಯಿತು, ಹೊಸ ಜಗತ್ತು ಕಣ್ದೆರೆಯಿತು.

'ಅದನ್ನು ತಗೊಂಡು ಶಹರಕ್ಕೆ ಹೊರಟೆ' ಎಂದು ರುಕ್ಮಾ ಹೇಳಿದಳು.

ಈವರೆಗೆ ಗೊಂಬೆಯಂತೆ ಕುಳಿತು ಕೇಳುತ್ತಿದ್ದ ವೀಣೆ ಒಮ್ಮೆಲೆ ಹಾ ಎಂದು ಉದ್ಗಾರ ತೆಗೆದು 'ಆ ಕೂಸೆಲ್ಲಿ ?' ಎಂದು ಕೇಳಿದಳು. 'ಈ ಗೌರ ಯಾರ ಮಗು ?' ಅಮೃತ ಕೇಳಿದನು. ಇಬ್ಬರಿಗೂ ಸಂತತವಾದ ಕಂಬನಿಯ ಸರುವೇ ಅವಳ ಉತ್ತರ. ಹಿಂದಿನದೆಲ್ಲ ನೆನಸಿ ಅವಳ ಮಾತು ಕಟ್ಟಿಯಿತು. ಹೇಗೋ

ತಡಕೊಂಡು ಆಮೇಲೆ ಹೇಳಿದಳು : 'ನನ್ನ ರಾಮಾಯಣ ಮುಗಿಯಲಿಲ್ಲ, ತಾಯಿ ಆ ಕೂಸನ್ನು ಅದೆಷ್ಟು ಪರಿಯಿಂದ ಜೋಪಾನಮಾಡಿ ಹೊತ್ತೊತ್ತಿಗೆ ಬತ್ತಿಯ ಹಾಲು ಹಾಕಿ ಇಲ್ಲಿಗೆ ಕರಕೊಂಡು ಬಂದೆ, ಅವರ ತೊಡೆಯ ಮೇಲಿಟ್ಟೆ. ಎಲ್ಲರ ಸಾವನ್ನೂ ಮರಸಿತು ಆ ದೀಪದ ಕುಡಿ. ಇಬ್ಬರೂ ಕೂಡಿ ನಮ್ಮ ಹೊಟ್ಟೆಯನ್ನು ಕಟ್ಟಿ ತುಟ್ಟಿಯಾದ ಹಾಲನ್ನೂ ತಂದು ಹಾಕಿದೆವು, ಬೆಚ್ಚಗಿನ ಬಟ್ಟೆಯನ್ನು ಸುತ್ತಿದೆವು. ಹತ್ತು ಹನ್ನೆರಡು ದಿನ ಚೆನ್ನಾಗಿತ್ತು. ಮುಂದೆ ದಿನ ಬಹಳ ಕೆಟ್ಟಬಂದವು. ಆ ದಂಪತಿಗಳು ನಮ್ಮನ್ನು ನೌಕರಿಯಿಂದ ತೆಗೆದುಬಿಟ್ಟರು. ನಾವೂ ಎಲ್ಲರಂತೆ ಭಿಕಾರಿಗಳಾದೆವು. ನಮಗೇ ತಿನ್ನಲಿಲ್ಲ, ಕೂಸಿಗೆಲ್ಲಿಯ ಹಾಲು ? ಮನೆಮನೆ ಬಾಯ್ತೆರೆದು ಬೇಡಿ ನಾಲ್ಕು ದಿನ ಹಿಡಿದೆ, ಪೂಲಿನ ಬುಡದ ಆಸರೆಯಲ್ಲಿ ಜೋಳಿಗೆ ಕಟ್ಟಿ ಮಲಗಿಸಿದೆ. ಆದರೆ ಮುಂದೇನು? ಅದಕ್ಕೆ ಹಾಲು ಕೊಡಲಾರದೆ ನಮ್ಮ ಕಣ್ಮುಂದೇ ಅದನ್ನು ಕೊಂದೆವು. ಇಬ್ಬರೂ ಕಣ್ಣಿಂಗುವಂತೆ ಅತ್ತೆವು. 'ದೇವರೇ ಮತ್ತೊಂದು ಜನ್ಮದಲ್ಲಿ ಬಂಜೆಯಾಗು ವಂಥ ಪಾಪವನ್ನು ನನ್ನ ಕೈಯಿಂದ ಮಾಡಿಸಿದೆಯ !' ಎಂದು ನಾ ಹಲುಬಿದೆ. ರಜನಿ ಪಿಶಾಚಿಯಾಗಿ ನನಗೆ ಗಂಟುಬೀಳುವಳೆಂದು ಬೆಚ್ಚಿದೆ. ಅವರು ಕೂಳಿಗೆ ಗತಿಯಿಲ್ಲದೆ ಕೂಸು ಹೋದದ್ದಕ್ಕೆ ಎದೆಯೊಡಕೊಂಡು ನನ್ನ ತೊಡೆಯ ಮೇಲೆ ಪ್ರಾಣಬಿಟ್ಟರು. ಆಯಿತು, ನಾ ಒಬ್ಬಳೇ ಆದೆ. ಹುಚ್ಚಿಯಂತೆ ತಿರುಗಿದೆ,ಹೊಳೆ ಹಾರಿ ಸಾಯಬೇಕೆಂದೆ. ಅದೇ ಹೊತ್ತಿಗೆ ತನ್ನ ತಾಯಿಯನ್ನು ಕಳಕೊಂಡು ಈ ಗೌರ ಅಳುತ್ತ ಹುಡುಕುತ್ತ ಬಂದ. ನನ್ನನ್ನೇ ಮಾ ಎಂದು ಅಪ್ಪಿಕೊಂಡ. ಎಲ್ಲಿಯೂ ನನ್ನ ಬಿಡವೊಲ್ಲ. ಅವನ ತಾಯಿಯಂತೆ ನಾ ಕಂಡಿರಬೇಕು. ಈಗ ತಿಂಗಳಾಯಿತು, ಈ ಬಂಜೆ ಗೌರನ ತಾಯಿಯಾಗಿ ತಿರುಕಿಯಾಗಿ ಇದ್ದಳು. ಒಂದು ಕಡೆ ಮೊನ್ನೆ ಗಂಜಿ ಹಂಚುವಾಗ ಅದನ್ನು ಇಸಗೊಳ್ಳಲೆಂದು ಗೌರನನ್ನು ಕೆಳಗಿಳಿಸಿ ಸಾಲುಗೊಂಡು ನಿಲ್ಲುವದಕ್ಕಾಗಿ ದಟ್ಟಣೆಯಲ್ಲಿ ನುಗ್ಗಿದೆ. ಗಂಜಿ ಸಿಗಲಿಲ್ಲ, ಗೌರನೂ ಕೈತಪ್ಪಿ ಹೋಗಿದ್ದ. ಆಗ ಇಬ್ಬರನ್ನೂ ನೀವು ಕೂಡಿಸಿದಿರಿ, ಉಳಿಸಿದಿರಿ.'

ಕತೆ ಮುಗಿಸಿ ರುಕ್ಮಾ ದೊಡ್ಡ ನಿಟ್ಟುಸಿರನ್ನು ಬಿಟ್ಟಳು. ವೀಣೆ—ಅಮೃತ ಇವರು ಕೆಲನಿಮಿಷ ಕಲ್ಲಾಗಿ ಕೂತುಬಿಟ್ಟರು. ಕಲಕತ್ತೆಯೆಲ್ಲ ಇಂಥ ಕರುಣ ಕತೆಗಳ ಭಂಡಾರವಾದಂತೆ ಅವರಿಗೆ ತೋರಿರಬೇಕು. ಅಲ್ಲಿಯ ಪ್ರತಿಜೀವವೂ ಪರಮಾವಧಿ ದುಃಖದ ಕಡಾವಿಗೆಯಲ್ಲಿ ಅದ್ದಿ ತೆಗೆದ ಪುತ್ಥಳಿಯಂತೆ ತೋರಿರ

ಬೇಕು. ರುಕ್ಮಾನಿಗೆ ಔಷಧ ಕೊಟ್ಟು ಮಲಗಲು ಬಿಟ್ಟು ಇಬ್ಬರೂ ತಂತಮ್ಮ ಕೋಣೆಗಳಿಗೆ ಹೋದರು, ಕೆಟ್ಟ ಕನಸುಗಳನ್ನು ಕಾಣುತ್ತ ಹೆಸರಿಗೆ ನಿದ್ದೆ ಮಾಡಿದರು.

ಮರುದಿನ ಅಮೃತನಿಗೆ ಪತ್ರಗಳ ಒಂದು ಸೂಡೇ ಬಂತು. ಎಲ್ಲಾ ಬಾಗಿಲುಕೋಟೆಯಿಂದ ಬರೆದುವು. ಒಂದು ಶಂಭುರಾಯರದು, ಇನ್ನೊಂದು ಮಾಧವರಾಯರದು, ಮತ್ತೊಂದು ಗೆಳೆಯ ಗಂಗಾಧರನದು, ಕೊನೆಯದು ‘ಪ್ರಿಯ’ ಪತ್ನಿಯದು. ಎಲ್ಲರ ಬರಹದ ತಾತ್ಪರ್ಯವೆಂದರೆ ಕೂಡಲೆ ಹೊರಟು ಬರಬೇಕು, ಬರದಿದ್ದರೆ ಬಂದು ಕರಕೊಂಡು ಹೋಗತೇವೆ ಎಂದು. ಶಂಭುರಾಯರ ಪತ್ರವಂತೂ ಕೋಪ-ತಾಪ-ಶಾಪ ಎಲ್ಲದರ ಕಳಸವೇ ಆಗಿತ್ತು. ಅವನು ಕಲಕತ್ತೆಗೆ ಹೊರಟು ಹೋದ ಪತ್ರ ಮುಟ್ಟಿದ ದಿನ ಅವರಿಗೆ ಎರಡು ತಾಸು ಎಚ್ಚರು ತಪ್ಪಿತ್ತಂತೆ, ಪಾರ್ವತಿಬಾಯಿ ಅಡಿಗೆ ಕೆಲಸ ಬಿಟ್ಟು ಹೊಯ್ಕೊಂದು ಅಳುತ್ತ ಕೂತರಂತೆ. ‘ತಾರುಮಾಡಿ ಕರಸಿಕೊಳ್ಳೋಣ, ಬಂದೇ ಬರತಾರೆ’ ಎಂದು ಮಾಧವರಾಯರು ಬಂದು ಆಶ್ವಾಸನ ಕೊಟ್ಟ ಮೇಲೆ ಎಲ್ಲರೂ ಎದ್ದು ನಾಲ್ಕು ತುತ್ತು ಉಂಡರಂತೆ. ತಾರಿಗೆ ಉತ್ತರವೇ ಬರಲಿಲ್ಲ. ಅಂತೇ ಈ ಅಂತಿಮ ಪತ್ರ ಬರೆದಿರುವರು. ‘ನೀ ಇಷ್ಟು ನಾಚಿಕೆಗೆಟ್ಟವನೆಂದು ಗೊತ್ತಿರಲಿಲ್ಲ. ಯಾವದರದೂ ನಿನಗೆ ಜವಾಬದಾರಿ ಇಲ್ಲ, ವ್ಯವಹಾರಜ್ಞಾನವಂತೂ ಶೂನ್ಯ. ನಮ್ಮ ಸಲುವಾಗಿ ಅಲ್ಲದಿದ್ದರೂ ಮದುವೆ ಮಾಡಿಕೊಂಡ ಹೆಂಡತಿ ಸಲುವಾಗಿ ಇಲ್ಲದ ಉಪದ್ವ್ಯಾಪ ಮಾಡಲಿಕ್ಕೆ ಹೋಗಬಾರದು. ಬಂಗಾಲದ ಬರಗಾಲ ಕಳೀಲಿಕ್ಕೆ ಹೋಗಿ ಮನೆತನ ಎಲ್ಲಾ ಸ್ಮಶಾನ ಮಾಡಬೇಕಂತಿದ್ದರ ಖುಶಾಲ ಅಲ್ಲೇ ಇರು. ನೀ ನಮ್ಮ ಪಾಲಿಗೆ ಇಲ್ಲ ಅಂತ ತಿಳಿದು ಎಳ್ಳುನೀರು ಬಿಟ್ಟು ಕೂಡತೀವಿ. ಇದೊಂದು ವರ್ಷ ಕಲಿತು ಮುಗಿಸಿ ಇಷ್ಟು ಹಾದಿಗೆ ಹತ್ತತೀದಿ, ನಮ್ಮ ಬಡತನ ಹಿಂಗತದ ಅಂತ ನಾವು ಭರೋಸದಿಂದ ಇದ್ದರ ನೀ ನಮ್ಮನ ಥಲೋ ಮುಳಗಿಸಿದಿ. ಆತು, ಇದು ಮುಟ್ಟಿದ ಘಳಿಗ್ಗೆ ಹೊರಟು ಬಂದಿ ನೆಟ್ಟಗಾತು. ಇಲ್ಲಂದರ ನೀ ನಿನ್ನ ತಾಯಿ ತಂದೆಯ ಮಾರಿ ನೋಡಲಾರಿ.

ಶಂಭುರಾಯರ ಪತ್ರ ಇಂಥ ಪಂಜುನುಡಿಗಳಿಂದ ಎದೆಯನ್ನು ಸುಡುವಂತೆಯೆ ಇತ್ತು. ಅಮೃತ ಎಲ್ಲಾ ಓದಿ ದಿಙ್ಮೂಢನಾಗಿ ಕೆಲಸಕ್ಕೆ ಹೋಗುವುದನ್ನು ಬಿಟ್ಟು ತಲೆಹಿಡಿದು ಕುಳಿತನು. ಸಾವಿರಾರು ಮೈಲು ದೂರಿದ್ದ

ಮನೆಯೂ ಅಲ್ಲಿಯ ಸಮಸ್ಯೆಗಳೂ ಸುತ್ತೆಲ್ಲ ಸಂಚರಿಸಹತ್ತಿದವು. ಕೆಲವು ಕ್ಷಣ ತಾನು ಕಲಕತ್ತೆಗೆ ಮಾನವ್ಯಸೇವೆಗೆಂದು ಬಂದು ರಾಮಕೃಷ್ಣ ಮಠದಲ್ಲಿ ಇದ್ದುದರ ನೆನವೇ ಅವನಿಗೆ ಹಾರಿಹೋದಂತಾಯಿತು. ತನ್ನ ಪರೀಕ್ಷೆಯ ತೀರ್ಗಡೆ, ಆಮೇಲಿನ ಡಾಕ್ಟರಿಕೆ ಇದರ ಮೇಲೆಯೆ ತಮ್ಮ ಆಸೆಯ ರಾಜಮಹಾಲನ್ನು ಕಟ್ಟಿರುವ ಆ ತಾಯಿತಂದೆಗಳ ಗತಿ ಏನಾಗಿರಬಹುದು ? ಅವರು ಶಾಪಕೊಡುವುದು ಸಹಜವಲ್ಲವೇ ? ಅವರ ಶಾಪ ಕಟ್ಟಿಕೊಂಡು ನಾ ಇಲ್ಲಿಗೆ ಬಂದದ್ದು ಸರಿಯಾಯಿತೇ ? ನಾ ಹೋಗದಿದ್ದರೆ ಅವರು ಪ್ರಾಣ ನೀಗಬಹುದು. ಅಲ್ಲಿಂದ ಜಗತ್ತಿನಲ್ಲಿ ನನಗೆ ಯಾರು ? ಈ ಯೋಚನೆಗೆ ಬರುತ್ತಲೆ ಸರಸರ ಹರಿಯುವ ನದಿಯೊಂದು ಎತ್ತರದಿಂದ ತಡಸಲವಾಗಿ ಕೆಳಗೆ ಧುಮುಕಿದಂತೆ ಅಮೃತನ ಭಾವನೆ ಕಾವೇರಿತು. ಕಂಠವು ದಟ್ಟಸಿತು, ಕಣ್ಣೀರು ಬಿಸಿಬಿಸಿಯಾಗಿ ಹೊರಪಟ್ಟಿತು. 'ಇಂಥ ಕೆಲಸಕ್ಕೆ ನಾ ಅಯೋಗ್ಯ, ಮನೆಗೆ ಹೋಗಿಬಿಡಬೇಕು' ಎಂದು ಬಡಬಡಿಸುತ್ತ ಕೂತ ಮಂಚದಿಂದ ಮೇಲೆದ್ದನು, ತನ್ನ ಸಾಮಾನಿನ ಕಡೆಗೆ ನೋಡಿದನು. ಹೊಸ ನಿರ್ಧಾರ ಮಾಡುತ್ತಿರುವಂತೆ ಗೋಣು ಹಾಕುತ್ತ ಜಾಪುಗಾಲನ್ನು ಎತ್ತಿಡುತ್ತ ಮೂಲೆಯಿಂದ ಮೂಲೆಗೆ ತಿರುಗಿದನು. ಅಷ್ಟರಲ್ಲಿ 'ಅಮೃತ್' ಎಂಬ ಹೆಂಗೊರಳಿನ ಇಂಚರ ವಾಸ್ತವ ಪ್ರಪಂಚದಿಂದ ಜೀವವನ್ನು ಆದರ್ಶಕ್ಕೆ ಕರೆಯುವ ಕೂಗಿನಂತೆ ಕೇಳಿಸಿತು. ವೀಣೆ ಬಾಗಿಲ ನುಗಿಸಿ ಒಳಗೆ ಬಂದಳು. 'ಬೆಳಗಿನ ಕೆಲಸಕ್ಕೆ ಹೊರಡಲು ಹೊತ್ತಾಯಿತು. ವಾರ್ಡಿಗೆ ಭೆಟ್ಟಿ ಕೊಟ್ಟು ಬರೋಣ' ಎನ್ನುತ್ತ ಅವನ ಮುಖದ ಕಡೆಗೆ ನೋಡಿದಳು. ಏನೋ ಬದಲಾವಣೆ ಕಂಡಿತು, 'ಯಾಕೆ ಏನಾಗಿದೆ' ಎಂದು ಕೇಳಿದಳು. ಕೆಲನಿಮಿಷ ಸುಮ್ಮನಾಗಿದ್ದು ಪತ್ರದ ಸುದ್ದಿಯನ್ನೆಲ್ಲ ಅಮೃತ ಹೇಳಿದನು. 'ಹಾಗಾದರೆ ಹೋಗಿಬಿಡು, ಸ್ವಾಮಿಜಿಯವರಿಗೆ ನಾ ಹೇಳುವೆ' ಎಂದು ಅವಳ ಸರಳ ಉತ್ತರ ಬಂತು. 'ಹೋಗಿಬಿಡಲೇ ?' ಎಂದು ಯಾಂತ್ರಿಕವಾಗಿ ಅವನು ಕೇಳಿದನು. 'ಅದರಲ್ಲೇನು ತಪ್ಪು ? ನಿನ್ನ ಕೈಲಾದ್ದು ಮಾಡಿದೆ. ಇನ್ನು ಸಾಧ್ಯವಿಲ್ಲ. ಈ ಕೆಲಸಕ್ಕಾಗಿ ತಾಯಿತಂದೆಯ ಆಹುತಿ ಕೊಡಬೇಕೇ ? ಹೋಗಿ ನೀನವರ ಸಮಾಧಾನ ಮಾಡಲೇಬೇಕು.

ಅವನ ನಿರ್ಧಾರ ಅವಳ ಬೆಂಬಲದಿಂದ ಬಲಗೊಂಡಂತಾಯಿತು. ಆದರೆ ಎಲ್ಲಿಯೋ ಒಳಒಳಗೆ 'ಹೀಗೆ ಮಾಡುವುದು ಸರಿಯೇ ?' ಎಂಬ ಪ್ರಶ್ನೆ ಆ ನಿರ್ಧಾರವನ್ನು ಕೆದಕುತ್ತಲೇ ಇತ್ತು. ಮೊದಲೇಕೆ ಇದನ್ನೆಲ್ಲ ಯೋಚಿಸಲಿಲ್ಲ ?

ಮನೆಯ ಜನಕ್ಕೆ ಏನಾದರೂ ಚಿಂತೆಯಿಲ್ಲ ಎಂದು ಹೊರಟು ಬಂದವನು ಈಗ ಹೇಡಿಯಂತೆ ಅಳ್ಳೆದೆಯನ್ನು ತೋರಿಸಬೇಕೇ ? ಈ ಬಗೆಯ ಯೋಚನೆಗಳು ಸ್ಪಷ್ಟವಾಗಿ ಆ ಕ್ಷಣಕ್ಕೆ ಮೂಡದಿದ್ದರೂ ಹಿನ್ನೆಲೆಯ ಹಾಡಿನ ಮಂದ್ರಸ್ವರಗಳಂತೆ ಸುಳಿಯುತ್ತಿದ್ದವು. 'ಇನ್ನು ಹೊರಡುವ ಸಿದ್ಧತೆ ಮಾಡಬೇಕು ಅಮೃತ್, ಹೋಗುವದಾದರೆ ತಡವೇಕೆ' ಎಂದು ಮುಂತಾದ ವೀಣೆಯ ನುಡಿಗಳಿಗೆ ಹೌದು, ಇಲ್ಲ ಎಂಬ ತ್ರುಟಿತವಾದ ಹೊರ ಉತ್ತರಗಳನ್ನು ಕೊಡುತ್ತ ಒಳಗೆ ವಿಚಾರಮಗ್ನನಾಗಿ ಅವನು ಶೂನ್ಯವನ್ನು ನೋಡುತ್ತ ಕುಳಿತನು. 'ಯಾಕೆ ಏನು ವಿಚಾರ ಮಾಡುತ್ತೀ ? ಸ್ವಾಮಿಜಿಯವರು ತಪ್ಪು ತಿಳಿಯುವದಿಲ್ಲ, ನಾ ಹೇಳುವೆ' ಎಂದು ವೀಣೆ ಅವನಿಗೆ ತಿರುತಿರುಗಿ ಹೇಳಿದಳು. ಒಂದರ್ಧ ತಾಸು ಹೀಗೆ ಹೋಯಿತೋ ಇಲ್ಲವೋ 'ಡಾಕ್ಟರ ಅಮೃತ್, ಡಾಕ್ಟರ ಅಮೃತ್' ಎಂದು ಗಾಬರಿಯ ದನಿಯಲ್ಲಿ ಕೂಗುತ್ತ ಧಾವಿಸುತ್ತ ಯಾರೋ ಬಂದರು. ಇಬ್ಬರೂ ತಟ್ಟನೆ ಬಾಗಿಲು ತೆರೆದು ನೋಡಿದರು. 'ಭಾಳ ಸೀರಿಯಸ್ ಕೇಸು, ಡಾಕ್ಟರ. ಸಾಯಲಿಕ್ಕಾದ ಪ್ರಾಯದ ಹೆಂಗಸನ್ನು ತಂದು ಹಾಕಿದ್ದಾರೆ. ಬೇಗ ಬನ್ನಿ' ಎಂದು ಆಳು ಹೇಳಿದನು. ಅಮೃತ-ವೀಣೆ ಕೂಡಲೆ ಹೊರಟರು, ಹೋಗಿ ನೋಡಿದರು. ಅವಳ ಮೈಯೇನೋ ಪುಷ್ಟವಾಗಿದೆ, ಆದರೆ ರಕ್ತಮಯವಾಗಿವೆ. ಮಾನಮುಚ್ಚಿದ ತುಣುಕರಿವೆಯನ್ನು ಬಿಟ್ಟರೆ ಏನೂ ಇಲ್ಲ. ಮೊಲೆಗಳು ಮರದ ಬಿಳಲಂತೆ ಜಗಿಬಿದ್ದಿವೆ. ಕೂದಲೆಲ್ಲ ಜಡೆಗಟ್ಟಿದೆ. ಸತ್ತಕಳೆ ಇದ್ದರೂ ಸತ್ತಿಲ್ಲ. ಕೂಡಲೇ ಉಪಚಾರಕ್ಕೆ ಆರಂಭವಾಯಿತು. ಗಾಯ ತೊಳೆದು ಪಟ್ಟೆ ಕಟ್ಟಿದರು. ಬಾಯಿಯಲ್ಲಿ ಬ್ರ್ಯಾಂಡಿ ಹಾಕಿದರು, ಬೇರೆ ಔಷಧ ಕುಡಿಸಿದರು. ಅವಳನ್ನು ತಂದವರನ್ನು ವಿಚಾರಿಸಲಾಗಿ, ಯಾರೋ ದುರಾತ್ಮರು ಅವಳಿಗೆ ಹಣದ ಆಶೆ ತೋರಿಸಿ ಕೆಲವು ದಿನ ಬೇಕಾದ್ದು ತಿನಿಸಿ, ಆಮೇಲೆ ಬಲಾತ್ಕಾರಮಾಡಿ ಹಿಂಸೆ ಪಡಿಸಿ ಗಿಡಕಂಟೆಗಳಲ್ಲಿ ಬಿಸಾಡಿ ಹೋಗಿದ್ದರೆಂದು ತಿಳಿಯಿತು. ಅಮೃತನ ರಕ್ತ ಸಳಮಳ ಕುದಿಯಿತು, ಕೋಪತಪ್ತನಾದನು. ಅನ್ನದ ಹಸಿವೆ ಆದರಿಂದ ಲಾಭ ಪಡೆಯಲು ಹಪಾಪಿಸುವ ಕಾಮದ ಹಸಿವೆ ಇದರ ದಾರುಣ ಚಿತ್ರಗಳು ಕಣ್ಮುಂದೆ ನಿಂತವು. ಶುಶ್ರೂಷೆಯನ್ನೆಲ್ಲ ಮುಗಿಸಿ ಒಂದು ಬಗೆಯ ಸಮಾಧಾನದಿಂದ ಆ ಹೆಂಗಸನ್ನು ನೋಡುತ್ತ ನಿಂತನು. ಅವಳು ಕಣ್ಣು ತೆರೆದು 'ನೀಚರೆ, ಚಾಂಡಾಳರೆ' ಎಂದು ಒದರುತ್ತ ಮತ್ತೆ ಕಣ್ಣು ಮುಚ್ಚಿದಳು. ಅಮೃತನಿಗೂ ವೀಣೆಗೂ ಅದರರ್ಥವಾಯಿತು.

ಅವಳು ಆ ಸ್ಥಿತಿಯಿಂದ ಹೊರಬರಲು ಕೆಲವು ಕಾಲಬೇಕೆಂದು ಮಾಡುವ ಏರ್ಪಾಡನ್ನು ಮಾಡಿ ಹೊರಬಂದರು. 'ಇನ್ನು ದಿನದ ಡ್ಯೂಟಿಗೆ ಹೊರಡೋಣ' ಅಮೃತ ಆಡಿದನು. 'ಅಂದರೆ ? ನಿನ್ನ ಊರಿಗೆ ಹೊರಡುವ ವಿಚಾರ...' ವೀಣೆ ಅರ್ಧಕ್ಕೆ ತಡೆದಳು. 'ಆ ವಿಚಾರ ಅವಿಚಾರವೆಂದು ತಿಳಿದುಬಿಟ್ಟೆ. ವೀಣಾ, ನನ್ನ ತಾಯಿತಂದೆ ಹೆಚ್ಚು, ಈ ಹೆಂಗಸೇನು ಕಡಿಮೆಯೆ ? ಇಲ್ಲಿಯು ತಾಯಿತಂದೆ, ಅಕ್ಕ–ತಂಗಿ ಇವರ ಸೇವೆಗೆ ನನ್ನ ಆಯುಷ್ಯ ಮೀಸಲಾಯಿತು. ಯಾರೂ ಈ ನನ್ನ ಸಂಕಲ್ಪವನ್ನು ಕದಲಿಸಲಾರರು. ನಾ ಬರಬೇಕೆಂದು ಹಾಗೆ ಗಾಬರಿಗೊಳಿಸುವ ಪತ್ರ ಬರೆದಿದ್ದಾರೆ. ಅದರಿಂದ ನಾ ಯಾಕೆ ಗಾಬರಿಯಾಗಬೇಕು ? ಇಂದಲ್ಲ ನಾಳೆ ಹೋಗಿ ಅವರನ್ನು ಕಾಣದೆ ಇರುವೆನೇ ? ಈಗ ಪ್ರತಿಕ್ಷಣವೂ ಸೇವೆಗಾಗಿ ಕರೆಯುತ್ತಿರುವ ಈ ನನ್ನ ಬಂಧುಗಳನ್ನು ಬಿಟ್ಟು ಕಾಲು ಕಿತ್ತಲಾರೆ. ಹಾಗೆ ಮಾಡಿದರೆ ಅದೇ ನನ್ನ ಮರಣವಾದೀತು.' ಅತ್ಯಂತ ದಾರ್ಢ್ಯದಿಂದ ಭಾವಾವೇಶದಿಂದ ಅಮೃತ ಹೇಳಿದನು. ವೀಣೆ ಮುಂದರಿಸಲಿಲ್ಲ. ಇಬ್ಬರೂ ದಿನಚರಿಯ ಕೆಲಸಕ್ಕೆ ಹೋದರು. ಆದಷ್ಟು ಬೇಗ ತಾನು ಊರಿಗೆ ಬರುವೆನೆಂದೂ ತನ್ನ ವಿಷಯ ಎಷ್ಟೂ ಕಾಳಜಿ ಮಾಡಬಾರದೆಂದೂ ಬಹುಶಃ ಒಂದೆರಡು ತಿಂಗಳಲ್ಲಿಯೋ ಬರಬಹುದೆಂದೂ ಶಂಭುರಾಯರಿಗೆ ಅಮೃತ ಉತ್ತರ ಬರೆದನು.

ಪರಿಹಾರ ಕೇಂದ್ರಗಳು ಕಲಕತ್ತೆಯಲ್ಲಿ ಎಷ್ಟು ಪರೋಪರಿಯಿಂದ ಕೆಲಸ ಮಾಡಿದರೂ ಮೃತ್ಯುವಿನ ಬಿಡಾರ ಕಿತ್ತಲಿಲ್ಲ. ದಿನಾಲು ಬೀದಿಯಲ್ಲಿ ಹೊರಳಿ ಸಾಯುವವರ, ಒರಲುವವರ ಸಂಖ್ಯೆ ಹೆಚ್ಚುತ್ತಿತ್ತು. ಆಸ್ಪತ್ರೆಗೆ ಸಾಗಿಸಿದವರನ್ನೂ ಸಾವು ಬೆನ್ನಟ್ಟಿರುತ್ತಿತ್ತು. ಊರಲ್ಲಿಯ ಧನಿಕರು, ಸಾಧಾರಣರು, ಅಧಿಕಾರಿಗಳು, ನೌಕರರು, ಕೂಲಿಕಾರರು ಎಲ್ಲರೂ ಅನ್ನ ಪಡೆದು ತಿಂದು ಬದುಕಿದ್ದಾರೆ. ಅದೇ ಹಳ್ಳಿ ಹಳ್ಳಿಯಿಂದ ನುಗ್ಗಿಬಂದ ಬಡಜನ—ಯಾರ ದುಡಿಮೆಯ ಫಲವಾಗಿ ಎಲ್ಲರಿಗೆ ಅನ್ನ ಸಿಗುವುದೋ ಅಂಥ ಜನ—ಬದುಕಿ ಕೇಕೆ ಹಾಕುವ ಜನದ ಕಣ್ಣ ಮುಂದೆ ಸಾಯುತ್ತಿದ್ದಾರೆ. ಇದಕ್ಕಿಂತ ಭಯಂಕರವಿನ್ನೇನು ? ಕಲಕತ್ತೆ ಜೀವನ-ಮರಣಗಳ ವಿರಸವಾದ ಮದುವೆಯಂತಾಗಿದೆ; ಮಾನವ ಸಂಸ್ಕೃತಿಯ ಜೀವನ್ಮರಣದ ಗುರುತಾಗಿದೆ. ಇದನ್ನು ಕ್ಷಣಕ್ಷಣಕ್ಕೆ ಅನುಭವಿಸಿ ನೊಂದು ಬೆಂದವರಲ್ಲಿ ಅಮೃತ ಒಬ್ಬನಾಗಿದ್ದನು. ಆದರೆ ಮಾಡುವಷ್ಟು ಸೇವೆ ಮಾಡದಿದ್ದರೆ ಉಳಿಯಬಹುದಾದ ಒಂದು ನೂರಾಂಶ ಜನವೂ

ಕೈಬಿಡುವುದಿಲ್ಲವೇ ? ಹಿಂದು ಮುಂದು ನೋಡದೆ ತನ್ನ ದೇಹಕ್ಕೆ ಆಗುವ ಶ್ರಮವನ್ನು ಲೆಕ್ಕಿಸದೆ ಹಗಲಿರುಳು ಅವನು ದುಡಿಯುತ್ತಿದ್ದನು. ಸ್ವಾಮಿಜಿಯವರ ಪ್ರಭಾವ ಮತ್ತು ಪ್ರತಿನಿತ್ಯದ ಪ್ರೇರಣೆಯಿಂದ ದುಃಖಿತರ ಸೇವೆಯಿಂ-ಬುದರಲ್ಲಿ ಅವನು ಎಲ್ಲ ಸಾರ್ಥಕ್ಯವನ್ನು ಕಂಡನು. ಹೀಗೆ ಒಂದು ದಿನ ದೂರದ ಒಂದು ಕೇಂದ್ರಕ್ಕೆ ಹೋಗಿ ರೋಗಿಗಳನ್ನು ನೋಡಿಕೊಂಡು ಅವನು ವೀಣೆಯೊಂದಿಗೆ ತಿರುಗಿ ಮಠಕ್ಕೆ ಬರುತ್ತಿದ್ದನು. ಮಧ್ಯಾಹ್ನದ ಹೊತ್ತು. ಅನೇಕ ನಿರಾಶ್ರಿತರು ನೆರಳಿದ್ದಲ್ಲಿ ನಿಶ್ಚೇಷ್ಟವಾಗಿ ಹೊಟ್ಟೆ ಪಾತಾಳಕ್ಕೆ ಹತ್ತಿ ಬಿದ್ದುಕೊಂಡಿದ್ದಾರೆ. ಯಾರೋ ಕೆಲವರು ಮಾತ್ರ ಮನೆಗಳ ಮುಂದೆ ನಿಂತು 'ಒಂದಿಷ್ಟು ಅನ್ನ ಹಾಕಿರಿ, ಗಂಜಿ ಕೊಡಿರಿ' ಎಂದು ಕಂಠಶೋಷ ಮಾಡುತ್ತಿದ್ದಾರೆ. ತಾಯಿ ಕೂಗಿ ಬೇಸತ್ತಾಗ ಅವಳಿಗೆ ವಿಶ್ರಾಂತಿ ಕೊಡಲು ಬಗಲಲ್ಲಿಯ ಇಲ್ಲವೆ ಬಳಿಗೆ ನಿಂತ ಮಗು ಒದರುತ್ತದೆ. ತಿರುತಿರುಗಿ ಅದನ್ನೇ ಅನ್ನುವುದೆಂದರೆ ಅದೊಂದು ಕಣ್ಣಿವೆಯ ಪಿಳುಕಿನಷ್ಟು ಸಹಜ ಕ್ರಿಯೆಯಾಗಿಬಿಟ್ಟಿದೆ. ಮುಚ್ಚಿದ ಬಾಗಿಲು ತೆರೆಯಲೊಲ್ಲವು, ಎಲ್ಲಿಯೋ ಒಬ್ಬ ಪುಣ್ಯಾತ್ಮಳು ಅರ್ಧ ಬಾಗಿಲು ತೆರೆದು ಒಂದಿಷ್ಟು ಎಂಜಲನ್ನ ನೀಡಲು ಕೈಚಾಚುತ್ತಾಳೆ ; ಅದನ್ನು ತೆಗೆದುಕೊಳ್ಳಲು ಹತ್ತಾರು ಎಲುವಿನ ಕಟ್ಟಿಗೆಯಾದ ಕೈಗಳು ಮುಂದೆ ಚಾಚಿ ಒಂದರೊಡನೆ ಒಂದು ಗುದ್ದಾಡಿ ಎಲ್ಲ ಚೆಲ್ಲಿಬಿಡುತ್ತವೆ. ಕೆಳಗೆ ಬಿದ್ದ ಅಗುಳನ್ನು ಆರಿಸುವುದರಲ್ಲಿ ಎಲ್ಲರೂ ಗುದ್ದಾಡುತ್ತಾರೆ, ನುಗಿಸುತ್ತಾರೆ, ಕೆಟ್ಟ ಬೈಗುಳನ್ನು ಬೈಯುತ್ತಾರೆ. ಕೊನೆಗೆ ಯಾರ ಹೊಟ್ಟೆಗೂ ಅದು ಹತ್ತುವದಿಲ್ಲ. ಇದನ್ನರಿತೋ ಏನೋ 'ವಿವೇಕಿ'ಗಳು ಭಿಕ್ಷುಕರಿಗೆ ಏನೂ ನೀಡಬಾರದೆಂದು ಬಾಗಿಲ ಮುಚ್ಚಿಕೊಂಡಿರಬೇಕು ! ಅಮೃತ-ವೀಣೆ ಇಬ್ಬರೂ ಇಂಥ ನೋಟ ನೋಡುತ್ತ ಕಾಲ್ನಡಿಗೆಯಿಂದ ಸಾಗಿದ್ದರು. ಬಿಸಿಲು ಹೆಚ್ಚುತ್ತಿದೆ, ನಡುನೆತ್ತಿಗೇರಿದ ಸೂರ್ಯ ನೀಲವಾದ ಆಕಾಶದಲ್ಲಿ ನಿಲ್ಲಿಸಿದ ವಜ್ರದ ಹರಳಿನಂತೆ ನೋಡಲಾರದಷ್ಟು ಉರಿಉರಿಯಾಗಿದ್ದಾನೆ. ಇಬ್ಬರೂ ಕೆಳಗೆ ಮುಖ ಮಾಡಿಕೊಂಡು ಒಂದು ಹರವಾದ ಬೀದಿಯ ಅಂಚಿಗೆ ಬಂದರು. ಅಲ್ಲಿ ಏನೋ ಕಲಕಲ ಕೇಳಿಸಿತು. ತಲೆಯೆತ್ತಿ ನೋಡಿದರು. ಮೂಲೆಯ ಹೊಲಸಿನ ನಡುವೆ ಒಂದು ಕಸದ ಡಬ್ಬಿಯಿತ್ತು. ಆ ತಗಡಿನ ತೆರೆವಾಯಿಯಾದ ಡಬ್ಬಿಯ ಒಳಗಿಗಿಂತ ಸುತ್ತೆಲ್ಲ ಹೊರಸೂಸಿದ ಕಸವೇ ಹೆಚ್ಚು. ಯಾಕಂದರೆ ಆ ಕಸದ ವಿಧವಿಧ ರಾಶಿಯಲ್ಲಿ ಅನ್ನದ ಸಂಶೋಧನೆ ನಡೆದಿದೆ. [illegible] ಸುತ್ತ ನಿಂತು ಅದರೊಳಗೆ ಬಾಗಿ

ಕೈಹಾಕಿದ ನಡೆದಾಡುವ ಹೆಣಗಳು ಈ ಸಂಶೋಧನೆ ನಡಸಿರುತ್ತವೆ. ಕೆಟ್ಟ ಹಸಿವೆಯಿಂದ ನಿಂದಿರಲು ಸಹ ಆಗದೆ ಜೋಲಿ ಹೊಡೆಯುವ 'ಖಂಡೇರಾಯ' ನೊಬ್ಬನು ಎಲವು ತೆಗೆದ ಬರಿವೈಯನ್ನು ಡಬ್ಬಿಯ ಅಂಚಿಗೆ ಆನಿಸಿ ಅದರಲ್ಲಿ ಕೈ ಹಾಕಿ ಕೆದರುತ್ತಿದ್ದಾನೆ. ಅವನ ಇದಿರಲ್ಲಿ ಅವನ ಧರ್ಮಪತ್ನಿ ಅವನಷ್ಟೆ ವಿಕಾರವಾಗಿದ್ದು ಬಗಲಲ್ಲಿ ಎಳಗೂಸನ್ನೆತ್ತಿಕೊಂಡು ಯಜಮಾನನು ನಡಸಿದ ಸಂಶೋಧನೆಗೆ ಕೈಕೊಡುತ್ತಿದ್ದಾಳೆ. ಏನಿಲ್ಲೆಂದರೂ ಬ್ರೆಡ್ಡು ಬಿಸ್ಕೀಟಿನ ಚೂರು ಸಿಗುತ್ತವೆ, ಅವನ್ನವರು ಬಾಯಿಗೆ ಎಸೆಯುತ್ತಾರೆ, ಗಬಗಬ ತಿನ್ನುತ್ತಾರೆ, ಕೂಸಿನ ಬಾಯಲ್ಲಿ ಇದ್ದದರಲ್ಲಿ ಮಿದುವಾದ ತುಣುಕೊಂದನ್ನು ತುರುಕುತ್ತಾರೆ. ಬೇಡಾದ ಕಸವನ್ನೆಲ್ಲ ಹೊರಗೆ ಒಗೆಯುತ್ತಾರೆ. ಹೀಗೆ ನಡೆದಿತ್ತು ಅವರ ಮಧ್ಯಾಹ್ನದ ಭೋಜನ!— ಕಸದಲ್ಲಿಯೂ ರಸವನ್ನು ಕಂಡು ಪಡೆಯುವ ಆ ಅವರ ದರ್ಶನ ಹೆಚ್ಚಿನದೇ ಸರಿ. ಇನ್ನೊಂದು ಕುಟುಂಬ ಅಲ್ಲಿಗೆ ಬಂತು, ಎಲ್ಲಿಯೂ ಏನೂ ಸಿಗದೆ ಹಸಿವೆ ಕಕ್ರಾಂತವಾಗಿತ್ತು. ಮೊದಲಿನ ಕುಟುಂಬ ಏನೋ ಬಾಯಿಗೆ ಹಾಕಿ ಆಡಿಸುತ್ತಿರುವುದು ಕಂಡು ಅವರಿಗೆ ಹೊಟ್ಟೆಯಲ್ಲಿ ಸಂಕಟವಾಯಿತು. ಓಡಿ ಬಂದು ಕಸದ ಡಬ್ಬಿಯ ತೆರವಿದ್ದ ಕಡೆಗೆ ಅವರು ತಮ್ಮ ಅರಸಿಕೆಯನ್ನು ನಡಸಿದರು. ಎಷ್ಟಾದರೂ ಸಾರ್ವಜನಿಕ ಸ್ಥಳ, ಪುಕ್ಕಟೆ ಅನ್ನಛತ್ರ! ಆದರೆ ಮೊದಲಿನ ಕುಟುಂಬಕ್ಕೆ ಇದು ಸಹನೆಯಾದೀತೇ? ತಮ್ಮ ಹಕ್ಕು ಸ್ಥಾಪಿತವಾದ ಕಸದ ಡಬ್ಬಿಯ ಮೇಲೆ ಬೇರೆಯವರು ಆಕ್ರಮಣ ಮಾಡಿದರೆ ಅವರು ಹೇಗೆ ತಡಕೊಳ್ಳಬೇಕು? ಮೊದಲು ಹೇಳಿ ನೋಡಿದರು, ಕೇಳಲಿಲ್ಲ. ಅಲ್ಲಿಂದ ಬಯ್ದಾಟಕ್ಕೆ ಸುರುವಾಯಿತು, ಆಮೇಲೆ ನುಗಿಸಾಟ ನಡೆಯಿತು. ಇದೇ ಹೊತ್ತಿಗೆ ಅಮೃತ-ವೀಣೆ ಆಕಡೆ ಬಂದದ್ದು. ಎರಡು ಕುಟುಂಬಗಳು ಒಬ್ಬರೊಬ್ಬರನ್ನು ಸರಿಸುತ್ತಲೂ ಡಬ್ಬಿಯ ಒಳಒಳಗೆ ಕೈಹಾಕುತ್ತಲೂ ಒಂದೇ ಸವನೆ ಬಾಯಿಬಿಡುತ್ತಲೂ ಇದ್ದಾರೆ. ಅರ್ಧ ಡಬ್ಬಿಯ ಕಸವೆಲ್ಲ ಹೊರಗೆ ಸೂರೆಯಾಯಿತು. ಅಷ್ಟರಲ್ಲಿ ಯಾರೋ ಪುಣ್ಯಾತ್ಮರು ಒಗೆದಿದ್ದ ಬೆಲ್ಲ ಜಿಗಿಜಿಗಿಯಾಗಿ ಹತ್ತಿದ ತಟ್ಟೊಂದು ಕಂಡಿತು. ಅದೆಲ್ಲ ಹೊಲಹೊಲಸಾಗಿದೆ, ಅದಕ್ಕೆ ಹತ್ತಿದ ಬೆಲ್ಲದಲ್ಲಿ ಇರುವೆಯ ತಲೆಗಳೂ ಮೈಚೂರುಗಳೂ ನಟ್ಟುಹೋಗಿವೆ. ಆದರೇನು, ಎರಡೂ ಪಕ್ಷದವರಿಗೆ ಅಮೃತವೇ ಸಿಕ್ಕಂತಾಯಿತು, ಸಂಶೋಧನೆ ಫಲಿಸಿತು! ಇಬ್ಬರೂ ಆ ತಟ್ಟನ್ನು ಎಳೆದಾಡಿದರು. ಅದು ಎಲ್ಲರ ಕೈಯಲ್ಲಿಯೂ ಇದೆ, ಆದರೆ

ಯಾರಿಗೂ ಅದರ ಸವಿ ಪಡೆಯುವ ಭಾಗ್ಯವಿಲ್ಲ. ಪ್ರಕರಣ ವಿಕೋಪಕ್ಕೆ ಹೋಯಿತು. ಅಂಥ ಹಸಿವೆ ನಿತ್ರಾಣದಲ್ಲಿಯೂ ಹೆಣ್ಣು ಗಂಡು ತಮ್ಮ ಪರಾಕ್ರಮ ತೋರಿ ಅದನ್ನು ಪಡೆಯಲೆಳಸಿದರು. ಕೈಗೆಕೈಹತ್ತಿತು, ಬೈಗುಳ ಸುರಿಮಳೆ ನಡೆಯಿತು. ಓಣಿಯ ಜನ ಊಟ ಮಾಡಿ ಹೊಟ್ಟೆಯ ಮೇಲೆ ಕೈಯಾಡಿಸುತ್ತ ಮೋಜು ನೋಡಲಿಕ್ಕೆಂದು ಕಲೆತರು. ಅವರೇನು ನೋಡುತ್ತಿರುವರೆಂದು ನೋಡಲು ಇನ್ನೂ ಇಷ್ಟು ಹಾದಿಹೋಕರು ಸೇರಿಕೊಂಡರು. ಅವರಲ್ಲಿ ಕೆಲವರು ಪುಕಟ ಕುಸ್ತಿ ನೋಡಲು ಬಂದವರಂತೆ 'ಲಗಾವ,ಮಾರೋ' ಎಂದು ಉಭಯ ಪಕ್ಷಗಳಿಗೆ ಹುರುಪು ಕೊಡುತ್ತಿದ್ದಾರೆ. ಈ ಹೋರಾಟದಲ್ಲಿ ಆ ತಟ್ಟು ತಾನೇ ಪ್ರಶ್ನೆಯನ್ನು ಬಗೆಹರಿಸಿತು. ಸರಿಅರ್ಧವಾಗಿ ಹರಿದು ಇಬ್ಬರ ಕೈಯಲ್ಲಿ ಉಳಿಯಿತು. ಅದನ್ನು ಮುಂದೆ ಇಟ್ಟುಕೊಂಡು ಕುಳಿತು ಗೆಲವಿನ ಠೀವಿಯಲ್ಲಿ ವೈರಿಪಕ್ಷದವರನ್ನು ಕೆಟ್ಟಗಣ್ಣಿನಿಂದ ನೋಡುತ್ತ ಇಬ್ಬರೂ ಅದನ್ನು ನೆಕ್ಕಹತ್ತಿದರು. ಕೂಡಿದ ಜನದಲ್ಲಿ ಯಾರೋ ಒಬ್ಬರು 'ಪಾಪ !' ಎಂದು ಮರುಗಿದರು. ಉಳಿದನೇಕರು ನೋಡುತ್ತಲೇ ನಿಂತಿದ್ದಾರೆ. ಅದು ಅವರಿಗೆ ಒಂದು 'ಪ್ರೇಕ್ಷಣೀಯ ದೃಶ್ಯ' ಮಾತ್ರ. ಮನೆಗೆ ಹೋಗಿ 'ಯುದ್ಧದ ಮೂಲಕ ಎಂಥ ಬರಗಾಲ ಬಂದಿದೆ !' ಎಂದು ವರ್ಣಿಸಲು ಒಂದು ಉತ್ತಮ ಉದಾಹರಣೆ ಸಿಕ್ಕಿತಲ್ಲವೇ ? ಅಮೃತ-ವೀಣೆ ಮಾತ್ರ ಗದ್ದಲದಲ್ಲಿ ಒಳನುಗ್ಗಿ ಆ ತಟ್ಟಿನ ಬೆಲ್ಲದ 'ರಸಗುಲ್ಲ'ವನ್ನು ತಿನ್ನುವ ಜನವನ್ನು ಬಿಡಿಸಲು ಪ್ರಯತ್ನ ಮಾಡಿದರು. ಆದರೆ ಆ 'ಮಧುರ' ಸಮಾಧಿಯ ಭಂಗವನ್ನು ಮಾಡುವುದು ಯಾರಿಗೆ ಸಾಧ್ಯ ? ಉಳಿದ ಜನ ತಮ್ಮ ಪಾಡಿಗೆ ಹೋಯಿತು. ಅಷ್ಟರಲ್ಲಿ ಕೆಲವು ಬೀದಿ ನಾಯಿಗಳು ಅಲ್ಲಿಗೆ ಬಂದುವು. ಅವಕ್ಕೂ ಹೊಟ್ಟೆಯಿದೆ,ಹಸಿವಿದೆ. ನಿಜವಾಗಿ ಕಸದ ಡಬ್ಬಿಯೆಂದರೆ ಅವುಗಳ ಕಾಯಂ ಸೊತ್ತು. ಹೀಗಿರಲು ಈ ಮನುಷ್ಯರೇಕೆ ಅಲ್ಲಿಗೆ ಬಂದರೆಂದು ಅವು ಗುರ್ರೆಂದು ಗುರುಗುಡುತ್ತ ಡಬ್ಬಿಯೊಳಗೆ ಹಾರಿಕೊಂಡವು. ಆ ಕುಟುಂಬದ ಹುಡುಗರಿಗೆ ಈ ಆಕ್ರಮಣ ಸೇರಲಿಲ್ಲ. ಅವರು ಕಲ್ಲೊಗೆದು ಅವನ್ನು ಹೊರಗೆ ಹಾಕಹೋದರು. ಡಬ್ಬಿಯೊಳಗೆ ಆ ನಾಯಿ, ಹೊರಗೆ ಹುಡುಗರು. ತಮ್ಮ ಮನೆಯಿಂದ ತಮ್ಮನ್ನು ಹೊರಗೆ ದೂಡುತ್ತಿರುವರಲ್ಲ ಎಂದು ನಾಯಿ ಕ್ರೋಧಾವೇಶದಿಂದ ಹಲ್ಲು ತೆಗೆಯುತ್ತ . ಹೊರಗೆ ಬಂದು ಆ ಹುಡುಗರ ಕಾಲನ್ನೇ ಹಿಡಿದು ಕಚ್ಚಿದವು. ಹುಡುಗರು ಹೊಯ್ಕೊಳ್ಳುತ್ತ ಹಿಮ್ಮೆಟ್ಟಿದರು. ಮೈಯೆಲ್ಲ ರಕ್ತಬಂಬಾಳ

ವಾಯಿತು. ಕುಟುಂಬದ ಹಿರಿಯರು ಎದ್ದು ಹೋಗಿ ಕರಕೊಂಡರು. ಅಮೃತ ವೀಣೆ ತಮ್ಮ ಬ್ಯಾಗಿನಲ್ಲಿದ್ದ ಔಷಧಿ ತೆಗೆದು ಉಪಚಾರ ಮಾಡಿದರು. ಆ ಕುಟುಂಬಗಳಿಗೆ ಅವರ ಬಗ್ಗೆ ಆದರ ಹುಟ್ಟಿತು, ಆದರೆ ಅವರೆಷ್ಟು ಹೇಳಿದರೂ ಕೇಂದ್ರದ ಕಡೆ ಬರಲೊಲ್ಲರು. ಇಂಥ ಜೀವನವೇ ಅವರಿಗೆ ರೂಢಿಯಾಗಿತ್ತು. ಅಂತೇ ಬೇಕಾಗಿತ್ತು. ಇದರಲ್ಲಿ ಬದುಕಲೂ ಸಾಯಲೂ ಸ್ವಾತಂತ್ರ್ಯವಿದೆ. ಸತ್ತವೆಂದೇ ತಿಳಿದು ಬದುಕಿನ ಆಶೆ ಬಿಟ್ಟು ಅವರು ತಿರುಗುತ್ತಿದ್ದಾರೆ, ಅಂಥದ ರಲ್ಲಿ ಸಿಕ್ಕಿದ್ದು ತಿಂದು ಬದುಕಿದರೆ ಇನ್ನೊಂದು ದಿನ ಪ್ರಾಣವುಳಿಯಿತು ಎನ್ನು ವರು. ಇಲ್ಲವಾದರೆ ಸಾವಂತೂ ಅವರ ಕಡೆಗೆ ಡಾಕ್ಟರನಿಗಿಂತ ಬೇಗ ಕರೆದಾಗ ಬರುವುದು ! ಇದು ಅವರ ಅಪರಿಹಾರ್ಯ ತತ್ವಜ್ಞಾನ, ಜೀವನದರ್ಶನ ! ನಿರುಪಾಯವಾಗಿ ಅಮೃತ-ವೀಣೆ ಮಠದತ್ತ ಹೊರಟರು. ಅದೇ ಸಮಯಕ್ಕೆ ಆ ದಾರಿಗುಂಟ ಒಬ್ಬಿಬ್ಬ ಗೌಳಿಗಳು ಹಾಲಿನ ಕೊಡ ತಗೊಂಡು ಹೊರಟಿದ್ದರು. ಅವರು ಹೋಗುವಾಗ ಕೊಡದಿಂದ ಉಕ್ಕಿ ಹಾಲಿನ ಹನಿಗಳು ತಟಗುಡು ತ್ತಿದ್ದುವು. ಇದನ್ನು ಆ ಹಸಿದ ಮಗುಗಳು ನೋಡಿದವು. ಅವಕ್ಕೆ ದಿವ್ಯ ಸ್ಫೂರ್ತಿಯೊಂದು ಬಂತು. ಗೌಳಿಗಳ ಹಿಂದೆ ಧಾವಿಸಿ ಹೋಗಿ ಬಿದ್ದು ಬಿದ್ದು ಆ ತಟಗುಡುತ್ತಿರುವ ಹನಿಗಳನ್ನು ಕಾದ ನೆಲದಿಂದ ನೆಕ್ಕತೊಡಗಿದರು. 'ಅಯ್ಯೋ ಬೇಡ ಬೇಡ' ಎಂದು ಅಮೃತ ವೀಣೆ ಅವರನ್ನು ತಡೆಯಲು ಹೋದರು, ಅವರು ಕೇಳಲಿಲ್ಲ. ಅವರಿಗೆ ಅಸಾಧ್ಯ ವೇದನೆಯಾಯ್ತು. 'ಎರಡು ಕಾಲಿನ ಪಶುವಾದ ಮನುಷ್ಯ ಹುಲ್ಲು ತಿನ್ನುವುದೊಂದುಳಿಯಿತು!' ಅಮೃತ ಆಡಿದನು 'ಹುಲ್ಲು ತಿನ್ನುವುದು ಬೇಕು ಇದೆಂಥ ದುರ್ಗತಿ !' ವೀಣೆ ಅಂದಳು. ಈ ಹೊತ್ತಿಗೆ ಯಾವುದೋ ಒಂದು ಅಚ್ಚ ಹೊಸ ಕಾರೊಂದು ಸರ್ರೆಂದು ಆ ಬೀದಿ ಯಲ್ಲಿ ಹಾಯ್ದು ಹೋಯಿತು. ಒಬ್ಬ ಅಧಿಕಾರಿಯ ಹೆಂಡತಿಯಿರಬೇಕು, ಪೌಡರ ಬಡಿದ ಕೆಂಬಣ್ಣದ ತುಟಿಯ ಮೋರೆಯನ್ನು ಮುಗ್ಗುಲಿಗೆ ಚಾಚಿ ಹೊರಗೆ ನಡೆದದ್ದನ್ನು ಅವಳು ನೋಡಿದಳು, ನೋಡದೆ ಕುಳಿತ ಗಂಡನಿಗೆ ತೋರಿಸಿ ಮುಗುಳುನಗೆ ನಕ್ಕಳು. ಆ ನಗೆ ಹರಿತಾದ ಅಲಗಿನಂತೆ ಅಮೃತನ ಎದೆಯಲ್ಲಿ ನಟ್ಟಿತು. ಅತ್ತ ಬೀದಿಯ ತುದಿಗೆ ಕಸದ ಡಬ್ಬಿಯ ಹತ್ತಿರ ಬೆಲ್ಲ ನೆಕ್ಕುವುದು ಇತ್ತ ಬೀದಿಯಲ್ಲಿ ಹಾಲು ನೆಕ್ಕುವುದು ನಡೆದಿದೆ—ನಿರಾತಂಕವಾಗಿ ನಡೆದಿದೆ. ನೆರೆಹೊರೆಯ ಯಾರಿಗೂ ಇದು ಅಸಹ್ಯವೆಂದು ತೋರದಿರುವುದೂ ನಡೆದಿದೆ. ಅಮೃತ-ವೀಣೆ ಇಬ್ಬರೂ ಗೋಳಿನ ಉಂಡೆಯಾಗಿ ಏನು ಮಾಡ

ಬೇಕು ತಿಳಿಯದೆ ಕಂಗೆಟ್ಟು ನಿಂತರು. ಆ ಕ್ಷಣ ಒಂದು ಅದ್ಭುತ ನಡೆಯಿತು. ಮೋಡವಿಲ್ಲ, ಮಳೆಯಿಲ್ಲ. ಮುಗಿಲಿನಿಂದ ಕಾದ ಕಂಬನಿಯಂಥ ದೊಡ್ಡ ಹನಿಗಳು ಕೆಳಗೆ ಬಿದ್ದವು. ಇಬ್ಬರೂ ಮೇಲೆ ಕೆಳಗೆ ನೋಡಿದರು, ಅವರಿಗೆ ಅದು ಅರ್ಥವಾಗಲಿಲ್ಲ. 'ಯಾರ ದುಃಖಾಶ್ರುವಿದು ?' ವೀಣೆ ಕೇಳಿದಳು. 'ಯಾರಿಗೆ ಗೊತ್ತು ? ಮೇಲೆ ಕುಳಿತು ನೋಡುವ ದೇವತೆಗಳು ಈ ನರಕವನ್ನು ನೋಡಿ ಇದನ್ನು ತಪ್ಪಿಸಲಾರದೆ ನಮ್ಮಂತೆ ಅಳುತ್ತಿರಬೇಕು.' ಉತ್ತರ ಕೊಡುವ ಸಲುವಾಗಿ ತಾನು ಕಟ್ಟಿದ ಉತ್ಪ್ರೇಕ್ಷೆ ಎಂದಿಷ್ಟೇ ಅಮೃತ ಭಾವಿಸಿದನು. ಮರು ಕ್ಷಣ, ಬಿಸಿಬಿಸಿ ಗಾಳಿಯ ತೀಟವೊಂದು ಜೋರಾಗಿ ಗಿಡದೆಲೆಗಳನ್ನು ಅಲುಗಿಸುತ್ತ ಕಸವನ್ನು ತೂರಾಡುತ್ತ ಬಂತು. ಯಾರದೋ ಒಂದು ದೊಡ್ಡ ನಿಟ್ಟುಸಿರಂತೆ ಅದು ಅವರಿಗೆ ಕೇಳಿತು. ಅದರಲ್ಲಿ ತಮ್ಮ ನಿಟ್ಟುಸಿರನ್ನು ಬೆರಸಿದರು. ದುಷ್ಕಾಲದಷ್ಟೆ ಅಗಾಧವಾದ ಆ ಸೃಷ್ಟಿಯ ಲೀಲೆಯನ್ನು ನೆನೆಯುತ್ತ ತಮ್ಮ ಬೀಡಿಗೆ ತೆರಳಿದರು.

ಅಕ್ಟೋಬರ ತಿಂಗಳಲ್ಲಿ ದುರ್ಗಾಪೂಜೆಯ ಸಮಯ ಬಂದಿತು. ದುರ್ಗಾ ಪೂಜೆಯೆಂದರೆ ಬಂಗಾಲ ಪ್ರಾಂತಕ್ಕೆ ಹಿರಿಹಬ್ಬ. ಈಸಲ ದುರ್ಗಾದೇವಿ ಮೃತ್ಯು ವಿನ ಕೈಯಿಂದ ತನ್ನ ಪೂಜೆಯನ್ನು ಬೇಕಾದಷ್ಟು ವಿಜೃಂಭಣೆಯಿಂದ ಮಾಡಿಸಿ ಕೊಳ್ಳಹತ್ತಿದ್ದಾಳೆ, ನರಗುರಿಗಳನ್ನೇ ಲಕ್ಷಾವಧಿ ಬಲಿಯಾಗಿ ತಗೊಳ್ಳುತ್ತಿದ್ದಾಳೆ, ಅವಳಿಗೆ ಕೊರಳಲ್ಲಿ ಧರಿಸಲು ಬೇಡಿದಷ್ಟು ತಲೆಬುರುಡಿಗಳು ನಾಡಿನಲ್ಲಿ ಹರಡಿವೆ. ಎಂದಿಗಿಂತ ಇಂದು ಅವಳ ಪೂಜೆ ಶ್ರೇಷ್ಠವಾಗಿ ಸಾಗಿದೆ ! ಕಲಕತ್ತೆಯ ಬೀದಿ ಬೀದಿಗಳಲ್ಲಿ ಇದರ ನಿದರ್ಶನವನ್ನು ಕಾಣಬಹುದು. ಮನೆಮನೆಯಲ್ಲಿಯೂ ದುರ್ಗಾ ಪೂಜೆಯ ಸಂಭ್ರಮ ಎಂದಿನಂತೇ ಇದೆ. ಶತಮಾನದಿಂದ ನಡೆದು ಬಂದ ಸಂಪ್ರದಾಯ. ಯಾವುದೋ ಒಂದು ವರುಷ ಬರಗಾಲ ಬಂದ ಮಾತ್ರಕ್ಕೆ ಅದು ನಿಲ್ಲಬೇಕೆ ? ಅಥವಾ ಬರಗಾಲ ಬಂದಾಗಲೂ ಧಾರ್ಮಿಕ ಕಾರ್ಯಗಳನ್ನು ಮಾಡುವುದೇ ಹೆಚ್ಚಿನ ಗುಣ ಎಂದು ಹಿರಿಯರ ರೀತಿ ನೀತಿ ಸಾರುತ್ತದೆ. ಹೆಣ್ಣು ಗಂಡು ಹಬ್ಬದ ಎಲ್ಲ ವಿಧಾನಗಳಲ್ಲಿ ಯಥಾಸಾಂಗವಾಗಿ ತೊಡಗಿದೆ. ಹಬ್ಬದ ತಿನಿಸುಗಳಿಗೆ ಕೊರತೆಯಿಲ್ಲ. ಸ್ವಲ್ಪ ಹೆಚ್ಚು ಖರ್ಚಾಗ ಬಹುದು. ಸಾಲವಾಗಬಹುದು, ಆದರೆ ಹಬ್ಬ ಆಗಲೇ ಬೇಕು. ಬೀದಿಯ ಕಡೆ ಕಿಡಿಕಿಯಲ್ಲಿ ನೋಡಿದಾಗ ಹೊರಗೆ ಹೋದಾಗ ಅಪಸ್ವರಗಳು ಕೇಳುತ್ತವೆ, ಅಪದೃಶ್ಯಗಳು ಕಾಣುತ್ತವೆ. ಶಹರದಲ್ಲಿ ಅವು ಇರತಕ್ಕವೆ. ಎಲ್ಲಿಯೋ ಕ್ವಚಿ

ತ್ತಾಗಿ ಕೆಲವರು ರಾಷ್ಟ್ರೀಯ ಸಂಕಟದ ಬಗ್ಗೆ ಸಹಾನುಭೂತಿಯಿಂದ ಹಬ್ಬವನ್ನು ಬಹಳ ಸ್ವಲ್ಪವಾಗಿ ಮನೆಯಲ್ಲಿ ಮಾಡಿದ್ದಾರೆ, ಅಷ್ಟಕ್ಕೂ ಅವರ ಹೆಂಡಂದಿರಿಂದ ಪುಷ್ಪವೇರದೆ ಇಲ್ಲ. ಕಾಳೀದೇವಿಯ ಗುಡಿಯಲ್ಲಿ ಏನು ಗದ್ದಲ, ಎಂಥ ಸಂಭ್ರಮ! ಹಬ್ಬದ ವೇಷಭೂಷಣಗಳಿಂದ ಅಲಂಕೃತರಾದ ಅಸಂಖ್ಯ ಜನ ಹೋಗಿಬರುವುದು ನಡೆದಿದೆ. ಪಶುವಧೆಯ ರಕ್ತ ಹರಿಯುತ್ತದೆ, ಮಂಗಲಾರತಿ-ನೈವೇದ್ಯ-ಘಂಟಾನಾದ ಸಾಗಿವೆ. 'ದೇಶಕ್ಕೆ ಬಂದ ಬರಗಾಲ ಹಿಂಗಲಿ' ಎಂದು ಬಡಜನ ಬೇಡುತ್ತಿದ್ದಾರೆ. ಮೇಲಿನ ವರ್ಗದಲ್ಲಿ, ತಮಗೆ ಮಕ್ಕಳಾಗಲಿ ಎಂದು ಕೆಲವರು, ತಮ್ಮ ಶ್ರೀಮಂತಿಕೆ ಇನ್ನೂ ಹೆಚ್ಚಲಿ ಎಂದು ಕೆಲವರು ಕಾಳಿಯ ಅಡಿಯಲ್ಲಿ ಪೊಡಮಟ್ಟು ಕೇಳುತ್ತಿದ್ದಾರೆ. ಈ ಸಮಯಕ್ಕೆ ಸಂತೋಷ ಚಕ್ರವರ್ತಿಯೆಂಬ ಸಿರಿವಂತನ ಮನೆಯಲ್ಲಿ ಅವನ ಒಬ್ಬನೇ ಮಗ ಪ್ರಫುಲ್ಲಚಂದ್ರನು ವಿಷಮಜ್ವರದಿಂದ ಮಲಗಿದ್ದಾನೆ. ಪ್ರಫುಲ್ಲಚಂದ್ರ ಒಬ್ಬ ತರುಣ ಡಾಕ್ಟರನಾಗಿದ್ದು ಧ್ಯೇಯನಿಷ್ಠನೂ ಪರೋಪಕಾರಿಯೂ ಆಗಿದ್ದನು. ರಾಮಕೃಷ್ಣಮಠದ ಒಂದು ವೈದ್ಯಕೀಯ ಕೇಂದ್ರದಲ್ಲಿ ಈಗ ೩-೪ ತಿಂಗಳಿಂದ ತನ್ನ ಸ್ವಂತ ಪ್ರಾಕ್ಟೀಸನ್ನು ಕಡಿಮೆ ಮಾಡಿ ಹಗಲು ರಾತ್ರಿ ದುಡಿಯುತ್ತಿದ್ದನು. ಈ ಸಂಬಂಧದಲ್ಲಿ ಅವನಿಗೂ ಅಮೃತನಿಗೂ ಗಾಢ ಪರಿಚಯವಾಗಿತ್ತು. ಅವನಿಗೆ ಜಡ್ಡು ಹೆಚ್ಚಾಗಿದೆ ಎಂದು ತಿಳಿಯಲು ಅಮೃತ ಅವನ ಮನೆಗೆ ಹೋದನು. ಅವನ ಕೋಣೆಯಲ್ಲಿ ತಾಯಿ ತಂದೆ ಬಹಳ ಚಿಂತಾಗ್ರಸ್ತರಾಗಿ ಮಂಚದ ಹತ್ತಿರ ಕುಳಿತು ಆರೈಕೆ ಮಾಡುತ್ತಿದ್ದಾರೆ. ಔಷಧೋಪಚಾರ ಯಥಾಪ್ರಕಾರ ನಡೆದಿದೆ. ಆದರೆ ಬರಗಾಲದ ಕೆಲಸವನ್ನು ಮೈಮೇಲೆ ಹಾಕಿಕೊಂಡು ಮಾಡಿದ್ದರಿಂದಲೇ ಅವನಿಗೆ ಈ ಬೇನೆ ಬಂತೆಂದು ತಿಳಿದು ಅವನಿಗೆ ಅನುಮತಿ ಕೊಟ್ಟಿದ್ದಕ್ಕಾಗಿ ಅವರು ಮರಮರಳಿ ಹಳಹಳಿಸುತ್ತಿದ್ದಾರೆ. ಅಮೃತ ಬಂದರೆ ಯಾರೂ ಅವನನ್ನು ಮಾತಾಡಿಸಲಿಲ್ಲ. ಅವನಾಗಿ ಪ್ರಫುಲ್ಲನ ಹತ್ತಿರ ಹೋಗಿ ಕುಳಿತನು. ಅವನ ತಾಯಿತಂದೆ ಹುಬ್ಬುಗಂಟಿಕ್ಕಿ ಅವನನ್ನು ನೋಡುತ್ತಿದ್ದರು. ಅಮೃತನೆಂದರೆ ಬರಗಾಲ ಕೆಲಸವೇ ಮೂರ್ತಿಮತ್ತಾಗಿ ಬಂದಂತೆ ಅವರಿಗೆ ತೋರಿರಬೇಕು. ಅದರ ಮೇಲಿನ ಸಿಟ್ಟನ್ನು ಅವನ ಮೇಲೆ ಅವರು ಹಾಯಿಸುತ್ತಿದ್ದಾರೆ. ತಾನೇ ಅವರನ್ನು ಮಾತಾಡಿಸಿ ಅಮೃತನು ಎಲ್ಲ ವಿಷಯ ತಿಳಕೊಂಡನು, 'ಗುಣವಾಗುತ್ತದೆ ಚಿಂತಿಸಬೇಡಿರಿ' ಎಂದು ಹೇಳಿದನು.

ಆಗ ತಾಯಿ ಜ್ಯೋತಿರ್ಮಯಿ ಅಂದಳು:'ಏನಾಗುವದೋ ಕಾಳೀಮಾತೆಗೇ ಗೊತ್ತು. 'ಇವನಿಗೆ ಗುಣ ಮಾಡು, ಮುಂದಿನ ಹಬ್ಬಕ್ಕೆ ಹತ್ತು ಕುರಿ ಬಲಿಕೊಡ ತೇನೆ' ಎಂದು ನಾ ಅಂತೂ ಬೇಡಿಕೊಂಡಿದ್ದೇನೆ.'

'ಇವನನ್ನು ಉಳಿಸಲು ಹತ್ತು ಕುರಿ ಸಾಯಬೇಕೆ?' ಅಮೃತ ತನ್ನೊಳಗೆ ಅಂದುಕೊಂಡನು.

ತಂದೆ ಸಂತೋಷ ಚಕ್ರವರ್ತಿ ಅಂದನು : 'ಅಲ್ಲ ಅಮೃತ. ನಿನ್ನ ತಾಯಿ ತಂದೆಯನ್ನು ಅಷ್ಟು ದೂರ ಬಿಟ್ಟು ನೀ ಇಲ್ಲಿಗೆ ಯಾಕೆ ಬಂದೆ ? ಯಾರು ಈ ಬರಗಾಲದ ಕೆಲಸದ ಹುಚ್ಚನ್ನು ನಿನ್ನ ತಲೆಯಲ್ಲಿ ಹಾಕಿದರು ? ಈ ನಮ್ಮ ಪ್ರಾಂತಕ್ಕೆ ರೋಗಿಗೆ ಫಿಟ್ಸು ಬರುವಂತೆ ಮೇಲಿಂದ ಮೇಲೆ ಬರಗಾಲ ಬರು ತ್ತವೆ. ಹಿಂದಿನಂತೆ ಇಂದಿನದು. ಜನ ದೇಶದಲ್ಲಿ ಹೆಚ್ಚಾಗಲು ನೆರೆಹಾವಳಿ, ಪಿಡುಗು, ಬರಗಾಲ ಇವನ್ನು ಉಂಟುಮಾಡಿ ಕಾಳೀಮಾತೆ ಕೆಲವರ ಆಹುತಿ ತಗೊಳ್ಳುತ್ತಾಳೆ. ಆಗ ಎಲ್ಲ ಸರಿಹೋಗುವುದು. ನೀವೆಲ್ಲಾ ದುಡಿದು ಎಷ್ಟು ಮಂದಿನ್ನ ಬದುಕಿಸಬಲ್ಲಿರಿ ? ನೀವೇ ಅದರೊಳಗೆ ಕೈಬಿಟ್ಟರೆ ?'

ಈ ಕೊನೆಯ ಮಾತು ಕೇಳಿದೊಡನೆ ಅದೇಕೊ ಅಮೃತನ ಮೈ ಜುಮ್ಮೆಂ ದಿತು. ಜ್ಯೋತಿರ್ಮಯಿ ಗಂಡನಿಗೆ ಬೆಂಬಲಕೊಟ್ಟಳು : 'ನೋಡು ಅಮೃತ್ ನಿನಗೇನಾದರೂ ಆದರೆ ಇಲ್ಲಿ ಯಾರು ನಿನ್ನ ನೋಡಿಕೊಳ್ಳುತ್ತಾರೆ ? ಸುಮ್ಮನೆ ಊರಿಗೆ ಹೋಗು. ನಮ್ಮ ಪ್ರಫುಲ್ಲನಿಗೆ ಕಡಿಮೆ ಆಯಿತೆಂದರೆ ಅತ್ತ ಕಡೆ ಅವ ನನ್ನು ನಾನೂ ಕಳಿಸುವದೇ ಇಲ್ಲ. ಸ್ವಾಮಿಜಿಯೇನು ಸಂನ್ಯಾಸಿಗಳು. ಅವರಿಗೆ ಸಂಸಾರಿಗಳ ಸುಖದುಃಖ ಏನು ಗೊತ್ತು ?'

ಅಮೃತನಿಗೆ ಇಬ್ಬರ ಮಾತಿನಿಂದ ತುಂಬ ವಿಷಾದವಾಯಿತು. ಆದರೆ ಅವ ರೊಡನೆ ಹೆಚ್ಚು ಮಾತಾಡುವ ಸಮಯವಲ್ಲ ಅದು. 'ಆಗಲಿ ಹಾಗೇ ಮಾಡಿರಿ. ನಾ ಇನ್ನೂ ಇರತೇನೆ. ನನಗೆ ಏನಾದರೂ ಆದರೆ ಕಾಲೀಮಾತೆ ಇರುವಳಲ್ಲ ! ಅವಳ ಕೆಲಸ ಬರೀ ಕೊಲ್ಲುವದಿರಲಾರದು. ದಯೆಮಾಯೆ ಅವಳಿಗಿಲ್ಲವೇ ?' ಇಷ್ಟೇ ಉತ್ತರ ಕೊಟ್ಟು ಅವನು ಸುಮ್ಮಗಾದನು.

ಇಷ್ಟರಲ್ಲಿ ಮನೆಯ ತುಂಬ ಹರಡುತ್ತಿರುವ ಒಳ್ಳೆಯ ಭಕ್ಷ್ಯಗಳ ವಾಸನೆ ಅಲ್ಲಿಗೂ ಬಂದಿತು. ಅಡಿಗೆ ಮನೆಯಲ್ಲಿ ಏನೇನೋ ಹಬ್ಬದ ಅಡಿಗೆ ನಡೆದಿತ್ತು. 'ಇದೇನು ವಾಸನೆ ?' ಅಮೃತ ಕೇಳಿದನು.



'ದುರ್ಗಾ ಪೂಜೆಯ ಹಬ್ಬ ಇಂದು.' ಸಂತೋಷ ಚಕ್ರವರ್ತಿ

ಹೇಳಿದನು.

'ಪ್ರಫುಲ್ಲ ಹಾಸಿಗೆ ಹಿಡಿದಿರುವಾಗಲೂ ಹಬ್ಬದ ಅಡಿಗೆ ಬಿಡು ವಂತಿಲ್ಲವೇ ?'

'ವರ್ಷಾನುವರ್ಷ ನಡಕೊಂಡು ಬಂದದ್ದು. ಅದನ್ನು ಬಿಟ್ಟರೆ ಕಾಲೀಮಾತೆ ನಮ್ಮ ಮೇಲೆ ಇನ್ನಿಷ್ಟು ಕೋಪಿಸುವಳು.' ಜ್ಯೋತಿರ್ಮಯಿ ಉತ್ತರಕೊಟ್ಟಳು.

'ಹೀಗೋ ?' ವ್ಯಂಗ್ಯಧ್ವನಿಯಲ್ಲಿ ಅಮೃತ ಅಂದನು. 'ಇದೊಂದು ಸಲ ಬಿಟ್ಟು ಮುಂದಿನ ಸಲ ಇನ್ನಿಷ್ಟು ಚೆಂದಾಗಿ ಮಾಡಿದ್ದರೆ ಕಾಲೀ ಮಾತೆಯು ಕೋಪ ಕರಗುತ್ತಿರಲಿಲ್ಲವೇ ? ಮಗನ ಸಲುವಾಗಿ ಇಲ್ಲಿ ಕೂತು ಚಿಂತೆ ಮಾಡು ತ್ತೀರಿ, ಒಳಗೆ ಹಬ್ಬದ ಸವಿಸವಿಯೂಟ ಮಾಡುತ್ತೀರಿ. ಇದು ನನಗೆ ಅರ್ಥವಾಗು ವದಿಲ್ಲ.' ಅಮೃತ ತಡೆಯಲಾರದೆ ಆಡಿಬಿಟ್ಟನು.

'ನೀನಿನ್ನೂ ಚಿಕ್ಕವ. ನಿನಗೆ ಇದೆಲ್ಲಾ ತಿಳಿಯದು' ಎಂದು ಸಂತೋಷ ಚಕ್ರವರ್ತಿ ಮಾತು ಮುಗಿಸಿದನು.

ಅಮೃತ ಪ್ರಫುಲ್ಲನ ಕಡೆಗೆ ನೋಡಿ ಹೋಗಿ ಬರುವೆನೆಂದು ಸನ್ನೆ ಮಾಡಿ ಹೊರಟನು. ಅರಮನೆಯಂತಿದ್ದ ಆ ಮನೆಯ ಹೊರಗೆ ಬಂದನು. ಗೇಟಿನೊಳಗೆ ನುಗ್ಗಿ ನಿರಾಶ್ರಿತರು ಕೆಲವರು ಬಾಗಿಲಮುಂದೆ ನಿಂತು ಭಿಕ್ಷೆಗಾಗಿ ಕೂಗಿಕೊಳ್ಳು ತ್ತಲಿದ್ದಾರೆ. ಒಳಗಿನ ವಾಸನೆ ಅವರಿಗೂ ಬಡಿದಿದೆ. ಭಿಕ್ಷೆ ಬೇಡಿ ತಂದಾದರೂ ಹಬ್ಬ ಮಾಡೋಣ ಎಂದವರು ಹಪಾಪಿಸುತ್ತಿರಬೇಕು. ಅವರಿಗೆ ಕೊಡುವವರು ಯಾರೂ ಅಲ್ಲಿ ಹಣಿಕಲಿಲ್ಲ. ಕಳ್ಳಪೇಟೆಯಲ್ಲಿ ವಿಪರೀತ ಬೆಲೆಗೆ ಕೊಂಡು ಚೀಲ ಗಟ್ಟಲೆಯಾಗಿ ಸಂಗ್ರಹಿಸಿದ ಅಕ್ಕಿಯನ್ನು ಮನೆಗೆ ಇಟ್ಟುಕೊಳ್ಳದೆ ಈ ತಿರುಕರಿಗೆ ಯಾರಾದರೂ ಕೊಟ್ಟಾರೇ ? ಆಳು ಮಗನೊಬ್ಬನು ಅವರನ್ನು ಕಾಠಿಯೆತ್ತಿ ಜಬರಿಸಿ ಹೊರಗೆ ಹಾಕಿ ಗೇಟು ಮುಚ್ಚಿದನು. ಬೀದಿಯಲ್ಲಿ ಹೋಗುತ್ತಲೆ ಅಮೃತ ಹೊರಳಿ ಇದನ್ನು ನೋಡಿದನು, ಕಳವಳಗೊಂಡನು. 'ನಮ್ಮ ದೇಶದ ಮನೆಮನೆಯಲ್ಲಿ ಈ ರೀತಿ ಜನ ಬಾಳುತ್ತಿರುವಾಗ ಬರಗಾಲಕ್ಕೆಯಾವಾಗಲೂ ಉಳಿಗಾಲವೇ ಸರಿ' ಎಂದು ತನ್ನಲ್ಲಿ ಅಂದುಕೊಳ್ಳುತ್ತ ಮಠದತ್ತ ತೆರಳಿದನು.

ಕೆಲವು ದಿನ ಹೋದವು. ಒಂದು ಸಂಜೆ ಪ್ರಫುಲ್ಲನ ಪ್ರಕೃತಿ ಹೇಗಿರುವ ದೆಂಬುದನ್ನು ನೋಡಿಕೊಂಡು ಬರಲು ಅಮೃತ ಹೊರಟನು. ಇಷ್ಟುದಿನ ಎಳ್ಳಷ್ಟೂ ಬಿಡುವು ದೊರೆತಿರಲಿಲ್ಲ. ಈಗಲೂ ಹೊರಬಿದ್ದೊಡನೆ ಅವನ ವಾರ್ಡಿನಲ್ಲಿ ಹೊಸ ಹೊಸ ಕೇಸು ಬಂದವು. ಹೀಗಾಗಿ ಪ್ರಫುಲ್ಲನ ಮನೆ

ಸೇರಲು ರಾತ್ರಿ ಒಂಬತ್ತಾಯಿತು. ಏನಾಗಿರುವದೋ ಎಂಬ ಎದೆಗುದಿಯಿಂದ ಮನೆಯೊಳಗೆ ಹೋದನು. ಒಳಭಾಗದಿಂದ ನಗುವುದು ಹರಟುವುದು ಕೇಳ ಬಂತು. ಗುಣವಾಗಿರಬಹುದೇ ಎಂದನು. ಅವನು ನಿರೀಕ್ಷಿಸಿದಂತೆ ಪ್ರಫುಲ್ಲನ ಜ್ವರ ಕೆಳಕ್ಕೆ ಬಂದು ೨-೩ ದಿನ ಆಗಿತ್ತು. ಪ್ರಕೃತಿ ಭಯದ ಸೀಮೆ ದಾಟಿತ್ತು. ತಂದೆ-ತಾಯಿ ಬಹಳ ಸಂತೋಷದಲ್ಲಿದ್ದರು. ಅಮೃತನಿಗೆ ಆಗ್ರಹಮಾಡಿ ನಿಲ್ಲಿಸಿಕೊಂಡು ರಾತ್ರಿಯ ಊಟ ಅಲ್ಲಿಯೇ ಮಾಡಿಸಿದರು. ಪ್ರಫುಲ್ಲನೂ ಮೆಲುದನಿಯಲ್ಲಿ ನಾಲ್ಕು ಮಾತಾಡಿ ಪರಿಹಾರ ಕಾರ್ಯದ ಬಗ್ಗೆ ಎಲ್ಲ ಸುದ್ದಿಗಳನ್ನು ಕೇಳಿ ತಿಳಿದುಕೊಂಡನು.ಅಮೃತ ತಾಯ್ತಂದೆಯ ಇದಿರು ಹಾಸ್ಯವಾಗಿ ಪ್ರಫುಲ್ಲನಿಗೆ ಹೇಳಿದನು : 'ನೀ ಬದುಕಿದಿ ಬಹಳ ಒಳ್ಳೇದಾಯ್ತು. ಆದರೆ ಮುಂದಿನ ದುರ್ಗಾ ಪೂಜೆಯ ಹೊತ್ತಿಗೆ ನಿನ್ನ ಶಾಪಿಸುತ್ತ ಹತ್ತು ಕುರಿ ತಲೆ ಹಾರಿಸಿಕೊಳ್ಳಬೇಕು!' ಎಲ್ಲರೂ ನಕ್ಕರು. ಪ್ರಫುಲ್ಲ ಹೇಳಿದನು : 'ಅಮೃತ್, ನಮ್ಮ ದೇಶದ ಸ್ಥಿತಿಯೇ ಹೀಗಿದೆ. ಒಬ್ಬರು ಬದುಕಬೇಕಾದರೆ ಹತ್ತು ಜನ, ಕನಿಷ್ಠ ಹತ್ತು ಪ್ರಾಣಿ ಸಾಯಬೇಕು. ಎಲ್ಲರೂ ಬದುಕುವುದು ಸಾಧ್ಯವಿಲ್ಲ.' ಜ್ಯೋತಿರ್ಮಯಿ ಅಂದಳು : 'ಕುರಿ-ಕೋಳಿ ಸಾಯುವುದಕ್ಕೆ ಅದೇಕೆ ಮರುಗಬೇಕು ? ಮನುಷ್ಯ ಜೀವಕ್ಕಿಂತ ಅವುಗಳ ಬೆಲೆ ಹೆಚ್ಚೇನು ? ಕಾಳೀ ಮಾತೆಗೆ ನೈವೇದ್ಯವಾಗಿ ಅವು ಸತ್ತರೆ ಮುಂದಿನ ಜನ್ಮದಲ್ಲಿ ಮನುಷ್ಯರಾಗಿ ಹುಟ್ಟಬಹುದು.'

'ಹಾಗಾದರೆ ಈಗ ಬರಗಾಲದಲ್ಲಿ ಕಾಲೀಮಾತೆಗೆ ದಿನಾಲು ಬಲಿಯಾಗುತ್ತಿರುವ ಜನಜಂಗುಳಿ ಮುಂದಿನ ಜನ್ಮದಲ್ಲಿ ದೇವತೆಗಳಾಗುವರೇನೊ !— ನಿಮ್ಮ ಉತ್ಕ್ರಾಂತಿ ತತ್ವದ ಪ್ರಕಾರ.' ಅಮೃತ ಉತ್ತರ ಕೊಟ್ಟನು. ಸಂತೋಷ ಚಕ್ರವರ್ತಿ ಅಂದರು : 'ಹೋಗಲಿ. ಇನ್ನು ಈ ಬರಗಾಲದ ಸುದ್ದಿ ಬೇಡ. ಪ್ರಫುಲ್ಲಚಂದ್ರ, ನೀನಿನ್ನು ಓಡಾಡಲಿಕ್ಕೆ ಹತ್ತಿದಮೇಲೆ ನೀ ಏನೋ ನಿನ್ನ ಪ್ರಾಕ್ಟೀಸೇನೋ ಇದ್ದುಬಿಡು. ಮನೆ ಬಿಟ್ಟು ಹೊರಬೀಳಬೇಡ.' ಅಮೃತನ ಮೋರೆಯ ಮೇಲೆ ಉದ್ವೇಗ ಮೂಡಿತು. ಪ್ರಫುಲ್ಲ ಸುಮ್ಮನಾಗಿ ಮಗ್ಗಲಿಗೆ ಹೊರಳಿದನು. ಯಾವ ಉತ್ತರವನ್ನೂ ಈಗ ಕೊಡುವ ತ್ರಾಣವಿಲ್ಲವೆಂದು ಹಾಗೆ ಮಾಡಿರಬೇಕು. ಅಲ್ಲಿಂದ ಹೊರಟಾಗ ನಡುರಾತ್ರಿ ಸಮೀಪಿಸಿತ್ತು. ಅಲ್ಲೇ ಮಲಗಲು ಒತ್ತಾಯಪಡಿಸಿದರು. ಆದರೆ ರಾತ್ರಿ ಯಾವ ಅಗತ್ಯದ ಕೆಲಸ ಬೀಳಬಹುದೋ ನೀಸುವಿಲ್ಲ ಎಂದು ಅಮೃತ ಹೊರಟನು. ಅಲ್ಲೊಂದು

ಇಲ್ಲೊಂದು ಟ್ರ್ಯಾಮು ತಿರುಗುತ್ತಿತ್ತು. ಅವನಿದ್ದ ಜಾಗಕ್ಕೆ ಹೋಗುವಂಥ ಟ್ರ್ಯಾಮಿಗೆ ತಡೆಯಬೇಕಾಗುತ್ತಿತ್ತು, ಸಿಗುವುದೆಂಬ ಭರವಸೆಯೂ ಇರಲಿಲ್ಲ. ಹಾಗೆ ನಡೆಯುತ್ತ ಹೋದನು. ಹೋಗುಹೋಗುತ್ತ ಯುರೋಪಿಯನ್ ಜನವಸತಿ ಹೆಚ್ಚಾಗಿದ್ದ ರಸ್ತೆಗೆ ಬಂದನು. ಲಂಡನ್ನಿನ ಒಂದು ತುಣುಕಿದ್ದಂಥ ಪಟ್ಟಣದ ರಮ್ಯಭಾಗವದು. ತಮಗೆ ಬೇಕಾದ ಸುಖಸೌಕರ್ಯಗಳು ಅಲ್ಲಿರುವಂತೆ ಬಿಳಿಚಾಯೆಯ ಜನ ಮಾಡಿಕೊಂಡಿದ್ದಾರೆ. ಕಲಕತ್ತೆಯಲ್ಲಿ ಬೇಕಾದ ಕೋಲಾಹಲವಾಗಬಹುದು, ಇಲ್ಲಿಗೆ ಅದರ ಸುಳಿಗಾಳಿ ಸಹ ಬಡಿಯುವಂತಿಲ್ಲ. ಅಂಥ ಒಂದು ನಾಗರಿಕತೆಯ ನಡುಗಡ್ಡೆಯಾಗಿತ್ತು ಅದು. ವ್ಯಾಪಾರ, ಉದ್ಯೋಗ, ನೌಕರಿ ಇದಕ್ಕಾಗಿ ಬಂದು ಹಿಂದುಸ್ಥಾನದ ಜನತೆಯ ರಕ್ತ ಹೀರಿದ ಜಿಗುಳೆಯಂತೆ ಕೆನ್ನೀರು ಮೈಯಲ್ಲಿ ಮೋರೆಯಲ್ಲಿ ಪುಟಿಯುತ್ತಿರುವ ಹೆಣ್ಣು ಗಂಡು ಇಲ್ಲಿ ವಾಸವಾಗಿದ್ದಾರೆ. ನಾಲ್ಕಾರು ತಿಂಗಳಿಂದ ನಡೆದ ದುಷ್ಕಾಳದ ಹಾಹಾಕಾರ ಅವರಿಗೆ ಸ್ಟೇಟ್ಸ್‌ಮನ್‌ದಂಥ ಅವರೋದುವ ಪತ್ರಿಕೆಗಳಿಂದಲೇ ಗೊತ್ತು. ಜಪಾನಿಗಳ ಸಂಭಾವ್ಯ ದಾಳಿಯಿಂದ ಅವರು ಹೆದರುತ್ತಾರೆ, ಮಿತ್ರಪಕ್ಷದ ಗೆಲುವಿನ ವರ್ತಮಾನದಿಂದ ಹಿಗ್ಗುತ್ತಾರೆ. ಆದರೆ ಸುತ್ತುಮುತ್ತೆಲ್ಲ ನಡೆದ ಸಾವಿನ ನೃತ್ಯ ಅವರಿಗೆ ಬರೀ ಮೋಜಿನ ಸುದ್ದಿ. ತಮ್ಮ ದೇಶದ ವ್ಯವಸ್ಥೆಯನ್ನು ಹಿಂದೀಯರು ತಾವೇ ನೋಡಿಕೊಳ್ಳಲಾರರು ಎಂಬ ಅವರ ಸಿದ್ಧಾಂತಕ್ಕೆ ಪುಷ್ಟಿಕೊಡುವ ಬಲಿಷ್ಟ ಆಧಾರ ಮಾತ್ರ. ಈ ಸುಂದರ ಬೀದಿಯಲ್ಲಿಯೂ ಇತ್ತೀಚೆ ಅದನ್ನು ವಿದ್ರೂಪಗೊಳಿಸಲು 'ಬರಗಾಲ ಭಿಕ್ಷುಕ'ರು ತಂಡತಂಡವಾಗಿ ತಿರುಗುತ್ತಿದ್ದಾರೆ. ಅವರಿಗೇನು ಗೊತ್ತು, ಇದು ನಿಷಿದ್ಧ ಸೀಮೆಯೆಂದು ? ಅಲ್ಲದೆ ಇಲ್ಲಿ ಕಸದ ಡಬ್ಬಿಗಳಲ್ಲಿ ದೊರೆಯುವ ಬ್ರೆಡ್ಡು ಬಿಸ್ಕೀಟಿನ ಚೂರುಗಳ ಪ್ರಸಿದ್ಧಿ ಈ ತಂಡಗಳಲ್ಲಿ ಹೆಚ್ಚಾಗಿದೆ. ಅಲ್ಲದೆ, ಒಡಕು ಡಬ್ಬಿಗಳೂ ಇಲ್ಲಿ ಹೆಚ್ಚಾಗಿ ಸಿಗುತ್ತವೆಂದು ಖ್ಯಾತಿಯಿತ್ತು 'ಚ್ಯಾರಿಟಿ' ಎಂಬ ಹೆಸರಿನಿಂದ ಆದಿತ್ಯವಾರಕ್ಕೆ ಒಮ್ಮೆಯಾದರೂ ಇಲ್ಲಿಯ ಮುದುಕಿಯರು ತಾಮ್ರದ ನಾಣ್ಯಗಳನ್ನು ಕೊಡುತ್ತಿದ್ದರು. ಪೋಲೀಸ ಖಾತೆಯವರು ಈ ನಂದನವನದಲ್ಲಿ ಇಂಥ 'ಕಾಡು ಕಪಿ'ಗಳು ಬರಬಾರದೆಂದು ಎಷ್ಟು ಎಚ್ಚರ ವಹಿಸಿದರೂ ಕಳ್ಳತನದಿಂದ ಅವರು ಬಂದೇ ಬರುತ್ತಾರೆ. ರಾತ್ರಿ ಹೊತ್ತಿನಲ್ಲಿ ಇನ್ನೂ ಹೆಚ್ಚಾಗಿ ನುಸುಳುತ್ತಾರೆ. ಅಮೃತ ಈ ಬೀದಿಗುಂಟ ನಡೆದಿದ್ದನು. ಎಲ್ಲ ಶಾಂತವಾಗಿತ್ತು. ಬೆಳದಿಂಗಳು ಬಿದ್ದ ಕಾರಣ ಮಾಯಾಲೋಕದಂತೆ

ಇನ್ನಿಷ್ಟು ಚೆಲುವಾಗಿತ್ತು. ಅವನಿಗೆ ನಾಲ್ಕು ಹೆಜ್ಜೆ ಹೋದ ಮೇಲೆ ಪಾಶ್ಚಾತ್ಯ ಸಂಗೀತದ ತಾನಗಳು ದೂರದಿಂದ ಕೇಳಹತ್ತಿದವು. ಹತ್ತಿರ ಬಂದನು, ಅಲ್ಲಿಯೊಂದು ಸುಪ್ರಸಿದ್ಧವಾದ ಯುರೋಪಿಯನ್ ಕ್ಲಬ್ಬಿನ ಭವ್ಯ ಕಟ್ಟಡ ಕಂಡಿತು. ಹೊರಗೆ ನೂರಾರು ಮೋಟರುಗಳು ಪಾರ್ಕ ಆಗಿ ನಿಂತಿದ್ದವು. ಶಾಫರ್ ಜನರು ಗುಂಪುಗಟ್ಟಿ ಮಾತಾಡುತ್ತ ಬೆಳದಿಂಗಳಲ್ಲಿ ಕೂತಿದ್ದರು. ಅವನು ತೀರ ಹತ್ತಿರ ಹೋದನು, ಕಟ್ಟಡದೊಳಕ್ಕೆ ಕಣ್ಣಿಕ್ಕಿ ನೋಡಿದನು. ಅದೆಂಥ ಮನೋಹಾರಿಯಾದ ದೃಶ್ಯವದು! ಇಂದ್ರಸಭೆಯ ಕಾಲ್ಪನಿಕ ಚಿತ್ರ ಈ ವಾಸ್ತವಚಿತ್ರದ ಮುಂದೆ 'ಫಿಕ್ಕಿ'ಯಾಗುವಂತಿತ್ತು. ಅತ್ಯಂತ ವಿಶಾಲವಾದ ಒಂದು ಹಾಲಿನಲ್ಲಿ ಮೇಲಣ ಬದಿಗೆ ತುಸು ಎತ್ತರದಲ್ಲಿ ಬಣ್ಣಬಣ್ಣದ ಉಡುಪಿನಲ್ಲಿ ಅನೇಕ ವಾದ್ಯಗಾರರು ಬಾರಿಸುತ್ತಿದ್ದಾರೆ. ಅವರ ನಿರ್ದೇಶಕನೊಬ್ಬನು ಎದ್ದುನಿಂತು ಎರಡೂ ಕೈಗಳನ್ನು ಕೆಳಗೆ ಮೇಲೆ ಮಾಡುತ್ತ ಅವರ ಸ್ವರ-ಲಯಗಳಿಗೆ ದಾರಿ ತೋರಿಸುತ್ತಿದ್ದಾನೆ. ನುಣುನುಣುಪಾದ ನೆಲದ ಮೇಲೆ ಅತ್ಯಂತ ನಯವಾಗಿ ಲಯಬದ್ಧವಾಗಿ ಕಾಲು ಸರಿಸುತ್ತ ಯಾವದೊ ಗಂಡು ಯಾವದೋ ಹೆಣ್ಣಿನ ಜೊತೆ ಮಾಡಿಕೊಂಡು ಎಲ್ಲರೂ ಕುಣಿಯುತ್ತಿದ್ದಾರೆ. ಮಗ್ಗಲಲ್ಲಿ ಕುಳಿತು ವಿಶ್ರಾಂತಿ ಪಡೆಯುತ್ತಿದ್ದ ಕೆಲವರು ತರತರದ ಮದ್ಯ ತರಿಸಿ ಕುಡಿದು ಉನ್ಮತ್ತರಂತೆ ಕುರ್ಚಿಗಳಲ್ಲಿ ಕೂತಿದ್ದಾರೆ. ಹೊಸದಾಗಿ ಬಂದವರು ಮೆಲ್ಲನೆ ತಮ್ಮ ಜೋಡನ್ನು ಗೊತ್ತುಮಾಡಿ ಆ 'ಬಾಲಿ'ನ ಲಾಸ್ಯದಲ್ಲಿ ಒಂದಾಗುತ್ತಿದ್ದಾರೆ. ಅಮೃತ ಕಣ್ಣೆವೆಯಲುಗಿಸದೆ ನೋಡುತ್ತ ನಿಂತಿರುವಾಗ ಒಬ್ಬ ತರುಣ ಯಾವಳೋ ಒಬ್ಬ ತರುಣಿಯ ಕೂಡ ಅಲ್ಲಿಗೆ ಬಂದನು. ಇಬ್ಬರೂ ಕಾರಿನಿಂದ ಇಳಿದರು. ನೃತ್ಯಮಂದಿರದ ಕಡೆ ನಡೆದರು, ಅಷ್ಟರಲ್ಲಿ ಗೇಟಿನ ಹತ್ತಿರ ಕರಿ ಕೈಗಳು ಅವರ ಮುಂದೆ ಚಾಚಿದಂತಾಯಿತು. 'ಮಾಬಾಪ ಮಾಬಾಪ' ಎಂಬ ಕೂಗು ಕೇಳಿಸಿತು. ಆ ತರುಣರು ಅದನ್ನು ಗಮನಿಸದೆ ಮುನ್ನಡೆದರು. ಆ ತಿರುಕರು ಅವರನ್ನು ಅಡ್ಡಗಟ್ಟುವ ಧೈರ್ಯ ಮಾಡಿದರು. ಆಗ ಮಾತ್ರ ಆ ತರುಣ ಸಿಟ್ಟಿಗೆದ್ದು 'Get away' (ಸರಿಯತ್ತ) ಎಂದು ಬೂಟಿನಿಂದ ಹೊಟ್ಟೆಗೇ ಒದ್ದನು. ಅ ಪ್ರಾಣಿ ನೆಲಕ್ಕೆ ಬಿದ್ದಿತು, ಉಳಿದವರು ಹಿಂದೆ ಸರಿದರು. ಅವರಿಬ್ಬರೂ'That's right'(ನೆಟ್ಟಗಾಯಿತು) ಎನ್ನುತ್ತ ಮುಂದೆ ಹೋದರು. ಅಮೃತ ಧಾವಿಸುತ್ತ ತಿರುಕರ ಹತ್ತಿರ ಹೋದನು. ಬಿದ್ದ ಜೀವ ನರಳುತ್ತಿತ್ತು, ಆದರ ಸಾವು ಸಮೀಪಿಸಿತ್ತು.

ಅಮೃತ ಆಗೇನೂ ಮಾಡುವಂತಿರಲಿಲ್ಲ. ಬೀದಿಯ ಮುಗ್ಗುಲಿಗೆ ಮಲಗಿಸಿ ನೀರು ತಂದು ಬಾಯಲ್ಲಿ ಹಾಕಿದನು. ಆ ಬಿಳಿ ಬಣ್ಣದ ಮದಾಂಧರ ನಡತೆ ಯಿಂದ ಕೆಂಡದಂತೆ ತಪ್ತನಾದನು. ಒಳಗೆ ಧುಮುಕಿ ಅವರ ಚೆಂಡು ಹಾರಿಸಲೇ ಎಂದನು. ಆದರೆ ಅದು ವಿವೇಕವಲ್ಲ ಎಂದು ತೋರಿತು. ಕೆಂಗಣ್ಣಿನಿಂದ ಅತ್ತ ನೋಡಿದನು. ನೃತ್ಯ ಸಾಗಿಯೇ ಇತ್ತು, ಆ ತರುಣನು ತರುಣಿಯ ಬಲಗೈಯನ್ನು ತನ್ನ ಎಡಗೈಯಲ್ಲಿ ನವುರಾಗಿ ತಗೊಂಡು ಒತ್ತಿ ತನ್ನ ಬಲಗೈ ಯನ್ನು ಅವಳ ಬೆನ್ನ ಮೇಲೆ ಇರಿಸಿ, ಮೈಗೆ ಮೈತಾಗಿಸಿ ಕುಣಿತದ ಮಹಾ ಮೇಳದಲ್ಲಿ ಸೇರಿಕೊಂಡನು. ಹೊರಗೆ ಅವನು ಬೂಟಿನಿಂದ ಒದ್ದ ಜೀವ ಒದ್ದಾಡಿ ಒದ್ದಾಡಿ ಪ್ರಾಣಬಿಟ್ಟಿತು. ಆ ತಿರುಕ ಕುಟುಂಬದ ಯಜಮಾನ ಅವನು. ಅವನ ಮುದುಕ ತಂದೆ, ಮುದುಕಿ ತಾಯಿ, ಹೆಂಡತಿ ಮಕ್ಕಳು ಅವನ ಶವದ ಮುಂದೆ ಕುಳಿತು ಗೋಳೋ ಎಂದು ಅಳಹತ್ತಿದರು. ಹೊರಗಡೆ ಬೆಳದಿಂಗಳ ಸಿರಿಯನ್ನೂ ರಾತ್ರಿಯ ಸ್ತಬ್ಧತೆಯನ್ನೂ ಕದಡಿಸುವ ಈ ನೀಲಾಂ-ಬರಿ ಗೀತದ ಹಿನ್ನೆಲೆಯಲ್ಲಿ ಪ್ರಕೃತಿ ಮೃತ್ಯುಸುಂದರಿಯಾಗಿ ಜೀವಪುರುಷ ನನ್ನಪ್ಪಿ ಸಾವಿನ ಕುಣಿತ ಕುಣಿಯುತ್ತಿದ್ದಾಳೆ. ಒಳಗೆ ಇಪ್ಪತ್ತನೆಯ ಶತಮಾನದ ಅಪ್ಸರೆಯರೊಡನೆ ಸಾಮ್ರಾಜ್ಯದ ಆಧಾರಸ್ತಂಭಗಳಾದ ಇಂದಿನ ದೇವತೆಯರು ವಿಹಾರಕ್ಕಾಗಿ ಕುಣಿಯುತ್ತಿದ್ದಾರೆ. ಹೊರಗಿನ ಜಗತ್ತಿನ ಪರಿವೆ ಅವರಿಗಿಲ್ಲ. ದೇವತೆಗಳಿಗೆ ಎಂದಾದರೂ ಮನುಷ್ಯ ಲೋಕದ ಪರಿವೆ ಇರುವುದೇ ? ಇದ್ದರೆ ಅವರಿಗೆ ದೇವತೆಗಳೆಂದು ಯಾರು ಕರೆದಾರು ? ಇಲ್ಲಿಯವರೆಗೆ ಕಲಕತ್ತೆಯಲ್ಲಿ ಕಂಡ ದೃಶ್ಯಗಳಲ್ಲಿ ಇದಕ್ಕಿಂತ ಭೀಕರವಾದ ಅಣಕಾಟವನ್ನು ಅಮೃತ ಅನುಭವಿಸಿರಲಿಲ್ಲ. ಅವನು ಆ ಶವದ ದಹನದ ವ್ಯವಸ್ಥೆ ಮಾಡಿ ಆ ಬಂಧುಗಳನ್ನು ಸಾಂತ್ವನ ಮಾಡಿ ಪರಿಹಾರ ಕೇಂದ್ರವೊಂದಕ್ಕೆ ಸಾಗಿಸಿ ತನ್ನ ಕೋಣೆಗೆ ಹೋಗಿ ಮಲಗಿದಾಗ ಬೆಳಕು ಹರಿಯುತ್ತಿತ್ತು, ಕರ್ತವ್ಯ ಮತ್ತೆ ಕರೆಯುತ್ತಿತ್ತು.

ಅಕ್ಟೋಬರ ತಿಂಗಳ ಕೊನೆಯ ಭಾಗ ಬಂದಿತು. ಒಮ್ಮೆಲೆ ಬಂಗಾಲದ ವಾತಾವರಣದಲ್ಲಿ ಬದಲಾವಣೆಯನ್ನು ತಂದಿತು. 'ಸೈನಿಕ ವಾಯಿಸರಾಯ ಎಂದು ಹೆಸರಾದ ವ್ಯಾವೆಲ್ ಸಾಹೇಬರು ದಿಲ್ಲಿಗೆ ಬಂದು ಅಧಿಕಾರ ಸೂತ್ರ ವಹಿಸಿದ್ದೊಂದೇ ತಡ, ವಿಮಾನದಲ್ಲಿ ಕಲಕತ್ತೆಗೆ ಹಾರಿ ಸಾಮಾನ್ಯ ಮನುಷ್ಯನ ಗುಪ್ತ ವೇಷದಲ್ಲಿ ತಿರುಗಾಡಿ ಬರಗಾಲದ ಪರಿಸ್ಥಿತಿಯನ್ನು ಅರಿತುಕೊಂಡರು,

ತತ್‌ಕ್ಷಣ ಉಪಾಯುಗಳನ್ನು ಕೈಕೊಂಡರು. ಎಂದಿಗೂ ಅಸ್ತಂಗತವಾಗದ ಬ್ರಿಟಿಷ್ ಸಾಮ್ರಾಜ್ಯ ಸೂರ್ಯನ ಮೇಲೆ ತಲೆದೋರಿದ ಕಪ್ಪು ಕಲೆಯಂತೆ ಹಿಂದುಸ್ತಾನದಲ್ಲಿಯ ದುರ್ಭಿಕ್ಷ ಅವರಿಗೆ ತೋರಿರಬೇಕು. ಕಲಕತ್ತೆಯ ಬೀದಿಗಳಲ್ಲಿ ಬಿದ್ದು ಹೊರಳುವ, ಸಾಯುವ 'ಕಪ್ಪುಜನ' ವಿಮಾನದಲ್ಲಿ ಹಾರಿಬಂದ ಆ ಸಾಮ್ರಾಜ್ಯದ ರಾಯಭಾರಿಗೆ ಹೊಸ ನಾಗರಿಕತೆಯ ಮುಖದ ಮೇಲಿದ್ದ ಸಿಡುಬಿನ ಕಲೆಗಳಂತೆ ಕಂಡಿರಬೇಕು. ಈ ಕಲಂಕವನ್ನು ಒಂದೇಟಿನಿಂದ ತೊಡೆಯಲೆಂದು ಅವರು ಹೂಡಿದ ಉಪಾಯವೆಂದರೆ ಎಲ್ಲ ನಿರ್ಗತಿಕರನ್ನು ಕಲಕತ್ತೆಯಿಂದ ಹೊರಗೆ ಹಾಕಿ ಅವರವರ ಹಳ್ಳಿಗಳಿಗೆ ಸಾಗಿಸುವುದು, ಪ್ರಾಂತದ ಮೂಲೆಮೂಲೆಗಳಲ್ಲಿ ಸಹ ಧಾನ್ಯದ ಚೀಲಗಳನ್ನು ಸಾಗಿಸಿ ಎಲ್ಲರಿಗೆ ಅನ್ನ ಸಿಗುವಂತೆ ವ್ಯವಸ್ಥೆ ಮಾಡುವುದು. ಈ ಕಾರ್ಯಕ್ಕಾಗಿ ಮಿಲಿಟರಿ ಪಥಕಗಳ ಸಹಾಯವನ್ನು ತೆಗೆದುಕೊಳ್ಳಲಾಯಿತು. ರೇಲ್ವೆ, ಮೋಟರ, ನಾವೆ—ಎಲ್ಲ ದಾರಿಗಳಿಂದ ಧಾನ್ಯವನ್ನೊಯ್ದು ಮುಟ್ಟಿಸುವ ಕೆಲಸ ಭರದಿಂದಲೂ ಉತ್ಸಾಹದಿಂದಲೂ ಸಾಗಿತು. ಸೈನಿಕ ವಾಯಿಸರಾಯರ ಈ ರಾಮಬಾಣದ ಉಪಾಯ ಯೋಜನೆಗೆ, ಮಿಲಿಟರಿಯವರ ಅವಿಶ್ರಾಂತ ಸಹಕಾರಕ್ಕೆ ಜಗವೆಲ್ಲ ತಲೆದೂಗಿತು. ಆದರೆ ಕಲಕತ್ತೆಯಲ್ಲಿ ಮಾತ್ರ ಈ 'ರಾಮಬಾಣ' ನಿರಾಶ್ರಿತರ ಎದೆಯಲ್ಲಿ ನಟ್ಟು ಭೀತಿ ನಿರಾಶೆಗಳನ್ನು ಹುಟ್ಟಿಸಿ ಅರಾಜಕತೆಯನ್ನೇ ಉಂಟುಮಾಡಿತೆನ್ನಬಹುದು. ಸರಕಾರದ ಅಪ್ಪಣೆಯ ಮೇರೆಗೆ ಪೋಲೀಸ ವ್ಯಾನುಗಳು, ಏ.ಆರ್.ಪಿ. ವಾಹನಗಳು ಬೀದಿಗಳಲ್ಲಿ ತಿರುಗಿ ಕಂಡವರ ಹಿಡಿದು ಬಲಾತ್ಕಾರದಿಂದ ಎತ್ತಿಹಾಕಿ ದೂರ ಸ್ಥಳಕ್ಕೆ ಒಯ್ಯುಹತ್ತಿದವು. ತನ್ನ ಮಕ್ಕಳನ್ನು ಎಲ್ಲಿಯೋ ಕಟ್ಟಡದ ಮುಂದೆ ನಿಲ್ಲಿಸಿದ 'ವಿಮಾನದಾಳಿ'ಯ ಗೋಡೆಗಳ ಮರೆಗೆ ಬಿಟ್ಟು ತಿರುಪೆಗೆಂದು ತಿರುಗುತ್ತಿರುವ ತಾಯಂದಿರನ್ನು ಹೀಗೆ ಅಪಹರಿಸುತ್ತಿದ್ದರು, ಗಂಡಂದಿರನ್ನು ಹೆಂಡರಿಂದ ಅಗಲಿಸುತ್ತಿದ್ದರು. ಹೇಳಿದ ಕೆಲಸವನ್ನು ಹುಂಬತನದಿಂದ ಮಾಡಿಬಿಡುವ ಘಟೋತ್ಕಚ ಮಾರ್ಗದ ಜನವದು. ಬಡಜೀವಿಗಳೆಂದರೆ ಅವರ ಕಣ್ಣಲ್ಲಿ ಮಾಲಮೋಟರಿನಲ್ಲಿ ಹಾಕುವ ಚೀಲದಂತೆ. ಅವರಿಗೂ ಆಶೆ ಆಕಾಂಕ್ಷೆಗಳಿವೆ, ಅಂತಃಕರಣವಿದೆ ಎಂಬುದನ್ನರಿತು ಜನತೆಯ ಮುಂದಾಳುಗಳ ನೆರವನ್ನು ಪಡೆದು ಸಮಾಧಾನದಿಂದ ಜಾಣತನದಿಂದ ಈ ಕೆಲಸವನ್ನು ಮಾಡಲಿಲ್ಲ. ಆಯಿತು, ಮೊದಲೇ ಹೌಹಾರಿದ ಜನ ಇನ್ನಿಷ್ಟು ಹೌಹಾರಿತು : ಸರಕಾರದವರು ತಮ್ಮನ್ನು ಎಲ್ಲಿಗೋ ತಿಳಿಯದ ಸ್ಥಳಕ್ಕೆ ಕೊಂಡೊಯ್ದು ಕೊಲ್ಲುವ

ರೆಂಬ ಹಾರಸುದ್ದಿ ಹರಡಿದವು. ನಿರಾಶ್ರಿತರು ಆಮೇಲೆ ಹಗಲಲ್ಲಿ ಬೀದಿಯಲ್ಲಿ ತಿರುಗುವುದನ್ನೇ ಬಿಟ್ಟರು. ಕಾಣದ ಸ್ಥಳಗಳಲ್ಲಿ ಅವಿತುಕೊಂಡರು, ರಾತ್ರಿಯಲ್ಲಿ ಕಳ್ಳಹೆಜ್ಜೆಯಿಂದ ತಿರುಗಾಡಹತ್ತಿದರು. ತಮ್ಮ ತಾಯಂದಿರನ್ನು ಅಗಲಿದ ಮಕ್ಕಳು, ಆಪ್ತರಿಂದ ದೂರವಾದ ಇತರರು ಎಲ್ಲರ ಗೋಳಾಟ ಹೆಚ್ಚಿ ಇಲ್ಲದ ಸಮಸ್ಯೆಯನ್ನು ತಂದೊಡ್ಡಿತು. ಇನ್ನು ಪಟ್ಟಣವಾಸ ಹಿತವಲ್ಲವೆಂದು ಬಹುಜನ ತಂತಮ್ಮ ಹಳ್ಳಿಗಳಿಗೆ ಬಂದ ಹಾದಿಗೆ ಸುಂಕವಿಲ್ಲವೆಂಬಂತೆ ಹಿಂದಿರುಗಿದರು. ಈ ಮಹಾನಗರಕ್ಕೆ ಬಂದು ಪಡೆದದ್ದೇನು ? ಆಪ್ತೇಷ್ಟರ, ನೆರೆಹೊರೆಯವರ ಗೋಳಿನ ಸಾವಿನ ಕಥೆಯ ನೆನವು, ಕಣ್ಣೀರು, ತಮ್ಮ ಮುಂದಿನ ಗತಿಯೇನು ಎಂಬ ತೀವ್ರ ನಿರಾಶೆ. ದಾರಿಯಲ್ಲಿ ನೆಲದಾಯಿಯ ಕೃಪೆಯಿಂದ ಈ ಜನ ಬಿತ್ತಿದ ಭತ್ತದ ಬೆಳೆ ಹುಲುಸಾಗಿ ಬೆಳೆಯುತ್ತಿದೆ, ಮೆಲ್ಲನೆ ಬಂಗಾರ ಬಣ್ಣಕ್ಕೆ ತಿರುಗುತ್ತಿದೆ. 'ಆಮನ್' ಪೈರು ತಿಂಗಳೆರಡು ತಿಂಗಳಲ್ಲಿ ಕೊಯ್ಲಿಗೆ ಸಿದ್ಧವಾಗುತ್ತದೆ. ಆದರೆ ಅದನ್ನು ನೋಡಿ ಅವರ ಒಡಲು ತುಂಬಬೇಕೆ ? ಪ್ರಾಣ ಉಳಿಯಬೇಕೆ ? ಸಿಕ್ಕದ್ದು ತಿಂದು, ಕಣ್ಣೀರು ಕುಡಿದು ಮೈಯಲ್ಲಿ ದಕ್ಕು ಏನೂ ಉಳಿಯದೆ ಅಲೆದಾಡುವ ಬೆಚ್ಚದಂತೆ ಈ ಹಳ್ಳಿಗರು ಇರುವಾಗ ಹೆಣ್ಣೇನು ಗಂಡೇನು ಅವರಿಗೆ ಹೊಲದಲ್ಲಿ ದುಡಿಯುವ ತ್ರಾಣವೆಲ್ಲಿದೆ ? ಬೆಳೆ ಬರುವಷ್ಟು ದಿನ ಅವರೇನು ತಿಂದಿರಬೇಕು ? ಕಣ್ಣ ಮುಂದೆ ಎಲ್ಲವೂ ಕಗ್ಗತ್ತಲೆ ! ಅದರಲ್ಲಿ ಕಾಣುವದು ಕೋಣನ ಮೇಲೆ ಕೂತು ಬಂದ ಕಪ್ಪು ಯಮನ ಕೈಯ ಪಾಶ.

ಈ ಹೊಸ ಪರಿಸ್ಥಿತಿಯಲ್ಲಿ ಯಾವ ದಿಶೆಯಲ್ಲಿ ಇನ್ನು ಮುಂದೆ ಜನ ಸೇವೆಯನ್ನು ಮಾಡಬೇಕೆಂದು ವಿಚಾರಿಸಿ ಗೊತ್ತುಪಡಿಸಲು ರಾಮಕೃಷ್ಣ ಮಠದಲ್ಲಿ ಕೆಲಸಗಾರರ ಸಭೆ ಸೇರಿತ್ತು. ಸ್ವಾಮಿ ಪ್ರಜ್ಞಾನಂದರೇ ಅದನ್ನು ಕರೆದಿದ್ದರು. ಕಲಕತ್ತೆಯಿಂದಲ್ಲದೆ ಪ್ರಾಂತದ ಇತರ ಕೇಂದ್ರಗಳಿಂದಲೂ ಕೆಲವು ಕಾರ್ಯಕರ್ತರು ಬಂದಿದ್ದರು. ಒಂದು ಇಡೀ ದಿನ ಚರ್ಚೆ ನಡೆದು ಕೆಲವು ಹೊಸ ನಿರ್ಣಯಗಳನ್ನು ಮಾಡಲಾಯಿತು. ಇನ್ನು ಕಲಕತ್ತೆಗಿಂತ ಹೆಚ್ಚಾಗಿ ಪ್ರಾಂತದ ಹಳ್ಳಿಗಳಲ್ಲಿ ಜನಸಾಮಾನ್ಯದ ಸೇವೆಗಾಗಿ ಹೆಚ್ಚು ಶ್ರಮಿಸಬೇಕೆಂಬುದು ಅಂದಿನ ಮುಖ್ಯ ನಿರ್ಣಯವಾಗಿತ್ತು. ಜನ ತಿರುಗಿ ತಮ್ಮೂರಿಗೆ ಹೊರಟಿದೆ. ಅವರಿಗೆ ಅಲ್ಲಿ ಅನ್ನ ದೊರೆಯಬೇಕು. ಮಲೇರಿಯ ಮುಂತಾದ ರೋಗಪೀಡಿತರಿಗೆ ಔಷಧೋಪಚಾರ ಬೇಕು. ಕಲಕತ್ತೆಯಲ್ಲಿ ಹೊಟ್ಟೆಗಿಲ್ಲದೆ ಸತ್ತಷ್ಟೇ ಜನ

ಮಲೇರಿಯದ ಬೇನೆಯಿಂದ ಸಾಯಬಹುದೆಂಬ ಹೆದರಿಕೆ ಎಲ್ಲರಲ್ಲಿ ಮೂಡಿತ್ತು. ಇದಕ್ಕಾಗಿ ಡಾಕ್ಟರರ ಜನರ ಅಗತ್ಯ ಇನ್ನಿಷ್ಟು ಹೆಚ್ಚೆಂದೂ ಎಲ್ಲರಿಗೆ ಮನವರಿಕೆಯಾಯಿತು. ಕಾರ್ಯದ ವಿವರಗಳನ್ನು ಗೊತ್ತುಪಡಿಸಿ ಎಲ್ಲರೂ ಚೆದರಿದರು.

ಎಲ್ಲರೂ ಹೋದ ಮೇಲೆ ಸ್ವಾಮಿಜಿಯವರೊಬ್ಬರೆ ಹೊರಗಣ ತೋಟದ ಒಂದು ಆಸನದಲ್ಲಿ ಕುಳಿತಿದ್ದರು. ಸಂಜೆಯ ಹೊತ್ತು. ಅಮೃತ ಮತ್ತು ವೀಣೆ ಅಲ್ಲಿಗೆ ಬಂದರು. ಎಲ್ಲರ ಸಭೆಯಲ್ಲಿ ಜೊತೆಗೂಡಿ ಮಾಡಿದ ಚರ್ಚೆಗಿಂತ ಅಮೃತನಿಗೆ ಸ್ವಾಮಿಜಿಯವರ ಸ್ವಂತ ಸಾನ್ನಿಧ್ಯದ ಸ್ಫುರಣ ಬೇಕಾಗಿತ್ತು. ಅದೇ ಅವನನ್ನು ಆದರ್ಶದ ದಾರಿಯಿಂದ ಅವಿಚಲನನ್ನಾಗಿ ಇರಿಸಿದ್ದು. ಇಬ್ಬರೂ ಹತ್ತಿರದ ಇನ್ನೊಂದು ಆಸನದಲ್ಲಿ ಕುಳಿತರು, ಕೆಲಹೊತ್ತು ಮುಳುಗುವ ಸೂರ್ಯನನ್ನು ನೋಡುತ್ತ ಏನೂ ಮಾತಾಡದೆ ಎಲ್ಲರೂ ಇದ್ದರು. ಸ್ವಾಮಿಜಿಯವರೇ ಆಮೇಲೆ ಮುಗುಳುನಗೆ ಬೀರಿ 'ಯಾಕೆ ಅಮೃತ್, ಮೋರೆ ಗಂಟಿಕ್ಕಿದೆ? ತ್ರಸ್ತನಾದಂತೆ ಕಾಣುವಿ ? ಕೆಲಸ ಸಾಕಾಯಿತೇ ?' ಎಂದರು.

ಮೋರೆ ಗಂಟಿಕ್ಕಿದ್ದು ದಿಟವಾಗಿತ್ತು, ಒಂದು ಬಗೆಯ ನಿರ್ವಿಣ್ಣತೆ-ನೈರಾಶ್ಯ ಅವನಲ್ಲಿ ಉಂಟಾದದ್ದೂ ನಿಜ. ಆದರೆ ಕೆಲಸ ಸಾಕಾಗಿರಲಿಲ್ಲ. 'ಇಲ್ಲ ಸ್ವಾಮಿಜಿ. ನಿಮಗೆ ಯಾರು ಹೇಳಿದರು ?' ಎಂದು ತಟ್ಟನೆ ಕೇಳಿದನು.

'ನಿನ್ನ ಮುಖವೇ ಹೇಳುತ್ತದೆ. ನಿನಗೆ ಅನಿಸುವುದಿಲ್ಲವೇ ವೀಣಾದೇವಿ ?' ಎಂದು ಕೇಳಿದರು.

'ಹೌದು. ಆದರೆ ಕೆಲಸ ಸಾಕಾದ್ದಕ್ಕಾಗಿ ಇರಲಾರದು. ಕೆಲಸ ಸಾಕಷ್ಟು ಇಲ್ಲ ಎಂದಿರಬೇಕು.' ವೀಣೆ ಅರ್ಥ ಮಾಡಿದಳು.

ಈ ಸಮಯ ನೋಡಿ ಅಮೃತ ಅಂದನು : 'ಸ್ವಾಮಿಜಿ. ನನ್ನ ಮನಸ್ಸಿನಲ್ಲಿ ಇದ್ದದ್ದು ಹೇಳಲೇ ? ಕೆಲಸ ಸಾಕು ಎಂದೂ ಅಲ್ಲ, ಸಾಕಷ್ಟು ಇಲ್ಲ ಎಂದೂ ಅಲ್ಲ. ಆದರೆ ಈ ಕೆಲಸ ಫಲ ಕೊಟ್ಟೀತೇ ಎಂದು. ನಿಮ್ಮ ಸ್ಫೂರ್ತಿಯಿಂದ, ಮಾರ್ಗ ದರ್ಶನದಿಂದ ನಾವೆಲ್ಲ ಕೈಲಾದಷ್ಟು ಯೋಗ್ಯ ಕೆಲಸವನ್ನು ಮಾಡುತ್ತಿದ್ದೇವೆ ಎಂಬುದನ್ನು ನಾ ಒಪ್ಪಿದೆ. ಇಂದು ಸೇರಿದ ಸಭೆಯಲ್ಲಿ ಮಾಡಿದ ನಿರ್ಣಯ ದಂತೆ ಇನ್ನೂ ಹೆಚ್ಚು ಕೈಯ ಕೆಲಸ ಆದೀತು. ಆದರೆ ಇದಲ್ಲ ಗಾಳಿಯ

ಕೂಡ ಗುದ್ದಾಟವಾಗುತ್ತಿಲ್ಲವೇ ? ಸಾಯುವವರು ಸತ್ತು ಹೋದರು. ಅನ್ನ ಬಟ್ಟೆ ಕೊಟ್ಟು ಯಾರನ್ನು ಕೆಲವು ದಿನ ಹಿಡಿದಿರುವೆವೋ ಅವರೆಷ್ಟು ದಿನ ಹೀಗಿರುವರು ? ತಿರುಗಿ ಹೋದವರ ಕಾಲಲ್ಲಿ ಸಾವು ತೊಡಕಿಕೊಂಡಿದೆ. ರೋಗ ರುಜಿನಗಳ ಭಯವಂತೂ ಹೇಳತೀರದು. ನಮ್ಮ ದೇಶದ ಜನರ, ಆಳರಸರ ಅನಾಸ್ಥೆ-ಅವ್ಯವಸ್ಥೆಗಳು ಕಳಸ ಮುಟ್ಟಿವೆ. ಈ ಗೊಂದಲಗೆಟ್ಟ ವಾತಾವರಣದಲ್ಲಿ ನಾವು ಮಾಡುತ್ತಿರುವುದೆಲ್ಲ ವ್ಯರ್ಥವಾಗುತ್ತಿರುವುದಲ್ಲವೇ ಎಂದು ನನಗೆ ತೋರಿತು.'

ಸ್ವಾಮಿಜಿಯವರು ಈಗ ನೇಟಾಗಿ ಎದ್ದು ಕುಳಿತು ಆವೇಶದಿಂದ ಹೇಳಿದರು : 'ಅಮೃತ್, ಹೀಗೆ ಗೋಣು ಚೆಲ್ಲಬೇಡ. ವಿಫಲವೆಂದು ತೋರಿದ್ದರಲ್ಲಿ ಸಫಲತೆಯ ಬೀಜ ಹುದುಗಿದೆ. ನನಗೂ ನಿನಗೂ ಇಂದು ಕಾಣುವುದು ವಿಫಲತೆ. ನಾಳೆ ಬರುವ ಜನಕ್ಕೆ ಫಲ ದೊರೆಯುವುದು. ಎಲ್ಲ ಸೇವಾ ಕಾರ್ಯದ ಮೂಲ ಸ್ಫೂರ್ತಿ ಇದು. ಇಂದು ನಮ್ಮ ಭಾರತದಂಥ ಭವ್ಯ ದೇಶದಲ್ಲಿ ನಡೆದದ್ದೇನು ? ಅಂದರೆ ಭಾರತಮಾತೆಯ ಉದರದಲ್ಲಿ ಹೊಸ ರಾಷ್ಟ್ರಶಿಶು ಹುಟ್ಟುತ್ತಿರುವಾಗಿನ ಸೂಲಿಗಳು, ಬೇನೆಗಳು ಇವುಗಳ ನೋಟ. ಹಿಂದೆಂದೂ ಹುಟ್ಟದಿದ್ದ ರಾಷ್ಟ್ರಪುರುಷ ಜನ್ಮತಾಳುತ್ತಲಿದ್ದಾನೆ. ಇಂದು ಕಣ್ಣಿಗೆ ಕಾಣುವ ಎಲ್ಲ ದುರ್ದೈವೀ ಘಟನೆಗಳ ಹಿಂದೆ ದೊಡ್ಡ ಒಂದು ದೈವೀ ಪ್ರೇರಣೆಯಿದೆ; ಮಹಾಸಂಕಲ್ಪದ, ಸಾಹಸದ ಕೈವಾಡವಿದೆ. ನಾವು ನೀವೆಲ್ಲಾ ಅದರ ಕೈಗೊಂಬೆಗಳು. ಸ್ವಾತಂತ್ರ್ಯ, ಸ್ವರಾಜ್ಯವೆಂದು ಲೋಕಮಾನ್ಯರ ಕಾಲದಿಂದ ಇಂದಿನವರೆಗೆ ನಾವೆಲ್ಲ ಕೂಗುತ್ತ ಬಂದೆವಲ್ಲವೇ ? ಬ್ರಿಟಿಶರಿಗೆ 'ಚಲೇ-ಜಾವ' ಎಂದು ಮಹಾತ್ಮಾಜಿಯವರು ನಿರ್ಭಯವಾಗಿ ಹೇಳಿದರಲ್ಲವೆ ? ಆ ಸ್ವಾತಂತ್ರ್ಯ-ಸ್ವರಾಜ್ಯದ ಪ್ರಾಪ್ತಿಗಾಗಿ ಪಡುವ ಯಾತನೆಗಳಲ್ಲಿ ಈ ದುಷ್ಕಾಳದ ಯಾತನೆಯೂ ಒಂದಾಗಿದೆ. ನಮ್ಮ ಪರೀಕ್ಷೆಗೆಂದೇ ಈ ದೈವೀಘಟನೆ ಬಂದಿರಬೇಕು.

'ದೈವೀಘಟನೆ ? ಸ್ವಾಮಿಜಿ, ಈ ದುಷ್ಕಾಳವು ದೈವೀಘಟನೆಯೆ ? ನೀವು ಹೇಳುವದನ್ನು ನಾ ಒಪ್ಪಲಾರೆ. ಪ್ರಾಂತದ ಮತ್ತು ಮಧ್ಯವರ್ತಿ ಸರಕಾರದ ಅಂಧಾದುಂಧಿ ಕಾರಭಾರ, ಮಿಲಿಟರಿ ಜನರ ದುಂದುಗಾರಿಕೆ, ಕಾಳಾಬಾಜಾರಿಗಳ ನಿರ್ಲಜ್ಜ ಲೋಭ ಮುಂತಾದ್ದರಿಂದ 'ಮನುಷ್ಯಕೃತ ಬರಗಾಲ'ವೆಂದು ಇದಕ್ಕೆ ಎಲ್ಲ ಬಲ್ಲವರು ಹೇಳುತ್ತಾರೆ.' ಅಮೃತ ನಡುವೆ ಬಾಯಿಹಾಕಿ ತಡೆಯದ

ಆಡಿಬಿಟ್ಟನು.

ಸ್ವಾಮಿಜಿಯವರು ಅವನ ಧಾರ್ಷ್ಟ್ಯದಿಂದ ಕೆರಳಲಿಲ್ಲ. 'ಅಮೃತ್, ನಾನು ಆ ಬಲ್ಲವರಲ್ಲಿ ಒಬ್ಬನಲ್ಲ ಎನ್ನು ಬೇಕಾದರೆ. ಸಂನ್ಯಾಸಿಗೆ ವ್ಯವಹಾರ ಜ್ಞಾನವೆಲ್ಲಿರುತ್ತದೆ?' ಮೂವರೂ ನಕ್ಕರು. ಸ್ವಾಮಿಜಿ ಮುಂದರಿಸಿದರು: 'ನೋಡು. ನೀ ಹೇಳುವುದು ನನಗೆ ಗೊತ್ತಿದೆ. ಈ ಮಹಾವಿಪತ್ತಿಗೆ ಕಾರಣವಾದ ವೈಯಕ್ತಿಕ ಹಾಗೂ ಸಾಮೂಹಿಕ ಪ್ರಮಾದಗಳು ನನಗೆ ಗೊತ್ತಿಲ್ಲವೇ? ಮುಖ್ಯವಾಗಿ ಯಾವ ಬಂಗಾಲಪ್ರಾಂತವು ಹಿಂದುಸ್ತಾನದ ಸ್ವಾತಂತ್ರ್ಯ ಚಳವಳಿಗೆ ಜ್ವಲಜ್ಯೋತಿಯಾದ ಧೀರರನ್ನೂ ರಾಷ್ಟ್ರೀಯವೃತ್ತಿಯ ಪ್ರಸಾರಕ್ಕೆ ಕಾರಣರಾದ ಮುಂದಾಳುಗಳನ್ನೂ ವಿಶ್ವಧರ್ಮದ ಪ್ರವಾದಿಗಳಾದ ಮಹಾ ವಿಭೂತಿಗಳನ್ನೂ ಭಾರತಕ್ಕೆ ಒದಗಿಸಿಕೊಟ್ಟಿತೋ ಆ ಪ್ರಾಂತದಲ್ಲಿ ಇಂದು ಜಾತಿ ಜಾತಿಗಳ ಜಗಳ ಮೊದಲಿಕ್ಕಿದೆ. ಜಾತೀಯ ರಾಜಕಾರಣ ಏರಿಕೆಯಲ್ಲಿದೆ. ಬರುವ ಕಾಲದಲ್ಲಿ ಇದಕ್ಕಾಗಿ ಏನೇನು ಕೊಲೆಪಾತಕ, ಅನಾಹುತಗಳಾಗುವವೋ ಯಾರು ಬಲ್ಲರು? ಇದನ್ನೆಲ್ಲ ನೆನೆದು ನಾನು ಬಹಳ ವ್ಯಥೆಪಟ್ಟದ್ದೇನೆ, ಅಮೃತ್. ಆದರೆ ವಿಚಾರ ಮಾಡು, ಮಿದನಾಪುರ ನೆರೆಹಾವಳಿಯನ್ನು ಮನುಷ್ಯ ಮಾಡಿದನೇ? ಮಹಾಯುದ್ಧದ ಬೇಗೆಯಲ್ಲಿ ಬ್ರಹ್ಮದೇಶ ಜಪಾನಿಗಳ ಕೈವಶವಾಗಿ ಅಲ್ಲಿಯ ಅಕ್ಕಿಯ ಆಯಾತ ನಮ್ಮಲ್ಲಿಗೆ ಬರುವುದನ್ನು ಮನುಷ್ಯ ತಡೆದನೇ? ಇದನ್ನೆಲ್ಲ ಸೂಕ್ಷ್ಮವಾಗಿ ನೋಡಿದರೆ ದೈವೀಶಕ್ತಿ ನಮ್ಮ ಸತ್ವಪರೀಕ್ಷೆಗೆಂದು ತನ್ನಾಟ ಹೂಡಿತೆಂದೇ ತೋರುವುದು. ನಮ್ಮ ದೌರ್ಬಲ್ಯವೆಷ್ಟೆಂಬುದನ್ನೂ ಸ್ವತಂತ್ರ ರಾಷ್ಟ್ರವಾಗಲು ನಾವು ಎಷ್ಟು ಅನರ್ಹರೆಂಬುದನ್ನೂ ತೋರಿತು. ಹತ್ತಿಪ್ಪತ್ತು ಲಕ್ಷ ಜನದ ಆಹುತಿ ತಗೊಂಡು ನಮ್ಮ ರಾಷ್ಟ್ರೀಯತ್ವದ ಹಿರಿಯುಣಕವನ್ನೇ ನಮಗೆ ಕಾಣಿಸಿತು. ಆಡಳಿತದ ಹಾಗೂ ಜನತೆಯ ತಪ್ಪುತಡಿಗಳು ಈ ಯೋಜನೆಗೆ ಪೋಷಕವಾದವು. ಆದರೂ ನಾವು ನಿರಾಶೆಗೊಳಗಾಗಬಾರದು, ಅಮೃತ್. ನಿನ್ನಂಥ ತರುಣರ ತ್ಯಾಗ-ಸೇವೆ ಇದು ಇಂಥ ದುಷ್ಕಾಳದಲ್ಲಿಯೂ ಕಗ್ಗತ್ತಲೆಯಲ್ಲಿಯ ಅಸಂಖ್ಯ ತಾರೆಗಳ ಬೆಳಕಿನಂತೆ ಬೆಳಗುತ್ತಿದೆ, ಮುಂದೆ ಬರಲಿರುವ ಮಹಾ ಬೆಳಗಿಗೆ ಇಂದು ಸೂಚನೆಯಾಗಿದೆ.'

ಸ್ವಾಮಿಜಿ ಮಾತು ಮುಗಿಸಿ ಕಣ್ಣು ಮುಚ್ಚಿ ಕೆಲಹೊತ್ತು ಸುಮ್ಮನೆ ಕುಳಿತರು. ಅವರ ಆ ಮೌನದಿಂದಲೇ ಅಮೃತ-ವೀಣೆ ಇಬ್ಬರೂ ಹೊಸ

ಸ್ಫುರಣವನ್ನು ಪಡೆದು ಹೊಸ ಮನುಷ್ಯರಾದರು.

ಕೆಲವು ನಿಮಿಷಗಳಾದ ಮೇಲೆ ಸ್ವಾಮಿಜಿ ಎದ್ದು ಹೊರಟರು. ಹೊರಡುತ್ತಲೆ ಅಮೃತನನ್ನು ಕುರಿತು 'ಅಮೃತ್, ಆಗಳೆ ಹೇಳಬೇಕೆಂದಿದ್ದೆ. ನೀನಿನ್ನು ಕೊಂತಾಯಿ ಭಾಗದಲ್ಲಿ ಕೆಲಸಕ್ಕೆ ಹೋಗಲು ಸಿದ್ಧವಾಗಬೇಕು. ಅಲ್ಲಿ ಮಲೇರಿಯಾ ರೋಗಿಗಳ ಸಂಖ್ಯೆ ಹೆಚ್ಚುತ್ತಿದೆ. ನೀ ಒಮ್ಮೆ ಅಲ್ಲಿದ್ದು ಕೆಲಸಮಾಡಿ ಅನುಭವ ಪಡೆದಿರುವಿ. ಒಪ್ಪುವಿಯು ?'

'ಸ್ವಾಮಿಜಿ, ನಿಮ್ಮಾಜ್ಞೆ.' ಅಮೃತ ಎಳ್ಳಷ್ಟೂ ಹಿಂಜರಿಯದೆ ಒಪ್ಪಿಕೊಂಡನು.

'ಬಹಳ ಸಂತೋಷ.' ಆಮೇಲೆ ವೀಣೆಯನ್ನು ನೋಡಿ 'ವೀಣೆ ಇಲ್ಲಿಯೇ ಇರಲಿ. ಅವಳು ಅಲ್ಲಿಗೆ ಹೋಗುವುದುಬೇಡ.' ವೀಣೆಯ ಮುಖ ಒಮ್ಮೆಲೆ ಸಣ್ಣದಾಯಿತು. ಅಮೃತನಿಗೂ ಆಘಾತವಾಯಿತು., ಆದರೆ ಅದನ್ನು ಅವನು ತೋರಗೊಡಲಿಲ್ಲ. ಸ್ವಾಮಿಜಿ ಇಬ್ಬರನ್ನೂ ಒಮ್ಮೆ ನೋಡಿದರು. 'ಡಾಕ್ಟರ ಹೋದಲ್ಲಿ ನರ್ಸ ಬೇಡವೇನು ? ನನಗೂ ದಯವಿಟ್ಟು ಅನುಮತಿ ಕೊಡಿರಿ.' ವೀಣೆ ಅಂಗಲಾಚಿ ಬೇಡಿದಳು.

ಸ್ವಾಮಿಜಿ ಸ್ವಲ್ಪ ತಡೆದು 'ಒಳ್ಳೇದು' ಎಂದರು. ವೀಣೆಯ ಮುಖ ಇಷ್ಟಗಲವಾಯಿತು.

## ೧೫. ಮೃತ-ಅಮೃತ

ಸ್ವಾಮಿಜಿಯವರ ಆಜ್ಞೆಯ ಮೇರೆಗೆ ಅಮೃತನು ನವಂಬರ ತಿಂಗಳ ಆರಂಭದಿಂದ ಕೊಂತಾಯಿ ಭಾಗದಲ್ಲಿ ವೈದ್ಯಕೀಯ ಶುಶ್ರೂಷೆಯ ಕೆಲಸವನ್ನು ನಡಸಿದನು. ವೀಣೆ ಅವನಿಗೆ ನೆರವಿಗಾಗಿ ಇದ್ದಳು. ಪರಿಚಿತವಾದ ಕಾಲೀಚರಣ ಪುರದ ಹಿಂದಿನ ಅದೇ ಬಿಡಾರದಲ್ಲಿ ಇಬ್ಬರೂ ಬೇರೆ ಬೇರೆ ಕೋಣೆಗಳಲ್ಲಿ ನೆಲಸಿದರು. ಆದರೆ ಅಲ್ಲಿರುವುದಕ್ಕಿಂತ ಅಲೆಯುವುದೇ ಹೆಚ್ಚಾಗಿತ್ತು. ಸುತ್ತಲಿನ ಹಳ್ಳಿಗಳಿಗೆ ಹೋಗಿ ಅಲ್ಲಿಯ ಮಲೇರಿಯ ರೋಗಿಗಳಿಗೆ ಔಷಧ, ಚುಚ್ಚುಮದ್ದು ಕೊಟ್ಟು ಅವರ ಊಟ, ಆರೈಕೆ ಇದರ ಏರ್ಪಾಡನ್ನು ಮಾಡಿ ಬರುತ್ತಿದ್ದರು. ರೋಗ ಬಲಿತವರನ್ನು ಮಾತ್ರ ಕೇಂದ್ರಕ್ಕೆ ಕರೆತಂದು ವಿಶೇಷವಾಗಿ ಉಪಚರಿಸುತ್ತಿದ್ದರು. ಆ ಭಾಗದಲ್ಲಿ ಹಬ್ಬಿದ ಮಲೇರಿಯದ ಹಾವಳಿಯನ್ನು ಕಲ್ಪಿಸುವುದೂ ಕಷ್ಟ. ಅದನ್ನು ನೋಡಿದರೆ ನೆರೆಹಾವಳಿಯಲ್ಲಿ ಸತ್ತವರು

ಸುಖಿಗಳು ಎನ್ನುವಂತಿತ್ತು. ಹಿಂದುಳಿದ ಜನಕ್ಕೆ ತಿನ್ನಲು ಅನ್ನವಿಲ್ಲ, ಇದ್ದರೂ ಸಾಕಷ್ಟಿಲ್ಲ, ಚೆನ್ನಾಗಿಲ್ಲ. ಮಲೇರಿಯ ಜಂತುಗಳು ಮೈಹೊಕ್ಕು ದಾಳಿ ಮಾಡಿದರೆ ಅದನ್ನು ಹಿಮ್ಮೆಟ್ಟಿಸುವ ಸಾಮರ್ಥ್ಯವು ಅಲ್ಲಿಯ ಜನದ ರಕ್ತದಲ್ಲಿಯ ಜೀವಾಣುಗಳಿಗೆ ಇರುವುದೆಲ್ಲಿ? ಹಿಂದುಸ್ಥಾನದ ಮೇಲೆ ವಿಮಾನ ದಾಳಿ ಬಂದರೆ ಯಾವ ಶರಣಾಗತಿಯ ಸ್ಥಿತಿಯಿತ್ತೋ ಅದೇ ಸೊಳ್ಳೆಗಳ ದಾಳಿಗೆ ಸಿಕ್ಕ ಆ ಹಳ್ಳಿಗರ ಸ್ಥಿತಿಯಾಗಿತ್ತು. ನಾಲ್ಕು ದಿನದಲ್ಲಿ ಚಳಿಜ್ವರ ಮನೆಮಾಡುತ್ತಿತ್ತು, ವೇಗದಿಂದ ಹೆಚ್ಚುತ್ತಿತ್ತು. ಹೆಚ್ಚಿದ ಮೇಲೆ ಯಾವ ಔಷಧಕ್ಕೂ ಹಣಿಯುತ್ತಿರಲಿಲ್ಲ. ಮೇಲಾಗಿ ಕ್ವಿನಾಯಿನಿನ ಕೊರತೆ, ಆಡಳಿತದ ಅಸಹಕಾರ ಇಲ್ಲಪೆ ಉದಾಸೀನತೆ. ಇದಿರುಗಾಳಿಯ ಕೂಡ ಕಾದಾಡುತ್ತ ಮುಂದೆ ಸಾಗಿದಂತೆ ಸಾಧ್ಯವಾದಷ್ಟು ಸೇವೆ ಮಾಡಬೇಕಾಗುತ್ತಿತ್ತು. ಆದರೂ ಅಮೃತನು ಎದೆಗುಂದಲಿಲ್ಲ. ತನ್ನ ಆರೋಗ್ಯವನ್ನು ಕಡೆಗಣಿಸಿ ಬೆಳಗಿನಿಂದ ಸಂಜೆಯವರೆಗೆ ದುಡಿಯುತ್ತಿದ್ದನು. ಒಮ್ಮೊಮ್ಮೆ ರಾತ್ರಿ ನಿದ್ದೆಗೂ ಹೊರತಾಗಬೇಕಾಗುತ್ತಿತ್ತು. ಆಗಾಗ ವೀಣೆ ಅವನಿಗೆ ಹೇಳುತ್ತಿದ್ದಳು : 'ಇಷ್ಟು ಶ್ರಮ ತಗೊಳ್ಳಬೇಡ, ಅಮೃತ್. ಜೀವಕ್ಕೆ ಏನಾದರೂ ಮಾಡಿಕೊಂಡೀ. ನೀ ನೆಟ್ಟಗಿದ್ದರೇ ನಿನ್ನಿಂದ ಆಗುವ ಕಾರ್ಯ ನೆಟ್ಟಗಾಗುವದಲ್ಲವೇ ? ಉಳಿದವರನ್ನು ನೋಡು, ಹೇಗೆ ಮಿತಿಯಿಂದ ಕೆಲಸ ಮಾಡುತ್ತಾರೆ.' ಅಮೃತ ಅದಕ್ಕೆ ಉತ್ತರ ಕೊಡುತ್ತಿದ್ದನು : 'ನೀ ಹೇಳುವದೆಲ್ಲ ಸರಿ. ನಮ್ಮ ಆರೋಗ್ಯವನ್ನು ನೆಟ್ಟಗೆ ಇಟಗೊಳ್ಳುವದೇ ಉದ್ದೇಶವಾಗಿದ್ದರೆ ಇಲ್ಲಿಗೇಕೆ ಬರಬೇಕು ? ವೀಣಾ, ನಾನೇನು ಬೇಕೆಂದು ಹೆಚ್ಚು ದುಡಿಯುತ್ತೇನೆಯೆ ? ಕೆಲಸವೇ ಗುಡ್ಡದಷ್ಟು ಇರುತ್ತದೆ. ಅದನ್ನು ಆಕ್ಷಣ ಮಾಡಲೇಬೇಕು. ಹೊತ್ತಿಗೆ ಸರಿಯಾಗಿ ಔಷಧ, ಚುಚ್ಚುವದು ಆಹಾರ ಇವಲ್ಲದೆ ನಾಲ್ಕು ಸಮಾಧಾನದ ಮಾತು ಇಷ್ಟೆಲ್ಲ ಮಾಡದಿದ್ದರೆ ಈ ಜನ ಕೈಬಿಡುವುದು ಖಂಡಿತ. ನಮ್ಮ ಕಣ್ಣೆದಿರಿಗೇ ಸಾವು ತನ್ನ ಪಾಶ ಬಿಗಿಯುತ್ತಿರುವದನ್ನು ನೋಡುತ್ತ ಕೂಡಬೇಕೆ ? ನಿನಗೇನು ಗೊತ್ತಿಲ್ಲದ ವಿಷಯವೇ?' ವೀಣೆಗೆ ಅಮೃತನ ಮಾತಿನಿಂದ ಏಳೆಂಟು ತಿಂಗಳ ಹಿಂದಿನ ಸಂಗತಿಗಳೆಲ್ಲ ನೆನವಿಗೆ ಬಂದವು. ಅದೇ ಸ್ಥಳದಲ್ಲಿ ಅಲ್ಲವೇ ಅಮೃತನು ಕಳಕಳಿಯಿಂದ ಅವಳ ಆರೈಕೆ ಮಾಡಿ ಮಲೇರಿಯ ಬೇನೆಯಿಂದ ಅವಳನ್ನು ಮುಕ್ತ ಮಾಡಿದ್ದು, ಸಮಾಧಾನದ ಮಾತುಗಳಿಂದ ಅಂತಃಕರಣಕ್ಕೆ ನೀರೆರೆದದ್ದು. ಕೂಡಲೆ ಅವಳ ಕಣ್ಣಲ್ಲಿ ಹನಿತುಂಬಿತು. ಒಂದೆರಡು ಗಲ್ಲದ ಮೇಲೆ ಉರುಳಿದವು. 'ಇದೇನು ವೀಣಾ

ಹೊತ್ತಿಲ್ಲದ ಹೊತ್ತಿನಲ್ಲಿ ಮಳೆ?' ಎಂದು ಅಮೃತ ನಗೆಚಾಟಿಕೆಯಲ್ಲಿ ಅಂದನು. ಏನು ಹೇಳಬೇಕು ತಿಳಿಯದೆ 'ಏನಿಲ್ಲ. ಏನೋ ನೆನಪಾಯಿತು' ಎಂದು ವೀಣೆ ಮುಗಿಸಿದಳು. ಅವಳ ಸುಪ್ತ ಆಕಾಂಕ್ಷೆ ಜಾಗೃತವಾಯಿತು. ತಾನೆಷ್ಟು ದಿನ ಬರೀ ನರ್ಸಿನಂತೆ ಗುರುತಿನವಳಂತೆ ಅಮೃತನೊಡನೆ ಇರಬೇಕು? ಅವನೊಡನೆ ಏಕಜೀವವಾಗಿರುವಾಗ ಪ್ರೀತಿಯ ಪೂರ್ತತೆಯನ್ನೇಕೆ ಬಯಸ ಬಾರದು? ಅಲ್ಲದೇ ಹೀಗೇ ಇದ್ದರೆ ಜನರ ಅಪವಾದಕ್ಕೆ ಗುರಿಯಾಗಬಹು ದಲ್ಲವೇ? ಹೀಗೆಂದು ಅಮೃತನನ್ನು ಒಮ್ಮೆ ಕೇಳಿಬಿಡಬೇಕೆಂದಳು. ಇದೇ ಸಮಯವೆಂದು ಒಮ್ಮೆ ತೋರಿತು, ಆದರೆ ಹಿಂದೊಮ್ಮೆ ಆ ಮಾತು ತೆಗೆಯಬೇಡೆಂದಿರುವನು, 'ಈಗ ಬೇಡ' ಎಂದು ಸುಮ್ಮಗಾದಳು. ತನ್ನ ಹಿಂದಿನ ಪಾಡು ನೆನಪಾಗಿ ತಾಯಿ–ತಂದೆಯನ್ನು ಸ್ಮರಿಸಿ ಅವಳು ಅತ್ತಿರಬೇಕು ಎಂದು ಕಲ್ಪಿಸಿ ಅಮೃತನು ಅಲ್ಲಿಗೇ ಆ ವಿಷಯವನ್ನು ಬಿಟ್ಟನು. ಒಂದು ಕಾಲಕ್ಕೆ ಅವನನ್ನು ಮೀರಿ ಅವಳ ಬಗ್ಗೆ ಪ್ರಣಯದ ಉದಯ ಅವನಲ್ಲಿ ಆಗಿತ್ತು. ಆದರೆ ಅವನ ಮದುವೆ ಅದನ್ನೆಲ್ಲ ಹಿನ್ನೆಲೆಗೆ ನೂಕಿಬಿಟ್ಟಿತ್ತು. ಮದುವೆಯಲ್ಲಿ ಆದ ಆಶಾಭಂಗದಿಂದ ವೀಣೆಯ ಕಡೆಗೆ ಅವನ ಮನಸ್ಸು ಆಗಾಗ ಧಾವಿಸುವ ಹವ್ಯಾಸ ಮಾಡುತ್ತಿತ್ತು. ಆದರೆ ಅದೆಲ್ಲ ಮನಸ್ಸಿನ ಮಂಗಾಟ ಮಾತ್ರ. ಮದುವೆಯ ಕಟುಸತ್ಯದ ಮುಂದೆ ಬೇರೆ ಪ್ರಣಯಕ್ಕೆ ಎಡೆಯಿಲ್ಲ. ಈ ನಿರ್ಧಾರದಿಂದ ಕಲಕತ್ತೆಯಲ್ಲಾಗಲಿ ಇಲ್ಲಿಯಾಗಲಿ ತನ್ನ ಕಾರ್ಯದಲ್ಲಿ ಸಹಕಾರ ನೀಡುವ ತಂಗಿ ಎಂಬ ಸ್ನೇಹದಿಂದ ಅವಳನ್ನು ನೋಡುತ್ತಿದ್ದನು, ಅವಳ ಮಮತೆ ಯನ್ನು ಬರಮಾಡಿಕೊಳ್ಳುತ್ತಿದ್ದನು.

ಹತ್ತು ಹದಿನೈದು ದಿನಗಳಾದವು. ಅದೇಕೊ ಅಮೃತನಿಗೆ ಕೈಕೊಂಡ ಕೆಲಸದಿಂದ ಬಹಳ ದಣಿವು ಆಗಹತ್ತಿದೆ. ಊಟ ಹೋಗವೊಲ್ಲದು. ಎಲ್ಲಿಯಾ ದರೂ ಹಳ್ಳಿಗೆ ಹೋಗಿ ಸಂಜೆ ಬಂದನೆಂದರೆ ಕಾಲು ಹರಿಯುತ್ತಿದ್ದವು. ರಾತ್ರಿ ಯೆಲ್ಲ ನಿದ್ದೆಯಿಲ್ಲದೆ ಹೊರಳುತ್ತಿದ್ದನು. ಇಷ್ಟಾದರೂ ಕೆಲಸವನ್ನು ಬಿಡಲಿಲ್ಲ. ತನ್ನ ಬಳಿಯಲ್ಲಿದ್ದ ಔಷಧವನ್ನು ತಗೊಂಡು ಇದ್ದಬಿದ್ದ ತ್ರಾಣದಿಂದ ಕೆಲಸದಲ್ಲಿ ತೊಡಗುತ್ತಿದ್ದನು. ನಾಲ್ಕೈದು ದಿನವಾದ ಮೇಲೆ ಒಂದು ರಾತ್ರಿ ಅವನಿಗೆ ವಿಪರೀತ ನಡುಗು ಹುಟ್ಟಿಬಿಟ್ಟಿತು. ರಗ್ಗು ಹೊಚ್ಚಿಕೊಂಡು ಮಲಗಿಬಿಟ್ಟನು. ಮೈ ಗಡ ಗಡ ನಡುಗುತ್ತಿತ್ತು. ವೀಣೆ ಅಲ್ಲಿದ್ದ ಡಾಕ್ಟರ ಬಂಧುಗಳನ್ನು ಕರೆದು ತೋರಿಸಿದಳು. ಮಲೇರಿಯಾ ಎಂಬುದು ಸ್ಪಷ್ಟವಾಗಿತ್ತು. ಆರೈಕೆ ನಡೆಯಿತು.

ಸುದೈವದಿಂದ ಎರಡು ದಿನದಲ್ಲಿ ಎದ್ದು ಕೂತನು. 'ಭೂತವನ್ನು ಹೊಡಿದೋಡಿಸ ಹೋಗಿ ಅದನ್ನು ತನ್ನಲ್ಲಿಯೇ ಸೇರಿಸಿಕೊಂಡಂತೆ ಆಯಿತೇ' ಎಂದು ಅಮೃತ ಹೆದರಿದ್ದನು. ಆದರೆ ಅದು ಅಷ್ಟರಪೂರ್ತಿ ಇರಬಹುದೆಂದು ಈಗ ಅನಿಸಿತು. ಜ್ವರ ನಿಂತಮೇಲೆಯೂ ನಿತ್ರಾಣವಿತ್ತು. ಅದಕ್ಕೆ ಉಪಾಯಮಾಡಿಕೊಂಡು ಅವನು ದಿನಚರಿಯಲ್ಲಿ ಮಗ್ನನಾದನು. 'ಇಷ್ಟು ಬೇಗ ಕೆಲಸಕ್ಕೆ ಕೈಹಚ್ಚುವುದು ಬೇಡ, ಏಳೆಂಟು ದಿನ ವಿಶ್ರಾಂತಿ ತಗೋ' ಎಂದು ವೀಣೆ ಬೇಕಾದಷ್ಟು ಹೇಳಿದಳು. ಅವನೇನು ಕೇಳಲಿಲ್ಲ. ಸ್ವಾಮಿಜಿಯವರ ಪ್ರಭಾವದಿಂದ ಅವನಲ್ಲಿ ಹೊಕ್ಕ ಸೇವೆಯ ಆವೇಶವು ಅಷ್ಟು ಅದ್ಭುತವಾಗಿತ್ತು.

ಒಂದು ದಿನ ಹಳ್ಳಿಯ ಸಂಚಾರ ಮುಗಿಸಿಕೊಂಡು ಅಮೃತ-ವೀಣೆ ಒಂದು ನದಿಯುಗುಂಟ ಕಾಲೆಳೆಯುತ್ತ ನಡೆದಿದ್ದರು. ಇಬ್ಬರಿಗೂ ಆಯಾಸ ವಾಗಿತ್ತು. ಸೂರ್ಯನು ಕೆಳಗೆ ಇಳಿದಿದ್ದನು. ವಸತಿಯನ್ನು ಸೇರಲು ಇನ್ನೂ ಎರಡು ಮೈಲು ನಡೆಯುವದಿತ್ತು. ತಂತಮ್ಮ ದಣಿವನ್ನು ಮುಚ್ಚಿಕೊಂಡು ಏನೇನೋ ಹರಟುತ್ತ ಇಬ್ಬರೂ ನಡೆದಿದ್ದರು. ಆದರೆ ಅಮೃತನಿಗೆ ಮಾತ್ರ ಹೊಟ್ಟೆಯಲ್ಲಿ ಒಂದು ತರದ ಸಂಕಟವಾಗುತ್ತಿತ್ತು, ತಲೆ ತಿರುಗುತ್ತಿತ್ತು. ಮನೆ ಕಂಡಮೇಲೆ ಉಪಚಾರ ಮಾಡಿಕೊಳ್ಳೋಣ ಎಂದವನು ತಡಕೊಳ್ಳುವ ಯತ್ನ ಮಾಡಿದನು. ಆದರದು ನಿಲ್ಲಲಿಲ್ಲ. ನಾಲ್ಕೆಂಟು ಹೆಜ್ಜೆ ಇಡುವುದರಲ್ಲಿ ಕಣ್ಣು ಕತ್ತಲೆಗಡಸಿ ಜೋಲಿ ಹೊಡೆಯುತ್ತ ಒಮ್ಮೆಲೆ ಅವನು ನೆಲಕ್ಕೆ ಬಿದ್ದನು. ವೀಣೆ ಗಾಬರಿಯಾಗಿ 'ಏನಾಯ್ತು ಅಮೃತ್ ?' ಎಂದು ಹತ್ತಿರಹೋಗಿ ಕುಳಿತು ತೊಡೆಯಮೇಲೆ ಅವನನ್ನು ಮಲಗಿಸಿಕೊಂಡು ತಲೆಯಮೇಲೆ ಕೈಯಾಡಿಸಿದಳು. ಅವನಿಗೆ ಎಚ್ಚರವೇ ಇರಲಿಲ್ಲ. ಅವಳು ಕಂಗೆಟ್ಟು ಕಸಿವಿಸಿಗೊಂಡಳು. ಸುತ್ತಾ ರನ್ನೂ ನೆರವಿಗೆ ಕರೆಯುವಂತಿಲ್ಲ. ತಾನೇ ಧೈರ್ಯದಿಂದ ನದಿಯ ನೀರಲ್ಲಿ ಕರವಸ್ತ್ರವನ್ನು ಅದ್ದಿ ತಂದು ಅವನ ತಲೆಗೆ ನೀರು ಬಡಿದಳು. ಎರಡು ಮೂರು ನಿಮಿಷದಲ್ಲಿ ಅವನು ಕಣ್ಣು ತೆರೆದನು, ಅವಳಿಗೆ ಹಾಯೆನಿಸಿತು. ಬೆವತು ರಾಡಿ ಯಾದ ಅವನ ಮೈಯನ್ನು ಒರಸಿದಳು. ಆಮೇಲೆ ಅವನು ಎದ್ದು ಕೂತನು. 'ಈಗ ಹಗುರಾಯಿತು' ಅಂದನು.

'ಏನಾಗಿತ್ತು ?'

'ಏನೋ ನಿತ್ರಾಣದಿಂದ ತಲೆತಿರುಗಿ ಬೀಳುವಂತಾಯಿತು. ನಡೆ ಇನ್ನು, ಎಲ್ಲ ಹೋಯಿತು.'

'ಇಷ್ಟು ಬೇಗ ಹೊರಡುವದು ಬೇಡ. ಇನ್ನಿಷ್ಟು ಕೂತುಕೋ.'

'ನನಗೇನಾಗಿದೆ, ಮನೆಗೆ ಹೋಗಿಯೆ ಕೂಡುವುದು' ಎಂದು ಅಮೃತ ನಡೆಯಹತ್ತಿದನು. ಮತ್ತೆಲ್ಲಿ ಏನಾಗುವುದೋ ಎಂದವಳಿಗೆ ಹೆದರಿಕೆ. ನೀರು ಕುಡಿಯಬೇಕಾಗಿದೆ ಎಂದವನು ನದಿಯ ಕಡೆ ಹೊರಟನು. ವೀಣೆ ಕೈಹಿಡಿದು ಕರೆದೊಯ್ದಳು. ಒಂದು ದಂಡೆಗಲ್ಲಿನ ಮೇಲೆ ಕುಳಿತು ನೀರು ಕುಡಿದನು, ಆರಾಮವೆನಿಸಿತು. ಇಬ್ಬರೂ ಅಲ್ಲಿಯೇ ಕೆಲಹೊತ್ತು ನೀರಲ್ಲಿ ಕಾಲು ಬಿಟ್ಟು ಕೂತರು. ಮುಳುಗುವ ಸೂರ್ಯನ ಕಿರಣಗಳು ನೀರ ಮೇಲೆ ಕೆಂಬಣ್ಣದ ತಳಿಹಾಕಿ ತೊಳಗುತ್ತಿದ್ದವು. ಆಗ ವೀಣೆ ಅಂದಳು : ಅಮೃತ್, ನಿನ್ನ ಅಶಕ್ತತೆ ಹೆಚ್ಚುತ್ತ ನಡೆದಿರುವದು. ಸ್ವಾಮಿಜಿಗೆ ತಿಳಿಸಿ ನೀ ಕೆಲವುದಿನ ವಿಶ್ರಾಂತಿ ಪಡೆಯಬೇಕಲ್ಲವೇ ? ಹೀಗಾದರೆ ಹೇಗೆ ? ಕೆಲಸವೂ ಆಗದು, ನಿನಗೂ ಹಿತವಲ್ಲ.'

'ವಿಶ್ರಾಂತಿ ? ವೀಣಾ, ವಿಶ್ರಾಂತಿ ಪಡೆಯಲು ನನಗೇನಾಗಿದೆ ? ಇಷ್ಟಕ್ಕೆ ಹೆದರಿದರೆ ಡಾಕ್ಟರ ಏಕೆ ಆಗಬೇಕು ?'

'ಹಾಗಲ್ಲ ಅಮೃತ್. ಒಮ್ಮೆ ನಿನಗೆ ಜ್ವರ ಬಂದು ಹೋದವು.ಅಂದಿನಿಂದ ನಿನ್ನ ನಿತ್ರಾಣ ಹೆಚ್ಚಿದೆ. ಈವತ್ತು ಅದರದೇ ಪರಿಣಾಮವಿರಬೇಕು. ನೋಡು, ಇಲ್ಲಿಯ ಹವೆ ದೂಷಿತವೆಂಬುದು ನಿನಗೆ ಗೊತ್ತು. ಏನಾದರೂ ಗಂಟುಬಿದ್ದರೆ ನಿನ್ನ ಗತಿಯೇನು ? ನಿನಗೆ ಮಾಡುವವರು ಯಾರು ?'

'ಯಾಕೆ ನೀನಿರುವೆಯಲ್ಲ ? ಸ್ವಾಮಿಜಿಗೆ ಮುದ್ದಾಂ ಹೇಳಿ ಈ ಡಾಕ್ಟರನ ಜತೆಗೆ ನರ್ಸ್ ಆಗಿ ಬಂದವಳು !' ತುಸು ನಗುತ್ತಲೇ ಅಮೃತ ಆಡಿದನು.

'ನಾನಿದ್ದೇನೆ, ಇಲ್ಲವೆಂದು ಯಾರು ಅನ್ನುತ್ತಾರೆ ? ನಿನ್ನ ಸಲುವಾಗಿ ಬೇಕಾದ್ದು ಮಾಡಲು ನಾ ಸಿದ್ಧಳಿದ್ದೇನೆ, ಅಮೃತ್. ಆದರೆ...' ವೀಣೆ ಇಲ್ಲಿಗೆ ತಡೆದಳು. ಇವಳು ಬಹಳ ದಿನದಿಂದ ಕೇಳಬೇಕೆಂದ ಮಾತಿಗೆ ಈಗ ಅವಕಾಶ ದೊರೆಯಿತೆಂದು ಆವಳಿಗೆ ಸಮಾಧಾನವಾದರೂ ಕೇಳುವ ಪ್ರಸಂಗ ಬರಲು ಬಹಳ ಸಂಕೋಚವುಂಟಾಯಿತು.

'ಆದರೆ ? ಆದರೆ ಏನು ? ನೀನೂ ಬೇಸತ್ತು ಹೋಗುವವಳೇನು? ಹೋಗಿ ಬಿಡು. ಯಾರಾದರೂ ನೋಡಿಕೊಳ್ಳಬಹುದು.'

'ಅದಲ್ಲ ಅಮೃತ್ ನಾ ಹೇಳಿದ್ದು. ನಾ ಎಲ್ಲಿಗೆ ಹೋಗತೇನೆ ? ನನಗೆ

ನಿನ್ನ ಹೊರತು ಬಂಧುಗಳು ಯಾರಿದ್ದಾರೆ ?'

'ಅಂದಮೇಲಾಯಿತು. ಭಯವೇತಕ್ಕೆ ?'

ಅಮೃತನಿಗೆ ಅವಳ ಸೂಚಕ ಅರ್ಥವಿರಾಮಗಳ ಅರ್ಥವಿನ್ನೂ ಆಗಿರಲಿಲ್ಲ. ವೀಣೆ ನೀರಲ್ಲಿ ಕಾಲಾಡಿಸುತ್ತ ಬೊಗಸೆಗೈಯಿಂದ ನೀರೆತ್ತಿ ಚೆಲ್ಲುತ್ತ ಒಮ್ಮೆ ಅವನ ಕಡೆಗೆ ಕಡೆಗಣ್ಣಿನಿಂದ, ಅವನದನ್ನು ನೋಡಿದೊಡನೆ ನೋಟ ತಪ್ಪಿಸಿ ಮುಗುಳುನಕ್ಕು ಇನ್ನೊಮ್ಮೆ ನೀರಿನ ಪ್ರವಾಹದ ಕಡೆಗೆ ನೋಡುತ್ತ ಮೌನ ವಾಗಿ ಕುಳಿತಳು. ಈಗ ಅಮೃತನಿಗೆ ಅವಳ ಭಾವ ಏನಿರಬಹುದೆಂಬುದರ ಅಸ್ಪಷ್ಟ ಅರಿವು ಒದವಿತು. ಆದರೆ ಅದಿಲ್ಲದೆಯೂ ಇರಬಹುದು ಎಂದವನು ಸುಮ್ಮನೆ ಕುಳಿತನು. ವೀಣೆಯೆ ಕಡೆಗೆ ತುಟಿಬಿಚ್ಚಿದಳು : ಅಮೃತ್, ನೀ ಜನದ ಸೇವೆಯನ್ನು ಮಾಡುವಾಗ ನಿನ್ನ ನೆರವಾಗುವದಕ್ಕಿಂತ ನನಗೆ ಜಗತ್ತಿ ನಲ್ಲಿ ಬೇರೆ ಸುಖವಿಲ್ಲ. ನಿನ್ನ ಸೇವೆಯನ್ನೂ ನಾನು ಮಾಡಬಲ್ಲೆ. ಆದರೆ ತಪ್ಪು ತಿಳಿಯಬೇಡ. ನನಗೆ ಅದೆಷ್ಟೋ ಸಲ ಸಂಕೋಚವೆನಿಸುತ್ತದೆ. ಎದೆದುಂಬಿ ಬಂದರೂ ಕೈಹಿಂಜರಿಯುತ್ತದೆ.' ಎಂದವಳು ಎಡಗೈಯಿಂದ ಜೋಲುದುರು ಬನ್ನು ಸಂವರಿಸುತ್ತ ತನ್ನೆದೆಯ ಕಡೆ ನೋಡಿದಳು. ವಯಸ್ಸಿಗೆ ಬಂದ ಪ್ರೌಢ ಯುವತಿಯೆಂಬುದನ್ನು ಆ ಠೀವಿ ಸೂಚಿಸುವಂತಿತ್ತು.

ಅಮೃತನಿಗೆ ಅವಳ ಮನೋಗತವೀಗ ತಿಳಿಯಿತು. ಆದರೂ ಅದನ್ನು ತೋರಗೊಡದೆ 'ವೀಣಾ, ತಂಗಿಯಾದವಳಿಗೆ ಸಂಕೋಚವೇಕೆ ?' ಎಂದನು.

ಅವಳು ಹುಬ್ಬುಗಂಟಿಕ್ಕಿ ಕೂಡಲೆ 'ತಂಗಿ, ಹೌದು.' ಎಂದು ಪ್ರತಿಯಕ್ಷರ ವನ್ನು ತನ್ನ ಕೋಪದ ಕೆಳಗೆ ಹಾಕಿ ತುಳಿದಂತೆ ಒತ್ತಿ ಉಚ್ಚರಿಸಿದಳು.

ಅಂದರೆ ನೀನನ್ನುವದಾದರೂ ಏನು ?' ಅವಳಿಂದ ಅಂತರಂಗವನ್ನು ಹೊರಪಡಿಸಬೇಕೆಂದು ಅಮೃತ ಕೇಳಿದನು.

'ಏನೆಂದು ಹೇಳಲಿಯೆ ? ಸಿಟ್ಟಾಗಬೇಡ, ಅಮೃತ್. ಬಹಳದಿನದಿಂದ ನನ್ನೆದೆಯಲ್ಲಿ ಕುದಿಯುವ ಆಸೆಯಿದು' ಎಂದು ಅವನ ತೀರ ಹತ್ತಿರ ಸರಿದು ಅವನ ಕೈಯನ್ನು ತನ್ನ ಕೈಯಲ್ಲಿ ತಗೊಂಡು ಗಟ್ಟಿಯಾಗಿ ಹಿಡಿದಳು. ಅವಳಿಗೆ ಅದೆಷ್ಟು ಸುಖವಾಯಿತು ! ಹಾಗೇ ಆ ಸುಖಾನುಭವದಲ್ಲಿ ಅನಂತಕಾಲದವರೆಗೆ ಕೂಡಬೇಕೆನಿಸಿತು ಅವಳಿಗೆ. 'ಅಮೃತ್, ಏನು ಹೇಳಲಿ ? ನಿನಗೆ ಗೊತ್ತೇ ಇರುವದು. ನಿನ್ನೂರಿಗೆ ನಾನು ಬಂದಾಗ ಅಂದು ಸಂಜೆ ನದಿಯ ದಂಡೆಗೆ ಹೋಗಿ ಕೂತಿದ್ದೆವಲ್ಲ, ಆಗ ನಾನು ಹೇಳಿದ್ದೆನಲ್ಲ ಅದನ್ನೇ ಪ್ರತಿಕ್ಷಣವೂ

ನನ್ನ ಜೀವ ಬಯಸುತ್ತಿರುವದು. ನಿನ್ನನ್ನು ಬಿಟ್ಟು ನಾಸಿರಲಾರೆ. ಜನ್ಮದ ಗೆಳತಿಯಾಗಿ ಮಾಡಿಕೊಂಡು ನನ್ನ ಸೇವೆಯನ್ನು ತೆಗೆದುಕೋ. ಇದೇ ನನ್ನ ಕೇಳಿಕೆ.'

ಅಮೃತನ ಮೈ ನಡುಗಿತು, ಮುಖ ಇಳಿಯಿತು. ಅವಳ ಕೈಯ ಹಿಡಿತದಿಂದ ಕೊಸರಿಕೊಳ್ಳಬೇಕೆಂದನು, ಆಗಲಿಲ್ಲ. ದಾರುಣ ಸತ್ಯವನ್ನು ಹೇಳುವ ಸಮಯ ಬಂತು, ಆದರೆ ಹೇಗೆ ಹೇಳುವುದು ? ಹೇಳಿದೊಡನೆ ಈ ಜೀವದ ಹೂವು ಕೂತಲ್ಲಿಯೇ ಕಮರಿ ಹೋದೀತು. ಹೀಗಾಗಿ ಏನನ್ನಬೇಕೆಂಬುದರ ನಿರ್ಧಾರವಾಗದೆ ಅವಳನ್ನು ನೋಡುತ್ತ ಬಿಮ್ಮಗೆ ಕೊತನು. ವೀಣೆಯ ನಿರೀಕ್ಷೆ ಹೆಚ್ಚಿತು. ಸಂಜೆಯ ಕತ್ತಲೆಯೂ ಹೆಚ್ಚಿತು.

'ನಾನು ಬೇಡವಾಗಿದ್ದರೆ ಹೇಳಿಬಿಡು, ಅಮೃತ್.' ವೀಣೆ ಮತ್ತೆ ಕೇಳಿದಳು.

'ವೀಣಾ, ಏನು ಹೇಳಲಿ ? ಇಷ್ಟು ದಿನ ನಿನಗೆ ಹೇಳಲಿಲ್ಲ. ಈಗ ಹೇಳಿದರೆ ಕ್ಷಮಿಸುವಿಯ ?'

'ಅದೇನು ? ತಡವಾದರೆ ತಪ್ಪೇನು ? ನಾವಿಬ್ಬರೂ ಕೂಡಿ ಬಾಳುವ ಯೋಗವಿಲ್ಲವೇ ?'

'ನಾವು ಕೂಡುವುದು ಈ ಜನ್ಮದಲ್ಲಿ ಸಾಧ್ಯವೇ ಇಲ್ಲ, ವೀಣಾ.'

'ಯಾಕೆ ? ಮನೆಯವರು ಒಪ್ಪುವದಿಲ್ಲವೇ ? ಅವರೊಪ್ಪದಿದ್ದರೂ ನೀನೊಪ್ಪಲಾರಿಯ ?'

'ವೀಣಾ, ನನಗೊಬ್ಬ 'ಮನೆಯವರು' ಬಂದುಬಿಟ್ಟಿದ್ದಾರೆ. ನನ್ನ ಮದುವೆಯಾಗಿ ಹೋಗಿದೆ!'

ಇದನ್ನು ಕೇಳಿದೊಡನೆ ವೀಣೆ ಬೆಚ್ಚಿಬಿದ್ದು ಕೈಹಿಡಿತವನ್ನು ಬಿಟ್ಟು ಹಿಂದೆ ಸರಿದು ಶೋಕದ ಮಡುವಿನಲ್ಲಿ ಮುಳುಗಿದಳು. 'ಅಮೃತ್, ಅಮೃತ್' ಎಂದು ಅಳುದನಿಯಲ್ಲಿ ಬಡಬಡಿಸುತ್ತ ಕೂತಳು.

'ಹಾಗೆ ಮಾಡಬೇಡ, ವೀಣಾ. ನನ್ನ ಪ್ರೀತಿ ಎಂದಿಗೂ ಕಡಿಮೆಯಾಗದು. ಮದುವೆ ಆಗದಿದ್ದರೆ ಏನಾಯಿತು ?' ಎಂದು ಅಮೃತ ಸಮಾಧಾನ ಹೇಳತೊಡಗಿದನು. ಅವಳು ಆ ಮಾತನ್ನು ತಿಳಿದುಕೊಳ್ಳುವ ಮನಃಸ್ಥಿತಿಯನ್ನು ಕಳಕೊಂಡಿದ್ದಳು. ಅಲ್ಲಿಂದ ಅವಳು ತಟ್ಟನೆ ಎದ್ದುನಿಂತಳು, ನದಿಯ ಕಡೆಗೆ ನೋಡಿದಳು. 'ನನ್ನ ಆಯುಷ್ಯ ಹಾಳಾಯಿತು. ಎಲ್ಲಾ ವ್ಯರ್ಥ' ಎಂದು

ಗುಣುಗುಟ್ಟಿದಳು, 'ಈ ನೀರೇ ನನಗಿನ್ನು ಗತಿ' ಎಂದು ಒದರಿಕೊಂಡಳು.

'ಹಾಗೆಲ್ಲಾ ಆಡಬಾರದು ನಡೆ' ಎಂದು ಅಮೃತ ತಾನೂ ಎದ್ದು ಅವಳ ಕೈಹಿಡಿದು ಮೇಲೆ ಕರೆತಂದನು. ದಾರಿ ನಡೆಯುತ್ತ ಕೆಲವು ಸಾಂತ್ವನದ ಮಾತನ್ನು ಹೇಳಿದನು, ತಾನು ಯಾವ ಪರಿಸ್ಥಿತಿಯಲ್ಲಿ ಮದುವೆಯಾಗಬೇಕಾಯಿತೆಂಬುದನ್ನು ತಿಳಿಸಿದನು. ಆದರೆ ಅವಳಿಗಾದ ತೀವ್ರ ಆಘಾತವನ್ನು ಅವನು ಹೇಗೆ ಕಳೆಯಬಲ್ಲನು ? ಆದರೂ ಹೇಗೋ ಸರಿಪಡಿಸಿ ಬಿಡಾರಕ್ಕೆ ಕರಕೊಂಡು ಹೋದನು.

ಅಂದಿನಿಂದ ವೀಣೆಯ ಉತ್ಸಾಹ ಜರ್ರನೆ ಇಳಿದಂತಾಗಿಬಿಟ್ಟಿತು. ಅವಳು ಜುಕ್ಕಜುಲುಮೆಯಿಂದ ಯಂತ್ರದಂತೆ ಕೆಲಸ ಮಾಡುತ್ತಿದ್ದಳು. ತಾನು ನಿಲ್ಲಿಸಿದ ಸ್ವಪ್ನಮಂದಿರವು ನೆಲಸಮವಾಯಿತೆಂದು ಅತ್ಯಂತ ನಿರಾಶೆಯಲ್ಲಿ ಮುಳುಗೇಳುತ್ತಿದ್ದಳು. ಅವಳ ಸಹಜವಾದ ನಗೆಚಾಟಿಕೆ, ಹುರಿದುಂಬಿಸುವ ನುಡಿಗಾರಿಕೆ, ಮೋರೆಯ ಕುಲುಕುಲು ಇವುಗಳನ್ನು ಪಡೆಯದೆ ಮೊದಲೇ ಅಶಕ್ತನಾಗಿದ್ದ ಅಮೃತನು ತನ್ನ ಕಾರ್ಯದಲ್ಲಿ ಆಸಕ್ತಿಯನ್ನು ತಳೆಯದಂತಾದನು. ಇಂಥ ಹೊತ್ತಿಗೆ ಡಿಸೆಂಬರ ತಿಂಗಳ ಮೊದಲಲ್ಲಿ ಅವನಿಗೆ ಊರಿಂದ ಮತ್ತೊಂದು ಪತ್ರದ ದಾಳಿ ಬಂದಿತು. ಈ ಸಲದ ದಾಳಿಯಲ್ಲಿ ಯಾವ ಯಾವ ಹೊಸ ಅಸ್ತ್ರಗಳನ್ನು ಪ್ರಯೋಗಿಸಿರುವರೋ ಎಂದು ಬೆಗಡಾದನು. ಮಾವಂದಿರಾದ ಮಾಧವರಾಯರೂ ಜೋರಾದ ವಕೀಲಿ ಥಾಟಿನ ಪತ್ರವನ್ನೇ ಬರೆದಿದ್ದರು. ಅವನು ಮದುವೆಯ ಕರಾರುಪತ್ರವನ್ನು ಭಂಗಮಾಡಿದನೆಂದು ಅವರು ಆರೋಪ ಮಾಡಿದ್ದರು. ವರದಕ್ಷಿಣೆಯಾಗಿ ಅವರಿಂದ ಪಡೆದ ದ್ರವ್ಯದಿಂದ ವಿದ್ಯಾಭ್ಯಾಸ ತೀರಿಸಿ ಮುಂದೆ ಡಾಕ್ಟರನಾಗಲು ಒಪ್ಪಿದವನು ಈಗ ದೇಶಸೇವೆಯ ಉಪದ್ವ್ಯಾಪಕ್ಕೆ ಕೈಹಾಕಿದ್ದು ವಿಶ್ವಾಸಭಂಗವಲ್ಲವೇ ? ಅವರು ಇನ್ನೂ ಮುಂದೆ ಹೋಗಿ ಎಂಟು ದಿನದ 'ನೋಟೀಸ' ಬೇರೆ ಕೊಟ್ಟಿದ್ದರು. 'ಅಗ್ನಿ ಸಾಕ್ಷಿಯಾಗಿ ನಮ್ಮ ಮಗಳನ್ನು ಮದುವೆ ಮಾಡಿಕೊಂಡಿರುವಿ. ಅವಳೊಡನೆ ಸಂಸಾರ ಮಾಡಲು ಬದ್ಧನಾಗಿರುವಿ. ಈ ಪತ್ರ ಮುಟ್ಟಿದೊಡನೆ ಬಂದು ಅವಳನ್ನು ಕರಕೊಂಡು ಹೋಗಬೇಕು, ಇಲ್ಲವಾದರೆ ಎಂಟು ದಿನದ ಮೇಲೆ ನಾವೇ ಬಂದು ಬಿಟ್ಟು ಹೋಗಬೇಕಾದೀತು.' ಎಂಥ ಬೆದರಿಕೆ ಇದು ! ಅಮೃತನಿಗೆ ಅತ್ಯಂತ ವೇದನೆಯಾಯಿತು. ವಕೀಲರ ಮಗಳನ್ನು ಮದುವೆಯಾದದ್ದು ಎಷ್ಟು ಕಾಯದೇಶೀರ ಆಗಿ ಪರಿಣಮಿಸಿತೆಂಬುದನ್ನು ಈಗ ಅರಿತನು. ಶಂಭುರಾಯರ ಪತ್ರದಲ್ಲಿ ಎಂದಿ

ನಂತೆ ಮನೆಯಲ್ಲಿಯ ಸಂಸಾರದ ಗೋಳಾಟ, ಅವನ ದಾರಿ ನೋಡಿ ನೋಡಿ ಪಾರ್ವತಿಬಾಯಿ ಕೂಳು-ನೀರು ಬಿಟ್ಟು ನವೆಯುತ್ತಿರುವುದು, ಕೂಡಲೆ ಹೊರಟು ಬರಬೇಕೆಂಬ ಆದೇಶ, ಅವನ ಅವಿವೇಕಕ್ಕೆ ಬಯ್ಗಳ ಸುರಿಮಳೆ ಎಲ್ಲಾ ಇತ್ತು. ಮೊದಲೇ ನಿತ್ರಾಣದ ಕೈಯಲ್ಲಿ ಸಿಕ್ಕು ನುಗ್ಗುನುರಿಯಾದವನು ಈ ಪತ್ರವನ್ನೋದಿ ಇನ್ನಿಷ್ಟು ಹತಾಶನಾದನು. ತಾ ಬಂದದ್ದೇ ತಪ್ಪಾಯಿತು ಎಂಬ ಮನೋವೃತ್ತಿ ಮತ್ತೆ ತಲೆಯೆತ್ತಲೆಳಸಿತು. ಒಂದೆರಡು ದಿನ ಇದ್ದಲ್ಲಿಯೇ ಇದ್ದು ಜರೂರು ಬಿದ್ದಷ್ಟು ಕೆಲಸ ಮಾಡುತ್ತ ಏನೋ ಮಂಕುಹಿಡಿದವನಂತೆ ಆದನು. ವೀಣೆ ಅದನ್ನು ಗುರುತಿಸಿದಳು. ತನ್ನ ದುಃಖವನ್ನೂ ನುಂಗಿ 'ಏನಾಗಿದೆ ಅಮೃತ್, ಹೆಚ್ಚು ಅಶಕ್ತವೆನಿಸುವದೇ ?' ಬಹಳ ದಿನದ ಮೇಲೆ ಅವಳಿಂದ ಇಷ್ಟು ಸಲಿಗೆಯ ಮಾತು ಬಂದಿತ್ತು. ಇದರಿಂದ ಸಂತೋಷ ಪಡೆಯುವ ಭಾಗ್ಯ ಅವನಿಗಿರಲಿಲ್ಲ. ಅಂಥ ನೈರಾಶ್ಯ ಅವನನ್ನು ಮುಸುಕಿತ್ತು. ಮನೆಯಿಂದ ಪತ್ರ ಬಂದುದನ್ನು ಅವಳಿಗೆ ಹೇಳಿದನು, ತನ್ನ ಅಂತರಂಗವನ್ನು ತೋಡಿಕೊಂಡನು. ಅವಳು ಮೊದಲಿನಷ್ಟು ಹುರುಪಿನಿಂದಲ್ಲದಿದ್ದರೂ ತನ್ನ ಸುಸ್ವಭಾವದ ಬಲದಿಂದ ಅವನಿಗೆ ಸಮಾಧಾನ ಮಾಡಲು ಪ್ರಯತ್ನ ಮಾಡಿದಳು. ಈ ಪ್ರಯತ್ನದಲ್ಲಿಯೇ ಅವಳಲ್ಲಿ ಒಂದು ಹೊಸ ದೃಷ್ಟಿ ಹುಟ್ಟಿತು. ತನ್ನ ಪ್ರೀತಿ ಯಾರ ಬಗ್ಗೇ ಆಗಲಿ ಆಸೆಯಿಂದ ಕೂಡಿದ್ದಿರಬಾರದು. ಅಂದರೆ ಅದು ನಿಜವಾದ ಪ್ರೀತಿ, ನಿಜವಾದ ಸೇವೆ. ಅವನು ತನ್ನ ಅಪೇಕ್ಷೆಯನ್ನು ಪೂರ್ಣ ಮಾಡಲಿಲ್ಲ. ಅದಕ್ಕೆ ಅವನದಾದರೂ ದೋಷವೇನು ? ಪೂರ್ಣ ಮಾಡಲಿಲ್ಲವೆಂದು ಅವನ ಬಗ್ಗೆ ಉದಾಸೀನವಾಗಬೇಕೇ ? ಇದು ಸರಿಯಲ್ಲ. ಅವನು ತನಗೆ ಮಾಡಿದ ಉಪಕಾರಕ್ಕೆ ಆಜನ್ಮ ಅವನ ಸೇವೆ ಮಾಡಿದರೂ ಮುಗಿಯದು. ಈ ತಿಳಿವಳಿಕೆ ಅವಳಲ್ಲಿ ಮೊಳೆತೊಡನೆ ಎಂದಿಲ್ಲದ ಉಲ್ಲಾಸ ಅವಳಲ್ಲಿ ಮೆಲ್ಲಗೆ ಲಾಸ್ಯವಾಡಹತ್ತಿತು. ಇದನ್ನು ಅಮೃತ ಗುರುತಿಸಿದನು. ಏನು ಮಾಡಿದರೂ ಅವನ ನಿರ್ವಿಣ್ಣತೆ ಹೋಗಲಿಲ್ಲ. 'ನಿನ್ನಿಂದ ಈ ಸ್ಥಿತಿಯಲ್ಲಿ ಕೆಲಸವಾಗದು. ಸುಮ್ಮನೆ ಊರಿಗೆ ಹೋಗು. ಮೈಯಲ್ಲಿ ಬಲವಿಲ್ಲ, ಮನದಲ್ಲಿ ಹುರುಪಿಲ್ಲ' ಎಂದು ಅವನ ಈಗಿನ ವೃತ್ತಿ ಅವನಿಗೆ ತಿವಿತಿವಿದು ಹೇಳಹತ್ತಿತು. ಸ್ವಾಮಿಜಿಯವರ ಸಂದೇಶವನ್ನು ನೆನೆದು ಈ ಪರಾಭೂತ ವೃತ್ತಿಯನ್ನು ತೊಡೆದು ಹಾಕಲು ಅವನು ಹವಣಿಸಿದನು. ವಿವೇಕಾನಂದರ ಮೂರ್ತಿಯ ಇದಿರು ಕುಳಿತು ಸ್ಫೂರ್ತಿ ಪಡೆಯಲು ಯತ್ನಿಸಿದನು. ಇಷ್ಟಾದರೂ ಒಳನಟ್ಟು

ಹೋದ ಗ್ಲಾನಿ ಎರಡು ಮೂರು ದಿನಗಳವರೆಗೆ ಅವನನ್ನು ಹರಿದು ತಿನ್ನುತ್ತಿತ್ತು. ಒಂದು ಕಾಲಾವಧಿಯ ನಂತರ ತಪ್ಪದೆ ಕತ್ತಲೆ ಹರಿಯುವಂತೆ ಗ್ಲಾನಿಯೂ ಒಮ್ಮೊಮ್ಮೆ ಮಾಯವಾಗುವುದು. ಹಾಗೆ ಒಂದು ರಾತ್ರಿಯ ದೀರ್ಘ ನಿದ್ರೆಯ ನಂತರ ಬೆಳಗು ನಿಚ್ಚಳವಾದ ಮನವನ್ನು ಅವನಿಗೆ ನೀಡಿತು. ಅವನ ಮೊದಲಿನ ನಿರ್ಧಾರವೂ ಮನೋದಾರ್ಢ್ಯವೂ ಮರಳಿ ಹತ್ತಿರ ಬರಲಾರಂಭಿಸಿದವು. ನಿರಾಶೆಯ ವಿಚಾರಗಳನ್ನೆಲ್ಲ ಹೊಡೆದು ಹಾಕಿದನು. ವಕೀಲ ಮಾವಂದಿರಿಗೆ 'ನಿಮಗೆ ತೋರಿದಂತೆ ಮಾಡಬಹುದು.' ಎಂಬಾಶಯದ ಸಂಕ್ಷೇಪವಾದ ಉತ್ತರವನ್ನೂ ತಂದೆಯವರಿಗೆ ಆದಷ್ಟು ಸಮಾಧಾನ ಕೊಡುವ ಪತ್ರವನ್ನೂ ಬರೆಯಬೇಕೆಂದು ಆಲೋಚಿಸಿ ಹಾಸಿಗೆ ಬಿಟ್ಟಿದ್ದನು. ಅವನಲ್ಲಿ ಆದ ಬದಲಾವಣೆಯನ್ನು ಕಂಡು ವೀಣೆ ಸಂತಸಪಟ್ಟಳು. ಅದೇ ದಿನ ಅವನಿಗೆ ಕಲಕತ್ತೆಯಿಂದ ಕಳಿಸಲಾದ ಪತ್ರವೊಂದು ಬಂತು. ಅದನ್ನೊಡೆದು ನೋಡಲಾಗಿ ಅವನಿಗೆ ಹಿಂದೆ ಅಲೌಕಿಕ ಉತ್ಸಾಹವನ್ನೂ ಆನಂದವನ್ನೂ ಕೊಟ್ಟ 'ಪ್ರಸಾದ'ನ ಕವಿತೆಯೊಂದು ಅದರಲ್ಲಿ ಹೀಗೆ ಬರೆದದ್ದು ಇತ್ತು :

### ಅನ್ನ

'ಅನ್ನ ! ಅನ್ನ । ಕೊಟ್ಟರೆ ಚೆನ್ನ !
ಕೊಡದಿರೆ ನಾವೂ ನೀವೂ ಸಾವಿನ ಬಾಯಿಗೆ ಅನ್ನ । '
'ನಮಗಿಲ್ಲದೆ ನೀವುಣ್ಣುವ ತುತ್ತು
ನಮ್ಮೆಯ ವಿಷದುಸಿರಿನ ಹೆಬ್ಬಾವಿನ ಹುತ್ತು !' ೧

ಕೇಳುವ ಕಿವಿಗೇ ಕೇಳುವುದಿಂತು
ಬರಿಯೊಡಲಿನ ನಡೆವೆಣಗಳ ರೋಮರೋಮಗಳ ಮಾತು
ಕೇಳದ ಕಿವುಡರು ದೇವರೆ ಇದ್ದರು
ಬಡವರ ಪಾಲಿಗೆ ಕಮರಿದ ಕರುಳಿನ ಕಾಳ್ ರಕ್ಕಸರು ! ೨

ಅಯ್ಯೋ ವಿಗಡವೆ ! ಎಲ್ಲಾ ಜೀವವು
ಒಂದೇ ಆತ್ಮನ ನೆಲೆವನೆಯೆಂದೇ ಸಾರಿದ ದೇಶವು
ತಿನಲಿಲ್ಲದೆ ಸಾಯುವರನು ನೋಡುತ
ತಿನ್ನುವ ನಲಿಯುವ ನಾಲಿಗೆಗಳ ನೆಲೆಯಾಗದೆ ನರುತ್ತ ೩

'ನಮ್ಮಿಷ್ಟಕೆ ನಾವ್ ಬದುಕಿದರಾಯ್ತು
ಹೆರವರು ಇದ್ದರೆ ಇರಲಿ ಹೋದರೆ ಹೋಗಲಿ ಹೋಯ್ತು'
ಇದುವೇ ಇಂದಿನ ಜೀವನ ದರ್ಶನ
ತಂದಿದೆ ನಮ್ಮಯ ಜನತೆಗೆ ಮರಣದ ಭೀಕರ ದರುಶನ ೪
ಅನ್ನದ ಕೊರತೆಯೆ ಸಾವಿಗೆ ಕಾರಣ ?
ಹೃದಯದ ಒರತೆಯು ಒಸರದೆ ಇರುವುದೆ ನಾಡಿಗೆ ಮಾರಣ.
ಹಬ್ಬಕೆ ಹಾಳಿಗೆ ಇರುವುದು ಅನ್ನ
ಮಡಿವರ ಒಡಲಿನ ಕಿಚ್ಚನು ಆರಿಸೆ ಏನಿದೆ ಬನ್ನ । ೫
ಉಳ್ಳವನಿಗೆ ತಿನಲೆಲ್ಲಾ ಬೇಕು
ಇಂದಿಗೆ ನಾಳಿಗೆ ಮುಂದಿಗೆ ಮೋಜಿಗೆ ಕೂಡಿಡಬೇಕು.
ಉಳಿದವರಿಗೆ ಏನಾದರೆ ಏನು ?
ಅವರದು ಕರ್ಮ । ಸಿಗುವುದೆ ಎಲ್ಲರಿಗೂ ಸವಿಜೇನು ೬
ಹಿಮವತ್‌ಪರ್ವತದೆಲ್ಲಾ ಮಳೆಗಳೆ
ಅನ್ನದ ರಾಶಿಯೆ ಆಗಿಯೆ ನಮ್ಮನು ಇದಿರಿಸೆ ಈಗಳೆ
ಹೊಟ್ಟೆಯು ಬಿರಿತೂ ಸತ್ತರು ಸರಿಯೇ
ಎಲ್ಲಾ ನಮಗೇ ನಮ್ಮವರಿಗೆ ತಿನಲಲ್ಲವೆ ಸಿರಿಯೇ ? ೭
ಬಡವರ ಹರಣದ ಲೂಟಿಯ ಮಾಡಿ
ಕಳ್ಳಪೇಟೆಯ ಕುಬೇರರು ತಂದನ್ನವ ಮಾರಾಡಿ
ಹೆಣಗಳ ಬಣವೆಯ ರಂಗದ ಮೇಲೆ
ಹಣಗಳ ಕುಣಿತವ ಮಾಡಿಸಿ ಮಲೆವರು ತನುಮನ ಸೋಲೆ ೮
ಹಸಿವರ ಗೇಣೊಡಲಿನ ವಾಮನನು
ಸೊಕ್ಕೇರಿದ ಬಲಿರಾಜರ ತಲೆಮೆಟ್ಟಲು ಹೊರಟಿಹನು
ಮೂಲೋಕವ ಮೂರಡಿಯಲಿ ನುಂಗಿ
ಅನ್ನವ ಕೊಡದಿರೆ ಪ್ರಾಣದ ಬಲಿಯನು ಕೊಳ್ವನು ಹೊಂಗಿ ೯
ಅನ್ನವ ಹೆಚ್ಚಿಸಬೇಕೆಂಬುದು ಸರಿ
ಅದಕಿಂತಲು ಜನ ಹೃದಯದ ಮುಗಿಲನು ಹಿಗ್ಗಿಸುವುದು ಸರಿ.
ನಾಡಿನ ಬಿಡುಗಡೆ ಬಂದರೆ ಮುಗಿಯದು
ಹೃದಯದ ಸೆರೆಮನೆ ಬೇಡಿಯ ಕಳಚುತ ಹಿಗ್ಗುತ ಬರುವುದು ೧೦

ಅನ್ನ ! ಅನ್ನ ! ಹೃದಯದ ಅನ್ನ !
ಬೇಕಿಹುದಿಂದು ನಾಡಿನ ಬಾಳಿಗೆ ಗೈಯಲು ಚಿನ್ನ.
ಮಾಡುವುದಿದಕೇ ಹಗಲಿರುಳೂ ತನ್ನ
ದೇಹವ ತೆಯ್ದು ಎದೆಯನು ಕುದಿಸಿ ಮರಣಕೆ ಅನ್ನ ! ೧೧

—ಪ್ರಸಾದ

ಅಮೃತ ಈ ಕವಿತೆಯನ್ನು ಓದಿದನು, ಮತ್ತೆ ಓದಿದನು. ದೇಶದ ಅನ್ನ ಸಮಸ್ಯೆಯೆಲ್ಲ ಇದರಲ್ಲಿ ಮೈಗೊಂಡು ನಿಂತಂತೆ ತೋರಿತು. ಹಿಂದಿನಂತೆ ಪ್ರಸಾದನ ಕವಿತೆಯಲ್ಲಿಯ ಉತ್ಕಟ ಭಾವಾವೇಶ, ಉನ್ನತವಾದ ದೇಶಭಕ್ತಿ ಅವನನ್ನು ಮುಗ್ಧಗೊಳಿಸಿದುವು. ಬಹುಶಃ ಜೇಲಿನಿಂದ ಹೊರಬಿದ್ದು ಪ್ರಸಾದನು ನಾಡಿನ ತುಂಬೆಲ್ಲ ಗುಪ್ತಚಾರಿಯಾಗಿ ತಿರುಗಿರಬೇಕು, ಎಲ್ಲೆಲ್ಲಿಯೂ ಕಣ್ಣಿಗೆ ಬೀಳುವ ಅನ್ನಾನ್ನದಶೆಯನ್ನು ಕಂಡು ಮರುಗಿರಬೇಕು. ಪಡೆದ ಜನ ಪಡೆಯದವರ ಬಗೆಗೆ ತೋರುವ ನಿರ್ಲಕ್ಷ್ಯ, ಅಷ್ಟೇ ಏಕೆ ಅವರ ಹೊಟ್ಟೆಯ ಮೇಲೆ ಕಾಲು ಕೊಡುವಂಥ ನಿರ್ಲಜ್ಜ ನಡತೆಯನ್ನು ಅವನು ಅಡಿಗಡಿಗೆ ನೋಡಿರಬೇಕು. ಆ ಅನುಭವದ ಕಿಚ್ಚಿನಲ್ಲಿ ಈ ಕವಿತೆ ಸಂತಾಪದ ನಿಗಿನಿಗಿ ಕೆಂಡವಾಗಿ ಹುಟ್ಟಿದೆ ಎಂಬುದವನಗೆ ಅನಿಸಿತು. ಅವನು ಬಂಗಾಲ ಪ್ರಾಂತಕ್ಕೂ ಬಂದಿರಬಹುದೇ ? ನಾನು ಕಲಕತ್ತೆಗೆ ಹೋದುದು ಅವನಿಗೆ ಹೇಗೆ ತಿಳಿಯಿತು ? ನನ್ನಲ್ಲಿ ಇಷ್ಟು ಆಸ್ಥೆಯನ್ನು ತಳೆದಿರುವ ಅವನು ಯಾರು ? ಈ ಪ್ರಶ್ನೆಗಳಿಗೆ ಉತ್ತರವು ಹಿಂದಿನಂತೆ ಈಗಲೂ ದೊರೆಯಲಿಲ್ಲ. ಪತ್ರ ಯಾವುದೋ ಅರಿಯದ ಹಳ್ಳಿಯ ಅಂಚೆ ಮುದ್ರೆಯನ್ನು ಹೊಂದಿ ಬಂದಿತ್ತು. ಅದರಿಂದ ಏನೂ ತಿಳಿಯುವಂತಿರಲಿಲ್ಲ. ಅದೇನೇ ಇರಲಿ, ಈ ಪ್ರಸಾದನು ತನ್ನ ಕವನಗಳ ಮುಖಾಂತರವಾಗಿ ತನಗೆ ಕಾಲಕಾಲಕ್ಕೆ ಸ್ಫೂರ್ತಿಯ ಆಗರವಾಗಿ ಸರಿದಾರಿಯಲ್ಲಿ ಕರೆದೊಯ್ಯುತ್ತಿರುವನಲ್ಲ ಎಂದವನಿಗೆ ಬಹಳ ಸಮಾಧಾನವಾಗುತ್ತಿತ್ತು. ಈ ಸಲವೂ ಈ ಸಂತಾಪದ ಕವಿತೆ ಎಷ್ಟು ಕನಲಿಕೆಯನ್ನು ಹುಟ್ಟಿಸಿತೋ ಅಷ್ಟೇ ಅಮೃತನ ದೃಷ್ಟಿಯನ್ನು ನಿಚ್ಚಳಗೊಳಿಸಿ ಸೇವಾಧರ್ಮದ ಪಾಲನೆಗೆ ಅವನಿಗೆ ಅವಶ್ಯವಾದ ಉತ್ಸಾಹವನ್ನೂ ನೀಡಿತು. ಇಂದು ಬೇಕಾದ್ದು ಅನ್ನದಷ್ಟೇ ಹೃದಯದ ಅನ್ನ ಎಂಬ ಮಾತು ಸತ್ಯಪೂರ್ಣವಾಗಿ ಕಂಡಿತು. ಹೃದಯ ದರಿದ್ರತೆಯೇ ನಮ್ಮಲ್ಲಿಯ ಎಲ್ಲ ಸಮಸ್ಯೆಗಳ ಮೂಲ ಸಮಸ್ಯೆಯಾಗಿದೆ. ಅದಕ್ಕಾಗಿ ಹೃದಯ ವೈಶಾಲ್ಯವನ್ನು ಬೆಳಸುತ್ತ ಸಂತತ

ಸೇವೆಯಲ್ಲಿ ತೊಡಗಿದ ರಾಷ್ಟ್ರಸೇವಕರು ಪ್ರಾಣಾರ್ಪಣ ಮಾಡಲು ಕೂಡ ಸಿದ್ಧರಾಗಬೇಕು ಎಂಬ ಅಭಿಪ್ರಾಯವು 'ಮಾಡುವುದಿದಕೇ ಹಗಲಿರುಳೂ ತನ್ನ ದೇಹವ ತೆಯ್ದು ಎದೆಯನು ಕುದಿಸಿ ಮರಣಕೆ ಅನ್ನ' ಎಂಬ ಕೊನೆಯ ಎರಡು ಸಾಲುಗಳಲ್ಲಿ ಯಥಾವತ್ತಾಗಿ ಮೂಡಿಬಂದಿದೆಯೆಂದು ಅವನು ಮೆಚ್ಚಿದನು. ಈ ಸಾಲುಗಳನ್ನು ತಿರುತಿರುಗಿ ಹೇಳುತ್ತ ತನ್ನ ಉತ್ಸಾಹವನ್ನು ಇಮ್ಮಡಿಸಿಕೊಂಡು ಕರ್ತವ್ಯದಲ್ಲಿ ತತ್ಪರನಾದನು.

ಡಿಸೆಂಬರ ತಿಂಗಳು ಮುಂದರಿಯಿತು. ಚಳಿರಾಯನ ಸೋಂಕು ಎಲ್ಲ ಕಡೆಗೆ ಹೆಚ್ಚುತ್ತಲಿತ್ತು. ಹೊಟ್ಟೆಗಿಲ್ಲ ಮೇಲೆ ಬಟ್ಟೆಯಿಲ್ಲ ಎಂಬ ಸ್ಥಿತಿಯಲ್ಲಿದ್ದ ಜನರು ಚಳಿಯ ಕೈಯಲ್ಲಿ ಸಿಕ್ಕು ಗದಗದ ನಡುಗಹತ್ತಿದರು. ಮಲೇರಿಯ ಪೀಡಿತವಾದ ಕೊಂತಾಯಿ ಪ್ರದೇಶದಲ್ಲಿಯಂತೂ ಜನತೆಯ ಗೋಳನ್ನು ಹೇಳಿತೀರದು. ಎಷ್ಟು ಸಾರ್ವಜನಿಕ ಸಂಸ್ಥೆಗಳು ಕೆಲಸ ಮಾಡಿದರೂ ಸಾಲದಷ್ಟು ತಾಪತ್ರಯಗಳು ಪ್ರತಿಯೊಂದು ಹಳ್ಳಿಯ ನಿವಾಸಿಯಲ್ಲಿ ಎದ್ದುಕಾಣುತ್ತಿದ್ದವು.ಅಮೃತನು ಬೆಚ್ಚಗಿನ ಬಟ್ಟೆಗಳನ್ನು ತರಿಸಿ ತಮ್ಮ ಕೇಂದ್ರಗಳಲ್ಲಿಯ ರೋಗಿಗಳಿಗೆ ಹಂಚಿಸಿದನು. ಹೋದಹೋದಲ್ಲಿ ನಿರ್ಗತಿಕರಾದವರನ್ನು ಕಂಡು ಅವರಿಗೂ ಕೊಡಿಸಿದನು. ತನ್ನ ದೇಹದ ಪರಿವೆಯಿಲ್ಲದೆ ಮೊದಲಿಗಿಂತ ಹೆಚ್ಚಾಗಿ ದುಡಿಯಹತ್ತಿದನು. ಇದರ ಪರಿಣಾಮವೇನಾದೀತೋ ಎಂದು ವೀಣೆಗೆ ಎದೆಗುದಿ. ಆದರೆ ಅವನ ಚಟುವಟಿಕೆ ಮತ್ತು ಚೈತನ್ಯವನ್ನು ನೋಡಿ ಅವಳು ಬೆರಗಾಗುತ್ತಿದ್ದಳು. ಹಿಂದಿನ ನಿತ್ರಾಣ ಹೋಗಿರಬಹುದೆಂದು ಅವಳು ಅವನನ್ನು ತಡೆಯಲು ಹೋಗಲಿಲ್ಲ. ಪರಿಸ್ಥಿತಿ ಮಾತ್ರ ಬೇರೆಯಾಗಿತ್ತು. ಅವನ ನಿತ್ರಾಣ ಹೆಚ್ಚುತ್ತಲೇ ಇತ್ತು. ಅದನ್ನು ಮೀರಿ ಎರಡು ದಂಡೆ ಸೂಸಿ ಹರಿಯುವ ಹೊಳೆಯಂತೆ ಉತ್ಸಾಹವು ವ್ಯಕ್ತವಾಗುತ್ತಿತ್ತು. ರಾತ್ರಿ ಬಂದು ಹಾಸಿಗೆಯಲ್ಲಿ ಕಾಲುಚಾಚಿದಾಗ ತಲೆನೋವು-ಕಾಲುನೋವು ಮುತ್ತಿ ಬಂದು ಅವನಿಗೆ ನಿತ್ರಾಣದ ನೆನಪು ಮಾಡುತ್ತಿದ್ದವು. ಅದಕ್ಕಾಗಿ ಅವನು ಒಂದು ಔಷಧವನ್ನು ತಗೊಂಡು ಮಲಗುತ್ತಿದ್ದನು, ನಿದ್ದೆ ತಡವಿಲ್ಲದೆ ಬರುತ್ತಿತ್ತು.

ಒಂದು ದಿನ ದೂರದ ಹಳ್ಳಿಯೊಂದರಿಂದ ಕರೆ ಬಂತು. ಅಲ್ಲಿ ಮಲೇರಿಯ ಭಯಂಕರ ಹಬ್ಬಿರುವುದೆಂದೂ ಕೂಡಲೇ ಉಪಾಯ ಕೈಕೊಳ್ಳದಿದ್ದರೆ ಹಳ್ಳಿಯೇ ನಾಮಾವಶೇಷವಾಗಬಹುದೆಂದೂ ತಿಳಿಸಿದರು. ಇಷ್ಟು ದಿವಸಗಳಲ್ಲಿ ಆ ಹಳ್ಳಿಗೆ ಅವನು ಹೋಗಿರಲಿಲ್ಲ. ಈಗ ತಿಳಿದೊಡನೆ ಎಲ್ಲ ಸಾಮಗ್ರಿಯೊಡನೆ ಸನ್ನದ್ಧನಾಗಿ

ವೀಣೆಯೊಂದಿಗೆ ಹೊರಟನು. ಒಂದು ನದಿಯನ್ನು ದಾಟಿ ಏರಿಯನ್ನು ಹತ್ತಿ ಇಳಿದು ಮಧ್ಯಾಹ್ನ ೨ ಘಂಟೆಗೆ ಬಹಳ ಆಯಾಸವಾಗಿ ಅಲ್ಲಿಗೆ ಹೋದರು. ತಾವು ಒಯ್ದು ಉಪಾಹಾರವನ್ನು ತಗೊಂಡು ಕೂಡಲೇ ಮನೆಮನೆಗೆ ಹೋಗಿ ತಪಾಸಣೆ ಮತ್ತು ಔಷಧೋಪಚಾರವನ್ನು ಜೋರಾಗಿನಡಸಿಬಿಟ್ಟರು. ಸ್ವಲ್ಪವೂ ವಿಶ್ರಾಂತಿ ಯಿಲ್ಲದೆ ಅವರಿಬ್ಬರೂ ಅಂದು ರಾತ್ರಿ ಹನ್ನೆರಡರವರೆಗೆ ಬಹುಶಃ ಎಲ್ಲ ರೋಗಿ ಗಳಿಗೆ ಚುಚ್ಚುಮದ್ದು ಕೊಟ್ಟು ಮಾಡಬೇಕಾದ್ದನ್ನೆಲ್ಲ ಮಾಡಿದರು. ಅಂದು ಒಂದೇಸವನೆ ಉಸ್ಸೆನ್ನದೆ ಬೇಸರಿಯದೆ ಅಮೃತ ಮಾಡಿದ ಕೆಲಸವನ್ನು ನೋಡಿ ವೀಣೆ ಬೊಟ್ಟುಕಚ್ಚಿದಳು. ಊರವರಿಗಂತೂ ಅವರಿಬ್ಬರೂ ಅಶ್ವಿನೀ ದೇವತೆ ಗಳಂತೇ ಕಂಡರು. ಅಲ್ಲಿಯೇ ರಾತ್ರಿಯಲ್ಲಿ ತಂಗಿ, ೨-೩ ದಿನಕ್ಕೆ ಬರುವದಾಗಿ ಹೇಳಿ ಮರುದಿನ ಬಿಡಾರಕ್ಕೆಹೋದರು. ಅಂದು ಸಂಜೆಯವರೆಗೆ ತೋರಿಕೆಗೆ ಎಲ್ಲ ಸರಿಯಾಗಿತ್ತು. ಆದರೆ ರಾತ್ರಿ ಊಟವಾದ ಮೇಲೆ ಅಮೃತನಿಗೆ ವಿಪರೀತ ಚಳಿ ಹುಟ್ಟಿ ಜ್ವರ ಬಂದುಬಿಟ್ಟವು. ಆಯಾಸದ ಫಲ ಎಂದು ಅಲ್ಲಿಯ ಡಾಕ್ಟರ ಮಿತ್ರರು ಉಪಾಯ ಮಾಡಿದರು. ಮರುದಿನ ಜ್ವರದ ಬಾಧೆ ಹೆಚ್ಚುತ್ತಲೇ ಹೊರಟಿತು. ತಲೆಹೊಡೆತ, ಕಾಲಹರಿವು ಮಿಕ್ಕಿತು. ಅಮೃತ ಏಳಲೇ ಇಲ್ಲ. ಜ್ವರದ ತಾಪದಲ್ಲಿ ಏನೇನೊ ಬಡಬಡಿಸಹತ್ತಿದನು. ಎರಡು ಮೂರು ದಿನ ಆರೈಕೆ ಮಾಡಿ ನೋಡಿದರು, ಕೊನೆಗೆ ಲಕ್ಷಣ ನೆಟ್ಟಗೆ ಕಾಣಲಿಲ್ಲ. ವೀಣೆ ತಾರು ಮಾಡಿ ಸ್ವಾಮಿಜಿಯವರನ್ನು ಕರಸಿಕೊಂಡಳು. ಡಾಕ್ಟರು ನೆಟ್ಟಗೆ ತಪಾಸು ಮಾಡಿ ನೋಡಲಾಗಿ ಬಹಳ ಕೆಟ್ಟ ಮಲೇರಿಯ ಗಂಟುಬಿದ್ದಿದೆ ಎಂದು ಗೊತ್ತಾ ಯಿತು. ಸ್ವಾಮಿಜಿ ಗಂಭೀರವಾದರು. ಕೆಲವು ನಿಮಿಷ ಮೌನವಾಗಿ ಕುಳಿತು ಅವರು ನಿರ್ಣಯಕ್ಕೆ ಬಂದು ಹೇಳಿದರು : 'ವೀಣಾ, ನೀನು ಇಂದಿನ ಜ್ವರ ಇಳಿದೊಡನೆ ಅಮೃತನನ್ನು ಅವನೂರಿಗೆ ಕರಕೊಂಡು ಹೋಗು. ಅವನು ಈ ಜಾಗ ಬಿಡಲೇಬೇಕು. ಎಲ್ಲ ವ್ಯವಸ್ಥೆ ಮಾಡತೇನೆ. ತಾಯಿ-ತಂದೆಯ ಹತ್ತಿರ ಹೋಗಿದ್ದು ಅವನು ಮೊದಲು ಗುಣ ಮಾಡಿಕೊಳ್ಳಲಿ.' ಅಲ್ಲಿಂದ ಸ್ವಲ್ಪ ಹಾಯಾದ ಮೇಲೆ ಊರಿಗೆ ಹೋಗಲು ಅವರೇ ಅಮೃತನ ಮನವೊಲಿಸಿದರು. 'ನನಗೇನೂ ಆಗಿಲ್ಲ, ಇಲ್ಲಿಯೇ ಇದ್ದು ಗುಣ ಮಾಡಿಕೊಳ್ಳುವೆ. ಕರ್ತವ್ಯದ ಕರೆ ಯನ್ನು ಬಿಟ್ಟು ಹೋಗಲಾರೆ' ಎಂದು ಅಮೃತ ಹಟತೊಟ್ಟನು. ಆದರೆ ಇಲ್ಲಿಯ ವಾತಾವರಣದಲ್ಲಿ ಬೇಗ ಗುಣವಾಗಲಾರದು, ಊರಿಗೆ ಹೋಗಿ ಬಾ' ಎಂದು ಮುಂತಾಗಿ ಹೇಳಿ ಸ್ವಾಮಿಜಿಯವರು ಅವನ ಒಪ್ಪಿಗೆ ದೊರಕಿಸಿದರು.

ಅಂತೂ ಹೊರಡುವದು ಗೊತ್ತಾಯಿತು. ಅಮೃತನ ಸಹಕಾರಿಗಳೆಲ್ಲ ಸ್ವಾಮಿಜಿಯವರ ಹೇಳಿಕೆಯಂತೆ ಏರ್ಪಾಡು ಮಾಡಿದರು. ಮರುದಿನ ಬೆಳಿಗ್ಗೆ ಕಾರಿನಲ್ಲಿ ಮಲಗಿಸಿ ಸ್ಟೇಶನ್ನಿಗೆ ಕರಕೊಂಡು ಹೋಗಿ ಸೆಕಂಡಕ್ಲಾಸಿನಲ್ಲಿ ಜಾಗ ಮಾಡಿ ವೀಣೆಯೊಂದಿಗೆ ಕಳಿಸಿಕೊಟ್ಟರು. ಸ್ವಾಮಿಜಿಯವರು ಸ್ವಂತವಾಗಿ ಸ್ಟೇಶನ್ನವರೆಗೆ ಬಂದು 'ಅಮೃತ್, ಏನೂ ಚಿಂತಿಸಬೇಡ, ಗುಣ ಮಾಡಿಕೊಂಡು ಬಾ. ಈವರೆಗೆ ನೀನು ಮಾಡಿದ ಅದ್ಭುತ ಸೇವೆಯಿಂದ ಬಂಗಾಲಪ್ರಾಂತ ನಿನ್ನ ನೆನಸುವಂತಾಯಿತು. ಇನ್ನೂ ಹೆಚ್ಚಿನ ಸೇವೆಯನ್ನು ಮಾಡೀಯಂತೆ. ನಿನಗೆ ಕಲ್ಯಾಣವಾಗಲಿ' ಎಂದು ಆಶೀರ್ವದಿಸಿ ಬೀಳ್ಕೊಟ್ಟರು. ಅಮೃತನು ಸ್ವಾಮಿಜಿಯವರಿಗೂ ಇತರರಿಗೂ ನಮಸ್ಕರಿಸಿ 'ಹೋಗಿ ಬರುವೆ ನೆನಪಿರಲಿ' ಎಂದನು. ಗಾಬರಿಯಾಗಬಾರದೆಂದೂ ಹೆಚ್ಚೇನೂ ತಿಳಿಸದೆ ಡಿಸೆಂಬರ ೧೫ರ ಬೆಳಗಿನ ಗಾಡಿಗೆ ಅಮೃತ ಬರುವನೆಂದೂ ಬಾಗಿಲುಕೋಟೆಗೆ ತಾರು ಕೊಟ್ಟದ್ದಾಯಿತು. ಪ್ರವಾಸದಲ್ಲಿ ಉರಿಯ ಜೋರು ಒಮ್ಮೆ ತೊಂದರೆ ಕೊಟ್ಟಿತು. ವೀಣೆ ಡಾಕ್ಟರ ಹೇಳಿದ ಎಲ್ಲ ಉಪಾಯಗಳನ್ನು ಮಾಡುತ್ತ ಬಹಳ ಜೋಕೆಯಿಂದ ಕರಕೊಂಡು ಹೋದಳು. ಬಾಗಿಲುಕೋಟೆ ಮುಟ್ಟಿದಾಗ ಎಷ್ಟೋ ಹಗುರಾಗಿತ್ತು. ಅವನಿಗೆ ಶ್ರಮವಾಗದಂತೆ ಇಳಿಸಿ ಮನೆಗೆ ಕರೆದೊಯ್ದಳು. ಅವನು ಬರುವನೆಂಬ ಸುದ್ದಿಯಿಂದ ಸಂತೋಷಗೊಂಡಿದ್ದ ಎಲ್ಲರ ಮೋರೆ ಅವನ ಜಡ್ಡಿನ ಸ್ಥಿತಿಯನ್ನು ನೋಡಿ ಇಳಿದು ಹೋಯಿತು. ಆಮೇಲೆ ವೀಣೆಯಿಂದ ಎಲ್ಲ ಸುದ್ದಿ ಗೊತ್ತಾಯಿತು, ಬಹಳ ಕಾಳಜಿಯಾಯಿತು. ಆದರೂ ಕರಕೊಂಡು ಬಂದದ್ದಕ್ಕೆ ಶಂಭುರಾಯರು ಅವಳನ್ನು ತುಂಬ ನೆನಸಿದರು. ಅಲ್ಲಿಯ ಆರೈಕೆಗೆ ಆರಂಭವಾಯಿತು. ಬೇಗನೆ ಗುಣವಾಗಬಹುದೆಂದು ಎಲ್ಲರೂ ಆಶಿಸಿದರು. ಮುಖ್ಯವಾಗಿ ಊರಿಗೆ ಮನೆಗೆ ಬಂದು ಬಿದ್ದನೆಂದು ತಾಯಿ-ತಂದೆ, ಅತ್ತೆ-ಮಾವ ಎಲ್ಲರಿಗೂ ಒಂದು ಬಗೆಯ ಸಮಾಧಾನವಾಯಿತು. ಹಿಂದಿನ ಕೋಪತಾಪ ಕರಗಿಹೋಯಿತು.

ಜ್ವರದ ಏರಿಳಿತ ಹಾಗೇ ಸಾಗಿತು. ಏರಿದಾಗ ನಾಲ್ಕು ಡಿಗ್ರಿಯವರೆಗೆ ಜ್ವರ, ಬಡಬಡಿಕೆ, ಹೊರಳಾಟ ಇರುತ್ತಿತ್ತು. ಬಡಬಡಿಸುವ ಕಾಲಕ್ಕೆ ಕೊಂತಾಯಿ, ಕಾಲೀಚರಣಪುರದಲ್ಲಿ ಇದ್ದಂತೆ ರೋಗಿಗಳ ಕೂಡ, ವೀಣೆಯೊಂದಿಗೆ ಮಾತಾಡುತ್ತಿದ್ದನು, ಸ್ವಾಮಿಜಿಯ ಕೂಡ ಸಂಭಾಷಣ ಮಾಡುತ್ತಿದ್ದನು. ವೀಣೆಯನ್ನು ಹತ್ತಿರ ಕರೆದು 'ನಡೆ ಕೆಲಸಕ್ಕೆ ಹೋಗೋಣ, ಹೊತ್ತಾಯಿತು' ಎಂದು ಒಮ್ಮೆ ಏಳುವ ಪ್ರಯತ್ನ ಮಾಡಿದನು. 'ಈಗ ಬಾಗಿಲುಕೋಟೆಗೆ ಬಂದಿರುತ್ತೀ,

ನಿನಗೆ ಜ್ವರ ಬಂದಿದೆ, ಶ್ರಮ ಬೇಡ' ಎಂದು ವೀಣೆ ಅಲ್ಪರಿದು ಹೇಳಿದಳು. ಅದಕ್ಕೆ 'ಇಲ್ಲಿಗೆ ಯಾವ ಮೂರ್ಖರು ಕರೆತಂದರು ? ನಾ ಅಲ್ಲಿಯೇ ಇರುವೆ ಅಲ್ಲಿಯೇ ಸಾಯುವೆ' ಎಂದು ತಿರುತಿರುಗಿ ಬಡಬಡಿಸಹತ್ತಿದನು. ಪಾರ್ವತಿ ಬಾಯಿ ಅವನ ಮಾತಿಗಿಂತ ಜ್ವರದ ಹೆಚ್ಚಳಕ್ಕೆ ಹೌಹಾರಿಹೋಗಿ, ಹತ್ತಿರ ಕೂತು 'ಹಂಗ ಮಾಡಬ್ಯಾಡ ಅಮೃತ' ಎಂದು ತಲೆಯ ಮೇಲೆ ಕೈಯಾಡಿಸುತ್ತಿದ್ದರು, ಕಂಬನಿಗರೆಯುತ್ತಿದ್ದರು. ಅವನು ಕೇಳದೆ ಅಂಥ ಉರಿಯಲ್ಲಿಯೂ ಎದ್ದು ಕುಳಿತು 'ನಡೆ, ಟಾಂಗಾ ತಗೊಂಡು ಬಾ. ಸಾಮಾನು ಕಟ್ಟು, ವೀಣಾ ಹೂಂ ಏಳು' ಎಂದು ಏಳತೊಡಗಿದ್ದನು. ಶಂಭುರಾಯರು, ವೀಣೆ ಅವನನ್ನು ಗಟ್ಟಿಯಾಗಿ ಹಿಡಿದು ಮಲಗಿಸಬೇಕಾದರೆ ರಗಡಾಗುತ್ತಿತ್ತು. ಜ್ವರ ಇಳಿದಾಗ ಶಾಂತವಾಗಿರುತ್ತಿದ್ದನು. ಆದರೆ ಅಶಕ್ತಿ ಬಹಳವಾಗಿ ಬಂದುಬಿಟ್ಟಿತು. ಊರಲ್ಲಿಯ ಪ್ರಸಿದ್ಧ ಡಾಕ್ಟರೆಲ್ಲ ಉತ್ತಮರೀತಿಯ ಚಿಕಿತ್ಸೆ ಮಾಡುತ್ತಿದ್ದರು. ಆದರೆ ಒಳಒಳಗೆ ಭೇದಿಸಿ ಹೋದ ರೋಗವು ಸರಾಭವವಾಗುವ ಲಕ್ಷಣ ಕಾಣಲೊಲ್ಲದು. ಶುಶ್ರೂಷೆಗೆ ಮನೆಯಲ್ಲಿ ಇದ್ದವರಲ್ಲದೆ ಅತ್ತೆ ಮನೆಯಿಂದ ಅವನ ಹೆಂಡತಿ— ಕಾಂತಾಬಾಯಿ ಬಂದು ಇಲ್ಲಿಯೇ ಇದ್ದು ಹಗಲು ರಾತ್ರಿ ಸೇವೆ ಮಾಡುತ್ತಿದ್ದಳು. ಅತ್ತೆ ಮಾವ ಬಂದು ಹೋಗುತ್ತಿದ್ದರು. ಗೆಳೆಯ ಗಂಗಾಧರ ಮುಂತಾದ ಅನೇಕ ಸ್ನೇಹಿತರು ಅವನ ಸಲುವಾಗಿದ್ದ ತಮ್ಮ ಸ್ನೇಹವನ್ನೂ ನಿಷ್ಠೆಯನ್ನೂ ಪರಮಾವಧಿಯಾಗಿ ತೋರುತ್ತಿದ್ದರು. ವೀಣೆಯಂತೂ ತನ್ನ ಊಟ ನಿದ್ದೆಯ ಪರಿವೆಯಿಲ್ಲದೆ ಅವನ ಹಾಸಿಗೆಯ ಬಳಿಯಲ್ಲಿಯೇ ಕುಳಿತು ದಾಯಿಗೆಲಸವನ್ನು ಮಾಡುತ್ತಿದ್ದಳು. ತನ್ನನ್ನು ಮೃತ್ಯುಮುಖದಿಂದ ಉಳಿಸಿ ಸನ್ಮಾರ್ಗಕ್ಕೆ ಹಚ್ಚಿದ ಅಮೃತನನ್ನು ಬದುಕಿಸಿಕೊಳ್ಳಬೇಕೆಂದು ಅವಳು ಅದೆಷ್ಟು ಶ್ರಮಿಸುತ್ತಿದ್ದಳು ! 'ಅಮೃತನಿಲ್ಲದ ನನ್ನ ಬಾಳುವೆ ನಾಯಿಗಿಂತ ಕಡೆ' ಎಂದು ತನ್ನಷ್ಟಕ್ಕೆ ಶೋಕಿಸುತ್ತಿದ್ದಳು. ಅವಳ ಮನಃಸ್ಥಿತಿ ಯಾರಿಗೂ ತಿಳಿಯದು. ಅವನು ತನ್ನ ಕೈಬಿಟ್ಟನೆಂಬುದಾಗಿ ತೋರಿದ ಈ ಮುಂಚಿನ ನಿರಾಶೆ ನಿರ್ವೇದಗಳೆಲ್ಲ ಹಿಂದೆ ಸರಿದು, ತನ್ನ ಅಣ್ಣ ಅಮೃತ ಬದುಕಲಿ ಎಂದವಳು ದೇವರನ್ನು ಮರಮರಳಿ ಬೇಡಿದಳು. ಒಮ್ಮೆ ಮಧ್ಯಾಹ್ನದ ಊಟಕ್ಕೆ ಎಲ್ಲರೂ ಒಳಗೆ ಇದ್ದಾಗ ಅಮೃತನ ಹತ್ತಿರ ಅವಳೊಬ್ಬಳೇ ಇದ್ದಳು. ಆಗ ಅಮೃತನಿಗೆ ಜ್ವರ ಇಳಿತರದಲ್ಲಿತ್ತು. ಆದರೆ ಗೋಣು ಹೊರಳಿಸಲು ಆಗದಷ್ಟು ನಿತ್ರಾಣ ಬಂದಿತ್ತು. ವೀಣೆ ಅವನಿಗೆ ಆ ಹೊತ್ತಿನ ಔಷಧ ಕುಡಿಸಿದಳು. 'ಕಸ [illegible]' ಎಂದು ಕೇಳಿದನು.

'ಸ್ವಲ್ಪ ಆರಾಮವಿದೆ' ಎಂದವನು ಮೆಲ್ಲಗೆ ಹೇಳಿದನು.

'ಬಹಳ ಚಲೋದು. ಅಮೃತ್, ಇನ್ನು ನಿನಗೆ ಬೇಗನೆ ಗುಣವಾಗುವದು.'

ಅವನು ಅವಳ ಕಡೆ ಮುಖ ಹೊರಳಿಸಿ ಅವಳ ಮೂರ್ತಿಯನ್ನು ಕಣ್ಣಲ್ಲಿ ಕುಡಿಯುವಂತೆ ನೋಡಿ 'ಆಗುವದೇ ? ನನಗೆ ಭರವಸೆಯಿಲ್ಲ, ವೀಣಾ. ನನ್ನ ಸಮಾಧಾನಕ್ಕಾಗಿ ಹೇಳಬೇಡ. ನಾನೂ ಅರ್ಧಮರ್ಧ ಡಾಕ್ಟರನಾಗಿದ್ದವನು ಇಂಥ ರೋಗವನ್ನು ನೋಡಿದ್ದೇನೆ. ಇದರ ಕೈಯಿಂದ ಯಾರೂ ಪಾರಾಗಿಲ್ಲ' ಎಂದು ಸಾವಕಾಶ ಹೇಳುತ್ತ ಆಚೆ ಈಚೆ ಕತ್ತನ್ನು ಅಲುಗಾಡಿಸಿದನು.

'ಹಾಗೆನಬೇಡ ಅಮೃತ್. ನನಗೆ ಬಹಳ ಸಂಕಟವಾಗುವದು' ಎಂದು ವೀಣೆ ಅವನ ಕೈಯನ್ನು ಗಟ್ಟಿಯಾಗಿ ಅದುಮಿ ಕಂಬನಿಗರೆದಳು.

ಆಗ ಅಮೃತನು ಮಲ್ಲಿಗೆಯ ನನೆಯಂತೆ ಮುಖದಲ್ಲಿ ಸಹಜವಾದ ಮುಗುಳುನಗೆಯೊಂದನ್ನು ಬೀರಿ ಅಂದನು : 'ವೀಣಾ, ಅಳಬೇಡ. ಯಾರು ಅತ್ತರೂ ನೀ ಅಳಬೇಡ. ನಾವಿಬ್ಬರೂ ಕಲಕತ್ತೆಯಲ್ಲಿ ಕೊಂತಾಯಿ ಕಡೆಗೆ ಎಷ್ಟು ಸಾವು ನೋಡಲಿಲ್ಲ ! ಅದನ್ನು ನೋಡಿ ಮುಳುಮುಳು ಅತ್ತೆವೋ ಏನು ಪಾಲಿಗೆ ಬಂದ ಕೆಲಸ ಮಾಡುತ್ತ ಬಂದೆವೋ ? ಆ ಸಾವು ಕಡಿಮೆ, ಈ ಸಾವು ಹೆಚ್ಚಿನದೇ ? ನನಗೂ ಬದುಕಬೇಕೆಂಬ ಆಸೆಯಿದೆ, ನಾನು ಬದುಕಿ ನಾಲ್ಕು ಜನರ ಬದುಕಿಗೆ ಬೆಳಕಾಗಬೇಕೆಂಬ ಆಸೆಯಿದೆ. ಇಷ್ಟಾದರೂ ಸತ್ತರೆ ಸತ್ತೆ. ಬರುವ ಸಾವಿಗೆ ಹೆದರುವದೂ ಸಲ್ಲದು, ಅಳುವದೂ ಸಲ್ಲದು. ಸಾವನ್ನು ಗೆಲ್ಲುವ ಬದುಕು, ಸಾವು ಗೆದ್ದರೆ ಅದಕ್ಕೆ ಅಳುಕದ ಬದುಕು ಹೆಚ್ಚಿನದಲ್ಲವೇ ?'

ಅಮೃತನ ತೇಜಸ್ವಿಯಾದ ಈ ಮಾತು ಕೇಳುತ್ತಿರುವಂತೆ ಸಮಾಧಾನ ತಾಳುವ ಬದಲು ವೀಣೆ ಕೊರಳುಬ್ಬಿ ಬಿಕ್ಕುತ್ತ ರಭಸದಿಂದ ಬರುವ ಅಳುವನ್ನು ತುಟಿಬಿಗಿದು ಉಸಿರುಬಿಡುತ್ತ ತಡೆಯುವ ಯತ್ನ ಮಾಡುತ್ತಿದ್ದಳು. ಎರಡೂ ಕಣ್ಣಿನಿಂದ ಅಶ್ರುಧಾರೆ ಹರಿಯುತ್ತಿತ್ತು.

ಅಮೃತನಿಗೆ ತನ್ನ ಕೇವಲ ಮಿತ್ರರನ್ನು ಕಾಣಬೇಕೆಂದು ಅದೇಕೋ ತೀವ್ರವಾಗಿ ಅನಿಸಹತ್ತಿತು. ಕೆಳಮನಿಗೆ ಪತ್ರಹಾಕಿಸಿದನು. ಅವನು ಹೆಂಡತಿಯ ಊರಿಗೆ ಆರಾಮವಾಗಿ ಇರಲು ಹೋಗಿದ್ದನಂತೆ, ಬರಲೇ ಇಲ್ಲ. ಪಾಟೀಲ ಶಾಂತಿನಾಥನಿಗೆ ಬರಸಿದನು. ಅವನು ಮಾತ್ರ ಪತ್ರನೋಡಿದಾಕ್ಷಣ ಅಮೃತನು ಕಲಕತ್ತೆಗೆ ಹೊರಡುವಾಗ ಅವನ ಹತ್ತಿರ ಬಿಟ್ಟುಹೋದ ಸಾಮಾನು ಸಹಿತವಾಗಿ

ಮುಂಬಯಿಯಿಂದ ಬಾಗಿಲುಕೋಟೆಗೆ ಬಂದನು.

'ಅವನನ್ನು ನೋಡಿ ಅಮೃತನಿಗೆ ಬಹಳ ಸಂತೋಷವಾಯಿತು. 'ಈ ಸಂತೋಷದ ಬಲದಿಂದಲೇ ನಾ ಬದುಕಬಹುದು, ಶಾಂತಿನಾಥ' ಎಂದು ಅವನಿಗೆ ಹೇಳಿದನು.

'ನಿಶ್ಚಿತವಾಗಿ ಬದುಕುವಿ. ಇಲ್ಲದ ವಿಚಾರ ಮಾಡಬೇಡ. ನಿನಗೇನಾಗಿದೆ?' ಎಂದು ಶಾಂತಿನಾಥನು ಹುರುಪಿನಿ ಮಾತನ್ನೇನೊ ಹೇಳಿದನು. ಆದರೆ ಅವನ ದೇಹಸ್ಥಿತಿಯನ್ನು ನೋಡಿದರೆ ಧೈರ್ಯ ಹುಟ್ಟುವಂತಿರಲಿಲ್ಲ. ಯಾವಾಗಲೂ ಅವನ ಹತ್ತಿರವಿದ್ದು ವೀಣೆಗೆ ಸಹಾಯವಾಗಿ ಶುಶ್ರೂಷೆ ಮಾಡಿದನು. ಆಗೊಮ್ಮೆ ಅಮೃತನು 'ಶಾಂತಿ, ನನಗೆ ಗುಣವಾಗಬೇಕು ನೋಡು. ಮತ್ತೆ ಕಾಲೇಜಿಗೆ ಬಂದು ನಾ ಪರೀಕ್ಷೆಗೆ ಕೂತು ಪಾಸಾಗಬೇಕು, ಮುಂದೆ ಡಾಕ್ಟರನಾಗಬೇಕು. ನನ್ನ ತಾಯಿ ತಂದೆಗಳ ಜೀವಕ್ಕೆ ಒಮ್ಮೆಯಾದರೂ ಸುಖಕೊಡಬೇಕು. ಅವರು ನನ್ನ ದೆಸೆಯಿಂದ ಬಹಳ ಕಷ್ಟಪಟ್ಟಿದ್ದಾರೆ, ಸೋತು ಸುಣ್ಣವಾಗಿದ್ದಾರೆ. ಆದರೆ ಏನಾಗುವದೋ ಯಾರಿಗೆ ಗೊತ್ತು ?' ಎಂದು ನಿಡಿದಾಗಿ ಉಸಿರೆಳೆದು ಬಿಟ್ಟನು. ಕಾಲದೆಸೆಯಲ್ಲಿ ಶಂಭುರಾಯರು-ಪಾರ್ವತಿಬಾಯಿ ಕೂತಿದ್ದರು. ಅವರ ಕಣ್ಣು ಹನಿದುಂಬಿತು. 'ಇಲ್ಲದ್ದು ಆಡಬ್ಯಾಡ ಅಮೃತಾ. ಎಲ್ಲಾ ನೆಟ್ಟಗಾಗತದ ನಾ ತುಳಜಾಭವಾನಿಗೆ ಬೇಡಿಕೊಂಡು ನಿನ್ನ ದಸಿಂದ ಹರಕಿ ಹೊತ್ತೀನಿ.' ಪಾರ್ವತಿ ಬಾಯಿ ಸೆರಗಿನಿಂದ ಕಣ್ಣೊರಸುತ್ತ ಅಳುಸರದಲ್ಲಿ ಹೇಳಿದಳು.

ಒಂದೆರಡು ದಿನವಾಯಿತು, ಬೇನೆಯ ಜೋರು ಹೆಚ್ಚುವದರಲ್ಲಿಯೆ ಇತ್ತು. ಡಾಕ್ಟರೇನೋ ಇಂದು ನಾಳೆ ಕಡಿಮೆಯಾದೀತು ಎಂದು ಮೇಲೆ ತೋರಿಕೆಗೆ ಹೇಳುತ್ತಿದ್ದರು. ಡಿಸೆಂಬರ ೨೫ರ ಸುಮಾರಿಗೆ ಮಾತ್ರ ಅದು ಹೇಗೋ ಆಶ್ಚರ್ಯ ಕರವಾದ ಬದಲಾವಣೆ ಕಂಡಿತು. ಜ್ವರದ ಏರಿಕೆ ಕಡಿಮೆಯಾಯಿತು, ಬೆಳಗು ಜಾವದಲ್ಲಿ ನಿದ್ದೆಹತ್ತಿ ಎರಡು ಮೂರು ತಾಸು ಮಲಗಿದನು. ಬೆಳಗ್ಗೆ ಕಣ್ಣು ತೆರೆದು ಹತ್ತಿರ ಕೂತಿದ್ದ ಶಾಂತಿನಾಥನಿಗೆ ಹೇಳಿದನು : 'ನನಗೆ ಈಗ ಹಾರಿ ಗಾಗಿದೆ.' ಶಾಂತಿನಾಥನಿಗೆ ಅದೆಷ್ಟು ಹಿಗ್ಗಾಯಿತು ! 'ಅಮೃತ, ಇನ್ನು ನಿನಗೆ ಪೂರಾ ಗುಣವಾಗುವದು. ಜಡ್ಡು ಓಡಿಹೋಯಿತು' ಎನ್ನುತ್ತ ಎಲ್ಲರನ್ನು ಕರೆದು ಹೇಳಿದನು. ಎಲ್ಲರೂ ಮೋರೆಯರಳಿಸಿದರು. ವೀಣೆಯಂತೂ ಇಷ್ಟುದಿನ ಮರೆಯಾದ ತನ್ನ ಮಧುರಸ್ಮಿತವನ್ನು ಬೀರುತ್ತ, ಆರೈಕೆಯಲ್ಲಿ ಉತ್ಸಾಹದಿಂದ ತೊಡಗಿದಳು. ಪಾರ್ವತಿಬಾಯಿರು ಉಮೇದಿಯಿಂದ ಅಡಿಗೆಮನೆಯಲ್ಲಿ ಸಂವರಣೆ

ನಡಸಿದರು. ಭವಾನಿಯ ಮುಂದೆ ದೀಪ ಹಚ್ಚಿಟ್ಟು ನೆಲಮುಟ್ಟಿ ನಮಸ್ಕಾರ ಮಾಡಿದರು, ದತ್ತಗುರುವಿಗೆ 'ಪೂರ ಗುಣಮಾಡು' ಎಂದು ಬೇಡಿಕೊಂಡರು. ಒಂದುಬಗೆಯ ಸಮಾಧಾನದಿಂದ ಶಂಭುರಾಯರೂ ತಮ್ಮ ಕೆಲಸಕ್ಕೆ ಹೋದರು. ಹೆಂಡತಿ ಕಾಂತಾಬಾಯಿ ತೌರುಮನೆಗೆ ಹೋಗಿ ಹಿಗ್ಗಿನಿಂದ ಹೇಳಿಬಂದಳು. ಮಾಧವರಾಯರೂ ಉಳಿದವರೂ ಬಂದು ನೋಡಿ ಮಾತಾಡಿಸಿ ಹೋದರು. ಅಮೃತನಿಗೆ ಗುಣಮುಖವಾಯಿತೆಂದು ಊರೆಲ್ಲ ಸುದ್ದಿ ಹಬ್ಬಿತು. ಅದನ್ನು ಕೇಳಿ ಸಂತಸಪಡದವರೇ ಇಲ್ಲ. ಅಂದು ಮಧ್ಯಾಹ್ನ ಶಾಂತಿನಾಥನು ಅಮೃತನ ಮುಂದೆ ಕುಳಿತು ವರ್ತಮಾನ ಪತ್ರವನ್ನು ಓದುತ್ತಿದ್ದನು. ಮಹಾಯುದ್ಧದ ಸುದ್ದಿ, ಸುತ್ತುಕಡೆಯ ದುಷ್ಕಾಳದ ಸುದ್ದಿ ಇವೇ ಅದರಲ್ಲಿ ತುಂಬಿದ್ದವು. ಮುಖ ಪುಟದಲ್ಲಿ ಮಾತ್ರ 'ಗುಂಡಿನಿಂದ ತರುಣರಾಷ್ಟ್ರವೀರನ ಮರಣ' ಎಂಬ ತಲೆಕಟ್ಟ ನ್ನು ಕಂಡನು. ಅದನ್ನು ಗಟ್ಟಿಯಾಗಿ ಓದಿದನು. ಅವನ ಕುತೂಹಲ ಕೆರಳಿತು. ಓದಿ ನೋಡಿದನು. ಸುದ್ದಿ ವಿಷಾದಕಾರಕವಾಗಿರುವಂತೆ, ಹೆಮ್ಮೆ ಹುಟ್ಟಿಸು ವಂತೆಯೂ ಇತ್ತು. ಅಮೃತನು 'ಅದೇನು ?' ಎಂದು ಕೇಳಲು ಅದನ್ನೆಲ್ಲ ಓದಿ ತೋರಿಸಿದನು. ಅದರ ಸಾರವೆಂದರೆ: '೧೯೪೨ನೇ ಅಗಸ್ಟ ಚಳವಳಿಯಲ್ಲಿ ಭೂಮಿ ಗತವಾಗಿ ಅದ್ಭುತ ರಾಷ್ಟ್ರಕಾರ್ಯವನ್ನು ಮಾಡಿ ಜತೆಯವರ ಅಚಾತುರ್ಯದಿಂದ ಸೆರೆಮನೆಯನ್ನುಸೇರಿ ಅಲ್ಲಿಂದ ಅತ್ಯಂತ ಸಾಹಸದಿಂದ ಜೇಲೊಡೆದು ಹೊರಬಿದ್ದು ಮತ್ತೆ ಗುಪ್ತವಾಗಿ ಕೆಲಸ ಮಾಡುತ್ತಿದ್ದ ಧೀರೇಂದ್ರ ದೇಸಾಯಿ ಎಂಬ ತರುಣ ರಾಷ್ಟ್ರವೀರನು ಒಂದು ತೋಟದಲ್ಲಿ ಕೂತಿರುವಾಗ ಪೋಲೀಸರು ಆ ತೋಟಕ್ಕೆ ಮುತ್ತಿಗೆ ಹಾಕಿ ಅವನನ್ನು ಹಿಡಿಯಲು ಯತ್ನಿಸಿದರು. ಅವನು ಅವರನ್ನು ತಪ್ಪಿಸಿ ಫರಾರಿಯಾಗಲು ಅವರು ಅವನ ಬೆನ್ನುಹತ್ತಿ ಗುಂಡುಹಾಕಿ ಕೊಂದರು. ಶಾಲೆ ಯಲ್ಲಿದ್ದಾಗಿನಿಂದಲೂ ಇವನು ರಾಷ್ಟ್ರಕಾರ್ಯದಲ್ಲಿ ತೊಡಗಿದ್ದನು.'

ಧೀರೇಂದ್ರ ದೇಸಾಯಿ ಎಂದು ಕೇಳಿದ ಕೂಡಲೆ ಅಮೃತನ ಕಣ್ಣಲ್ಲಿ ಹೊಳಪುಕ್ಕಿತು. 'ಇವನು ನನ್ನ ಸಾಲೆಯ ಗೆಳೆಯ, ಶಾಂತಿ. ಇವನೂ ನಾನೂ ಕೂಡಿಯೇ ಚಳವಳಿ ಮಾಡುತ್ತಿದ್ದೆವು. ಅವನಿಗೆ ವೀರಮರಣ ಬಂದಿತು.ಅದಕ್ಕೆ ಮಿಡುಕುವುದೇಕೆ ?' ಎಂದನು.

ಆಮೇಲೆ ಶಾಂತಿನಾಥ ಅಂದನು: 'ಅದು ನಿಜ. ಇಲ್ಲಿ ಕೊನೆಗೆ ಇನ್ನೊಂದು ಸುದ್ದಿಯ ತುಣುಕಿದೆ. ಅವನ ಕಿಸೆಯಲ್ಲಿ ಒಂದು ಡಾಯರಿ ಸಿಕ್ಕಿದ್ದು ಅದರಲ್ಲಿ ಅವನು 'ಪ್ರಸಾದ' ಎಂಬ ಹೆಸರಿನಿಂದ ಬರೆದ ಅನೇಕ ಕವಿತೆಗಳು ಇರುವವಂತೆ !'

ಅಮೃತನು ಒಮ್ಮೆಲೆ ತನ್ನ ನಿತ್ರಾಣದ ಪರಿವೆಯಿಲ್ಲದೆ ಹೊರಳಿ ತಲೆ ಎತ್ತಿ 'ಹಾ ಪ್ರಸಾದ! ಇವನೇ ಪ್ರಸಾದ! ನನ್ನ ಗೆಳೆಯ ಧೀರೇಂದ್ರನೇ ಪ್ರಸಾದ!' ಎಂದು ತಿರುತಿರುಗಿ ಅನ್ನಹತ್ತಿದನು.

'ಯಾಕೆ? ಇಷ್ಟೇಕೆ ಆಶ್ಚರ್ಯ?' ಶಾಂತಿ ಕೇಳಿದನು.

'ಶಾಂತಿ, ನನಗೆ ಕಾಲಕಾಲಕ್ಕೆ ಸ್ಫೂರ್ತಿಕೊಡುವ ಕವಿತೆಗಳನ್ನು ಪ್ರಸಾದ ಎಂಬ ಮುಚ್ಚಿಟ್ಟ ಹೆಸರಿನಲ್ಲಿ ಯಾರೋ ಬರೆದು ಕಳಿಸುತ್ತಿದ್ದರು. ಈಗ ಯಾರೆಂಬುದು ಗೊತ್ತಾಯಿತು. ನನ್ನ ಧೀರೇಂದ್ರನೇ ಪ್ರಸಾದನು! ಅವನಿಗೆ ಸಾವಿರ ಪ್ರಣಾಮಗಳು! ಧೀರನಂತೆ ಬಾಳಿ ಧೀರನಂತೆ ಮಡಿದನು, ನನ್ನಂಥವರ ಬಾಳಿಗೆ ಬೆಳಕಾದನು. ಶಾಂತಿ, ನನಗೂ ಇಂಥ ಸಾವು ಬರಬೇಕು ನೋಡು.'

ಅಮೃತ ಕಣ್ಣುಮುಚ್ಚಿ ಏನೋ ಧ್ಯಾನಿಸುವಂತೆ ಕೆಲಹೊತ್ತು ಮಾತಾಡಲೇಯಿಲ್ಲ. ಈ ವಿಷಯವನ್ನು ಮುಂದರಿಸಿದರೆ ಅವನಿಗೆ ಆಯಾಸವಾದೀತೆಂದು ಶಾಂತಿನಾಥನು ಸುಮ್ಮಗಾದನು.

ಮರುದಿನ ಮಲಗಿದ್ದ ರಕ್ಕಸ ಮತ್ತೆ ಎದ್ದು ಬಂದಂತೆ ಜಡ್ಡು ವಿಕೋಪಕ್ಕೆ ಹೋಗತೊಡಗಿತು. ಜ್ವರ ಐದರವರೆಗೆ ಬಂದಿತು, ಅವಲಕ್ಷಣಗಳೆಲ್ಲ ಮುಸಕಳಿಸಿದವು. ಎಲ್ಲರೂ ಕ್ಷಣಹೊತ್ತು ಸಿಕ್ಕ ನೆರಳಿನಿಂದ ಬೆಂಕಿಯಲ್ಲಿ ತೂರಿದಂತಾಗಿ ಗಾಬರಿಯ ಮೂರ್ತಿಯಾದರು. ಡಾಕ್ಟರರು ಬಂದರು, ಔಷಧೋಪಚಾರ ನಡೆಯಿತು. ಎರಡು ಮೂರು ದಿನ ಹೀಗೇ ಉರಿಯಲ್ಲಿ ನಡೆಯುತ್ತಿರುವಂತೆ ಆಯಿತು. ಎಲ್ಲರೂ ಊಟ ಉಡಿಗೆ ಬಿಟ್ಟು ಕೂತರು. ಊರಿಗೆ ಊರೇ ಚಿಂತೆಯಲ್ಲಿ ಮುಳುಗಿತು. 'ಇನ್ನೇನೂ ಆಶೆಯಿಲ್ಲ, ಬದುಕಿದರೆ ಹೆಂಡತಿಯ ಭಾಗ್ಯ, ತಾಯ್ತಂದೆಯ ಪುಣ್ಯ' ಎಂಬ ಮಾತೇ ಎಲ್ಲರ ಬಾಯಲ್ಲಿ. ವೀಣೆ-ಶಾಂತಿನಾಥರು ಕಂಗೆಟ್ಟುಹೋದರು. ಶೋಕಮಾಡುವಷ್ಟು ಕೂಡ ಅವರಿಗೆ ಶಕ್ತಿ ಇಲ್ಲದಾಯಿತು.

ಡಿಸೆಂಬರ ಕೊನೆ ಬಂದಿತು. ಅಮೃತನ ಆಯುಷ್ಯದ ಕೊನೆಯನ್ನು ತಂದಿತು. ಹೆಚ್ಚಾಗಿ ಅವನು ಎಚ್ಚರದಪ್ಪಿದ ಸ್ಥಿತಿಯಲ್ಲಿಯೇ ಇದ್ದನು. ಆದರೆ ಒಮ್ಮೆ ಮಾತ್ರ ಅದೆಲ್ಲಿಂದ ಅರಿವು ಬಂತೋ ಏನೋ, ಕಣ್ಣು ತೆರೆದು ಎಲ್ಲರನ್ನೂ ನಿಟ್ಟಿಸಿ ನೋಡಿದನು, ಎಲ್ಲರ ಕಣ್ಣಲ್ಲಿ ಕಂಬನಿಧಾರೆ ಕಂಡಿತು. ಅದು ಅವನಿಗೆ ಅರ್ಥವಾಯಿತು. ತನ್ನ ಪ್ರಾಣಶಕ್ತಿಯನ್ನೆಲ್ಲ ನಾಲಿಗೆಯಲ್ಲಿ ತಂದು ಅವನು ತಡೆತಡೆದು ಕೆಳದನಿಯಲ್ಲಿ ಹೇಳಿದನು : 'ಅಳಬೇಡಿರಿ. ಯಾರೂ ಅಳಬೇಡಿರಿ. ಸ್ವಾಮಿಜಿ ಇದೇ ಬಂದು ನನಗೆ ಹೇಳಿದರು : ನನ್ನ ಆಯುಷ್ಯ ಸಾರ್ಥಕವಾಯಿತು

ಎಂದು. ಸೇವೆಯಿಂದ ಬಂದ ಸಾವು ಸಾವಲ್ಲವಂತೆ, ಈಗ ನನಗೆ ಬಹಳ ಸಮಾಧಾನವಾಯಿತು. ವೀಣಾ, ದುಃಖಿಸಬೇಡ. ಅಪ್ಪ ಅಪ್ಪ, ಸಮಾಧಾನ ತಾಳಿರಿ. ಶಾಂತಿ, ನನಗೆ ಶಾಂತಿ ಸಿಕ್ಕಿತು. ಎಲ್ಲರಿಗೆ ನಮಸ್ಕಾರ' ಕೊನೆಯ ಮಾತನ್ನು ಹೇಳುತ್ತ ನಡುಗುವ ಕೈಯೆತ್ತಿ ಜೋಡಿಸಿ ಕೆಳಗೆ ಒಗೆದುಬಿಟ್ಟನು. ಶ್ವಾಸ ಕೂಡಿತು, ಪ್ರಾಣ ಮೆಲ್ಲಮೆಲ್ಲನೆ ದೇಹದಿಂದ ಸರಿಯುತ್ತ ಹಾರಿಹೋಯಿತು. ಮನೆಯೆಲ್ಲ ಅಳುವಿಕೆಯ ಏರು ದನಿಗಳಿಂದ ತುಂಬಿತು. ಆಧಾರ ತಪ್ಪಿದ ಆಪ್ತ ಜೀವಗಳೆಲ್ಲ ದುರಂತದ ಮೂರ್ತಿಯಾದವು.

ಅಮೃತ ಮೃತನಾದನು. ಆದರೆ ನಾಡಿನ ಕೀರ್ತಿಮಂದಿರದಲ್ಲಿ ಅಮರನಾದನು.

## ೧೬. ದರ್ಶನ

ಮಾನಸಸರೋವರದ ಹತ್ತಿರ ತನ್ನ ನಿಯತವಾದ ಪೀಠದಲ್ಲಿ ಭಾರತಿ ಧ್ಯಾನಸ್ಥಳಾಗಿ ಕೂತಿದ್ದಾಳೆ. ಕೈಯಲ್ಲಿಯ ಜಪಮಾಲೆ ಎಡೆಬಿಡದೆ ತಿರುಗುತ್ತಿದೆ. ಶಾಂತವಾದ ರಾತ್ರಿಯಲ್ಲಿ ಹುಣ್ಣಿಮೆಯ ತಿಂಗಳನು ಮೇಲೇರಿ ಬಾನ ನಡುವಿನ ಬಳಿ ಬರುತ್ತಿದ್ದಾನೆ. ನಡುನಡುವೆ ಕಣ್ಣು ತೆರೆದು ಭಾರತಿ ಸುತ್ತೆಲ್ಲ ನೋಡುತ್ತಿದ್ದಳು, ಸಾಕ್ಷಿ ಇನ್ನೂ ಬರಲಿಲ್ಲವೆಂದು ಮತ್ತೆ ಅರೆತೆರೆದ ಕಣ್ಣಲ್ಲಿ ಧ್ಯಾನದಲ್ಲಿ ತೊಡಗುತ್ತಿದ್ದಳು. ಸಾಕ್ಷಿ ಹೋಗಿ ಬಹುಕಾಲವಾಯಿತು,ಅವನ ಸುಳಿವೇ ಇಲ್ಲ. ಸುತ್ತು ಬೀಸುವ ಗಾಳಿ ದಿನಾಲು ಸಾವಿರಾರು ಆಕ್ರೋಶಗಳನ್ನು ತಂದು ತಂದು ಭಾರತಿಯ ಕಿವಿಯಲ್ಲಿ ಅಪ್ಪಳಿಸುತ್ತಿತ್ತು. 'ಯಾಕೆ ಈ ಆಕ್ರೋಶ, ಏನಾಗಿದೆ ?' ಎಂದವಳು ತಳಮಳದ ತಪ್ತ ಮೂರ್ತಿಯಾಗುತ್ತಿದ್ದಳಲ್ಲದೆ ಅವಳ ಕಾತರವೂ ಆತುರವೂ ಹೆಚ್ಚಾಗಿ ತೋರುತ್ತಿದ್ದವು, ಸಾಕ್ಷಿಗಾಗಿ ಆಕೆಯ ನಿರೀಕ್ಷೆ ದಿನದಿನಕ್ಕೆ ಹೆಚ್ಚಾಯಿತು. ಇಂದು ತನ್ನ ಸಂಚಾರ ಮುಗಿಸಿಕೊಂಡು ಸಾಕ್ಷಿ ಬಂದನು. ಚಂದ್ರಮಂಡಲದಿಂದ ಕೆಳಗಿಳಿದ ಕಿರಣಪುಂಜದಂತೆ ಅವನು ಸದ್ದಿಲ್ಲದೆ ಭಾರತಿಯ ಪೀಠದ ಹತ್ತಿರ ಹೋಗಿ ಅವಳಿಗೆ ಪ್ರಣಾಮ ಮಾಡಿ ನಿಂತುಕೊಂಡನು. ಕೆಲಹೊತ್ತಿನ ಮೇಲೆ ಧ್ಯಾನದಿಂದ ಹೊರಬಂದ ಭಾರತಿ ಅವನನ್ನು ನೋಡಿದಳು. 'ಸಾಕ್ಷೀ, ಬಂದೆಯ ? ಚೆನ್ನಾಯಿತು. ನಿನ್ನ ದಾರಿಯನ್ನೇ ಕಾಯುತ್ತಿದೆ.' ಎಂದು ಹತ್ತಿರ ಕರೆದು ತನ್ನ ಪೀಠದಲ್ಲಿಯೆ ಕೂರಿಸಿಕೊಂಡಳು. ಆಮೇಲೆ ಕೇಳಿದಳು : 'ಎಲ್ಲೆಲ್ಲಿ ಹೋಗಿದ್ದೆ ? ಏನೇನು ಕಂಡೆ ? ಎಲ್ಲವನ್ನು ನನಗೆ ಹೇಳು.'

ಸಾಕ್ಷಿ ಗಂಭೀರವಾಗಿ ಆಡಿದನು : 'ತಾಯಿ, ನೀನೊಪ್ಪಿಸಿದ ಕೆಲಸವನ್ನು ಚೆನ್ನಾಗಿ ನೆರವೇರಿಸಿ ಬಂದಿದ್ದೇನೆ. ಆದರೆ ನೀ ಕೇಳಿದ ಪ್ರಶ್ನೆಗಳಿಗೆ ಸರಿಯಾಗಿ ಸಂಪೂರ್ಣವಾಗಿ ಉತ್ತರ ಕೊಟ್ಟೇನೆಂಬ ಎನೆಗಾರಿಕೆ ನನಗಿಲ್ಲ. ಹೋಗುವಾಗ ಹೂಎಂದೆ, ಆದರೆ ತಿರುಗುವಾಗ, ತಿರುಗಿ ಬರುವಾಗ, ನನ್ನ ಹೊಣೆ ಇದಕ್ಕಿಂತ ಹೆಚ್ಚಿನದು ಬೇರೆ ಈವರೆಗೆ ಇರಲಿಲ್ಲ ಎಂದು ಮನವರಿಕೆಯಾಯಿತು.'

ಭಾರತಿ ಕೇಳಿದಳು : 'ಯಾಕೆ, ನೀ ಹೀಗೆನ್ನಬೇಕೆ ಸಾಕ್ಷಿ? ನಿನ್ನ ಕಣ್ಣಲ್ಲಿ ನನ್ನೆಲ್ಲ ಸೂಕ್ಷ್ಮ ಸಮಗ್ರ ದರ್ಶನಶಕ್ತಿಯನ್ನು ನನ್ನ ತಪೋಬಲದಿಂದ ತುಂಬಿ ಕಳಿಸಿದ್ದೆ. ಅದೇಕೆ ಅಧೈರ್ಯ ನಿನಗೆ? ಏನಿದು ನಿನ್ನ ವಿನಯವೇ ?'

'ವಿನಯವಲ್ಲ ತಾಯಿ. ಅಧೈರ್ಯವೂ ಅಲ್ಲ' ಎನ್ನುತ್ತ ಸಾಕ್ಷಿ ಮುಂಬರಿಸಿದನು.

'ನಿನ್ನ ಕೃಪೆಯಿಂದ ದೊರೆತ ದರ್ಶನ ಶಕ್ತಿಯೂ ಆ ವಿವಿಧವಾದ ರುದ್ರ ಭೀಕರವಾದ ದೃಶ್ಯವನ್ನು ನೋಡಲು ಸಾಲದಾಯಿತು. ಆದರಿದಿರು ಮೊದಲನೆಯ ಸಲ ನಿನ್ನ ಸಾಕ್ಷಿ ಸೋತು ಹೋದನು. 'ಎಲ್ಲವನ್ನು ಎಲ್ಲ ನೋಟದಿಂದ ನೋಡು' ಎಂಬ ನಿನ್ನ ಆದೇಶವನ್ನು ಪಾಲಿಸುವ ಸಾಹಸವನ್ನೇನೊ ಮಾಡಿದೆ. ಆದರೆ ಮೊದಲನೆಯದಾಗಿ ಎಲ್ಲವನ್ನು ನೋಡಿದೆನೆಂದು ಹೆಮ್ಮೆಯಿಂದ ಹೇಳಲಾರೆ. ಅಷ್ಟು ತರ ತರವಾದ ಜೀವನದ ಪಸರವಾಗಿತ್ತದು. ಇಂದು ಈ ದೇಶದಲ್ಲಿ ಗೋಳೆಂಬುದು ಕೋಟಿ ರೂಪ ತಾಳಿದೆ. ಒಂದೊಂದು ಜೀವದ ಕಥೆಯೂ ತನ್ನದೊಂದು ದುರಂತ ವೈಶಿಷ್ಟ್ಯವನ್ನು ಸಾರುತ್ತದೆ. ಹೀಗಿರಲು ನಾನೆಲ್ಲವನ್ನೂ ನೋಡಿದೆನೆಂದು ಹೇಗೆ ಹೇಳಲಿ? ಎಲ್ಲ ನೋಟದಿಂದ ಅರಿಯುವ ಯತ್ನ ಮಾಡಿದೆ. ಆದರೆ ದುಃಖಿಗಳ ಪರವಾಗಿ ಒಲಿದ ನನ್ನ ನೋಟ ಉಳಿದೆಲ್ಲ ನೋಟಗಳ ಬಗ್ಗೆ ಅತ್ಯಂತ ತಿರಸ್ಕಾರವನ್ನು ತಾಳಹತ್ತಿತು. ನನ್ನೆಲ್ಲ ಪ್ರಯತ್ನವನ್ನು ಮೀರಿ ನನ್ನ ಮರುಕ-ಮುನಿಸು ಭುಗಿಲೆಂದು ಜಾಗೃತವಾಗಿ ಸಾಮ್ಯದೃಷ್ಟಿಯನ್ನು ಕದಡಿಸಿಬಿಟ್ಟವು.'

'ಸರಿ. ವಸ್ತುಸ್ಥಿತಿಯೇ ಹಾಗಿರುವಾಗ ನೀನೇನು ಮಾಡಬಲ್ಲಿ? ಕಂಡದ್ದಾದರೂ ಏನು ಹೇಳು.'

'ತಾಯಿ, ಕಂಡದ್ದು ಬಹಳವಾಗಿದೆ. ನೀ ಲೆಕ್ಕಣಿಕೆಯನ್ನು ಹಿಡಿದು ಈ ಹಿಮಾಲಯದ ಬೆಟ್ಟಗಳನ್ನು ಹಲಗೆಮಾಡಿ ಬರೆದರೂ ಮುಗಿಯದಷ್ಟಿದೆ. ಈಗ ಎಲ್ಲವನ್ನು ಹೇಳೆಂದು ಆಗ್ರಹ ಮಾಡಬೇಡ. ಆದಾದಂತೆ ಹೇಳುವೆ. ಒಮ್ಮೆಲೆ ಹೇಳಹೊರಟರೆ ಈ ಸಾಕ್ಷಿಯ ಬಾಯಿ ಬಿಡದೀತು, ಎದೆ ಬಿರಿದೀತು. ಇಷ್ಟನ್ನು

ಮಾತ್ರ ಹೇಳಬಲ್ಲೆ : ದೇಶದ ಎಲ್ಲ ದಿಕ್ಕುಗಳಲ್ಲಿ ಅಲೆದಾಡಿದೆನು. ದಕ್ಷಿಣದಲ್ಲಿ ಹೋದೆ, ಸಮುದ್ರದ ತಡಿಯಲ್ಲಿ ಹೋದೆ, ಎರಡೂ ಸಲ ಪೂರ್ವದ ಸೀಮೆಯಲ್ಲಿ ಬಹುಕಾಲ ಸುತ್ತಾಡಿದೆ. ಕಾಣದಂತಾಗಿ ನಾನಿದ್ದು ಬೆಳಕು ಕಾಣದ ಗುಡಿಸಲ ಮೂಲೆಗಳಲ್ಲಿಯೂ ಬೆಳಕು ಝುಗಿಝುಗಿಸುವ ಬಲ್ಲಿದರ ಮನೆಮಾಡಗಳಲ್ಲಿಯೂ ಹೋಗಿ ಬಂದೆನು. ಎಲ್ಲ ಕಡೆ 'ಅನ್ನ, ಅನ್ನ' ಎಂಬುದೇ ಜಪ. ಈ ಜಪದ ಸಿದ್ಧಿ ಯೆಂದರೆ ಮರಣ ಇಲ್ಲವೆ ಜೀವನ್ಮರಣ. ಪೂರ್ವದಲ್ಲಿ ಅಭೂತಪೂರ್ವವಾದ ಸಂಕ ಟರಾಶಿ ಬಂದು ಲಕ್ಷಗಟ್ಟಳೆಯಾಗಿ ಜನರ ಪ್ರಾಣ ನುಂಗಿತು. ದಕ್ಷಿಣದಲ್ಲಿ ನಡೆದ ಕಾರ್ಯ ಮರಣವನ್ನು ಬಹು ಮಟ್ಟಿಗೆ ತಡೆಯಿತು, ಆದರೆ ದುಃಖಪರಂಪರೆ ಯನ್ನು ಕಳೆಯಲಿಲ್ಲ. ತಾಯಿ, ಈ ನಿನ್ನ ಸಾಕ್ಷಿ ನಿರ್ವಿಕಾರವಾದ ನಿರೀಕ್ಷಕನಂತೆ ತಿರುಗಿದನೆಂದು ತಿಳಿಯಬೇಡ. ಆ ಕಲ್ಲುಕರಗಿಸುವ ದೃಶ್ಯಗಳನ್ನು ನೋಡಿ ಕೇವಲ ಸಾಕ್ಷಿಯಾಗುವುದು ಅಸಾಧ್ಯಕೋಟಿಯ ಮಾತಾಯಿತು. ನೂರುಸಲ ಒತ್ತಿ ಬರುವ ಭಾವನೆಯ ಊರ್ಮಿಗಳನ್ನು ತಡೆದರೂ ನೂರಾಒಂದನೆಯ ಸಲ ಮೋಡ ವಿಲ್ಲದ ಮುಗಿಲಿನಿಂದ ನನ್ನ ಕಾದ ಕಂಬನಿಗಳನ್ನು ನೆಲದ ಮೇಲೆ ಸುರಿಸಿದೆ, ಮರ ಗಾಳಿಯಾಗಿ ನನ್ನ ನಿಟ್ಟುಸಿರುಗಳನ್ನು ಸೂಸಿದೆ. ಸೊಕ್ಕೇರಿದ ಸಿರಿವಂತರನ್ನು ಕಂಡು ತಳಮಳದ ಮೂರ್ತಿಯಾದೆ.ಅವರ ಡಂಭಾಚಾರದ ಮುರುಕವನ್ನು ನೋಡಿ ಉಪಹಾಸದ ನಗೆಯ ತೆರಗಳನ್ನು ಗಾಳಿಯಲ್ಲಿ ತೇಲಿಸಿದೆ. ಬಡತನ, ಸಾವು ಇವಕ್ಕಿಂತ ಈ ನಾಡಿನಲ್ಲಿಯ ಒಡಕು, ಕಟುಕತನ ನನ್ನಲ್ಲಿ ಅತ್ಯಂತ ವ್ಯಥೆಯನ್ನು ಉಂಟುಮಾಡಿದವು. ನೆಲಕ್ಕೆ ಹತ್ತೇ ದಿಕ್ಕುಗಳಿದ್ದರೆ ಇಲ್ಲಿಯ ಜನ ಮನಕ್ಕೆ ನೂರು ದಿಕ್ಕುಗಳಿವೆ. ದಿನದಿನಕ್ಕೆ ಹೊಸ ಪಂಥಗಳೂ ಮುಂದಾಳುಗಳೂ ಅವರ ಪೂಜಾ ರಿಗಳೂ ಹುಟ್ಟುತ್ತಿದ್ದಾರೆ, ಒಬ್ಬರೊಬ್ಬರ ಕುತ್ತಿಗೆ ಹಿಚುಕಲು ಸಿದ್ಧವಾಗುತ್ತಾರೆ. ಅನ್ನವನ್ನು ಹಸಿದ ಬಾಯಲ್ಲಿ ತಂದಿಡುವ ಬದಲು ಯಾರ ತಪ್ಪಿಂದ ಅನ್ನದ ಕೊರ ತೆಯಾಯಿತೆಂಬುದನ್ನು ತೋರಿಸಲು ಹೆಣಗುವವರೇ ಬಹಳ. ಇಂಥದರಲ್ಲಿಯೂ ಕೆಲವು ನಿಸ್ವಾರ್ಥ ಸೇವಕರನ್ನು ಕಂಡು ಕೊಂಡಾಡಿದೆ. ಭಾರತದ ಉಜ್ವಲ ಭವಿಷ್ಯ ಇವರ ದೃಷ್ಟಿಯಲ್ಲಿ, ಇವರ ಕಾರ್ಯದಲ್ಲಿ ಎಂದು ತೋರಿತು.

'ತಿಳಿಯಿತು ಸಾಕ್ಷಿ. ನಿನ್ನ ನಿರೀಕ್ಷಣೆಯ ಸಾರ ತಿಳಿಯಿತು. ನಿನ್ನ ಭಾವನೆ, ವೇದನೆ ಎಲ್ಲವೂ ಸಹಜವಾಗಿದೆ. ಅದರಿಂದ ನನ್ನ ಆತ್ಮ ಕೆರಳಿದೆ. ಈ ಮೃತ್ಯು ವಿನ ಅಕಾಂಡ ತಾಂಡವವನ್ನು ತಡೆಯಬೇಕು. ಭಾರತದಿಂದ ಅದರ ಉಚ್ಚಾಟನೆ ಯಾಗಬೇಕು.

ಭಾರತಿ ಆವೇಶಯುಕ್ತಳಾಗಿ ಈ ಸರಣಿಯಲ್ಲಿ ಆಡುತ್ತಿರುವಾಗಲೆ ಮೂಡ ಲಲ್ಲಿ ಒಂದು ಕರಿಮೋಡ ಮೊದಲು ಚಿಕ್ಕದಾಗಿ ಕಂಡು ಆಮೇಲೆ ಹಿರಿದಾಗಿ ಸರಿಯುತ್ತ ಭಾರತಿ ಇದ್ದಲ್ಲಿಯೇ ಬಂದಿತು. ಇಬ್ಬರೂ ಬೆಕ್ಕಸದಿಂದ ನೋಡ ಹತ್ತಿದರು.

'ಇದೇನು ಸಾಕ್ಷಿ?' ಭಾರತಿ ಕೇಳಿದಳು.

'ಈ ಅಚ್ಚ ಬೆಳದಿಂಗಳಲ್ಲಿ ಈ ಕರಿನೆರಳು ಏನೆಂಬುದು ನನಗೂ ತಿಳಿಯದ ಗೂಢವಾಗಿದೆ.' ಸಾಕ್ಷಿ ನಿರುಕಿಸಿ ಹೇಳಿದನು.

ಇಷ್ಟರಲ್ಲಿ ಅದೇ ಹತ್ತಿರ ಬಂದು ಒಂದು ಕರಿದಾದ ಭವ್ಯ ಮೂರ್ತಿಯಾಗಿ ಬಂದು ನಿಂತು 'ನಾನ್ಯಾರು ನಿಮಗೆ ಗೊತ್ತಿಲ್ಲವೇ? ನಾನೇ ಮೃತ್ಯು. ನೀವಾರು ನನಗೆ ಗೊತ್ತಿದೆ. ನನ್ನ ಅಕಾಂಡ ತಾಂಡವವನ್ನು ತಡೆಯುಬೇಕು, ನನ್ನ ಉಚ್ಚಾಟ ನೆಯಾಗಬೇಕೆಂದು ನೀವು ಹೇಳಲಿಲ್ಲವೇ ? ಅದನ್ನು ಮಾಡುವದಾದರೆ ಮಾಡಿರಿ ಎಂದು ಹೇಳಲು ಬಂದಿದ್ದೇನೆ.'

'ಓಹೋ. ನೀನೇ ಮೃತ್ಯುವೇ ?' ಭಾರತಿ ಟಗೆಕದಡಡೆ ಕೇಳಿದಳು. 'ಯಾಕೆ ನಿನ್ನ ಉಚ್ಚಾಟನೆ ಅಷ್ಟು ಅಸಾಧ್ಯವೆಂದು ನೀನು ತಿಳಿದಿರುವಿಯು? ನಿನ್ನ ರುದ್ರಲೀಲೆಯಿಂದ ಈ ನಾಡನ್ನು ಮಸಣವಾಗಿ ಮಾಡಿದೆ.'

'ಹೌದು ಮಾಡಿದೆ, ಆದರೆ, ಭಾರತಿದೇವಿ, ನಾನೇನು ಸಾವಿಗಾಗಿ ಹಸಿದು ಕಂಗೆಟ್ಟ ಬ್ರಹ್ಮರಾಕ್ಷಸನಲ್ಲ. ನನಗೆ ಬೇಕಾದ್ದು ಗಿಡದಿಂದ ಉದುರಿದ ಹಣ್ಣೆಲೆ ಯಂಥ ಸಹಜ ಸಾವು. ಉಳಿದ ಸಾವೆಲ್ಲ ನನ್ನಿಂದ :ಆದುದಲ್ಲ.'

'ಮತ್ತಾ್ಯರಿಂದ ? ನಿನ್ನಿಂದಲೇ ಎಂಬುದನ್ನು ನಾ ನೋಡಿದ್ದೇನೆ.' ಸಾಕ್ಷಿ ಆಡಿದನು.

'ಅದನ್ನೇ ಹೇಳಲು ಬಂದಿದ್ದೇನೆ, ನನ್ನಿಂದ ಅಲ್ಲ, ಸರ್ವಥಾ ಅಲ್ಲ. ನಾನು ಕೊಲ್ಲಲಿಲ್ಲ. ಜನ ಒಬ್ಬರನ್ನೊಬ್ಬರು ಕೊಂದರು. ಲಕ್ಷಾವಧಿ ಜನವನ್ನು ಹುಳು ಹುಪ್ಪಡಿಯಂತೆ ಕೊಲ್ಲುವದು ನನಗೆ ಬೇಕಾಗಿತ್ತೇ? ಅದರಿಂದ ನನಗೆ ದೊರೆಯುವ ಸುಖವೇನು ? ತಾವು ತಿನ್ನುವ ಅನ್ನವನ್ನು ಪಡೆಯಲಾರದೆ ಅವರೇ ಸಾವನ್ನು ಅಪ್ಪಿದರು. ಅನ್ನವನ್ನು ಕೊಡದವರು ಅವರ ಈ ಅಪ್ಪುಗೆಯನ್ನು ಬಿಗಿಮಾಡಿ ದರು. ಎಲ್ಲರಿಗಿಂತ ಮಿಗಿಲಾಗಿ ಈ ಸಾವಿನ ದುಃಖ ನನಗಾಯಿತು. ಆದನ್ನು ಲೋಕವ ರಿತಿಲ್ಲ ಎಂದೇ ನಿಮಗೆ ಹೇಳಲು ಬಂದೆ.'



'ಅಂದರೆ? ನೀ ನಿರಪರಾಧಿಯೆಂದು ಸಿದ್ಧಮಾಡಿ ಹೋಗಲು ಬಂದಿರುವೆಯು?

ಭಾರತಿ ಕೇಳಿದಳು..

'ಹೌದು, ಭಾರತಿದೇವಿ. ನಾ ನಿರಪರಾಧಿ, ನನ್ನ ಉಚ್ಚಾಟನೆ ಮಾಡು ವದಕ್ಕಿಂತ ಈ ದೇಶದಲ್ಲಿ ಅಕಾಂಡ ತಾಂಡವವಾಡುತ್ತಿರುವ ಸೊಕ್ಕು ಸುಲಿಗೆ, ಅಲಕ್ಷ್ಯ ಅನಾದರಗಳನ್ನು ಉಚ್ಚಾಟನೆ ಮಾಡಬೇಕು, ನೀವು ಇದಕ್ಕಾಗಿ ಈ ನಾಡಿನ ಹೃದಯದೇವತೆಯನ್ನು ಎಚ್ಚರಿಸಬೇಕು. ಅಲ್ಲಿಂದ ನನ್ನ ಉಚ್ಚಾಟನೆ ತಾನಾಗಿ ಆಗುವುದು.'

'ಸರಿ. ನಿನ್ನ ಮಾತೂ ಸರಿಯಾಗಿದೆ, ಅರ್ಥಪೂರ್ಣವಾಗಿದೆ. ನೀನೀಗ ಹೋಗಬಹುದು.' ಭಾರತಿ ಹೇಳಿದಳು.

ಮೃತ್ಯು ಬಂದಂತೆ ಹಿಂದೆ ಸರಿಯುತ್ತ ಮೂಡಲಲ್ಲಿ ಕಿರಿದಾಗಿ ಕರಗಿ ಹೋಯಿತು.

ಭಾರತಿ ಅದೆಷ್ಟೋ ಹೊತ್ತು ತನ್ನಾಳದಲ್ಲಿ ಮುಳುಗಿ ಕುಳಿತುಕೊಂಡಳು. ಸಾಕ್ಷಿ ಅವಳನ್ನು ನೋಡುತ್ತ ಅವಳ ಧ್ಯಾನಮೌನದಿಂದ ಹೊರಪಡುವ ಸಂದೇಶಕ್ಕೆ ಕಾದು ಕೂತನು. ಭಾರತಿ ಧ್ಯಾನದಾಳದಿಂದ ಮೇಲ್ಮೈಲೆಗೆ ಬಂದಳು, ಕಣ್ಣು ತೆರೆದಳು. ತನ್ನ ಪೀಠದಿಂದ ಎದ್ದು ನಿಂತಳು. ಸಾಕ್ಷಿಯೂ ಎದ್ದು ನಿಂತನು. ಭಾರತಿ ತನ್ನ ಉಜ್ವಲವಾದ ವಾಣಿಯಿಂದ ಹೇಳಿದಳು: 'ಸಾಕ್ಷಿ, ನಡೆ ಇನ್ನು, ನನ್ನ ಏಕಾಂತವಾಸ ಮುಗಿಯಿತು. ನಿನ್ನ ಅಪೇಕ್ಷೆ ಪೂರ್ಣವಾಗುವ ಕಾಲ ಒದಗಿತು. ನನ್ನ ನಾಡಿನ ಜನದ ನಡುವೆ ಬಾಳಲು ಹೊರಡೋಣ. ಅವರ ಸುಖ-ದುಃಖದಲ್ಲಿ ಸಮರಸವಾಗಿ ಅದರ ಹಾಡುಕಟ್ಟಿ ಕತೆ ಹೇಳಿ ನಾಡಿನ ತುಂಬ ಅಂತಃಕರಣದ ಝರಿಗಳನ್ನು ಹರಿಸೋಣ, ಕಲ್ಲೆದೆಗಳನ್ನೂ ಕರಗಿಸೋಣ. ಈ ದೇಶದಲ್ಲಿ ಎಲ್ಲ ಇದೆ ಜನವನ್ನು ಒಂದು ಬಳಗವಾಗಿ ಕಟ್ಟುವ ಹೃದಯಸೂತ್ರವಿಲ್ಲ, ರಾಷ್ಟ್ರೀಯ ವೃತ್ತಿಯಿಲ್ಲ. ಸಾಮಾಜಿಕ ಬುದ್ಧಿಯಿಲ್ಲ. ಜನದ ಹೃದಯವೆಲ್ಲ ಕಲಹಕ್ಕೆ ವಿರಸಕ್ಕೆ ತನ್ನ ಮಾರಿಕೊಂಡಿದೆ; ಹೊರಗಿನ ಶಕ್ತಿಗೆ ಆಳಾಗಿದೆ, ಹೋಳಾಗಿದೆ. ರಾಗದ್ವೇಷಗಳನ್ನು ಮೀರಿದ ಪ್ರೀತಿ-ಮಮತೆಗಳ ದರ್ಶನದಿನದಿನದಬಾಳಿನಲ್ಲಿಮೂಡಬೇಕು. ಪ್ರತಿಯೊಬ್ಬ ವ್ಯಕ್ತಿಯಲ್ಲಿ ವಿಶ್ವವಿದೆ, ಪ್ರತಿಯೊಂದು ಮನೆಯಲ್ಲಿಸಂಕ್ಷಿಪ್ತಸಮಾಜವಿದೆ. ವ್ಯಕ್ತಿ ತನ್ನಲ್ಲಿಯ ವಿಶ್ವವನ್ನು ಸಾಧಿಸಬೇಕು. ಮನೆ ಸಾಮಾಜಿಕ ನಡತೆಯ ಮಾದರಿಯಾಗಬೇಕು. ತಾನು, ತನ್ನ ಮನೆ ಇವನ್ನು ಕಟ್ಟದೆ ಮೂಲೋಕದ ಉದ್ಧಾರದ ಹವ್ಯಾಸವೇಕೆ? ಯಾವ ಒಬ್ಬನೂ ಕ್ಷುಲ್ಲಕನೆಂದು ತನ್ನನ್ನು ಅಲ್ಲಗೆಳೆಯಬಾರದು, ಅವನನ್ನು ಇತರರು ಹೀಗೆಳೆಯಬಾರದು.

ಬಲ್ಲ ಕೆಲವರು—ನಾಲ್ಕೇ ಜನರಿರಲಿ—ಫಲದ ಆತುರ ಬಿಟ್ಟು ತಮ್ಮ ದರ್ಶನದಂತೆ ಪ್ರತಿನಿತ್ಯದ ಇರುವಿಕೆಯನ್ನು ರೂಪಿಸಬೇಕು. ಇಂಥವರ ಕೈಯಲ್ಲಿ ಜಗದ ಪ್ರಗತಿಯ ಸೂತ್ರವಿದೆ. ಈ ನಾಡಿನ ಹಿರಿಯರು ಕೊಟ್ಟ ಬಾಳ ದರ್ಶನಕ್ಕಿಂತ ಹಿರಿದು ಇನ್ನೊಂದಿಲ್ಲ. ಅದರಂತೆ ಅದನ್ನು ಬಾಳಿನಲ್ಲಿ ವಿಕಾರಗೊಳಿಸಿ ಮಾಡಿದ ಕಿರಿದು ಬೇರೆ ಕಡೆಗಿಲ್ಲ. ಈ ನಾಡಿನಲ್ಲಿ ಮಹಾಪುರುಷರು ಹುಟ್ಟುತ್ತಲೆ ಇದ್ದಾರೆ, ಮಹಾಜನರು ಸಾಯುತ್ತಲೇ ಇದ್ದಾರೆ.

ಅನ್ನ ಬೇಕು, ಅದಿಲ್ಲದೆ ಪ್ರಾಣವಿಲ್ಲ, ಮನವಿಲ್ಲ, ವಿಜ್ಞಾನವಿಲ್ಲ, ಆನಂದ ವಿಲ್ಲ. ಆದರೆ 'ಅನ್ನ ನನಗೊಬ್ಬನಿಗೆ ಬೇಕು' ಎಂಬ ಕಾಮ—ಅಹಂಕಾರಗಳು ಅಳಿಯಬೇಕು. ಇದಕ್ಕಾಗಿ ಜನಚಿತ್ತಕ್ಕೆ ದೊಡ್ಡ ಸಂಸ್ಕಾರಬೇಕು. ಈ ಸಂಸ್ಕಾರ ರಸದರ್ಶನದಿಂದ ಕಲಾಕೃತಿಯಿಂದ ಸಾಧ್ಯವಿದೆ. ರಸದರ್ಶನಕ್ಕೆ, ಸಾಕ್ಷಿ, ನಿನ್ನ ನೋಟ, ಕಲಾಕೃತಿಗೆ ನನ್ನ ವಾಣಿ ಇವು ಬೆರೆಯಬೇಕಾಗಿವೆ.

ಸುಲಿಗೆಯಿಂದ ಜನತೆಯನ್ನು ಮುಕ್ತಗೊಳಿಸಬೇಕು, ಅದರೊಡನೆ ಸುಲಿಗೆಯ ಮೂಲ ಪ್ರವೃತ್ತಿಯನ್ನು ಕಳೆಯಬೇಕು. ಇಲ್ಲದಿದ್ದರೆ ಸುಲಿಗೆ ಮಾಡುವವರು ಬೇರೆಯಾಗಬಹುದು ಮಾತ್ರ. ಬಡವರ ರಾಜ್ಯವಾಗಬೇಕೆಂದು ಸಾರುವ ಮುಂದಾಳುಗಳು ಆ ರಾಜ್ಯದಲ್ಲಿ ತಾವೇ ರಾಜರಾಗತಕ್ಕವರು ಎಂಬ ಹಮ್ಮಿನಿಂದ ಆಡುವದುಂಟು. ಬಡವನಾಗಿದ್ದವನು ಸ್ವಲ್ಪಾದರೂ ಸಿರಿ ಬಂದರೆ ಸಿರಿವಂತನ ಅಪ್ಪನಾಗುತ್ತಾನೆ. ಅಂತೇ ಎಲ್ಲರಲ್ಲಿ ಹೃದಯಸಂಸ್ಕಾರವೇ ಮುಖ್ಯ. ಸಾಕ್ಷಿ, ನಡೆಯಿನ್ನು. ಈ ಹೃದಯಸಂಸ್ಕಾರವನ್ನು ಜನಮನದಲ್ಲಿ ಬೇರೂರಿಸುವ ಪ್ರಭಾವಿಯಾದ ಜ್ವಲಂತವಾದ "ದರ್ಶನವನ್ನೂ ಕೃತಿಯನ್ನೂ" ಭಾರತಕ್ಕೆ ನೀಡೋಣ. ಭಾರತದಿಂದ ಜಗತ್ತಿಗೆ ಕಾಣಿಕೆಯಾಗಿ ಅರ್ಪಿಸೋಣ.'

ಭಾರತಿ ಸಾಕ್ಷಿಯೊಡನೆ ಗಾಳಿಗತಿಯಿಂದ ಮಾನಸಸರೋವರದಿಂದ ಮುಂದೆ ಮುಂದೆ ನಡೆದು ಭಾರತದ ಕವಿಮನದಲ್ಲಿ ಜನಜೀವನದಲ್ಲಿ ಒಂದಾಗಿ ನಿಂತಳು. ರಾತ್ರಿ ಮುಗಿದು ಬೆಳಗು ಚಿಮ್ಮಿತು, ಸೂರ್ಯ ಕಿರಣಗಳು ನೆಲವನ್ನೆಲ್ಲ ಅಪ್ಪಿಕೊಂಡವು.

